# ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ
## ಸಂಪುಟ-೧೧

# ತೈತ್ತಿರೀಯ ಸಂಹಿತಾ
[ಚತುರ್ಥಕಾಂಡ-೫, ೬, ಹಾಗೂ ೭ನೆಯ ಪ್ರಪಾಠಕಗಳು]


**ಪ್ರಧಾನ ಸಂಪಾದಕರು**

ವಿದ್ವಾನ್ ಸೋ. ತಿ. ನಾಗರಾಜ





ಪ್ರಕಾಶನ

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ**

ಬೆಂಗಳೂರು-೫೬೦೦೦೪

**KRISHNA YAJURVEDA KANNADA PRAKASHANA-VOLUME-11** CHIEF EDITOR, VIDWAN **S.T. NAGARAJA**, AND PUBLISHED BY **JYOTHI SAMSKRITIKA PRATISHTHANA (REGD)**, NO. 31, PAMPAMAHAKAVI ROAD, BANGALORE-560 004.



**FIRST EDITION : 2017**

**PAGES : 440**

**PRICE Rs. 450-00**

**ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ ಸಂಪುಟ–11**
**ತೈತ್ತರೀಯ ಸಂಹಿತಾ**
**ಚತುರ್ಥಕಾಂಡ – ೫, ೬ ಹಾಗೂ ೭ನೆಯ ಪ್ರಪಾಠಕಗಳು**



**ಪ್ರಥಮ ಮುದ್ರಣ : 2017**

**ಬೆಲೆ ರೂ.** : **Rs. 450-00**

**ಪ್ರಕಾಶಕರು :**
**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ)**
ನಂ. 31, ಪಂಪಮಹಾಕವಿ ರಸ್ತೆ
ಬೆಂಗಳೂರು–560 004
ದೂ. : 26677852

**ಮುದ್ರಕರು :**
**ಪರಿಮಳ ಮುದ್ರಣಾಲಯ**
# 184, 14ನೇ ಮುಖ್ಯರಸ್ತೆ, ಹನುಮಂತನಗರ
ಬೆಂಗಳೂರು–560 050. ದೂರವಾಣಿ : 2660 6061

## ಪರಿವಿಡಿ



### ಚತುರ್ಥಃ ಕಾಂಡಃ



### ಪಂಚಮಃ ಪ್ರಶ್ನಃ ಅನುವಾದಭಾಗ

## ಆಶೀರ್ವಚನ

(ಪ್ರಥಮಸಂಪುಟಕ್ಕೆ ನೀಡಿದುದು)

ಶ್ರೀ ಗುರುಭ್ಯೋ ನಮಃ

ಚತುರ್ವೇದಭಾಷ್ಯಕಾರರಾದ ಶ್ರೀ ಸಾಯಣಾಚಾರ್ಯರು ಕೃಷ್ಣಯಜುರ್ವೇದ ಭಾಷ್ಯಭೂಮಿಕೆಯಲ್ಲಿ **"ನನು ಕೋಽಯಂ ವೇದೋ ನಾಮ"** ಎಂದು ಪ್ರಶ್ನೆ ಮಾಡಿ ಅದಕ್ಕೆ ಸಮಾಧಾನವನ್ನು **"ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ"** ಎಂದು ಸಮಾಧಾನವನ್ನು ತಿಳಿಸಿದರು. ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಅಲೌಕಿಕೋಪಾಯವನ್ನು ತಿಳಿಸುವ ಗ್ರಂಥವೇ ವೇದ. ಅಲೌಕಿಕೋಪಾಯವು ಧರ್ಮವು. ನಮ್ಮ ಶ್ರೇಯಃಪ್ರೇಯಸ್ಸುಗಳಿಗೂ ದುಃಖಪರಿಹಾರಕ್ಕೂ ಸಾಧಕವಾದ ಧರ್ಮವನ್ನು ವೇದಗಳಿಂದಲೇ ತಿಳಿಯಬೇಕು.

ನಾವು ವೇದಾಧ್ಯಯನವನ್ನು ಮಾಡುತ್ತೇವೆ. ಅರ್ಥಜ್ಞಾನವಿಲ್ಲದೆ ಮಾಡಿದ ಅಧ್ಯಯನವು ವಿಶಿಷ್ಟವಾದ ಫಲವನ್ನು ಕೊಡಲು ಅಸಮರ್ಥ. ಅರ್ಥಜ್ಞಾನಕ್ಕಾಗಿ ಭಾಷ್ಯಗಳನ್ನು ಪರಿಶೀಲಿಸಬೇಕು. ಈ ಪರಿಶೀಲನೆಗೆ ಸಂಸ್ಕೃತಭಾಷಾಪಾಂಡಿತ್ಯ, ಮೀಮಾಂಸಾಪರಿಚಯ ಎರಡೂ ಬೇಕು. ಇವೆರಡನ್ನೂ ಸಾಧಿಸುವುದಕ್ಕೆ ನಾಲ್ಕಾರು ವರುಷಗಳ ಸತತ ಪ್ರಯತ್ನ ಆವಶ್ಯಕ. ಸರ್ವರಿಂದಲೂ ಸುಲಭವಾಗಿ ಸಾಧಿಸಲಶಕ್ಯ.

ನಮ್ಮ ಶಿಷ್ಯರಾದ ಶ್ರೀ ಬಿ. ಎನ್. ವಿ. ಸುಬ್ರಹ್ಮಣ್ಯಂ ಅವರು **"ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ"** ವೆಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೇದಮಂತ್ರಗಳ ತಾತ್ಪರ್ಯವನ್ನು ಎಲ್ಲರೂ ಸುಲಭವಾಗಿ ಅರಿಯಲು ಅನುಕೂಲವಾಗಲೆಂಬ ಉದ್ದೇಶದಿಂದ ಯಜುರ್ವೇದ ಕನ್ನಡ ಪ್ರಕಾಶನವನ್ನು ಆರಂಭಿಸಿದ್ದಾರೆ. ಈ ಕಾರ್ಯವು ಬೃಹತ್ತರವಾದುದು. ಶ್ರೀ ಸುಬ್ರಹ್ಮಣ್ಯಂ ಅವರು ಪರಹಿತಮತಿಯಿಂದ ಆರಂಭಿಸಿರುವ ಈ ಪ್ರಕಾಶನಕಾರ್ಯವು ಸುಲಭವಾಗಿ ಮುಂದುವರಿಯಲಿ. ಆಸ್ತಿಕ ಜನಸ್ತೋಮದ ಸಹಾಯ ಸಹಕಾರಗಳು ನಿರಂತರವಾಗಿ ಪ್ರವಹಿಸಲಿ. ಪ್ರಕಾಶನಗ್ರಂಥಗಳು ಆಸ್ತಿಕರ ಹೃದಯಗಳಲ್ಲಿ ಪ್ರಕಾಶವನ್ನು ಬೀರಲಿ, ತಮೋಗ್ರಂಥಿಗಳು ನಿರ್ಮೂಲಗೊಳ್ಳಲಿ ಮತ್ತು ಪ್ರಕಾಶಕರು ಭವಭಯ ಪ್ರಶಮನಕರನಾದ ಪರಮೇಶ್ವರನ ಕೃಪೆಯಿಂದ ಮಂಗಲಪರಂಪರೆಗಳನ್ನು ಅನುಭವಿಸಲೆಂದು ಹಾರೈಸುತ್ತೇವೆ.

ಪ್ರಭವ ಫಾಲ್ಗುನ ಶುಕ್ಲ ದಶಮೀ
27.02.88
ಶೃಂಗಗಿರಿ

ಇತಿ ನಾರಾಯಣಸ್ಮರಣಂ
**ವಿದ್ಯಾತೀರ್ಥಃ**

श्री गुरुभ्यो नमः



"धर्मो विश्वस्य जगतः प्रतिष्ठे"ति श्रुतिः सर्वस्यापि जगतः प्रतिष्ठासाधनं धर्ममेव ब्रूते। स च धर्मः श्रुत्या अवगन्तव्यः इति "वेदोखिलो धर्ममूलं" इत्यादि वचनानि ऐककण्ठ्येन प्रतिपादयन्ति। यद्यपि स्मृत्याचारादीनामपि धर्मे प्रमाजनकत्वमस्ति तथापि वेदमूलकत्वेनैव तासां धर्मे प्रामाण्यं न स्वातन्त्र्येण। अत एव श्रुतिस्मृत्योर्विरोधे स्मृतिरेव बाध्येति निर्णीतं पूर्वतन्त्रे।

स च वेदः 'अनन्ता वै वेदा' इति वचनानुसारेण अनन्तोपि ऋग्यजुस्सामाथर्वरूपेण चतुर्धा विभक्तो विराजते। एकैकस्यापि वेदस्य बह्व्यः शाखा आसन्निति 'एकशतमध्वर्युशाखा' इत्यादिभिर्वाक्यैः प्रतीयते। परन्तु तासु नैकाः अधुना उत्सन्नाः केवलं अङ्गुलिमेयाः काश्चन शाखा एव अवशिष्टाः

तत्र 'स्वाध्यायोध्येतव्यः' इति विधिः स्वशाखाध्ययनं विधत्ते। अत एव विहितस्य वेदाध्ययनस्याकरणेन प्रत्यवायः समापततीति "विहितस्याननुष्ठानान्निन्दितस्य च सेवनात्। अनिग्रहाच्चेन्द्रियाणां नरः पतनमृच्छति" इत्यादीनि वाक्यानि स्पष्टं ब्रुवते। एतेन वेदाध्ययनेनास्माकं किं



फलमिति केषांचिच्छङ्कापि निरस्ता वेदितव्या। 'ब्राह्मणेन निष्कारणं षडङ्गो वेदोऽध्येयो ज्ञेयश्च' इति महाभाष्यकारोदाहृतवचनमप्येतदेवोपोद्बलयति। अत उपनीतेन ब्राह्मणेन स्वशाखाध्ययनमवश्यं कर्तव्यम्।

वेदाध्ययनोत्तरमर्थज्ञानमवश्यं सम्पादनीयम्। तत्र अर्थज्ञानहीनस्य निन्दा, अर्थज्ञानवतः स्तुतिश्च शास्त्रे दृश्यते। तथाहि "स्थाणुरयं भारहरः किलाभूदधीत्यवेदं न विजानाति योऽर्थम्। योऽर्थज्ञ इत्सकलं भद्रमश्नुते नाकमेति ज्ञानविधूतपाप्मा" इत्युक्तम्। अत्र चन्दनकाष्ठभारवाही गर्दभः स्वेनोह्यमानस्य चन्दनकाष्ठस्य गन्धं मनागपि न जानातीति। अर्थज्ञानहीनस्तेनोपमीयमानो निन्द्यत इति प्रतीयते। अर्थज्ञानवतस्तु शुभावाप्तिः दुरितनिवृत्तिः इत्यादि फलकथनेन संस्तूयते। अतो वेदार्थज्ञानमवश्यं सम्पाद्यम्।

तत्र च मितम्पचमतयः वेदस्यार्थं वेत्तुं न पारयन्ति इति सर्वज्ञकल्पास्सायणाचार्याः लोकानुजिघृक्षया



चतुरोपि वेदान् व्याचचक्षिरे। वेदार्थं जिज्ञासमानानां सायणभाष्यं कल्पवृक्षायत इति नात्युक्तिः। वेदेषु वेदाङ्गेषु दर्शनेषु च सर्वेषु अप्रतिहता खलु गतिस्सायणाचार्याणाम्। अतस्सायणभाष्यमवलम्ब्यैव वेदार्थो ज्ञेयो जिज्ञासुभिः।

तत्र यजुर्वेदस्य सायणभाष्यानुसारेण कर्णाटक भाषया अनुवादं विधाप्य सुब्रह्मण्यार्यः प्रकाशयतीति विदित्वा मोदामहे। अस्यायं प्रयत्नः फलेग्रहिर्भूयात् सुब्रह्मण्यार्यश्च श्रेयः परम्पराभिस्समभिवर्धतामित्याशास्महे।

इति नारायणस्मरणम्

भारती तीर्थः

यात्रास्थानम् दिण्डिगल्

प्रभववर्षीय महाशिवरात्रिः भौमवासरः

## ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯಮಹಾಸಂಸ್ಥಾನಂ
## ಶಾರದಾಪೀಠಮ್, ಶೃಂಗೇರಿ

# ಮುನ್ನುಡಿ

ಶ್ರೀಗುರುಭ್ಯೋ ನಮಃ

**"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"** ಎಂಬುದಾಗಿ ಶ್ರುತಿಯು ಧರ್ಮವನ್ನೇ ಜಗತ್ತಿನ ಸ್ಥಿತಿಗೆ ಸಾಧನವನ್ನಾಗಿ ಹೇಳುತ್ತದೆ. ಆ ಧರ್ಮವು ವೇದದಿಂದಲೇ ತಿಳಿಯಲ್ಪಡತಕ್ಕದ್ದು ಎಂಬುದಾಗಿ **"ವೇದೋಽಖಿಲೋ ಧರ್ಮಮೂಲಮ್"** ಮೊದಲಾದ ಉಕ್ತಿಗಳು ಒಕ್ಕೊರಲಿನಿಂದ ಹೇಳುತ್ತವೆ. ಸ್ಮೃತಿಗಳೂ, ಆಚಾರವೂ ಧರ್ಮದ ಯಥಾರ್ಥಜ್ಞಾನವನ್ನು ಉಂಟುಮಾಡಿಕೊಡತಕ್ಕವುಗಳಾಗಿದ್ದರೂ ಅವುಗಳಿಗೆ ಧರ್ಮದ ವಿಷಯದಲ್ಲಿ ವೇದದ ಮೂಲಕ ಪ್ರಾಮಾಣ್ಯವೇ ಹೊರತು ಸ್ವತಂತ್ರವಾಗಿ ಅಲ್ಲ. ಆದುದರಿಂದಲೇ ಶ್ರುತಿ ಮತ್ತು ಸ್ಮೃತಿಗಳಿಗೆ ವಿರೋಧವೊದಗಿದಾಗ ಸ್ಮೃತಿಯೇ ಬಾಧಿಸಲ್ಪಡತಕ್ಕದ್ದು ಎಂಬುದಾಗಿ ಪೂರ್ವಮೀಮಾಂಸಾಶಾಸ್ತ್ರದಲ್ಲಿ ನಿರ್ಣಯಿಸಲ್ಪಟ್ಟಿದೆ.

ಅಂತಹ ವೇದವು **'ಅನಂತಾ ವೈ ವೇದಾಃ'** ಎಂಬ ವಚನವನ್ನು ಅನುಸರಿಸಿ ಅನಂತವಾಗಿದ್ದರೂ ಋಕ್, ಯಜುಸ್, ಸಾಮ, ಮತ್ತು ಅಥರ್ವ ಎಂಬುದಾಗಿ ನಾಲ್ಕು ರೀತಿ ವಿಂಗಡಿಸಲ್ಪಟ್ಟು ಬೆಳಗುತ್ತಾ ಇದೆ. **'ಏಕಶತಮಧ್ವರ್ಯುಶಾಖಾಃ'** ಮೊದಲಾದ ವಾಕ್ಯಗಳಿಂದ ಒಂದೊಂದು ವೇದಕ್ಕೂ ಬಹಳ ಶಾಖೆಗಳಿದ್ದವು ಎಂಬುದಾಗಿ ತಿಳಿದುಬರುತ್ತದೆ. ಆದರೆ ಅವುಗಳಲ್ಲಿ ಅನೇಕ ಶಾಖೆಗಳು ಲುಪ್ತವಾಗಿದ್ದು ಕೇವಲ ಬೆರಳೆಣಿಕೆಯಷ್ಟು ಕೆಲವು ಶಾಖೆಗಳೇ ಉಳಿದಿವೆ.

**'ಸ್ವಾಧ್ಯಾಯೋಽಧ್ಯೇತವ್ಯಃ'** ಎಂಬ ವಿಧಿಯು ಪ್ರತಿಯೊಬ್ಬನೂ ತನ್ನ ತನ್ನ ಶಾಖೆಯ ಅಧ್ಯಯನವನ್ನು ಮಾಡಲೇಬೇಕೆಂದು ವಿಧಿಸುತ್ತದೆ. ವಿಧಿಸಲ್ಪಟ್ಟ ವೇದಾಧ್ಯಯನವನ್ನು ಮಾಡದಿದ್ದರೆ ಪ್ರತ್ಯವಾಯವು ಉಂಟಾಗುವುದೆಂಬುದಾಗಿ

**ವಿಹಿತಸ್ಯಾನನುಷ್ಠಾನಾನ್ನಿಂದಿತಸ್ಯ ಚ ಸೇವನಾತ್ ।**
**ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥**

ಇತ್ಯಾದಿ ವಚನಗಳು ಸ್ಪಷ್ಟವಾಗಿ ತಿಳಿಸುತ್ತಾ ಇವೆ. (ಶಾಸ್ತ್ರವಿಹಿತವಾದುದನ್ನು ಮಾಡದಿದ್ದರೂ ಶಾಸ್ತ್ರದಿಂದ ನಿಂದಿತವಾದುದನ್ನು ಮಾಡಿದರೂ, ಮತ್ತು ಇಂದ್ರಿಯಗಳನ್ನು ನಿಗ್ರಹಿಸದಿದ್ದರೂ ಮಾನವನು ಕೇಡಿಗೀಡಾಗುವನು.) ಇದರಿಂದ ವೇದಗಳ ಅಧ್ಯಯನದಿಂದ ನಮಗೇನು ಪ್ರಯೋಜನ? ಎಂಬ ಕೆಲವರ ಸಂಶಯವು ದೂರವಾದಂತಾಯಿತು. **"ಬ್ರಾಹ್ಮಣೇನ ನಿಷ್ಕಾರಣಂ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ"** ಎಂಬ ಮಹಾಭಾಷ್ಯಕಾರರ ಮಾತೂ ಇದನ್ನೇ ಪುಷ್ಟೀಕರಿಸುತ್ತದೆ. ಆದುದರಿಂದ ಉಪನೀತನಾದ ಬ್ರಾಹ್ಮಣನು ತನ್ನ ವೇದದ ಶಾಖೆಯ ಅಧ್ಯಯನವನ್ನು ಅವಶ್ಯವಾಗಿ ಮಾಡಲೇಬೇಕು.

ವೇದಾಧ್ಯಯನದ ಬಳಿಕ ವೇದಾರ್ಥಜ್ಞಾನವನ್ನು ಆವಶ್ಯವಾಗಿ ಗಳಿಸಬೇಕು. ಈ ವಿಷಯದಲ್ಲಿ ಅರ್ಥಜ್ಞಾನವಿಲ್ಲದವನ ಬಗ್ಗೆ ನಿಂದೆಯೂ, ಅರ್ಥವನ್ನರಿತವನ ಬಗ್ಗೆ ಪ್ರಶಂಸೆಯೂ ಶಾಸ್ತ್ರದಲ್ಲಿ ಕಾಣಬರುತ್ತದೆ.

ಸ್ಥಾಣುರಯಂ ಭಾರಹಾರಃ ಕಿಲಾಭೂತ್

ಅಧೀತ್ಯ ವೇದಂ ನ ವಿಜಾನಾತಿ ಯೋऽರ್ಥಮ್ ।

ಯೋऽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ

ನಾಕಮೇತಿ ಜ್ಞಾನವಿಧೂತಪಾಪ್ಮಾ ॥

ವೇದವನ್ನು ಅಧ್ಯಯನ ಮಾಡಿ ಅರ್ಥವನ್ನರಿಯದವನು ಗಂಧದ ಮರದ ಭಾರವನ್ನು ಹೊರುವ ಕತ್ತೆಯಂತೆ. ಅರ್ಥವನ್ನರಿತವನು ಎಲ್ಲ ಮಂಗಳವನ್ನು ಪಡೆದು ಪಾಪರಹಿತನಾಗಿ ಸ್ವರ್ಗವನ್ನೇರುವವನು.

ಗಂಧದ ಕಟ್ಟಿಗೆಯ ಭಾರವನ್ನು ಹೊತ್ತ ಕತ್ತೆಯು ತಾನು ಹೊತ್ತಿರುವ ಗಂಧದ ಕಟ್ಟಿಗೆಯ ಪರಿಮಳವನ್ನು ಸ್ವಲ್ಪವೂ ತಿಳಿಯಲಾರದು. ಅದರೊಡನೆ ಹೋಲಿಸಲ್ಪಟ್ಟ ಅರ್ಥಜ್ಞಾನವಿಲ್ಲದವನು ನಿಂದಿಸಲ್ಪಟ್ಟಂತೆಯೇ. ಅರ್ಥಜ್ಞಾನ ಉಳ್ಳವನಿಗೆ ಶುಭಪ್ರಾಪ್ತಿ, ದುಃಖನಿವೃತ್ತಿ ಮೊದಲಾದ ಪ್ರಯೋಜನವನ್ನು ಹೇಳಿರುವುದರಿಂದ ಅವನು ಸ್ತುತಿಸಲ್ಪಟ್ಟಂತೆಯೇ. ಆದುದರಿಂದ ವೇದಾರ್ಥಜ್ಞಾನವನ್ನು ಅವಶ್ಯವಾಗಿ ಗಳಿಸಬೇಕು.

ಹೀಗಿರುವಾಗ ವೇದಾರ್ಥವನ್ನು ಅಲ್ಪಬುದ್ಧಿಯುಳ್ಳವರು ತಿಳಿಯಲಾರರೆಂದು ಸರ್ವಜ್ಞರಂತೆಯೇ ಇರುವ ಸಾಯಣಾಚಾರ್ಯರು ಲೋಕವನ್ನು ಅನುಗ್ರಹಿಸಲು ನಾಲ್ಕು ವೇದಗಳನ್ನೂ ವ್ಯಾಖ್ಯಾನಿಸಿದರು. ವೇದಾರ್ಥವನ್ನು ತಿಳಿಯಬಯಸುವವರಿಗೆ ಸಾಯಣಭಾಷ್ಯವು ಕಲ್ಪವೃಕ್ಷದಂತಿದೆಯೆಂದರೆ ಅದು ಹೆಚ್ಚಿನ ಮಾತಲ್ಲ. ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಮತ್ತು ಎಲ್ಲ ದರ್ಶನಗಳಲ್ಲಿಯೂ ತಡೆಯಿಲ್ಲದ ನಡೆ ಅವರದು. ಆದುದರಿಂದ ಜಿಜ್ಞಾಸುಗಳಾದವರು ಸಾಯಣಭಾಷ್ಯವನ್ನವಲಂಬಿಸಿಯೇ ವೇದಾರ್ಥವನ್ನು ತಿಳಿಯಬೇಕು.

ಹೀಗಿರುವಲ್ಲಿ ಯಜುರ್ವೇದಕ್ಕೆ ಸಾಯಣಭಾಷ್ಯವನ್ನನುಸರಿಸಿದ ಕನ್ನಡ ಅನುವಾದವನ್ನು ಮಾಡಿಸಿ, ಶ್ರೀ ಸುಬ್ರಹ್ಮಣ್ಯಂರವರು ಪ್ರಕಟಿಸುವರೆಂದು ತಿಳಿದು ಸಂತೋಷಗೊಂಡಿದ್ದೇವೆ. ಇವರ ಈ ಪ್ರಯತ್ನವು ಫಲಪ್ರದವಾಗಲೆಂದೂ ಶ್ರೀ ಸುಬ್ರಹ್ಮಣ್ಯಂರವರು ಶ್ರೇಯಃಪರಂಪರೆಯಿಂದ ವರ್ಧಿಸಲೆಂದೂ ಆಶಿಸುತ್ತೇವೆ.

ಮೊಕ್ಕಾಂ–ದಿಂಡಿಗಲ್
ಪ್ರಭವ ಸಂವತ್ಸರದ ಮಹಾಶಿವರಾತ್ರಿ
ಮಂಗಳವಾರ

ಇತಿ ನಾರಾಯಣಸ್ಮರಣಂ
ಭಾರತೀತೀರ್ಥಃ



**श्री श्री जगद्गुरु शङ्कराचार्य महासंस्थानम्,**
दक्षिणाम्नाय श्रीशारदापीठम्, शृङ्गेरी
**Sri Sri Jagadguru Shankaracharya Mahasamsthanam**
**Dakshinamnaya Sri Sharada Peetham, Sringeri - 577 139.**

Ref: G-6/ 5948 Date :

**ದಕ್ಷಿಣಾಮ್ನಾಯ ಶೃಂಗೇರಿ ಶಾರದಾಪೀಠಾಧೀಶ್ವರ ಜಗದ್ಗುರು ಶಂಕರಾಚಾರ್ಯ**
**ಶ್ರೀಶ್ರೀಭಾರತೀತೀರ್ಥಮಹಾಸ್ವಾಮಿಗಳವರ**
**ಅನುಗ್ರಹ ಸಂದೇಶ.**

ಕೃಷ್ಣಯಜುರ್ವೇದ ಕನ್ನಡ ಅನುವಾದದ 11ನೆಯ ಸಂಪುಟವು ಈಗ ಪ್ರಕಟವಾಗುತ್ತಿರುವದು ಬಹಳ ಸಂತೋಷದ ವಿಷಯವಾಗಿದೆ. ಇದರಲ್ಲಿ ಸಂಹಿತೆಯ 4ನೆಯ ಕಾಂಡದ 5,6,7ನೆಯ ಪ್ರಶ್ನೆಗಳು ಇವೆ. ಈ ಮೂರರಲ್ಲೂ ಮಹಾಗ್ನಿಚಯನ ಮಂತ್ರಗಳೇ ವಿಶೇಷವಾಗಿ ಹೇಳಲ್ಪಟ್ಟಿವೆ. ಇಲ್ಲಿರುವ 5 ಮತ್ತು 7ನೆಯ ಪ್ರಶ್ನೆಗಳು ಬಹಳ ಮಹತ್ತ್ವಪೂರ್ಣವಾದವು. ಈ ಎರಡಕ್ಕೂ ರುದ್ರ, ಚಮೆ ಎಂಬ ಹೆಸರುಗಳು ರೂಢಿಯಲ್ಲಿ ಇವೆ. ಈಶ್ವರನ ಅಭಿಷೇಕಕ್ಕೆ ಇವೆರಡನ್ನೂ ಹೇಳುವದು ಅನಾದಿಸಿದ್ಧಸಂಪ್ರದಾಯವಾಗಿದೆ. ಶ್ರುತಿಸ್ಮೃತೀತಿಹಾಸಪುರಾಣಗಳಲ್ಲಿ ರುದ್ರಪ್ರಶ್ನೆಯ ಮಹತ್ತ್ವವು ಬಹಳವಾಗಿ ಹೇಳಲ್ಪಟ್ಟಿದೆ. ಪರಮೇಶ್ವರ ಸಾರ್ವಾತ್ಮ್ಯವು ಇಲ್ಲಿ ಚನ್ನಾಗಿ ಪ್ರತಿಪಾದಿತವಾಗಿದೆ. ಈ ಮಂತ್ರಗಳಿಂದ ಹೋಮವೂ ಸಹ ಮಹಾಫಲಪ್ರದವೆಂದು ಅನೇಕ ಪ್ರಮಾಣಗಳಿಂದ ತಿಳಿದು ಬರುತ್ತದೆ. ಅಂತಹ ಮಹತ್ತ್ವಪೂರ್ಣವಾದ ರುದ್ರಮಂತ್ರಗಳ ಅರ್ಥವನ್ನು ಇಲ್ಲಿ ಚನ್ನಾಗಿ ಬರೆದಿದೆ. ಇದನ್ನು ಚನ್ನಾಗಿ ತಿಳಿದು ಈ ಮಂತ್ರಗಳನ್ನು ಉಚ್ಚರಿಸುವದು ವಿಶೇಷ ಫಲಕಾರಿಯಾಗುತ್ತದೆ. ಈ ರುದ್ರಮಂತ್ರಗಳ ವಿಭಾಗವು ಬಹುಪ್ರಕಾರವಾಗಿದೆ. ಅದನ್ನೂ ಸಹ ಈ ಗ್ರಂಥದಲ್ಲಿ ತೋರಿಸಿದೆ. ರುದ್ರಪ್ರಶ್ನೆಯ ಎರಡನೆಯ ಅನುವಾಕದಿಂದ 9ನೆಯ ಅನುವಾಕದ ವರೆಗಿನ ಮಂತ್ರಗಳು ಈಶ್ವರನ ಪೂಜೆಗೂ ಉಪಯುಕ್ತವಾಗಿವೆ. ಅವು 300 ನಾಮಗಳಾಗುತ್ತವೆ. ಅದಕ್ಕೆ 'ರುದ್ರತ್ರಿಶತಿ' ಎಂದು ಹೆಸರು. ಇಂತಹ ಉತ್ಕೃಷ್ಟವಾದ ರುದ್ರಪ್ರಶ್ನೆಯನ್ನೊಳಗೊಂಡ ಈ ಭಾಗವು ವೈಶಿಷ್ಟ್ಯಪೂರ್ಣವಾದುದು.

ಕೃಷ್ಣಯಜುರ್ವೇದದ ಕನ್ನಡಾನುವಾದವೆಂಬ ಬೃಹತ್ಕಾರ್ಯವನ್ನು ಸಂಕಲ್ಪಿಸಿದ ದಿ|| 'ಧಾರ್ಮಿಕ ಪ್ರವರ' ಬಿ.ಎನ್.ವಿ.ಸುಬ್ರಹ್ಮಣ್ಯಂರವರ ಆಶಯದಂತೆ ಈ ಕೆಲಸವು ಮುಂದುವರೆದು ಸರ್ವಜನೋಪಕಾರಕವಾಗಲಿ ಎಂದು ಆಶೀರ್ವದಿಸುತ್ತಿದ್ದೇವೆ.

ಶೃಂಗೇರಿ
ದುರ್ಮುಖಿ ಕಾರ್ತಿಕ ಶುಕ್ಲ ಪಂಚಮಿ
ಶುಕ್ರವಾರ, 4.11.2016

ಇತಿ ನಾರಾಯಣ ಸ್ಮರಣಮ್



Phone: 08265 - 250123 / 250192 • Fax: 08265 - 250792
E-mail: info@sringerisharadapeetham.org • www.sringerisharadapeetham.org

# ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ

## ಬೆಂಗಳೂರು

## ಪ್ರಕಾಶನ ಸಮಿತಿ

ಶ್ರೀಯುತರಾದ

| | |
|---|---|
| ಶ್ರೀಮತಿ ಬಿ. ವಿ. ಸೀತಾಸುಬ್ರಹ್ಮಣ್ಯ | ಅಧ್ಯಕ್ಷರು |
| ಸೋ.ತಿ. ನಾಗರಾಜ | ಪ್ರಧಾನ ಸಂಪಾದಕರು |
| ಎಂ. ನರಸಿಂಹನ್ | ಸದಸ್ಯರು |
| ಬಿ.ಕೆ. ರಮೇಶ್ | ಸದಸ್ಯರು |
| ಬಿ.ಕೆ. ಸತ್ಯನಾರಾಯಣ | ಸದಸ್ಯರು |
| ಡಾ॥ ಬಿ. ವಿ. ವೆಂಕಟಸುಬ್ರಹ್ಮಣ್ಯ | ಸದಸ್ಯರು |



॥ ಶ್ರೀರಸ್ತು ॥

# ಪ್ರಕಾಶಕರ ನುಡಿ

ಸಹೃದಯ ವೇದಾಭಿಮಾನಿಗಳೇ!,

ಸನಾತನಧರ್ಮದ ಅರಿವಿಗೆ ಪರಮಪ್ರಮಾಣಗ್ರಂಥಗಳಾದ ವೇದಗಳಿಗೂ, ವೈದಿಕ ಸಂಸ್ಕೃತಿಯ ಪ್ರಸಾರಕ್ಕೂ ಕುರಿತಂತೆ **'ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ'**ವು ಎರಡು ದಶಕಗಳಿಗೂ ಮೀರಿದಂತೆ ತನ್ನ ಕಿಂಚಿತ್ ಸೇವೆಯನ್ನು ಸಮರ್ಪಿಸುತ್ತಾ ಬಂದಿದೆ. ಅದರಲ್ಲಿ ಕೃಷ್ಣಯಜುರ್ವೇದ ಸಾಯಣ ಭಾಷ್ಯದ ಕನ್ನಡ ಪ್ರಕಾಶನದ ಕಾರ್ಯವು ಒದಗಿಬಂದಿರುವುದು ಪ್ರತಿಷ್ಠಾನಕ್ಕೆ ಒಂದು ಅಹೋ ಭಾಗ್ಯವೇ ಸರಿ.

ವೇದಗಳಿಗೆ ಅನುಪಮವಾದ ಭಾಷ್ಯಗಳನ್ನು ಜಗತ್ತಿಗೆ ನೀಡಿರುವ ಶ್ರೀ ವಿದ್ಯಾರಣ್ಯಮಹಾಸ್ವಾಮಿಗಳವರಿಂದ ಅಲಂಕರಿಸಲ್ಪಟ್ಟ ಶೃಂಗೇರಿ ಶ್ರೀ ಶಾರದಾಪೀಠದಲ್ಲಿ ವಿರಾಜಿಸಿದ ಬ್ರಹ್ಮೀಭೂತ ಜಗದ್ಗುರು **ಶ್ರೀ ಶ್ರೀ ವಿದ್ಯಾತೀರ್ಥಮಹಾಸ್ವಾಮಿ**ಗಳವರ ಹಾಗೂ ಅದೇ ಪೀಠದಲ್ಲಿ ಈಗ ಶೋಭಿಸುತ್ತಿರುವ ಜಗದ್ಗುರು **ಶ್ರೀ ಶ್ರೀ ಭಾರತೀತೀರ್ಥಮಹಾಸ್ವಾಮಿ**ಗಳವರ ಪರಿಪೂರ್ಣ ಅನುಗ್ರಹ ಹಾಗೂ ಆಶೀರ್ವಾದಗಳಿಂದ ಭಾಷ್ಯಾನುವಾದಪ್ರಕಾಶನಕಾರ್ಯವು ಮುನ್ನಡೆದು ಬರುತ್ತಿದೆ. ಅವರ ಪ್ರೇರಣೆ ಪ್ರೋತ್ಸಾಹಗಳಿಂದ 10 ಸಂಪುಟಗಳು ಪ್ರಕಾಶನಗೊಂಡಿವೆ. ಈಗ ಹನ್ನೊಂದನೆಯ ಸಂಪುಟವನ್ನು ಆಸ್ತಿಕ ಸಹೃದಯ ಕನ್ನಡಿಗರ ಮುಂದೆ ಇರಿಸುತ್ತಾ ಹೃದಯ ತುಂಬಿ ನಾಲ್ಕು ನುಡಿಗಳನ್ನು ಅರುಹುವೆವು.

ಈಗ ಪ್ರಕಾಶನಗೊಳ್ಳುತ್ತಿರುವ ಹನ್ನೊಂದನೆಯ ಸಂಪುಟಕ್ಕೆ ಜಗದ್ಗುರು ಶ್ರೀ ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳವರು ಅನುಗ್ರಹಸಂದೇಶವನ್ನು ದಯಪಾಲಿಸಿ ಹರಸಿದ್ದಾರೆ. ಅವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮವನ್ನು ಸಲ್ಲಿಸುತ್ತೇವೆ.

ಈ ಸಂಪುಟವನ್ನು ಪ್ರಕಾಶಿಸುವ ಸಂದರ್ಭದಲ್ಲಿ ನಮ್ಮ ಮನಸ್ಸಿಗೆ ಆಳವಾದ ವೇದನೆಯು ತುಂಬಿದೆ. ಇಲ್ಲಿಯವರೆಗೆ ಸನಾತನಧರ್ಮದ ಸ್ವರೂಪವನ್ನು ಪ್ರಪಂಚಕ್ಕೆ ನೀಡಿರುವ ವೇದಗಳ ಭಾಷಾನುವಾದದ ಬೃಹತ್ಕಾರ್ಯವನ್ನು ಸಂಕಲ್ಪಿಸಿ, ಆ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಶೃಂಗೇರಿ ಶಾರದಾಪೀಠದ ಜಗದ್ಗುರುಗಳ ಕೃಪೆಯನ್ನು ಗಳಿಸಿ, ಪ್ರಕಾಶನ ಸಮಿತಿಗೆ ಅಧ್ಯಕ್ಷರಾಗಿ ಪರಿಪೂರ್ಣ ದಿಗ್ದರ್ಶನ ಮಾಡುತ್ತಿದ್ದ **"ಧಾರ್ಮಿಕಪ್ರವರ" ದಿವಂಗತ ಡಾ ॥ ಬಿ. ಎನ್. ವಿ. ಸುಬ್ರಹ್ಮಣ್ಯಂ** ರವರು ಈಗ ನಮ್ಮೊಡನಿಲ್ಲ. ಆದರೂ ಅವರು ತೋರಿಸಿಕೊಟ್ಟಿರುವ ಮಾರ್ಗದಲ್ಲಿಯೇ ಮುನ್ನಡೆದು ಈ ಪ್ರಕಾಶನದ ಪವಿತ್ರಕಾರ್ಯವನ್ನು ನಡೆಸಲು ಸಂಕಲ್ಪಿಸಿ ಅವರ ಕನಸನ್ನು ಸಾಕಾರ ಮಾಡಲು ಶ್ರದ್ಧಾಪೂರ್ವಕವಾಗಿ ಪ್ರಯತ್ನಿಸುತ್ತೇವೆ.

ಈ ಸಂಕಲ್ಪಕ್ಕೆ ಪರಮಪೂಜ್ಯ ಶಂಕರಾಚಾರ್ಯ ಶೃಂಗೇರಿ ಶಾರದಾಪೀಠಾಧೀಶ್ವರರಾದ ಮಹಾಸನ್ನಿಧಾನ ಶ್ರೀ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರ ಹಾಗೂ ಅವರ ಕರಕಮಲ ಸಂಜಾತರಾದ ಜಗದ್ಗುರು ಶಂಕರಾಚಾರ್ಯ ಸನ್ನಿಧಾನ ಶ್ರೀ ಶ್ರೀ ಶ್ರೀ ವಿಧುಶೇಖರಭಾರತೀ ಮಹಾ ಸ್ವಾಮಿಗಳವರ ಆಶೀರ್ವಾದವನ್ನು ಕೋರಿ ಉಭಯ ಜಗದ್ಗುರುಗಳ ಚರಣಾರವಿಂದಗಳಲ್ಲಿ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತಾ ಈ ಕಾರ್ಯಕ್ಕೆ ನಮಗೆ ಸಾಮರ್ಥ್ಯವನ್ನು ಕರುಣಿಸಬೇಕೆಂದು ಪ್ರಾರ್ಥಿಸುತ್ತಿದ್ದೇವೆ.

ಈ ಪ್ರಕಾಶನಮಾಲೆಯ ಕಾರ್ಯವನ್ನು ಆರಂಭಿಸಿದಾಗ ಈ ಗ್ರಂಥಗಳಿಗೆ ಓದುಗರು ಯಾರೆಂಬ ದೊಡ್ಡ ಪ್ರಶ್ನೆಯು ಎದುರಾಗಿತ್ತು. ಇಂದು ಪ್ರಕಾಶನವನ್ನು ಕುರಿತಾಗಿ ಎಲ್ಲ ಕಡೆಯಿಂದ ನೂರಾರು ಸಹೃದಯ ಓದುಗರ ದೂರವಾಣಿಯ ಕರೆಗಳ ಬರುತ್ತಿರುವುದರಿಂದ ನಿಜಕ್ಕೂ ನಮ್ಮ ಕಾರ್ಯಕ್ಕೆ ಪ್ರೋತ್ಸಾಹವು ದೊರೆತಂತಾಗಿ ಅತ್ಯಂತ ಸಂತಸವುಂಟಾಗಿ ನಮ್ಮ ಕಾರ್ಯವು ಸಾರ್ಥಕವೆನಿಸಿದೆ. ಮೊದಲಿನ ಸಂಪುಟಗಳು ಪುನರ್ಮುದ್ರಣಕ್ಕೆ ಬರುತ್ತಿರುವುದು ನಮಗೆ ಉತ್ಸಾಹವನ್ನು ತಂದಿದೆ.

ಈ ಸಂದರ್ಭದಲ್ಲಿ ಈ ಪ್ರಕಾಶನಮಾಲೆಯ ಪ್ರಧಾನಸಂಪಾದಕರಾಗಿದ್ದ ದಿವಂಗತ **ವೇದಕೋವಿದ ಬ್ರಹ್ಮಶ್ರೀ ರಾಮೇಶ್ವರಾವಧಾನಿಗಳವರನ್ನು** ನೆನಸುತ್ತಾ ಅವರಿಗೆ ಕೃತಜ್ಞತೆಗಳನ್ನು ಸಮರ್ಪಿಸುವೆವು. ಅವರ ಪ್ರಯತ್ನವು ಸಾರ್ಥಕವಾಗಿದೆ. ಪ್ರತಿಷ್ಠಾನಕ್ಕೆ ಅನುವಾದದ ಹಸ್ತಪ್ರತಿಗಳನ್ನು ನೀಡಿರುವ ಶ್ರೀಯುತ ಅವಧಾನಿಗಳವರ ಸತ್ಪುತ್ರ ಶ್ರೀ ನಾಗೇಂದ್ರ ಅವರನ್ನೂ ಅಭಿನಂದಿಸುವೆವು.

**ಮಹಾಮಹೋಪಾಧ್ಯಾಯ ವೇ|| ಬ್ರ|| ಶ್ರೀ|| ಸೋ. ತಿ. ನಾಗರಾಜರು** ಅನುಪಮ ಶ್ರುತಿಸೇವೆಯನ್ನು **ಪ್ರಧಾನಸಂಪಾದಕರಾಗಿ** ನೆರವೇರಿಸಿದ್ದಾರೆ. ಅವರ ಶ್ರುತಿಸೇವೆಯನ್ನು ಶಬ್ದಗಳಲ್ಲಿ ಹೇಳಲು ಸಾಧ್ಯವಾಗುತ್ತಿಲ್ಲ. ಅವರಿಗೆ ಹೃದಯಪೂರ್ವಕ ನಮನಗಳು.

ಈ ಗ್ರಂಥವನ್ನು ಸಿದ್ಧಪಡಿಸಲು ಸಕಾಲದಲ್ಲಿ ಗಣಕಯಂತ್ರಕಾರ್ಯವನ್ನು [ಡಿ.ಟಿ.ಪಿ] ಮಾಡಿ ಕೊಟ್ಟಿರುವ **ವೇ|| ಮೂ|| ಬಾಲಚಂದ್ರ ಭಟ್ಟರಿಗೂ** ಮುದ್ರಣಕಾರ್ಯವನ್ನು ಅಂದವಾಗಿ ಮಾಡಿ ಕೊಟ್ಟಿರುವ ಪರಿಮಳ ಮುದ್ರಣಾಲಯದ **ಶ್ರೀ ಕೆ. ಸಿ. ಪ್ರಭಾಕರ್** ಅವರಿಗೂ ನನ್ನ ಕೃತಜ್ಞತೆಗಳು.

ಈ ಪ್ರಕಾಶನಕಾರ್ಯವು ಪೂರ್ಣವಾಗುವಂತೆ ಸರ್ವಶಕ್ತನಾದ ಭಗವಂತನನ್ನು ಪ್ರಾರ್ಥಿಸುತ್ತಾ, ಜಗದ್ಗುರುಗಳವರ ಚರಣಾರವಿಂದಗಳಲ್ಲಿ ನಮಿಸಿ, ಶಾರದಾ–ಚಂದ್ರಮೌಳೀಶ್ವರರ ಹಾಗೂ ರತ್ನಗರ್ಭಗಣಪತಿಯ ಸನ್ನಿಧಿಯಲ್ಲಿ ವಂದಿಸಿ, ತಮ್ಮೆಲ್ಲರ ಆಶೀರ್ವಾದಗಳನ್ನು ಬಯಸುವೆವು.

ದುರ್ಮುಖಿ ಸಂ|| ಮಕರಸಂಕ್ರಾಂತಿ
14.1.2017
ಶನಿವಾರ

ಪ್ರಕಾಶಕರು.
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

# ನಿವೇದನೆ

ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ ನಾವು ಕೃಷ್ಣಯಜುರ್ವೇದದ ಕನ್ನಡ ಪ್ರಕಾಶನದ ಕಾರ್ಯಕ್ಕೆ ಕೈ ಹಾಕಿದ್ದೇವೆ.

ಇಂದು ನಮ್ಮ ಸಮಾಜದ ರೀತಿ, ನೀತಿ, ಆಚಾರ ಮತ್ತು ವಿಚಾರಗಳನ್ನು ಗಮನಿಸಿದಾಗ ಒಂದು ಅಂಶವು ಎದ್ದು ಕಾಣುತ್ತದೆ. ಪರಂಪರಾಗತವಾಗಿ ಬಂದ ನಡವಳಿಕೆಯನ್ನೂ, ಚಿಂತನೆಯನ್ನೂ ಕೈ ಬಿಡಲಾಗದ ಅತ್ಯಂತ ನವೀನವಾದ ಪಾಶ್ಚಾತ್ಯ ನಡವಳಿಕೆ ಮತ್ತು ಚಿಂತನೆಯೊಡನೆಯೂ ಪೂರ್ಣ ಬೆರೆಯಲಾಗದ ಮಧ್ಯಮಸ್ಥಿತಿ ಅದು. ಸಮಾಜದ ಚಿತ್ತವನ್ನು ಹೀಗೆ ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ ಎರಡು ಶಕ್ತಿಗಳೂ ಸ್ಪರ್ಧಿಸುವಂತೆ ಕಾಣುತ್ತಿವೆ. ಆದರೆ ಭಾವನಾತ್ಮಕ ಸಂದರ್ಭಗಳಲ್ಲಿ ನಮ್ಮ ಸಮಾಜದ ಚಿಂತನೆಯು ಪರಂಪರೆಯನ್ನೇ ಬಹುತೇಕ ಅವಲಂಬಿಸುತ್ತದೆ. ಹೊರದೃಷ್ಟಿಯಿಂದ ಸಮಾಜದಲ್ಲಿ ನಮ್ಮತನದ ಕೊರತೆ ಕಾಣುವುದಾದರೂ ಚಿರಂತನವಾದ ನಂಬಿಕೆ ಮತ್ತು ನಡವಳಿಕೆಯ ವಿಚಾರಗಳು ಅಂತರಗಂಗೆಯಂತೆ ಪ್ರವಹಿಸುತ್ತಲೇ ಇವೆ. ಈ ರೀತಿಯ ಅಂತಃಪ್ರವಾಹದ ಸೆಲೆಯು ಋಷಿಗಳು ಕಂಡುಕೊಂಡ ಆರ್ಷಸಾಹಿತ್ಯವಾದ ವೇದಗಳೇ.

ವ್ಯಕ್ತಿಜೀವನದಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನ ಮತ್ತು ರಾಷ್ಟ್ರೀಯ ಚಿಂತನವು ವೇದದ ಪ್ರಭಾವಕ್ಕೆ ಹೊರತಲ್ಲ. ಭಾರತ ಎಂದೊಡನೆ ಪ್ರಪಂಚದ ಜನಮಾನಸದಲ್ಲಿ ಮೂಡುವುದು ವೇದೋಪನಿಷತ್ತಿನ ಸಂದೇಶದ ಚಿತ್ರಗಳೇ. ಪ್ರಪಂಚದ ಉಳಿದ ಜನಾಂಗದವರು ಬದುಕು, ಜೀವನದ ಗುರಿ ಇವುಗಳ ಬಗ್ಗೆ ತಳೆದಿರುವ ಅಭಿಪ್ರಾಯಗಳಿಗಿಂತ ತೀರ ಭಿನ್ನವಾದ ಅಭಿಪ್ರಾಯಗಳು ನಮ್ಮವು. ಆ ಅಭಿಪ್ರಾಯಕ್ಕೆ ವೇದವೇ ಮೂಲ. ಅಂತೆಯೇ ನಮ್ಮತ್ತ ಪಾಶ್ಚಾತ್ಯರ ದೃಷ್ಟಿ. ಜೀವನದ ಬಗ್ಗೆ ಇರುವ ನಮ್ಮ ದೃಷ್ಟಿಕೋನವು ನೆಮ್ಮದಿ ತಂದೀತೆಂದು ಅವರ ಹಂಬಲ. ಇಂದಿಗೂ ಅನೇಕ ಸಾಧುಗಳು ವಿದೇಶಗಳಲ್ಲಿ ಗೌರವಕ್ಕೆ ಪಾತ್ರರಾಗುವ ಹಿನ್ನೆಲೆಯೂ ಇದೇ ಆಗಿದೆ. ಇಂತಹ ರಾಷ್ಟ್ರೀಯ ಸಂಪತ್ತು ನಮ್ಮ ಪೂರ್ವಜರಿಂದ ನಮಗೆ ಒದಗಿ ಬಂದಿದೆ. ವೇದವು ಅನೇಕ ಸಾವಿರ ವರ್ಷಗಳ ಕಾಲದಿಂದ ನಾವು ನಡೆಸಿಕೊಂಡು ಬರುತ್ತಿರುವ ಜೀವನ ನೌಕೆಯನ್ನು ಸರಿಯಾದ ದಿಕ್ಕಿಗೆ ಒಯ್ಯಬಲ್ಲ ಚುಕ್ಕಾಣಿ.

ಇಂತಹ ವೇದಗಳ ಬಗ್ಗೆ ನಾವೆಲ್ಲರೂ ತಿಳಿಯಲೇಬೇಕು. ಕಾಲದ ಪರಿಮಿತಿ, ಜೀವನ ಸಂದರ್ಭಗಳ ಬದಲಾವಣೆ ಇವುಗಳ ದೆಸೆಯಿಂದ ಸಂಸ್ಕೃತಭಾಷೆಯನ್ನು ಅರಿತು ವೇದಗಳ ವ್ಯಾಸಂಗ ಮಾಡುವುದು ಕೊಂಚ ಕಷ್ಟಸಾಧ್ಯವೇ. ಅಲ್ಲದೆ ನಮ್ಮವರೇ ಆದಕೆಲವರು ವೇದಗಳು ವಿಚ್ಛಿದ್ರಕಾರಕಗಳೆಂಬ ಮುದ್ರೆಯನ್ನೊತ್ತಿದ್ದಾರೆ. ಒಂದೆಡೆ ಗಾಢ ನಂಬಿಕೆಗೂ ಮತ್ತೊಂದೆಡೆ ಅಪವಾದಕ್ಕೂ ಗುರಿಯಾಗಿರುವ ವೇದಗಳಲ್ಲಿ ರುವ ಸತ್ಯಾಂಶವನ್ನು ಹೊರತರುವುದು ಪ್ರಸಕ್ತವೇ ಹೌದು. ತಾಯ್ನುಡಿಯಲ್ಲಿ ವೇದವನ್ನು ಕನ್ನಡಿಗರಿಗೆ ನೀಡಬೇಕೆಂಬ ಹಂಬಲಕ್ಕೆ ಇದೇ ಪ್ರೇರಕ. ಹೀಗೆ ವೇದದ ಬಗೆಗಿನ ಭಕ್ತಿಮಿಶ್ರಿತ ಅಮೂರ್ತಭಾವನೆಗೆ ಆಕಾರವನ್ನು ಕೊಡಲು, ಭೌತಿಕ ಆಕರ್ಷಣೆಗೂ

ಶಾಶ್ವತವಾದ ಸುಖಸಮೃದ್ಧಿಗಳಿಗೂ ನಡುವೆ ಇರುವ ಅಂತರದ ವಿವೇಕವನ್ನು ಮನಗಾಣಿಸಲು ಈ ಯತ್ನವನ್ನು ಕೈಗೊಳ್ಳಲಾಗಿದೆ.

ಒಂದಾನೊಂದು ಕಾಲದಲ್ಲಿ ಜಗಜ್ಜೀವನದ ಸಾರ್ವಭೌಮಸ್ಥಾನವನ್ನು ಅಲಂಕರಿಸಿದ ನಮ್ಮ ಸಮಾಜಜೀವನವನ್ನು ಹಸನುಗೊಳಿಸಲು ಈ ಪ್ರಕಾಶನವು ನೆರವಾಗುವುದಾದರೆ ನಮ್ಮ ಯತ್ನವು ಸಾರ್ಥಕ. ಈ ಬಗ್ಗೆ ಸಹೃದಯರಾದ ವಾಚಕರ ಹೃದಯವೇ ನಮಗೆ ರನ್ನಗನ್ನಡಿ.

ಈ ಗ್ರಂಥವನ್ನು ಮತ್ತಷ್ಟು ಉಪಯುಕ್ತಗೊಳಿಸುವತ್ತ ಸಹೃದಯರಾದ ವಾಚಕರ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

**ಪ್ರಕಾಶಕರು**

॥ ಶ್ರೀರಸ್ತು ॥

॥ ಶ್ರೀ ಶಾರದಾಗುರುಗಣಪತಿಭ್ಯೋ ನಮಃ ॥




# ಸಂಪಾದಕರ ನುಡಿ

ವೇದಾಭಿಮಾನಿಗಳಾದ ಸಹೃದಯ ಆಸ್ತಿಕ ಬಂಧುಗಳೇ!,

ಬೆಂಗಳೂರಿನ **"ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ"**ದಿಂದ ಕಳೆದ ೨೮ ವರ್ಷಗಳಿಂದ ಪ್ರಕಾಶನಗೊಳ್ಳುತ್ತಿರುವ ಕೃಷ್ಣಯಜುರ್ವೇದ ತೈತ್ತಿರೀಯಸಂಹಿತೆಯ ಸಾಯಣಭಾಷ್ಯದ ಕನ್ನಡ ಅನುವಾದವನ್ನೊಳಗೊಂಡ ೧೧ನೆಯ ಸಂಪುಟವನ್ನು ಆಸ್ತಿಕಲೋಕಕ್ಕೆ ಸಮರ್ಪಿಸುತ್ತಿದ್ದೇವೆ.

ಈ ಮಹಾಕಾರ್ಯಕ್ಕೆ ಪ್ರಾರಂಭದಿಂದಲೂ ಅನುಗ್ರಹ ಹಾಗೂ ಆಶೀರ್ವಚನಗಳನ್ನು ದಯಪಾಲಿಸಿ ನಾವು ಈ ಕಾರ್ಯವನ್ನು ನಡೆಸಿಕೊಂಡು ಬರುವಂತೆ ಮಾಡುತ್ತಿರುವ ಮತ್ತು ಈ ಸಂಪುಟಕ್ಕೂ ಅನುಗ್ರಹಸಂದೇಶವನ್ನು ದಯಪಾಲಿಸಿರುವ ಶೃಂಗಗಿರಿ ಶಾರದಾಪೀಠಾಧೀಶ್ವರರಾದ ಜಗದ್ಗುರು ಶಂಕರಾಚಾರ್ಯ ಪರಮಪೂಜ್ಯ ಮಹಾಸನ್ನಿಧಾನ **ಶ್ರೀ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರ** ದಿವ್ಯ ಪಾದಪದ್ಮಗಳಲ್ಲಿ ಭಕ್ತಿಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸುತ್ತಿದ್ದೇವೆ. ಅಂತೆಯೇ ಜಗದ್ಗುರುಕರಕಮಲಸಂಜಾತರಾದ ಪರಮಪೂಜ್ಯ ಸನ್ನಿಧಾನ **ಶ್ರೀ ಶ್ರೀ ಶ್ರೀ ವಿಧುಶೇಖರಭಾರತೀ ಮಹಾಸ್ವಾಮಿಗಳವರ** ಚರಣಾರವಿಂದಗಳಲ್ಲಿಯೂ ಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತಿದ್ದೇವೆ.

ಗ್ರಂಥಪ್ರಕಾಶನಕ್ಕೆ ಸಂಬಂಧಿಸಿದಂತೆ ತುಂಬ ಭಾರವಾದ ಹಾಗೂ ನೋವಿನಿಂದ ಕೂಡಿದ ಮನಸ್ಸಿನಿಂದ ಈ ಸಂಪಾದಕನುಡಿಯನ್ನು ಬರೆಯಬೇಕಾಗಿದೆ.

**ಈ ಮಹಾಕಾರ್ಯದ ಸಂಕಲ್ಪವನ್ನು ಮಾಡಿ, ಅದಕ್ಕಾಗಿ ಗುರ್ವನುಗ್ರಹವನ್ನು ತಮ್ಮ ನಿರ್ಮಲವಾದ ಭಕ್ತಿಯಿಂದ ಸಂಪಾದಿಸಿ, ನಿಷ್ಕಲ್ಮಷವಾದ ತಮ್ಮ ನಡೆ-ನುಡಿಗಳಿಂದ ಈ ಕಾರ್ಯಕ್ಕಾಗಿ ವ್ಯಕ್ತಿಜೋಡಣೆಯನ್ನು ಮಾಡಿ, ಕಾರ್ಯದ ಪ್ರಾರಂಭದಿಂದಲೂ ಒಂದೇ ರೀತಿಯ ಉತ್ಸಾಹ ಹಾಗೂ ಕರ್ತವ್ಯಬುದ್ಧಿಯನ್ನು ಮೆರೆದು, ಈಶ್ವರಾರ್ಪಣಬುದ್ಧಿಯಿಂದಲೇ, ಧರ್ಮಪ್ರವಣತೆಯಿಂದಲೇ ಶೃಂಗೇರಿ ಶಾರದಾಪೀಠಾಧೀಶ್ವರರಾದ ಶ್ರೀ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರ ಪರಿಪೂರ್ಣ ಅನುಗ್ರಹಕ್ಕೆ ಪಾತ್ರರಾಗಿ ಅವರ ಅಮೃತಹಸ್ತದಿಂದ ಅನುಗ್ರಹಿಸಿದ 'ಧಾರ್ಮಿಕಪ್ರವರ' ಎಂಬ ಸಾರ್ಥಕಪ್ರಶಸ್ತಿಗೆ ಭಾಜನರಾದ ದಿ॥ ಡಾ॥ ಬಿ. ಎನ್. ವಿ. ಸುಬ್ರಹ್ಮಣ್ಯರವರು ಇಂದು ನಮ್ಮೊಡನೆ ಇಲ್ಲದಿರುವುದು ನಿಜವಾಗಿಯೂ ತುಂಬ ದುಃಖದ ವಿಷಯವಾಗಿದೆ.**

ಈ ಮಹಾಕಾರ್ಯವನ್ನು ಮುನ್ನಡೆಸಿ ತಂದ ಅವರ ಆತ್ಮಕ್ಕೆ ಚಿರಶಾಂತಿಯನ್ನು ಭಗವಂತನು ಕರುಣಿಸಲೆಂದು ಅನನ್ಯತೆಯಿಂದ ಪ್ರಾರ್ಥಿಸುವೆನು.

ಅವರ ಸಂಕಲ್ಪವನ್ನು ನೆರವೇರಿಸಲು ವೇದಾಭಿಮಾನಿಗಳಾದ ಆಸ್ತಿಕರು ಮುನ್ನಡೆಯಬೇಕಾಗಿದೆ.

ದಿ|| ಬಿ. ಎನ್. ವಿ. ಸುಬ್ರಹ್ಮಣ್ಯರವರ ಧರ್ಮಪತ್ನಿಯವರಾದ ಶ್ರೀಮತಿ ಸೀತಾ ಸುಬ್ರಹ್ಮಣ್ಯರವರೂ, ಅವರ ಸಹೋದರರೂ ದಿ|| ಸುಬ್ರಹ್ಮಣ್ಯರವರ ಭಾವಮೈದುನರೂ ಆದ ಶ್ರೀಯುತ ನರಸಿಂಹನ್‌ರವರೂ ಈ ಪ್ರಕಾಶನಕಾರ್ಯವನ್ನು ಮುನ್ನಡೆಸಿ, ಗುರ್ವನುಗ್ರಹದಿಂದ ಈ ಸಂಕಲ್ಪವನ್ನು ಸಾಕಾರಗೊಳಿಸಲು ಪ್ರವೃತ್ತರಾಗಿರುವುದು ಆಸ್ತಿಕಲೋಕದ ಭಾಗ್ಯವಾಗಿದೆ.

* * * * * * *

ಈಗ ಪ್ರಕಾಶನಗೊಳ್ಳುತ್ತಿರುವ ಕೃಷ್ಣಯಜುರ್ವೇದ ಕನ್ನಡ ಪ್ರಕಾಶನದ ೧೧ನೆಯ ಸಂಪುಟವು ತೈತ್ತಿರೀಯಸಂಹಿತೆಯ ನಾಲ್ಕನೆಯ ಕಾಂಡದ ಐದು, ಆರು ಮತ್ತು ಏಳನೆಯ ಪ್ರಪಾಠಕಗಳ ಒಳಗೊಂಡಿದೆ.

ಸಾಯಣಭಾಷ್ಯದ ಕನ್ನಡ ಅನುವಾದದಿಂದ ಕೂಡಿರುವ ಈ ಸಂಪುಟದಲ್ಲಿ ರುದ್ರಾಧ್ಯಾಯವೂ, ಚಮಕಾಧ್ಯಾಯವೂ ಒಳಗೊಂಡಿದೆ. ೫ನೆಯ ಪ್ರಪಾಠಕವಾದ ರುದ್ರಾಧ್ಯಾಯವು ಅತಿಮಹತ್ತ್ವಪೂರ್ಣವಾದುದೆಂದು ಹೇಳಬೇಕಾಗಿಲ್ಲ. ಈ ರುದ್ರಾಧ್ಯಾಯಕ್ಕೆ ಭಟ್ಟಭಾಸ್ಕರಮಿಶ್ರರ ಭಾಷ್ಯವು ಉಪಲಬ್ಧವಿದ್ದು ಈ ಸಂಪುಟದಲ್ಲಿ ರುದ್ರಾಧ್ಯಾಯವು ಮಾತ್ರ ಉಭಯಭಾಷ್ಯಗಳನ್ನೂ ಒಳಗೊಂಡಿದೆ. ನಾಲ್ಕನೆಯ ಕಾಂಡದ ಉಳಿದ ಪ್ರಪಾಠಕಗಳಿಗೆ ಭಟ್ಟಭಾಸ್ಕರಭಾಷ್ಯವು ದೊರೆತಿಲ್ಲ. ೬ನೆಯ ಪ್ರಪಾಠಕದಲ್ಲಿ ಚಯನನಿರ್ಮಾಣವು ಪೂರ್ಣಗೊಂಡ ಬಳಿಕ ಅನುಷ್ಠಿಸಬೇಕಾದ ಅಗ್ನಿಪರಿಷೇಚನಾದಿ ಸಂಸ್ಕಾರಗಳು ಮೊದಲಿನ ಐದು ಅನುವಾಕಗಳಲ್ಲಿ ಹೇಳಲ್ಪಟ್ಟಿವೆ. ಈ ಪ್ರಪಾಠಕದ ಉಳಿದ ಅನುವಾಕಗಳಲ್ಲಿ ವೈಶ್ವದೇವಕಾಂಡಕ್ಕೆ ಸಂಬಂಧಿಸಿದ ಅಶ್ವಮೇಧಯಾಗಕ್ಕೆ ಸೇರಿದ ಮಂತ್ರಗಳು ಪಠಿತವಾಗಿವೆ. ೭ನೆಯ ಪ್ರಪಾಠಕದಲ್ಲಿ ಮೊದಲಿನ ೧೧ ಅನುವಾಕಗಳು ಚಮಕಾಧ್ಯಾಯವಾಗಿದೆ. ಮುಂದಿನ ಮೂರು ಅನುವಾಕಗಳಲ್ಲಿ ಚಯನದ ವಿಧಿಗೆ ಸಂಬಂಧಿಸಿದ ಮಂತ್ರಗಳೇ ಇದ್ದು, ಕಡೆಯ ೧೫ನೆಯ ಅನುವಾಕದಲ್ಲಿ ಅಶ್ವಮೇಧಯಾಗಕ್ಕೆ ಸಂಬಂಧಿಸಿದ ಮೃಗಾರೇಷ್ಟಿಯ ಮಂತ್ರಗಳು ಇವೆ.

* * * * * * *

ಶ್ರೀ ರುದ್ರಾಧ್ಯಾಯಕ್ಕೆ ಶ್ರೀ ಸಾಯಣರು ರಚಿಸಿರುವ ಭಾಷ್ಯವು ಮುಖ್ಯವಾಗಿ ಶ್ರೌತವಿನಿಯೋಗವನ್ನು ಅವಲಂಬಿಸಿದೆ. ಶ್ರೀ ರುದ್ರಾಧ್ಯಾಯಕ್ಕೆ ಶ್ರೌತ-ಗೃಹ್ಯಕರ್ಮಗಳಲ್ಲಿಯೂ, ಜ್ಞಾನಕಾಂಡದಲ್ಲಿಯೂ ವಿನಿಯೋಗವಿದೆ. ಭಾಷ್ಯದ ಪೀಠಿಕೆಯಲ್ಲಿ ಶ್ರೀ ಸಾಯಣರು ಚಯನಬ್ರಾಹ್ಮಣದಲ್ಲಿ ಈ ಮಂತ್ರಗಳಿಗೆ ಕರ್ಮಾಂಗತ್ವವು ಹೇಳಲ್ಪಟ್ಟಿರುವುದರಿಂದ ಶಬ್ದಾರ್ಥವನ್ನು ಸ್ಫುಟವಾಗಿ ತಿಳಿಯಲು ಅನುಕೂಲವಾಗುವಂತೆ ಶಬ್ದಾರ್ಥವನ್ನು ಮಾತ್ರ ವಿವರಿಸಿರುವುದಾಗಿ ಹೇಳಿದ್ದಾರೆ.

ಶ್ರೀ ಭಟ್ಟಭಾಸ್ಕರ ಮಿಶ್ರರು ರಚಿಸಿರುವ ಶ್ರೀ ರುದ್ರಭಾಷ್ಯವು ಶ್ರೌತವಿನಿಯೋಗವನ್ನು ಅನುಸರಿಸಿದೆ.

ಶ್ರೀ ಸಾಯಣಾಚಾರ್ಯರು ಆಪಸ್ತಂಬಶ್ರೌತಸೂತ್ರವನ್ನೂ, ಶ್ರೀ ಭಟ್ಟಭಾಸ್ಕರಮಿಶ್ರರು ಬೌಧಾಯನ ಶ್ರೌತಸೂತ್ರವನ್ನೂ ಅನುಸರಿಸಿ ವಿವರಿಸಿರುವುದು ಮೇಲು ನೋಟಕ್ಕೆ ತೋರುವುದು.

ಇದಲ್ಲದೆ ಶ್ರೀ ಮಿಶ್ರರು ರುದ್ರಾಧ್ಯಾಯದ ಪ್ರತಿಯೊಂದು ಮಂತ್ರಕ್ಕೂ ಅವುಗಳಿಂದ ಬೇರೆ ಬೇರೆ ಫಲಗಳನ್ನು ಬಯಸಿ, ಅವುಗಳ ಪುರಶ್ಚರಣೆ, ಅವುಗಳಿಂದ ಹವನ, ಇವೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದ್ದಾರೆ. ಅದನ್ನು ಪ್ರಸ್ತುತ ಸಂಪುಟದ ಭಟ್ಟಭಾಸ್ಕರಭಾಷ್ಯದ ಅನುವಾದದಲ್ಲಿ ಸೇರಿಸಿಲ್ಲ.

ಶ್ರೀ ರುದ್ರಾಧ್ಯಾಯ ಮತ್ತು ಚಮಕಾಧ್ಯಾಯವನ್ನು ಒಳಗೊಂಡು ಎಲ್ಲೆಡೆ ಅನುಷ್ಠಿಸುತ್ತಿರುವ ರುದ್ರ–ರುದ್ರೈಕಾದಶಿನೀ, ಮಹಾರುದ್ರ, ಅತಿರುದ್ರ ಇವುಗಳ ಜಪ–ಹೋಮಗಳನ್ನು ಕುರಿತು ಈ ಸಂಪುಟದಲ್ಲಿ ತಿಳಿಸಬೇಕೆಂಬ ವಿಚಾರವಿದ್ದಿತಾದರೂ, ಅವೆಲ್ಲವನ್ನೂ ಒಳಗೊಂಡ ಸಂಪುಟವು ಅತಿವಿಸ್ತೃತವಾಗುವುದರಿಂದ ಆ ರೀತಿ ಮಾಡಲಾಗಿಲ್ಲ.

* * * * * * *

ಶ್ರೀ ರುದ್ರಾಧ್ಯಾಯದಲ್ಲಿ ಶ್ರೀ ರುದ್ರನೇ ಪರಬ್ರಹ್ಮವಸ್ತು ಎಂಬ ತತ್ತ್ವವನ್ನು ತಿಳಿಸಿ, ರುದ್ರನ ಸರ್ವವ್ಯಾಪಕ ರೂಪಗಳನ್ನೇ ವರ್ಣಿಸಲಾಗಿದೆ. ಅವುಗಳನ್ನು ಪ್ರಾರ್ಥಿಸಲಾಗಿದೆ. ಅಭಯವನ್ನು ಕೋರಲಾಗಿದೆ.

**ಇಮಾಗ್ಂ.... ಅನಾತುರಮ್ ॥ [ರುದ್ರಾಧ್ಯಾಯ; ಅನುವಾಕ–೧೦]** ಈ ಮಂತ್ರದಲ್ಲಿ ರುದ್ರದೇವನನ್ನು ಈ ರೀತಿ ಪ್ರಾರ್ಥಿಸಲಾಗಿದೆ;

ಹೇ! ರುದ್ರದೇವನೇ! ನಮ್ಮ ಮಕ್ಕಳು ಮೊಮ್ಮಕ್ಕಳಿಗೂ ನಮ್ಮ ಹಸು ಎಮ್ಮೆ ಮುಂತಾದ ನಾಲ್ಕು ಕಾಲಿನ ಎಲ್ಲ ಪ್ರಾಣಿಗಳಿಗೂ, ಅಲ್ಲದೆ ಈ ಗ್ರಾಮದಲ್ಲಿಯೂ, ಎಲ್ಲ ಪ್ರಾಣಿಸಮೂಹಕ್ಕೂ ಯಾವ ವಿಧವಾದ ಉಪದ್ರವವೂ ಉಂಟಾಗದಂತೆ ಮಾಡು. ನಾವು ನಿನ್ನನ್ನು ಆರಾಧಿಸಿ ಪ್ರಾರ್ಥಿಸುವೆವು.

ಸರ್ವಶಕ್ತನಾದ ಭಗವಂತನು ತನ್ನ ಮಹಿಮೆಯಿಂದ ಜಗತ್ತನ್ನು ಸೃಜಿಸುವನು. 'ಈ ಅದ್ಭುತವಾದ ಜಗತ್ತನ್ನು ನಿರ್ಮಿಸಿರುವ ಅವನಿಗೆ ಮೊಟ್ಟ ಮೊದಲು ಏನು ಸಾಧನವಿದ್ದೀತು? ಎಂದು ವಿಚಾರ ಮಾಡಿರಿ' ಎಂಬುದಾಗಿ ೭ನೆಯ ಪ್ರಪಾಠಕದ ಮಂತ್ರವಿದೆ. **ಕಿಗ್ಂಸ್ವಿದ್ವನಂ.....ಧಾರಯನ್ ।** **[ಪ್ರಪಾಠಕ. ೭, ಅನು. ೨]**

ಅವನು ಸೃಷ್ಟಿಸಿದ ಈ ಜಗತ್ತೇ ಇಷ್ಟು ಅದ್ಭುತವಾಗಿರುವಾಗ ಸೃಷ್ಟಿ ಮಾಡಿದವನು ಹೇಗಿರಬೇಕು? ಯಾರು ಯಾವುದನ್ನು ನಿರ್ಮಿಸುವನೋ ಅವನು ಅದಕ್ಕಿಂತಲೂ ಹೆಚ್ಚು ಅರಿತಿರಬೇಕಲ್ಲವೇ?

ಶ್ರೀ ಚಮಕಾಧ್ಯಾಯದಲ್ಲಿ ಮಾನವನಿಗೆ ಬೇಕಾಗಿರುವ ವಸ್ತುಗಳು, ಸ್ವಭಾವ, ಸೌಲಭ್ಯ ಎಲ್ಲವನ್ನೂ ಪ್ರಾರ್ಥಿಸಲಾಗಿದೆ. ಆರೋಗ್ಯವನ್ನು ಕುರಿತು ಅಯಕ್ಷ್ಮಮ್, ಅನಾಮಯತ್, ಜೀವಾತು– [ಮಹಾರೋಗವಿಲ್ಲದಿರುವಿಕೆ, ಸಾಮಾನ್ಯರೋಗವಿಲ್ಲದಿರುವಿಕೆ, ಬದುಕಿಗೆ ಅಗತ್ಯವಾದ ಔಷಧಗಳು] ಇವು ದೊರಕಲಿ ಎಂಬ ಪ್ರಾರ್ಥನೆಯು ಮನನೀಯವಾಗಿದೆ. [ಪ್ರಪಾಠಕ. ೭, ಅನುವಾಕ. ೩]

* * * * * * *

ಪ್ರಸ್ತುತಸಂಪುಟವನ್ನು ಶೃಂಗಗಿರಿ ಶಾರದಾಪೀಠಾಧೀಶ್ವರರಾದ ಶ್ರೀ ಶ್ರೀ ಭಾರತೀತೀರ್ಥಮಹಾ ಸ್ವಾಮಿಗಳವರ ಅನುಗ್ರಹ–ಆಶೀರ್ವಾದಗಳಿಂದ ಯಥಾಮತಿ ಸಿದ್ಧಪಡಿಸಿ ಆಸ್ತಿಕಲೋಕಕ್ಕೆ ಸಮರ್ಪಿಸಿದ್ದೇನೆ.

ಈ ಸಂಪುಟವನ್ನು ಸಿದ್ಧಗೊಳಿಸಲು ಅನುವಾದದ ಹಸ್ತಪ್ರತಿಯನ್ನು ರಚಿಸಿಕೊಟ್ಟಿರುವ ವೇ|| ಮೂ|| ವೇದಕೋವಿದ ದಿ|| ರಾಮೇಶ್ವರ ಅವಧಾನಿಗಳನ್ನು ಭಕ್ತಿಯಿಂದ ಸ್ಮರಿಸುವೆನು. ಆ ಹಸ್ತಪ್ರತಿಯನ್ನು ಕೊಡಮಾಡಿರುವ ಪೂಜ್ಯ ಅವಧಾನಿಗಳ ಪುತ್ರ ಶ್ರೀ ನಾಗೇಂದ್ರ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುವೆನು.

ಗಣಕಯಂತ್ರದಲ್ಲಿ ಈ ಸಂಪುಟದ ಅಕ್ಷರಸಂಯೋಜನೆಯನ್ನು ಚೆನ್ನಾಗಿ ಮಾಡಿಕೊಟ್ಟಿರುವ ವೇ|| ಮೂ|| ಫಾಲಚಂದ್ರ ಭಟ್ಟರಿಗೆ ಆಶೀರ್ವಾದ ಪೂರ್ವಕವಾದ ಅಭಿನಂದನೆಗಳನ್ನು ಹೇಳುತ್ತಿದ್ದೇನೆ. ಈ ಸಂಪುಟದ ಅಚ್ಚುಕಟ್ಟಾದ ಮುದ್ರಣಕಾರ್ಯವನ್ನು ನೆರವೇರಿಸಿರುವ ಶ್ರೀಯುತ ಪ್ರಭಾಕರ್ ಕೆ. ಸಿ. ರವರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಪ್ರಕಾಶನದ ಗ್ರಂಥಗಳನ್ನು ಆಸ್ತಿಕಲೋಕಕ್ಕೆ ಕೊಡಮಾಡುತ್ತಿರುವ ಪುಸ್ತಕವಿತರಕರಿಗೂ ನಮ್ಮ ಅಭಿನಂದನೆಗಳು ಸಲ್ಲುತ್ತವೆ.

ಸನಾತನಧರ್ಮದ ಮೌಲಿಕವಾದ ವೇದಗ್ರಂಥದ ಭಾಷ್ಯಾನುವಾದದ ಈ ಕಾರ್ಯವು ಮುನ್ನಡೆಯುವಂತೆ ಪರಮಾತ್ಮನನ್ನು ಪ್ರಾರ್ಥಿಸುತ್ತಾ, ಶ್ರೀ ವಿದ್ಯಾಶಂಕರ–ಶ್ರೀಶಾರದಾಂಬಾ–ಶ್ರೀ ರತ್ನಗರ್ಭ ಗಣಪತಿಯ ಸನ್ನಿಧಿಯಲ್ಲಿಯೂ, ಜಗದ್ಗುರು ಶಂಕರಾಚಾರ್ಯ ಶ್ರೀ ಶಾರದಾಪೀಠಾಧೀಶ್ವರರಾದ ಮಹಾಸನ್ನಿಧಾನ ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳ ದಿವ್ಯಸನ್ನಿಧಿಯಲ್ಲಿಯೂ ಜಗದ್ಗುರು ಶಂಕರಾಚಾರ್ಯ ಸನ್ನಿಧಾನ ಶ್ರೀ ಶ್ರೀ ವಿಧುಶೇಖರಭಾರತೀಮಹಾಸ್ವಾಮಿಗಳವರ ಚರಣಕಮಲ ಗಳಲ್ಲಿಯೂ ಭಕ್ತಿಯಿಂದ ಪ್ರಾರ್ಥಿಸುವೆನು.

ತಮ್ಮೆಲ್ಲರ ಬೆಂಬಲವನ್ನು ಕೋರುವ,

ದುರ್ಮುಖಿ ಸಂ|| ಮಕರಸಂಕ್ರಾಂತಿ
14.1.2017
ಶನಿವಾರ

ಸೋ. ತಿ ನಾಗರಾಜ
ಸಂಪಾದಕ.

# ಗ್ರಂಥದ ಅಧ್ಯಯನಕ್ಕೆ ಮುನ್ನ.....

ಕೃಷ್ಣಯಜುರ್ವೇದ ಕನ್ನಡ ಪ್ರಕಾಶನದ ಈ ಹನ್ನೊಂದನೆಯ ಸಂಪುಟವು ಶ್ರೀ ರುದ್ರಾಧ್ಯಾಯವನ್ನೂ, ಇನ್ನೊಂದು ಪ್ರಪಾಠಕದಿಂದ ಕೂಡಿರುವ ಚಮಕಾಧ್ಯಾಯವನ್ನೂ ಒಳಗೊಂಡಿದೆ.

ಶ್ರೀ ರುದ್ರಾಧ್ಯಾಯದ ಮಹತ್ತ್ವವು ಸರ್ವವಿದಿತವಾದುದೇ ಆಗಿದೆ. ಇಲ್ಲಿಯ ಮಂತ್ರಗಳಿಗೆ ಕರ್ಮ–ಉಪಾಸನೆ–ಮತ್ತು ಜ್ಞಾನಕಾಂಡಗಳಲ್ಲಿ ವಿನಿಯೋಗವು ಇರುವುದು ವೈಶಿಷ್ಟ್ಯ. ಶ್ರೌತ–ಸ್ಮಾರ್ತಗಳೆಂಬ ಉಭಯವಿಧಕರ್ಮಗಳಲ್ಲಿಯೂ ಇದಕ್ಕೆ ವಿನಿಯೋಗವಿದೆ. ಪ್ರಕೃತಸಂಪುಟದಲ್ಲಿ ಶ್ರೌತವಿನಿಯೋಗವನ್ನು ಮಾತ್ರ ಅನುಸರಿಸಿರುವ ವಿವರಣೆಯು ಇದೆ. ಶ್ರೀ ರುದ್ರಾಧ್ಯಾಯದಲ್ಲಿನ ಮಂತ್ರವಿಭಾಗಕ್ರಮವು ಬಗೆಬಗೆಯಾಗಿದೆ. ಶ್ರೌತವಿನಿಯೋಗಾನುಸಾರಿಯಾದ ಕೋಷ್ಟಕವು ಈ ಸಂಪುಟದಲ್ಲಿದೆ. ಸ್ಮಾರ್ತಾನುಷ್ಠಾನಗಳಾದ ರುದ್ರ, ರುದ್ರೈಕಾದಶಿನೀ, ಮಹಾರುದ್ರ, ಅತಿರುದ್ರಗಳಲ್ಲಿನ ಮಂತ್ರವಿಭಾಗವು ಏಕಧಾ (1), ತ್ರೇಧಾ (3), ಷೋಡಶಧಾ (16), ಅಷ್ಟಾಚತ್ವಾರಿಂಶದ್ಧಾ (48), ಏಕೋನಸಪ್ತತ್ಯುತ್ತರಶತಧಾ (169)–ಎಂಬುದಾಗಿದೆ. ಅದನ್ನು ಈ ಸಂಪುಟದಲ್ಲಿ ನೀಡಿಲ್ಲ.

ಶ್ರೀ ಸಾಯಣಾಚಾರ್ಯರು, ಶ್ರೀ ಭಟ್ಟಭಾಸ್ಕರಮಿಶ್ರರು ನೀಡಿರುವ ಮಂತ್ರವಿವರಣೆಯನ್ನು ನೀಡಿದೆ. ಶ್ರೀ ಭಟ್ಟಭಾಸ್ಕರಮಿಶ್ರರು ಮಾಡಿರುವ ಪ್ರತಿಯೊಂದು ಮಂತ್ರದ ಪುರಶ್ಚರಣದ ವಿಶೇಷಗಳನ್ನು ನೀಡಿಲ್ಲ. ಉಭಯಭಾಷ್ಯದ ಉಪೋದ್ಘಾತದ ಭಾಗ, ಪೀಠಿಕೆ, ಮಂತ್ರಗಳ ಛಂದಸ್ಸು, ಮೀಮಾಂಸಾವಿಚಾರಗಳನ್ನು ನೀಡಲಾಗಿದೆ.

ಚತುರ್ಥಕಾಂಡದ ಏಳನೆಯ ಪ್ರಪಾಠಕದ ಮೊದಲ ಹನ್ನೊಂದು ಅನುವಾಕಗಳು ಶ್ರೀ ಚಮಕಾಧ್ಯಾಯವೆನಿಸಿದೆ. ಈ ಮಂತ್ರಗಳ ಪಾಠವನ್ನನುಸರಿಸಿದ ಭಟ್ಟಭಾಸ್ಕರಭಾಷ್ಯವು ಉಪಲಬ್ಧವಿಲ್ಲ. ಶ್ರೀ ರುದ್ರಾಧ್ಯಾಯವೂ ೧೧ ಅನುವಾಕಗಳನ್ನೊಳಗೊಂಡಿದೆ. ೫ನೆಯ ಪ್ರಪಾಠಕ ಮತ್ತು ೭ನೆಯ ಪ್ರಪಾಠಕದ ೫ ಅನುವಾಕಗಳು ಆಗ್ನೇಯಕಾಂಡಕ್ಕೂ, ಅದರ ಉಳಿದ ಅನುವಾಕಗಳು ವೈಶ್ವದೇವಕಾಂಡಕ್ಕೂ ಸೇರುತ್ತವೆ. ೭ನೆಯ ಪ್ರಪಾಠಕದ ೧೪ ಅನುವಾಕಗಳು ಅಗ್ನೇಯಕಾಂಡಕ್ಕೆ ಸೇರುತ್ತವೆ. ೧೫ನೆಯ ಅನುವಾಕವು ವೈಶ್ವದೇವ ಕಾಂಡಕ್ಕೆ ಸೇರಿದುದಾಗಿದೆ.

ಈ ವಿಷಯಗಳನ್ನು ಮನನ ಮಾಡಿ ಗ್ರಂಥದ ಅಧ್ಯಯನವನ್ನು ಮಾಡಲು ವಿನಂತಿಸಲಾಗಿದೆ.

▲ ವೇದಾಧ್ಯಯನಪರಂಪರೆಯಲ್ಲಿ 'ಹನಸ್ಸು' ಎಂದು ಹೇಳಲ್ಪಡುವ ಕಡೆ ಸಂಧಿಯನ್ನು ಮಾಡಿಯೇ ಅದರ ಸ್ವರದೊಡನೆ ನಿರ್ದೇಶಿಸಲಾಗಿದೆ. ಅಧ್ಯಯನಸೌಕರ್ಯಕ್ಕಾಗಿ ಕಂಸದಲ್ಲಿ ಪದವಿಭಾಗವನ್ನೂ ನೀಡಿದೆ.

▲ ಪದಶಃ ಅರ್ಥವನ್ನು ತಿಳಿಸುವಾಗ ಮಂತ್ರವು ಪ್ರಾರಂಭವಾಗುವ ಕಡೆ ▲ ಚಿಹ್ನೆಯನ್ನು ನೀಡಿದೆ.

▲ ಮಂತ್ರ, ಪದಪಾಠ ಮತ್ತು ಪದಶಃ ಅರ್ಥ ಈ ಮೂರನ್ನೂ ಆಯಾ ಪುಟದಲ್ಲಿಯೇ ಸಮನ್ವಯವಾಗಿರುವಂತೆ ಯತ್ನಿಸಲಾಗಿದೆ.

▲ ಮಂತ್ರಗಳ ವಿನಿಯೋಗ ಮತ್ತು ತಾತ್ಪರ್ಯ ಇವುಗಳು ಬೇರೆ ಪುಟದಲ್ಲಿದ್ದಾಗ ಹೊಂದಿಸಿಕೊಂಡು ಅಧ್ಯಯನ ಮಾಡಲು ಕೋರಿದೆ.

▲ ಕೇವಲ ಮಂತ್ರಭಾಗದ ಅಧ್ಯಯನಸೌಕರ್ಯಕ್ಕಾಗಿ ಮೂರು ಪ್ರಪಾಠಕಗಳನ್ನೂ ಪ್ರತ್ಯೇಕವಾಗಿ ಮುದ್ರಿಸಲಾಗಿದೆ.

▲ ಚತುರ್ಥಕಾಂಡದಲ್ಲಿ ಕೇವಲ ಮಂತ್ರಗಳೇ ಪಠಿತವಾಗಿರುವುದರಿಂದ ಕಡೆಯಲ್ಲಿ ಎಲ್ಲ ಮಂತ್ರಗಳ ಛಂದಸ್ಸಿನ ನಿರ್ದೇಶವಿದೆ.

# ಸಂಕೇತಾಕ್ಷರಗಳ ವಿವರಣೆ

| | |
|---|---|
| ತೈ.ಸಂ. | ತೈತ್ತಿರೀಯಸಂಹಿತೆ |
| ತೈ. ಬ್ರಾ. | ತೈತ್ತಿರೀಯ ಬ್ರಾಹ್ಮಣ |
| ತೈ. ಆ. | ತೈತ್ತಿರೀಯ ಆರಣ್ಯಕ |
| ಆಪ. ಶ್ರೌ. ಸೂ. | ಆಪಸ್ತಂಬ ಶ್ರೌತಸೂತ್ರ |
| ಆಪ. ಗೃ. ಸೂ. | ಆಪಸ್ತಂಬ ಗೃಹ್ಯಸೂತ್ರ |
| ಬೌ. ಶ್ರೌ. ಸೂ. | ಬೌಧಾಯನ ಶ್ರೌತಸೂತ್ರ |
| ಜೈ. ಸೂ. | ಜೈಮಿನಿಸೂತ್ರ |
| ಬ್ರ. ಸೂ. | ಬ್ರಹ್ಮಸೂತ್ರ |
| ಪಾ. ಸೂ. | ಪಾಣಿನಿಸೂತ್ರ |
| ಋ. ಸಂ. | ಋಗ್ವೇದ ಸಂಹಿತೆ |
| ಭ. ಭಾ. ಭಾ. | ಭಟ್ಟ ಭಾಸ್ಕರ ಭಾಷ್ಯ |
| ಛಾ. ಉ. | ಛಾಂದೋಗ್ಯ ಉಪನಿಷತ್ತು |
| ವೈ. | ವೈಶ್ವದೇವಕಾಂಡ |
| ಶ. ಬ್ರಾ. | ಶತಪಥ ಬ್ರಾಹ್ಮಣ |
| ಸೌ. | ಸೌಮ್ಯಕಾಂಡ |
| ತಾಂ. ಬ್ರಾ. | ತಾಂಡ್ಯಬ್ರಾಹ್ಮಣ |
| ಕೃ. ಯ. ವೇ. | ಕೃಷ್ಣಯಜುರ್ವೇದ |
| ಮೈ. ಸಂ. | ಮೈತ್ರಾಯಣೀಯ ಸಂಹಿತೆ |
| ಐ. ಬ್ರಾ. | ಐತರೇಯ ಬ್ರಾಹ್ಮಣ |
| ಜಾ. ಉ. | ಜಾಬಾಲ ಉಪನಿಷತ್ |
| ತೈ. ಉ. | ತೈತ್ತಿರೀಯ ಉಪನಿಷತ್ |
| ಜೈ. ನ್ಯಾ. | ಜೈಮಿನೀಯ ನ್ಯಾಯಮಾಲಾ |

ॐ

## ಶ್ರುತಿಸ್ತುತಿ

**ಬ್ರಹ್ಮಣಶ್ಯೋತನ್ಯಸಿ ।**

ಹೇ! ಶ್ರುತಿಯೇ! ನೀನು ಪರಮಾತ್ಮವಸ್ತುವನ್ನು ಕೇಳಿ ತಿಳಿಯಲು ಕಾರಣವಾಗಿರುವೆ.

**ಯದಹಂ ವೇದ ತದಹಂ ಧಾರಯಾಣಿ ಮಾಮದ್ವೇದೋಧಿ ವಿಸ್ರಸತ್ ॥**

ಪರಮಾತ್ಮತತ್ತ್ವವನ್ನೂ, ಅದನ್ನು ತಿಳಿಸುವ ವೇದವಾಕ್ಯವನ್ನೂ ನಾನು ತಿಳಿದಿರುವೆನು. ಎರಡನ್ನೂ ಯಾವಾಗಲೂ ನಾನು ಮನಸ್ಸಿನಲ್ಲಿ ಧರಿಸುವಂತಾಗಲಿ. ಆ ವೇದವು ನನ್ನಿಂದ ಜಾರಿಹೋಗದಿರಲಿ. ನಾನು ವೇದವನ್ನು ಮರೆಯದಂತಾಗಲಿ.

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಪಂಚಮಃ ಪ್ರಶ್ನಃ

ಶ್ರೀ ಗುರುಭ್ಯೋ ನಮಃ ಹರಿಃ ಓಮ್

ನಮಸ್ತೇ ರುದ್ರ ಮನ್ಯವ ಉತೋ ತ ಇಷವೇ ನಮಃ । ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ ॥ ಯಾ ತ ಇಷುಃ ಶಿವತಮಾ ಶಿವಂ ಬಭೂವ ತೇ ಧನುಃ । ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ ॥ ಯಾ ತೇ ರುದ್ರ ಶಿವಾ ತನೂರ ಘೋರಾಽಪಾಪಕಾಶಿನೀ । ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿ ಚಾಕಶೀಹಿ ॥ ಯಾಮಿಷುಂ ಗಿರಿಶಂತ ಹಸ್ತೇ [ಹಸ್ತೇ(೧)] ಬಿಭರ್ಷ್ಯಸ್ತವೇ । ಶಿವಾಂ ಗಿರಿತ್ರ ತಾಂ ಕುರು ಮಾ ಹಿಗ್ಂಸೀಃ ಪುರುಷಂ ಜಗತ್ ॥ ಶಿವೇನ ವಚಸಾ ತ್ವಾ ಗಿರಿಶಾಚ್ಛಾ ವದಾಮಸಿ । ಯಥಾ ನಸ್ಸರ್ವಮಿಜ್ಜಗದಯಕ್ಷ್ಮಗ್ಂ ಸುಮನಾ ಅಸತ್ ॥ ಅಧ್ಯವೋಚದಧಿವಕ್ತಾ ಪ್ರಥಮೋ ದೈವ್ಯೋ ಭಿಷಕ್ । ಅಹೀಗ್ಂಶ್ಚ ಸರ್ವಾಞ್ಜಂಭಯನ್ಥ್ಸರ್ವಾಶ್ಚ ಯಾತುಧಾನ್ಯಃ ॥ ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಃ ಸುಮಂಗಲಃ । ಯೇಚೇಮಾಗ್ಂ ರುದ್ರಾ ಅಭಿತೋ ದಿಕ್ಷು [( ೨ )] ಶ್ರಿತಾಃ ಸಹಸ್ರಶೋಽವೈಷಾಗ್ಂ ಹೇಡ ಈಮಹೇ ॥ ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ । ಉತೈನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ । ಉತೈನಂ ವಿಶ್ವಾ ಭೂತಾನಿ ಸ ದೃಷ್ಟೋ ಮೃಡಯಾತಿ ನಃ ॥ ನಮೋ ಅಸ್ತು ನೀಲಗ್ರೀವಾಯ

ಸಹಸ್ರಾಕ್ಷಾಯ ಮೀಢುಷೇ । ಅಥೋ ಯೇ ಅಸ್ಯ ಸತ್ವಾನೋಽಹಂ ತೇಭ್ಯೋಽಕರಂ ನಮಃ ॥ ಪ್ರಮುಂಚ ಧನ್ವನಸ್ತ್ವಮುಭಯೋರಾರ್ತ್ನಿಯೋರ್ಜ್ಯಾಮ್ । ಯಾಶ್ಚ ತೇ ಹಸ್ತ ಇಷವಃ [ಇಷವಃ (ಇ)]ಪರಾ ತಾ ಭಗವೋ ವಪ ॥ ಅವತತ್ಯ ಧನುಸ್ತ್ವಗ್ಂ ಸಹಸ್ರಾಕ್ಷ ಶತೇಷುಧೇ । ನಿಶೀರ್ಯ ಶಲ್ಯಾನಾಂ ಮುಖಾ ಶಿವೋ ನಸ್ಸುಮನಾ ಭವ ॥ ವಿಜ್ಯಂ ಧನುಃ ಕಪರ್ದಿನೋ ವಿಶಲ್ಯೋ ಬಾಣವಾಗ್ಂ ಉತ । ಅನೇಶನ್ನಸ್ಯೇಷವ ಆಭುರಸ್ಯ ನಿಷಂಗಥಿಃ ॥ ಯಾ ತೇ ಹೇತಿರ್ಮೀಢುಷ್ಟಮ ಹಸ್ತೇ ಬಭೂವ ತೇ ಧನುಃ । ತಯಾಽಸ್ಮಾನ್, ವಿಶ್ವತಸ್ತ್ವಮ ಯಕ್ಷ್ಮಯಾ ಪರಿಬ್ಭುಜ ॥ ನಮಸ್ತೇ ಅಸ್ತ್ವಾಯುಧಾಯಾನಾತತಾಯ ಧೃಷ್ಣವೇ । ಉಭಾಭ್ಯಾಮುತ ತೇ ನಮೋ ಬಾಹುಭ್ಯಾಂ ತವ ಧನ್ವನೇ ॥ ಪರಿ ತೇ ಧನ್ವನೋ ಹೇತಿರಸ್ಮಾನ್ವೃಣಕ್ತು ವಿಶ್ವತಃ । ಅಥೋ ಯ ಇಷುಧಿಸ್ತವಾರೇ ಅಸ್ಮನ್ನಿಧೇಹಿ ತಮ್ ॥ ೪ ॥

ಹಸ್ತೇ ದಿಕ್ಷ್ವಿಷವ ಉಭಾಭ್ಯಾಂ ದ್ವಾವಿಗ್ಂಶತಿಶ್ಚ ॥ 1 ॥

ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮೋ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂ ಪತಯೇ ನಮೋ ನಮಃ ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ ನಮೋ ನಮೋ ಬಭ್ಲುಶಾಯ ವಿವ್ಯಾಧಿನೇಽನ್ನಾನಾಂ ಪತಯೇ ನಮೋ ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮೋ ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮೋ ನಮೋ ರುದ್ರಾಯಾಽಽತತಾವಿನೇ ಕ್ಷೇತ್ರಾಣಾಂ ಪತಯೇ

ನಮೋ ನಮಃ ಸೂತಾಯಾಹನ್ತ್ಯಾಯ ವನಾನಾಂ ಪತಯೇ ನಮೋ[ನಮಃ (೫)]ನಮೋ ರೋಹಿತಾಯ ಸ್ಥಪತಯೇ ವೃಕ್ಷಾಣಾಂ ಪತಯೇ ನಮೋ ನಮೋ ಮಂತ್ರಿಣೇ ವಾಣಿಜಾಯ ಕಕ್ಷಾಣಾಂ ಪತಯೇ ನಮೋ ನಮೋ ಭುವಂತಯೇ ವಾರಿವಸ್ಕೃತಾಯೌಷಧೀನಾಂ ಪತಯೇ ನಮೋ ನಮ ಉಚ್ಚೈರ್ಘೋಷಾಯಾಽಽಕ್ರಂದಯತೇ ಪತ್ತೀನಾಂ ಪತಯೇ ನಮೋ ನಮಃ ಕೃತ್ಸ್ನವೀತಾಯ ಧಾವತೇ ಸತ್ವನಾಂ ಪತಯೇ ನಮಃ ॥ ೬ ॥

ವನಾನಾಂ ಪತಯೇ ನಮೋ ನಮ ಏಕಾನ್ನತ್ರಿಗ್ಂಶಚ್ಚ ॥ 2 ॥

ನಮಃ ಸಹಮಾನಾಯ ನಿವ್ಯಾಧಿನ ಆವ್ಯಾಧಿನೀನಾಂ ಪತಯೇ ನಮೋ ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮೋ ನಮೋ ನಿಷಂಗಿಣ ಇಷುಧಿಮತೇ ತಸ್ಕರಾಣಾಂ ಪತಯೇ ನಮೋ ನಮೋ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ ನಮೋ ನಮೋ ನಿಚೇರವೇ ಪರಿಚರಾಯಾರಣ್ಯಾನಾಂ ಪತಯೇ ನಮೋ ನಮಃ ಸೃಕಾವಿಭ್ಯೋ ಜಿಘಾಗ್ಂಸದ್ಭ್ಯೋ ಮುಷ್ಣತಾಂ ಪತಯೇ ನಮೋ ನಮೋಽಸಿಮದ್ಭ್ಯೋ ನಕ್ತಂ ಚರದ್ಭ್ಯಃ ಪ್ರಕೃಂತಾನಾಂ ಪತಯೇ ನಮೋ ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ ನಮೋ ನಮ[ನಮಃ(೭)] ಇಷುಮದ್ಭ್ಯೋ ಧನ್ವಾವಿಭ್ಯಶ್ಚ ವೋ ನಮೋ ನಮ ಆತನ್ವಾನೇಭ್ಯಃ ಪ್ರತಿದಧಾನೇಭ್ಯಶ್ಚ ವೋ ನಮೋ ನಮ ಆಯಚ್ಛದ್ಭ್ಯೋ ವಿಸೃಜದ್ಭ್ಯಶ್ಚ ವೋ ನಮೋ ನಮೋಽಸ್ಯದ್ಭ್ಯೋ ವಿಧ್ಯದ್ಭ್ಯಶ್ಚ ವೋ ನಮೋ ನಮ ಆಸೀನೇಭ್ಯಃ ಶಯಾನೇಭ್ಯಶ್ಚ ವೋ ನಮೋ ನಮಃ ಸ್ವಪದ್ಭ್ಯೋ ಜಾಗ್ರದ್ಭ್ಯಶ್ಚ ವೋ ನಮೋ

ನಮಸ್ತಿಷ್ಠದ್ಭ್ಯೋ ಧಾವದ್ಭ್ಯಶ್ಚ ವೋ ನಮೋ ನಮಃ ಸಭಾಭ್ಯಸ್ಸಭಾಪತಿಭ್ಯಶ್ಚ ವೋ ನಮೋ ನಮೋ ಅಶ್ವೇಭ್ಯೋಽಶ್ವಪತಿಭ್ಯಶ್ಚ ವೋ ನಮಃ ॥ ೯ ॥

ಕುಲುಂಚಾನಾಂ ಪತಯೇ ನಮೋ ನಮೋಽಶ್ವಪತಿಭ್ಯಸ್ತ್ರೀಣಿ ಚ ॥ 3 ॥

ನಮ ಆವ್ಯಾಧಿನೀಭ್ಯೋ ವಿವಿಧ್ಯಂತೀಭ್ಯಶ್ಚ ವೋ ನಮೋ ನಮ ಉಗಣಾಭ್ಯಸ್ತೃಗ್ಂಹತೀಭ್ಯಶ್ಚ ವೋ ನಮೋ ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚ ವೋ ನಮೋ ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮೋ ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮೋ ನಮೋ ಮಹದ್ಭ್ಯಃ, ಕ್ಷುಲ್ಲಕೇಭ್ಯಶ್ಚ ವೋ ನಮೋ ನಮೋ ರಥಿಭ್ಯೋಽರಥೇಭ್ಯಶ್ಚ ವೋ ನಮೋ ನಮೋ ರಥೇಭ್ಯೋ [ರಥೇಭ್ಯಃ(೯)] ರಥಪತಿಭ್ಯಶ್ಚ ವೋ ನಮೋ ನಮಃ ಸೇನಾಭ್ಯಃ ಸೇನಾನಿಭ್ಯಶ್ಚ ವೋ ನಮೋ ನಮಃ, ಕ್ಷತ್ತೃಭ್ಯಃ ಸಂಗ್ರಹೀತೃಭ್ಯಶ್ಚ ವೋ ನಮೋ ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮೋ ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚ ವೋ ನಮೋ ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚ ವೋ ನಮೋ ನಮ ಇಷುಕೃದ್ಭ್ಯೋ ಧನ್ವಕೃದ್ಭ್ಯಶ್ಚ ವೋ ನಮೋ ನಮೋ ಮೃಗಯುಭ್ಯಃ ಶ್ವನಿಭ್ಯಶ್ಚ ವೋ ನಮೋ ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ ॥ ೧೦ ॥

ರಥೇಭ್ಯಃ ಶ್ವಪತಿಭ್ಯಶ್ಚ ದ್ವೇ ಚ ॥ 4 ॥

ನಮೋ ಭವಾಯ ಚ ರುದ್ರಾಯ ಚ ನಮಶ್ಶರ್ವಾಯ ಚ ಪಶುಪತಯೇ ಚ ನಮೋ

ನೀಲಗ್ರೀವಾಯ ಚ ಶಿತಿಕಂಠಾಯ ಚ ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ ನಮಸ್ಸಹಸ್ರಾಕ್ಷಾಯ ಚ ಶತಧನ್ವನೇ ಚ ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚ ನಮೋ ಮೀಢುಷ್ಟಮಾಯ ಚೇಷುಮತೇ ಚ ನಮೋ ಹ್ರಸ್ವಾಯ ಚ ವಾಮನಾಯ ಚ ನಮೋ ಬೃಹತೇ ಚ ವರ್ಷೀಯಸೇ ಚ ನಮೋ ವೃದ್ಧಾಯ ಚ ಸಂವೃಧ್ವನೇ ಚ [ಚ (೧೧)] ನಮೋ ಅಗ್ರಿಯಾಯ ಚ ಪ್ರಥಮಾಯ ಚ ನಮ ಆಶವೇ ಚಾऽಜಿರಾಯ ಚ ನಮಶ್ಶೀಘ್ರಿಯಾಯ ಚ ಶೀಭ್ಯಾಯ ಚ ನಮ ಊರ್ಮ್ಯಾಯ ಚಾವಸ್ವನ್ಯಾಯ ಚ ನಮಃ ಸ್ರೋತಸ್ಯಾಯ ಚ ದ್ವೀಪ್ಯಾಯ ಚ ॥ ೧೨ ॥

ಸಂವೃಧ್ವನೇ ಚ ಪಂಚವಿಗ್ಂಶತಿಶ್ಚ ॥ 5 ॥

ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ ನಮಃ ಪೂರ್ವಜಾಯ ಚಾಪರಜಾಯ ಚ ನಮೋ ಮಧ್ಯಮಾಯ ಚಾಪಗಲ್ಭಾಯ ಚ ನಮೋ ಜಘನ್ಯಾಯ ಚ ಬುಧ್ನಿಯಾಯ ಚ ನಮ ಸ್ಸೋಭ್ಯಾಯ ಚ ಪ್ರತಿಸರ್ಯಾಯ ಚ ನಮೋ ಯಾಮ್ಯಾಯ ಚ ಕ್ಷೇಮ್ಯಾಯ ಚ ನಮ ಉರ್ವರ್ಯಾಯ ಚ ಖಲ್ಯಾಯ ಚ ನಮಶ್ಶ್ಲೋಕ್ಯಾಯ ಚಾವಸಾನ್ಯಾಯ ಚ ನಮೋ ವನ್ಯಾಯ ಚ ಕಕ್ಷ್ಯಾಯ ಚ ನಮಃ ಶ್ರವಾಯ ಚ ಪ್ರತಿಶ್ರವಾಯ ಚ [ಚ (೧೩)] ನಮ ಆಶುಷೇಣಾಯ ಚಾऽऽಶುರಥಾಯ ಚ ನಮಶ್ಶೂರಾಯ ಚಾವಭಿಂದತೇ ಚ ನಮೋ ವರ್ಮಿಣೇ ಚ ವರೂಥಿನೇ ಚ ನಮೋ ಬಿಲ್ಮಿನೇ ಚ ಕವಚಿನೇ ಚ ನಮಃ ಶ್ರುತಾಯ ಚ ಶ್ರುತಸೇನಾಯ ಚ ॥ ೧೪ ॥

ಪ್ರತಿಶ್ರವಾಯ ಚ ಪಂಚವಿಗ್ಂಶತಿಶ್ಚ ॥ 6 ॥

ನಮೋ ದುಂದುಭ್ಯಾಯ ಚಾಽಽಹನನ್ಯಾಯ ಚ ನಮೋ ಧೃಷ್ಣವೇ ಚ ಪ್ರಮೃಶಾಯ ಚ ನಮೋ ದೂತಾಯ ಚ ಪ್ರಹಿತಾಯ ಚ ನಮೋ ನಿಷಂಗಿಣೇ ಚೇಷುಧಿಮತೇ ಚ ನಮಸ್ತೀಕ್ಷ್ಣೇಷವೇ ಚಾಽಽಯುಧಿನೇ ಚ ನಮಸ್ಸ್ವಾಯುಧಾಯ ಚ ಸುಧನ್ವನೇ ಚ ನಮಃ ಸ್ರುತ್ಯಾಯ ಚ ಪಥ್ಯಾಯ ಚ ನಮಃ ಕಾಟ್ಯಾಯ ಚ ನೀಪ್ಯಾಯ ಚ ನಮಸ್ಸೂದ್ಯಾಯ ಚ ಸರಸ್ಯಾಯ ಚ ನಮೋ ನಾದ್ಯಾಯ ಚ ವೈಶಂತಾಯ ಚ [ಚ (೧೫)] ನಮಃ ಕೂಪ್ಯಾಯ ಚಾವಟ್ಯಾಯ ಚ ನಮೋ ವರ್ಷ್ಯಾಯ ಚಾವರ್ಷ್ಯಾಯ ಚ ನಮೋ ಮೇಘ್ಯಾಯ ಚ ವಿದ್ಯುತ್ಯಾಯ ಚ ನಮ ಈಧ್ರಿಯಾಯ ಚಾಽಽತಪ್ಯಾಯ ಚ ನಮೋ ವಾತ್ಯಾಯ ಚ ರೇಷ್ಮಿಯಾಯ ಚ ನಮೋ ವಾಸ್ತವ್ಯಾಯ ಚ ವಾಸ್ತುಪಾಯ ಚ ॥ ೧೬ ॥

ವೈಶಂತಾಯ ಚ ತ್ರಿಗ್ಂಶಚ್ಚ ॥ 7 ॥

ನಮಸ್ಸೋಮಾಯ ಚ ರುದ್ರಾಯ ಚ ನಮಸ್ತಾಮ್ರಾಯ ಚಾರುಣಾಯ ಚ ನಮಶ್ಶಂಗಾಯ ಚ ಪಶುಪತಯೇ ಚ ನಮ ಉಗ್ರಾಯ ಚ ಭೀಮಾಯ ಚ ನಮೋ ಅಗ್ರೇವಧಾಯ ಚ ದೂರೇವಧಾಯ ಚ ನಮೋ ಹಂತ್ರೇ ಚ ಹನೀಯಸೇ ಚ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯೋ ನಮಸ್ತಾರಾಯ ನಮಶ್ಶಂಭವೇ ಚ ಮಯೋಭವೇ ಚ ನಮಶ್ಶಂಕರಾಯ ಚ ಮಯಸ್ಕರಾಯ ಚ ನಮಃ ಶಿವಾಯ ಚ ಶಿವತರಾಯ ಚ [ಚ(೧೭)] ನಮಸ್ತೀರ್ಥ್ಯಾಯ ಚ ಕೂಲ್ಯಾಯ ಚ ನಮಃ ಪಾರ್ಯಾಯ ಚಾವಾರ್ಯಾಯ ಚ ನಮಃ ಪ್ರತರಣಾಯ

ಚೋತ್ತರಣಾಯ ಚ ನಮ ಆತಾರ್ಯಾಯ ಚಾಽಽಲಾದ್ಯಾಯ ಚ ನಮಶ್ಶಷ್ಪ್ಯಾಯ ಚ ಫೇನ್ಯಾಯ ಚ ನಮಸ್ಸಿಕತ್ಯಾಯ ಚ ಪ್ರವಾಹ್ಯಾಯ ಚ ॥ ೧೮ ॥

ಶಿವತರಾಯ ಚ ತ್ರಿಗ್ಂಶಚ್ಚ ॥ 8 ॥

ನಮ ಇರಿಣ್ಯಾಯ ಚ ಪ್ರಪಥ್ಯಾಯ ಚ ನಮಃ ಕಿಗ್ಂಶಿಲಾಯ ಚ ಕ್ಷಯಣಾಯ ಚ ನಮಃ ಕಪರ್ದಿನೇ ಚ ಪುಲಸ್ತಯೇ ಚ ನಮೋ ಗೋಷ್ಠ್ಯಾಯ ಚ ಗೃಹ್ಯಾಯ ಚ ನಮಸ್ತಲ್ಪ್ಯಾಯ ಚ ಗೇಹ್ಯಾಯ ಚ ನಮಃ ಕಾಟ್ಯಾಯ ಚ ಗಹ್ವರೇಷ್ಠಾಯ ಚ ನಮೋ ಹ್ರದಯ್ಯಾಯ ಚ ನಿವೇಷ್ಪ್ಯಾಯ ಚ ನಮಃ ಪಾಗ್ಂಸವ್ಯಾಯ ಚ ರಜಸ್ಯಾಯ ಚ ನಮಶ್ಶುಷ್ಕ್ಯಾಯ ಚ ಹರಿತ್ಯಾಯ ಚ ನಮೋ ಲೋಪ್ಯಾಯ ಚೋಲಪ್ಯಾಯ ಚ [ಚ (೧೯)] ನಮ ಊರ್ವ್ಯಾಯ ಚ ಸೂರ್ಮ್ಯಾಯ ಚ ನಮಃ ಪರ್ಣ್ಯಾಯ ಚ ಪರ್ಣಶದ್ಯಾಯ ಚ ನಮೋಽಪಗುರಮಾಣಾಯ ಚಾಭಿಘ್ನತೇ ಚ ನಮ ಆಕ್ಖಿದತೇ ಚ ಪ್ರಕ್ಖಿದತೇ ಚ ನಮೋ ವಃ ಕಿರಿಕೇಭ್ಯೋ ದೇವಾನಾಗ್ಂ ಹೃದಯೇಭ್ಯೋ ನಮೋ ವಿಕ್ಷೀಣಕೇಭ್ಯೋ ನಮೋ ವಿಚಿನ್ವತ್ಕೇಭ್ಯೋ ನಮ ಆನಿರ್ಹತೇಭ್ಯೋ ನಮ ಆಮೀವತ್ಕೇಭ್ಯಃ ॥ ೨೦ ॥

ಉಲಪ್ಯಾಯ ಚ ತ್ರಯಸ್ತ್ರಿಗ್ಂಶಚ್ಚ ॥ 9 ॥

ದ್ರಾಪೇ ಅಂಧಸಸ್ಪತೇ ದರಿದ್ರನ್ನೀಲಲೋಹಿತ । ಏಷಾಂ ಪುರುಷಾಣಾಮೇಷಾಂ ಪಶೂನಾಂ ಮಾ ಭೇರ್ಮಾಽರೋ ಮೋ ಏಷಾಂ ಕಿಂ ಚನಾಽಽಮಮತ್ ॥ ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾಹಭೇಷಜೀ । ಶಿವಾ ರುದ್ರಸ್ಯ ಭೇಷಜೀ ತಯಾ ನೋ ಮೃಡ ಜೀವಸೇ ॥

ಇಮಾಗ್ಂ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರ ಭರಾಮಹೇ ಮತಿಮ್ । ಯಥಾ ನಶ್ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನ[ಅಸ್ಮಿನ್ನ್(೨೧) ಅನಾತುರಮ್]ನಾತುರಮ್ ॥ ಮೃಡಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮ ತೇ । ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತೌ ॥ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ [ನಸ್ತನುವಃ(೨೨)ರುದ್ರ ರೀರಿಷಃ ।]ರುದ್ರ ರೀರಿಷಃ ॥ ಮಾ ನ ಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್, ಹವಿಷ್ಮಂತೋ ನಮಸಾ ವಿಧೇಮ ತೇ ॥ ಆರಾತ್ತೇ ಗೋಘ್ನ ಉತ ಪೂರುಷಘ್ನೇ ಕ್ಷಯದ್ವೀರಾಯ ಸುಮ್ನಮಸ್ಮೇ ತೇ ಅಸ್ತು । ರಕ್ಷಾ ಚ ನೋ ಅಧಿ ಚ ದೇವ ಬ್ರೂಹ್ಯಧಾ ಚ ನಶ್ಶರ್ಮ ಯಚ್ಛ ದ್ವಿಬರ್‌ಹಾಃ ॥ ಸ್ತುಹಿ[(೨೩)]ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಮ್ । ಮೃಡಾ ಜರಿತ್ರೇ ರುದ್ರ ಸ್ತವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥ ಪರಿ ಣೋ ರುದ್ರಸ್ಯ ಹೇತಿರ್ವೃಣಕ್ತು ಪರಿ ತ್ವೇಷಸ್ಯ ದುರ್ಮತಿರಘಾಯೋಃ । ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಡಯ ॥ ಮೀಢುಷ್ಟಮ ಶಿವತಮ ಶಿವೋ ನಃ ಸುಮನಾ ಭವ । ಪರಮೇ ವೃಕ್ಷ ಆಯುಧಂ ನಿಧಾಯ ಕೃತ್ತಿಂ ವಸಾನ ಆ ಚರ ಪಿನಾಕಂ [ಪಿನಾಕಮ್(೨೪)] ಬಿಭ್ರದಾ ಗಹಿ ॥ ವಿಕಿರಿದ

ವಿಲೋಹಿತ ನಮಸ್ತೇ ಅಸ್ತು ಭಗವಃ । ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಮಸ್ಮನ್ನಿ ವಪಂತು ತಾಃ ॥ ಸಹಸ್ರಾಣಿ ಸಹಸ್ರಧಾ ಬಾಹುವೋಽಸ್ತವ ಹೇತಯಃ । ತಾಸಾಮೀಶಾನೋ ಭಗವಃ ಪರಾಚೀನಾ ಮುಖಾ ಕೃಧಿ ॥ ೨೫ ॥

ಅಸ್ಮಿಗ್ಗ್ಂ ಸ್ತನುವಃ ಸ್ತುಹಿ ಪಿನಾಕಮೇಕಾನ್ನತ್ರಿಗ್ಂಶಚ್ಚ ॥ 10 ॥

ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಮ್ । ತೇಷಾಗ್ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ । ಅಸ್ಮಿನ್ಮಹತ್ಯರ್ಣವೇಽಂತರಿಕ್ಷೇ ಭವಾ ಅಧಿ । ನೀಲಗ್ರೀವಾಶ್ಶಿತಿಕಂಠಾಃ ಶರ್ವಾ ಅಧಃ, ಕ್ಷಮಾಚರಾಃ । ನೀಲಗ್ರೀವಾಶ್ಶಿತಿಕಂಠಾ ದಿವಗ್ಂ ರುದ್ರಾ ಉಪಶ್ರಿತಾಃ । ಯೇ ವೃಕ್ಷೇಷು ಸಸ್ಪಿಂಜರಾ ನೀಲಗ್ರೀವಾ ವಿಲೋಹಿತಾಃ । ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ । ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್ । ಯೇ ಪಥಾಂ ಪಥಿರಕ್ಷಯ ಐಲಬೃದಾ ಯವ್ಯುಧಃ । ಯೇ ತೀರ್ಥಾನಿ [(೨೬)] ಪ್ರಚರಂತಿ ಸೃಕಾವಂತೋ ನಿಷಂಗಿಣಃ । ಯ ಏತಾವಂತಶ್ಚ ಭೂಯಾಗ್ಂಸಶ್ಚ ದಿಶೋ ರುದ್ರಾ ವಿತಸ್ಥಿರೇ । ತೇಷಾಗ್ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ । ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇ ಯೇ ದಿವಿ ಯೇಷಾಮನ್ನಂ ವಾತೋ ವರ್ಷಮಿಷವಸ್ತೇಭ್ಯೋ ದಶ ಪ್ರಾಚೀರ್ದಶ ದಕ್ಷಿಣಾ ದಶ ಪ್ರತೀಚೀರ್ದಶೋದೀಚೀರ್ದಶೋರ್ಧ್ವಾಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ ॥ ೨೭ ॥

ತೀರ್ಥಾನಿ ಯಶ್ಚ ಷಟ್ಟ ॥ 11 ॥

ನಮಸ್ತೇ ನಮೋ ಹಿರಣ್ಯಬಾಹವೇ ನಮಸ್ಸಹಮಾನಾಯ ನಮ ಅವ್ಯಾಧಿನೀಭ್ಯೋ ನಮೋ ಭವಾಯ ನಮೋ ಜ್ಯೇಷ್ಠಾಯ ನಮೋ ದುಂದುಭ್ಯಾಯ ನಮಸ್ಸೋಮಾಯ ನಮ ಇರಿಣ್ಯಾಯ ದ್ರಾಪೇ ಸಹಸ್ರಾಣ್ಯೇಕಾದಶ ॥ 11 ॥

ನಮಸ್ತೇ ನಮೋ ಭವಾಯ ದ್ರಾಪೇ ಸಪ್ತವಿಗ್ಂಶತಿಃ ॥ 27 ॥

ನಮಸ್ತೇ ರುದ್ರ ತಂ ವ್ಯೋ ಜಂಭೇ ದಧಾಮಿ ॥

ಹರಿಃ ಓಮ್

ಶ್ರೀ ಕೃಷ್ಣಾರ್ಪಣಮಸ್ತು

ಇತಿ ಚತುರ್ಥಕಾಂಡೇ ಪಂಚಮಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಷಷ್ಠಃ ಪ್ರಶ್ನಃ

ಶ್ರೀ ಗುರುಭ್ಯೋ ನಮಃ ಹರಿಃ ಓಮ್

ಅಶ್ಮನ್ನೂರ್ಜಂ ಪರ್ವತೇ ಶಿಶ್ರಿಯಾಣಾಂ ವಾತೇ ಪರ್ಜನ್ಯೇ ವರುಣಸ್ಯ ಶುಷ್ಮೇ । ಅದ್ಭ್ಯ ಓಷಧೀಭ್ಯೋ ವನಸ್ಪತಿಭ್ಯೋಽಧಿ ಸಂಭೃತಾಂ ತಾಂ ನ ಇಷಮೂರ್ಜಂ ಧತ್ತ ಮರುತಸ್ಸಗ್ಂರರಾಣಾಃ ॥ ಅಶ್ಮಗ್ಗ್‌ಂಸ್ತೇ ಕ್ಷುದಮುಂ ತೇ ಶುಗೃಚ್ಛತು ಯಂ ದ್ವಿಷ್ಮಃ । ಸಮುದ್ರಸ್ಯ ತ್ವಾಽವಾಕಯಾಽಗ್ನೇ ಪರಿವ್ಯಯಾಮಸಿ ॥ ಪಾವಕೋ ಅಸ್ಮಭ್ಯಗ್‌ಂ ಶಿವೋ ಭವ । ಹಿಮಸ್ಯ ತ್ವಾ ಜರಾಯುಣಾಽಗ್ನೇ ಪರಿವ್ಯಯಾಮಸಿ ॥ ಪಾವಕೋ ಅಸ್ಮಭ್ಯಗ್‌ಂ ಶಿವೋ ಭವ । ಉಪ [ಉಪ(೧)]ಜ್ಮನ್ನುಪವೇತಸೇಽವತ್ತರಂ ನದೀಷ್ವಾ ॥ ಅಗ್ನೇ ಪಿತ್ತಮಪಾಮಸಿ । ಮಂಡೂಕಿ ತಾಭಿರಾಗಹಿ ಸೇಮಂ ನೋ ಯಜ್ಞಮ್ ॥ ಪಾವಕವರ್ಣಗ್‌ಂ ಶಿವಂ ಕೃಧಿ । ಪಾವಕ ಆ ಚಿತಯಂತ್ಯಾ ಕೃಪಾ ॥ ಕ್ಷಾಮನ್ರುರುಚ ಉಷಸೋ ನ ಭಾನುನಾ । ತೂರ್ವನ್ನ ಯಾಮನ್ನೇತಶಸ್ಯ ನೂ ರಣ ಆ ಯೋ ಘೃಣೇ ॥ ನ ತತೃಷಾಣೋ ಅಜರಃ । ಅಗ್ನೇ ಪಾವಕ ರೋಚಿಷಾ ಮಂದ್ರಯಾ ದೇವ ಜಿಹ್ವಯಾ ॥ ಆ ದೇವಾನ್[(೨)ವಕ್ಷಿ ಯಕ್ಷಿ]ವಕ್ಷಿ ಯಕ್ಷಿ ಚ । ಸ ನಃ ಪಾವಕ ದೀದಿವೋಽಗ್ನೇ ದೇವಾಗ್‌ಂ ಇಹಾವಹ ॥ ಉಪ ಯಜ್ಞಗ್‌ಂ ಹವಿಶ್ಚ ನಃ । ಅಪಾಮಿದಂ ನ್ಯಯನಗ್‌ಂ ಸಮುದ್ರಸ್ಯ ನಿವೇಶನಮ್ ॥ ಅನ್ಯಂ ತೇ ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್‌ಂ ಶಿವೋ ಭವ । ನಮಸ್ತೇ ಹರಸೇ ಶೋಚಿಷೇ ನಮಸ್ತೇ ಅಸ್ತ್ವರ್ಚಿಷೇ ॥

ಅನ್ಯಂ ತೇ ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್ಂ ಶಿವೋ ಭವ । ನೃಷದೇ ವ[ನೃಷದೇ ವಟ್(ಇ)ಅಪ್ಸುಷದೇ]ಡಪ್ಸುಷದೇ ವಡ್ವನಸದೇ ವಡ್ಬರ್ಹಿಷದೇ ವಟ್ಸುವರ್ವಿದೇ ವಟ್ । ಯೇ ದೇವಾ ದೇವಾನಾಂ ಯಜ್ಞಿಯಾ ಯಜ್ಞಿಯಾನಾಗ್ಂ ಸಂವತ್ಸರೀಣಮುಪ ಭಾಗಮಾಸತೇ । ಅಹುತಾದೋ ಹವಿಷೋ ಯಜ್ಞೇ ಅಸ್ಮಿನ್ತ್ಸ್ವಯಂ ಜುಹುಧ್ವಂ ಮಧುನೋ ಘೃತಸ್ಯ ॥ ಯೇ ದೇವಾ ದೇವೇಷ್ವಧಿ ದೇವತ್ವಮಾಯನ್, ಯೇ ಬ್ರಹ್ಮಣಃ ಪುರಏತಾರೋ ಅಸ್ಯ । ಯೇಭ್ಯೋ ನರ್ತೇ ಪವತೇ ಧಾಮ ಕಿಂ ಚನ ನ ತೇ ದಿವೋ ನ ಪೃಥಿವ್ಯಾ ಅಧಿಸ್ನುಷು । ಪ್ರಾಣದಾ[ಪ್ರಾಣದಾಃ(ಳ)ಅಪಾನದಾ]ಅಪಾನದಾ ವ್ಯಾನದಾ ಶ್ಚಕ್ಷುರ್ದಾ ವರ್ಚೋದಾ ವರಿವೋದಾಃ। ಅನ್ಯಂ ತೇ ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್ಂ ಶಿವೋ ಭವ ॥ ಅಗ್ನಿಸ್ತಿಗ್ಮೇನ ಶೋಚಿಷಾ ಯಗ್ಂಸದ್ವಿಶ್ವಂ ನ್ಯತ್ರಿಣಮ್ । ಅಗ್ನಿರ್ನೋ ವಗ್ಂಸತೇ ರಯಿಮ್ ॥ ಸೈನಾಽನೀಕೇನ ಸುವಿದತ್ರೋ ಅಸ್ಮೇ ಯಷ್ಟಾ ದೇವಾಗ್ಂ ಆಯಜಿಷ್ಠಸ್ಸ್ವಸ್ತಿ । ಅದಬ್ಧೋ ಗೋಪಾ ಉತ ನಃ ಪರಸ್ಪಾ ಅಗ್ನೇ ದ್ಯುಮದುತ ರೇವದ್ದಿದೀಹಿ ॥ ೫ ॥

ಉಪ ದೇವಾನ್, ವಟ್ಪ್ರಾಣದಾಶ್ಚತುಶ್ಚತ್ವಾರಿಗ್ಂಶಚ್ಚ ॥ 1 ॥

ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್, ಹೋತಾ ನಿಷಸಾದಾ ಪಿತಾ ನಃ । ಸ ಆಶಿಷಾ ದ್ರವಿಣಮಿಚ್ಛಮಾನಃ ಪರಮಚ್ಛದೋ ವರ ಆವಿವೇಶ ॥ ವಿಶ್ವಕರ್ಮಾ ಮನಸಾ ಯದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ । ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರ

ಸಪ್ತರ್ಷೀನ್ಪರ ಏಕಮಾಹುಃ ॥ ಯೋ ನಃ ಪಿತಾ ಜನಿತಾ ಯೋ ವಿಧಾತಾ ಯೋನಸ್ಸತೋ ಅಭ್ಯಾಸಜ್ಜಜಾನ ॥ [(೬)] ಯೋ ದೇವಾನಾಂ ನಾಮಧಾ ಏಕ ಏವ ತಗ್ಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥ ತ ಆಯಜಂತ ದ್ರವಿಣಗ್ಂ ಸಮಸ್ಮಾ ಋಷಯಃ ಪೂರ್ವೇ ಜರಿತಾರೋ ನ ಭೂನಾ । ಅಸೂರ್ತಾ ಸೂರ್ತಾ ರಜಸೋ ವಿಮಾನೇ ಯೇ ಭೂತಾನಿ ಸಮಕೃಣ್ವನ್ನಿಮಾನಿ ॥ ನ ತಂ ವಿದಾಥ ಯ ಇದಂ ಜಜಾನಾನ್ಯದ್ಯುಷ್ಮಾಕಮಂತರಂ ಭವಾತಿ । ನೀಹಾರೇಣ ಪ್ರಾವೃತಾ ಜಲ್ಪ್ಯಾಚಾಸುತೃಪ ಉಕ್ಥಶಾಸಶ್ಚರಂತಿ ॥ ಪರೋ ದಿವಾ ಪರ ಏನಾ [(೭)ಪೃಥಿವ್ಯಾ]ಪೃಥಿವ್ಯಾ ಪರೋ ದೇವೇಭಿರಸುರೈರ್ಗುಹಾ ಯತ್ । ಕಗ್ಂಸ್ವಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಸ್ಸಮಗಚ್ಛಂತ ವಿಶ್ವೇ ॥ ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಸ್ಸಮಗಚ್ಛಂತ ವಿಶ್ವೇ । ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ನಿದಂ ವಿಶ್ವಂ ಭುವನಮಧಿಶ್ರಿತಮ್ ॥ ವಿಶ್ವಕರ್ಮಾ ಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ । ತೃತೀಯಃ ಪಿತಾ ಜನಿತೌಷಧೀನಾ[...ಷಧೀನಾಮ್(೮)ಅಪಾಂ] ಮಪಾಂ ಗರ್ಭಂ ವ್ಯದಧಾತ್ಪುರುತ್ರಾ ॥ ಚಕ್ಷುಷಃ ಪಿತಾ ಮನಸಾ ಹಿ ಧೀರೋ ಘೃತಮೇನೇ ಅಜನನ್ನನ್ನಮಾನೇ । ಯದೇದಂತಾ ಅದದೃಗ್ಂಹಂತ ಪೂರ್ವ ಆದಿದ್ದ್ಯಾವಾಪೃಥಿವೀ ಅಪ್ರಥೇತಾಮ್ ॥ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತ ಸ್ಪಾತ್ । ಸಂ ಬಾಹುಭ್ಯಾಂ ನಮತಿ ಸಂ ಪತತ್ರೈರ್ದ್ಯಾವಾಪೃಥಿವೀ ಜನಯನ್ದೇವ ಏಕಃ ॥ ಕಿಗ್ಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಿಮಾಸೀತ್ । ಯದೀ ಭೂಮಿಂ

ಜನಯ[ಜನಯನ್ನ್(೯)ವಿಶ್ವಕರ್ಮಾ]ನ್ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ। ಕಿಗ್ಂಸ್ವಿದ್ವನಂ ಕ ಉ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ। ಮನೀಷಿಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ನ್ ॥ ಯಾ ತೇ ಧಾಮಾನಿ ಪರಮಾಣಿ ಯಾಽವಮಾ ಯಾ ಮಧ್ಯಮಾ ವಿಶ್ವಕರ್ಮನ್ನುತೇಮಾ। ಶಿಕ್ಷಾ ಸಖಿಭ್ಯೋ ಹವಿಷಿ ಸ್ವಧಾವಸ್ಸ್ವಯಂ ಯಜಸ್ವ ತನುವಂ ಜುಷಾಣಃ ॥ ವಾಚಸ್ಪತಿಂ ವಿಶ್ವಕರ್ಮಾಣಮೂತಯೇ [...ಮೂತಯೇ(೧೦)ಮನೋಯುಜಂ..]ಮನೋಯುಜಂ ವಾಜೇ ಅದ್ಯಾ ಹುವೇಮ । ಸ ನೋ ನೇದಿಷ್ಠಾ ಹವನಾನಿ ಜೋಷತೇ ವಿಶ್ವಶಂಭೂರವಸೇ ಸಾಧುಕರ್ಮಾ ॥ ವಿಶ್ವಕರ್ಮನ್, ಹವಿಷಾ ವಾವೃಧಾನಸ್ಸ್ವಯಂ ಯಜಸ್ವ ತನುವಂ ಜುಷಾಣಃ । ಮುಹ್ಯಂತ್ವನ್ಯೇ ಅಭಿತ ಸ್ಸಪತ್ನಾ ಇಹಾಸ್ಮಾಕಂ ಮಘವಾ ಸೂರಿರಸ್ತು ॥ ವಿಶ್ವಕರ್ಮನ್, ಹವಿಷಾ ವರ್ಧನೇನ ತ್ರಾತಾರ ಮಿಂದ್ರಮಕೃಣೋರವಧ್ಯಮ್ । ತಸ್ಮೈ ವಿಶಸ್ಸಮನಮಂತ ಪೂರ್ವೀರಯಮುಗ್ರೋ ವಿಹವ್ಯೋ ಯಥಾಽಸತ್ ॥ ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಽಹಾಮರ್ತ್ಯಗ್ಂ ಹವಿಃ ॥ ೧೧ ॥

ಜಜಾನ್ನೈನೌಷಧೀನಾಂ ಭೂಮಿಂ ಜನಯನ್ನೂತಯೇ ನಮೋ ನವ ಚ ॥ 2 ॥

ಉದೇನಮುತ್ತರಾಂ ನಯಾಽಗ್ನೇ ಘೃತೇನಾಹುತ । ರಾಯಸ್ಪೋಷೇಣ ಸಗ್ಂಸೃಜ ಪ್ರಜಯಾ ಚ ಧನೇನ ಚ ॥ ಇಂದ್ರೇಮಂ ಪ್ರತರಾಂ ಕೃಧಿ ಸಜಾತಾನಾಮಸದ್ವಶೀ । ಸಮೇನಂ ವರ್ಚಸಾ ಸೃಜ ದೇವೇಭ್ಯೋ ಭಾಗಧಾ ಅಸತ್ ॥ ಯಸ್ಯ ಕುರ್ಮೋ ಹವಿರ್ಗೃಹೇ ತಮಗ್ನೇ

ವರ್ಧಯಾ ತ್ವಮ್ । ತಸ್ಮೈ ದೇವಾ ಅಧಿಬ್ರವನ್ನಯಂ ಚ ಬ್ರಹ್ಮಣಸ್ಪತಿಃ ॥ ಉದು ತ್ವಾ ವಿಶ್ವೇ ದೇವಾ [ದೇವಾಃ(೧೨)] ಅಗ್ನೇ ಭರಂತು ಚಿತ್ತಿಭಿಃ । ಸ ನೋ ಭವ ಶಿವತಮಃ ಸುಪ್ರತೀಕೋ ವಿಭಾವಸುಃ ॥ ಪಂಚ ದಿಶೋ ದೈವೀರ್ಯಜ್ಞಮವಂತು ದೇವೀರಪಾಮತಿಂ ದುರ್ಮತಿಂ ಬಾಧಮಾನಾಃ । ರಾಯಸ್ಪೋಷೇ ಯಜ್ಞಪತಿಮಾಭಜಂತೀಃ ॥ ರಾಯಸ್ಪೋಷೇ ಅಧಿ ಯಜ್ಞೋ ಅಸ್ಥಾತ್ಸಮಿದ್ಧೇ ಅಗ್ನಾವಧಿ ಮಾಮಹಾನಃ । ಉಕ್ಥಪತ್ರ ಈಡ್ಯೋ ಗೃಭೀತಸ್ತಪ್ತಂ ಘರ್ಮಂ ಪರಿಗೃಹ್ಯಾಯಜಂತ ॥ ಊರ್ಜಾ ಯದ್ಯಜ್ಞಮಶಮಂತ ದೇವಾ ದೈವ್ಯಾಯ ಧರ್ತ್ರೇ ಜೋಷ್ಟ್ರೇ । ದೇವಶ್ರೀಶ್ಶ್ರೀಮಣಾಃ ಶತಪಯಾಃ[(೧೩)ಪರಿಗೃಹ್ಯ]ಪರಿಗೃಹ್ಯ ದೇವಾ ಯಜ್ಞಮಾಯನ್ನ್ ॥ ಸೂರ್ಯರಶ್ಮಿರ್ ಹರಿಕೇಶಃ ಪುರಸ್ತಾತ್ಸವಿತಾ ಜ್ಯೋತಿರುದಯಾಗ್ಂ ಅಜಸ್ರಮ್ । ತಸ್ಯ ಪೂಷಾ ಪ್ರಸವಂ ಯಾತಿ ದೇವಃ ಸಂಪಶ್ಯನ್ವಿಶ್ವಾ ಭುವನಾನಿ ಗೋಪಾಃ ॥ ದೇವಾ ದೇವೇಭ್ಯೋ ಅಧ್ವರ್ಯಂತೋ ಅಸ್ಥುರ್ವೀತಗ್ಂ ಶಮಿತ್ರೇ ಶಮಿತಾ ಯಜಧ್ಯೈ । ತುರೀಯೋ ಯಜ್ಞೋ ಯತ್ರ ಹವ್ಯಮೇತಿ ತತಃ ಪಾವಕಾ ಆಶಿಷೋ ನೋ ಜುಷಂತಾಮ್ ॥ ವಿಮಾನ ಏಷ ದಿವೋ ಮಧ್ಯ ಆಸ್ತ ಆಪಪ್ರಿವಾನ್ರೋದಸೀ ಅಂತರಿಕ್ಷಮ್ । ಸ ವಿಶ್ವಾಚೀರಭಿ [(೧೪) ಚಷ್ಟೇ] ಚಷ್ಟೇ ಘೃತಾಚೀರಂತರಾ ಪೂರ್ವಮಪರಂ ಚ ಕೇತುಮ್ ॥ ಉಕ್ಷಾ ಸಮುದ್ರೋ ಅರುಣಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾವಿವೇಶ । ಮಧ್ಯೇ ದಿವೋ ನಿಹಿತಃ ಪೃಶ್ನಿರಶ್ಮಾ ವಿಚಕ್ರಮೇ ರಜಸಃ ಪಾತ್ಯಂತೌ ॥ ಇಂದ್ರಂ ವಿಶ್ವಾ ಅವೀವೃಧನ್ಸಮುದ್ರವ್ಯಚಸಂ ಗಿರಃ । ರಥೀತಮಗ್ಂ ರಥೀನಾಂ ವಾಜಾನಾಗ್ಂ ಸತ್ಪತಿಂ ಪತಿಮ್ ॥ ಸುಮ್ನಹೂರ್ಯಜ್ಞೋ ದೇವಾಗ್ಂ

ಆ ಚ ವಕ್ಷದ್ಯಕ್ಷದಗ್ನಿರ್ದೇವೋ ದೇವಾಗ್ಂ ಆ ಚ ವಕ್ಷತ್ ॥ ವಾಜಸ್ಯ ಮಾ ಪ್ರಸವೇನೋದ್ಗ್ರಾಭೇಣೋದಗ್ರಭೀತ್ । ಅಥಾ ಸಪತ್ನಾಗ್ಂ ಇಂದ್ರೋ ಮೇ ನಿಗ್ರಾಭೇಣಾಧರಾಗ್ಂ ಅಕಃ ॥ ಉದ್ಗ್ರಾಭಂ ಚ ನಿಗ್ರಾಭಂ ಚ ಬ್ರಹ್ಮ ದೇವಾ ಅವೀವೃಧನ್ನ್ । ಅಥಾ ಸಪತ್ನಾನಿಂದ್ರಾಗ್ನೀ ಮೇ ವಿಷೂಚೀನಾನ್ವ್ಯಸ್ಯತಾಮ್ ॥ ೧೫ ॥

ವಿಶ್ವೇ ದೇವಾಶ್ಶತಪಯಾ ಅಭಿ ವಾಜಸ್ಯ ಷಡ್ವಿಗ್ಂಶತಿಶ್ಚ ॥ 3 ॥

ಆಶುಶ್ಶಿಶಾನೋ ವೃಷಭೋ ನ ಯುಧ್ಮೋ ಘನಾಘನಃ ಕ್ಷೋಭಣಶ್ಚರ್ಷಣೀನಾಮ್ । ಸಂಕ್ರಂದನೋಽನಿಮಿಷ ಏಕವೀರಶ್ಶತಗ್ಂ ಸೇನಾ ಅಜಯತ್ಸಾಕಮಿಂದ್ರಃ ॥ ಸಂಕ್ರಂದನೇನಾನಿಮಿಷೇಣ ಜಿಷ್ಣುನಾ ಯುತ್ಕಾರೇಣ ದುಶ್ಚ್ಯವನೇನ ಧೃಷ್ಣುನಾ । ತದಿಂದ್ರೇಣ ಜಯತ ತತ್ಸಹಧ್ವಂ ಯುಧೋ ನರ ಇಷುಹಸ್ತೇನ ವೃಷ್ಣಾ ॥ ಸ ಇಷುಹಸ್ತೈಸ್ಸನಿಷಂಗಿಭಿರ್ವಶೀ ಸಗ್ಗ್ಂಸ್ರಷ್ಟಾ ಸಯುಧ ಇಂದ್ರೋ ಗಣೇನ । ಸಗ್ಂಸೃಷ್ಟಜಿತ್ಸೋಮಪಾ ಬಾಹುಶರ್ಧ್ಯೂರ್ಧ್ವಧನ್ವಾ ಪ್ರತಿಹಿತಾಭಿರಸ್ತಾ ॥ ಬೃಹಸ್ಪತೇ ಪರಿದೀಯಾ [ಪರಿದೀಯ (೧೬)] ರಥೇನ ರಕ್ಷೋಹಾಽಮಿತ್ರಾಗ್ಂ ಅಪಬಾಧಮಾನಃ । ಪ್ರಭಂಜನ್ಥ್ಸೇನಾಃ ಪ್ರಮೃಣೋ ಯುಧಾ ಜಯನ್ನಸ್ಮಾಕಮೇಧ್ಯವಿತಾ ರಥಾನಾಮ್ ॥ ಗೋತ್ರಭಿದಂ ಗೋವಿದಂ ವಜ್ರಬಾಹುಂ ಜಯಂತಮಜ್ಮಪ್ರಮೃಣನ್ತಮೋಜಸಾ । ಇಮಗ್ಂ ಸಜಾತಾ ಅನುವೀರಯಧ್ವಮಿಂದ್ರಗ್ಂ ಸಖಾಯೋಽನು ಸಗ್ಂರಭಧ್ವಮ್ ॥ ಬಲವಿಜ್ಞಾಯಃ ಸ್ಥವಿರಃ ಪ್ರವೀರಸ್ಸಹಸ್ವಾನ್, ವಾಜೀ ಸಹಮಾನ ಉಗ್ರಃ । ಅಭಿವೀರೋ ಅಭಿಸತ್ವಾ ಸಹೋಜಾ ಜೈತ್ರಮಿಂದ್ರ ರಥಮಾತಿಷ್ಠ

ಗೋವಿತ್ ॥ ಅಭಿಗೋತ್ರಾಣಿ ಸಹಸಾ ಗಾಹಮಾನೋಽದಾಯೋ[ಅದಾಯಃ(೧೭)] ವೀರಶ್ಶತಮನ್ಯುರಿಂದ್ರಃ । ದುಶ್ಚ್ಯವನಃ ಪೃತನಾಷಡಯುಧ್ಯೋಽಸ್ಮಾಕಗ್ಂ ಸೇನಾ ಅವತು ಪ್ರಯುಥ್ಸು ॥ ಇಂದ್ರ ಆಸಾಂ ನೇತಾ ಬೃಹಸ್ಪತಿರ್ದಕ್ಷಿಣಾ ಯಜ್ಞಃ ಪುರ ಏತು ಸೋಮಃ । ದೇವಸೇನಾನಾಮಭಿಭಂಜತೀನಾಂ ಜಯಂತೀನಾಂ ಮರುತೋ ಯನ್ತ್ವಗ್ರೇ ॥ ಇಂದ್ರಸ್ಯ ವೃಷ್ಣೋ ವರುಣಸ್ಯ ರಾಜ್ಞ ಆದಿತ್ಯಾನಾಂ ಮರುತಾಗ್ಂ ಶರ್ಧ ಉಗ್ರಮ್ । ಮಹಾಮನಸಾಂ ಭುವನಚ್ಯವಾನಾಂ ಘೋಷೋ ದೇವಾನಾಂ ಜಯತಾಮುದಸ್ಥಾತ್ ॥ ಅಸ್ಮಾಕಮಿಂದ್ರ ಸ್ಸಮೃತೇಷು ಧ್ವಜೇಷ್ವಸ್ಮಾಕಂ ಯಾ ಇಷವಸ್ತಾ ಜಯಂತು । [(೧೮)] ಅಸ್ಮಾಕಂ ವೀರಾ ಉತ್ತರೇ ಭವಂತ್ವಸ್ಮಾನು ದೇವಾ ಅವತಾ ಹವೇಷು ॥ ಉದ್ಧರ್ಷಯ ಮಘವನ್ನಾಯುಧಾನ್ಯುತ್ಸತ್ವನಾಂ ಮಾಮಕಾನಾಂ ಮಹಾಗ್ಂಸಿ । ಉದ್ವೃತ್ರಹನ್ವಾಜಿನಾಂ ವಾಜಿನಾನ್ಯುದ್ರಥಾನಾಂ ಜಯತಾಮೇತು ಘೋಷಃ ॥ ಉಪಪ್ರೇತ ಜಯತಾನರಸ್ಸ್ಥಿರಾವಸ್ಸಂತು ಬಾಹವಃ । ಇಂದ್ರೋ ವಶ್ಶರ್ಮ ಯಚ್ಛತ್ವನಾಧೃಷ್ಯಾ ಯಥಾಽಸಥ ॥ ಅವಸೃಷ್ಟಾ ಪರಾಪತ ಶರವ್ಯೇ ಬ್ರಹ್ಮ ಸಗ್ಂಶಿತಾ । ಗಚ್ಛಾಮಿತ್ರಾನ್ಪ್ರ [(೧೯)ವಿಶ ಮೈಷಾಂ] ವಿಶ ಮೈಷಾಂ ಕಂ ಚ ನೋಚ್ಛಿಷಃ ॥ ಮರ್ಮಾಣಿ ತೇ ವರ್ಮಭಿಶ್ಛಾದಯಾಮಿ ಸೋಮಸ್ತ್ವಾ ರಾಜಾಽಮೃತೇನಾಭಿವಸ್ತಾಮ್ । ಉರೋರ್ವರೀಯೋ ವರಿವಸ್ತೇ ಅಸ್ತು ಜಯಂತಂ ತ್ವಾಮನುಮದಂತು ದೇವಾಃ ॥ ಯತ್ರ ಬಾಣಾಸ್ಸಪತಂತಿ ಕುಮಾರಾ ವಿಶಿಖಾ ಇವ । ಇಂದ್ರೋನಸ್ತತ್ರ ವೃತ್ರಹಾ ವಿಶ್ವಾಹಾ ಶರ್ಮ ಯಚ್ಛತು ॥ ೨೦ ॥

ದೀಯಾದಾಯೋ ಜಯಂತ್ವಮಿತ್ರಾನ್ಪ್ರಚತ್ವಾರಿಗ್ಂಶಚ್ಚ ॥ 4 ॥

ಪ್ರಾಚೀಮನು ಪ್ರದಿಶಂ ಪ್ರೇಹಿ ವಿದ್ವಾನಗ್ನೇರಗ್ನೇ ಪುರೋ ಅಗ್ನಿರ್ಭವೇಹ । ವಿಶ್ವಾ ಆಶಾ ದೀದ್ಯಾನೋ ವಿ ಭಾಹ್ಯೂರ್ಜಂ ನೋ ಧೇಹಿ ದ್ವಿಪದೇ ಚತುಷ್ಪದೇ ॥ ಕ್ರಮಧ್ವಮಗ್ನಿನಾ ನಾಕಮುಖ್ಯಗ್ಂ ಹಸ್ತೇಷು ಬಿಭ್ರತಃ । ದಿವಃ ಪೃಷ್ಠಗ್ಂ ಸುವರ್ಗತ್ವಾ ಮಿಶ್ರಾ ದೇವೇಭಿ ರಾಧ್ವಮ್ ॥ ಪೃಥಿವ್ಯಾ ಅಹಮುದಂತರಿಕ್ಷಮಾಽರುಹಮಂತರಿಕ್ಷಾದ್ದಿವಮಾಽರುಹಮ್ । ದಿವೋ ನಾಕಸ್ಯ ಪೃಷ್ಠಾತ್ಸುವರ್ಜ್ಯೋತಿರಗಾ[ರಗಾಮ್(೨೧)ಅಹಮ್।]ಮಹಮ್॥ ಸುವರ್ಯಂತೋ ನಾಪೇಕ್ಷಂತ ಆ ದ್ಯಾಗ್ಂ ರೋಹಂತಿ ರೋದಸೀ । ಯಜ್ಞಂ ಯೇ ವಿಶ್ವತೋ ಧಾರಗ್ಂ ಸುವಿದ್ವಾಗ್ಂಸೋ ವಿತೇನಿರೇ ॥ ಅಗ್ನೇ ಪ್ರೇಹಿ ಪ್ರಥಮೋ ದೇವಯತಾಂ ಚಕ್ಷುರ್ದೇವಾನಾಮುತ ಮರ್ತ್ಯಾನಾಮ್ । ಇಯಕ್ಷಮಾಣಾ ಭೃಗುಭಿಃ ಸಜೋಷಾಃ ಸುವರ್ಯಂತು ಯಜಮಾನಾಃ ಸ್ವಸ್ತಿ ॥ ನಕ್ತೋಷಾಸಾ ಸಮನಸಾ ವಿರೂಪೇ ಧಾಪಯೇತೇ ಶಿಶುಮೇಕಗ್ಂ ಸಮೀಚೀ । ದ್ಯಾವಾ ಕ್ಷಾಮಾ ರುಕ್ಮೋ ಅಂತರ್ವಿಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಃ ॥ ಅಗ್ನೇ ಸಹಸ್ರಾಕ್ಷ [(೨೨)ಶತಮೂರ್ಧಞ್ಛತಂ] ಶತಮೂರ್ಧಞ್ಛತಂ ತೇ ಪ್ರಾಣಾಃ ಸಹಸ್ರಮಪಾನಾಃ । ತ್ವಗ್ಂ ಸಾಹಸ್ರಸ್ಯ ರಾಯ ಈಶಿಷೇ ತಸ್ಮೈ ತೇ ವಿಧೇಮ ವಾಜಾಯ ಸ್ವಾಹಾ ॥ ಸುಪರ್ಣೋಽಸಿ ಗರುತ್ಮಾನ್ಪೃಥಿವ್ಯಾಗ್ಂ ಸೀದ ಪೃಷ್ಠೇ ಪೃಥಿವ್ಯಾಃ ಸೀದ ಭಾಸಾಽಂತರಿಕ್ಷಮಾ ಪೃಣ ಜ್ಯೋತಿಷಾ ದಿವಮುತ್ತಭಾನ ತೇಜಸಾ ದಿಶ ಉದ್ದೃಗ್ಂಹ ॥ ಆ ಜುಹ್ವಾನಃ ಸುಪ್ರತೀಕಃ ಪುರಸ್ತಾದಗ್ನೇ ಸ್ವಾಂ ಯೋನಿಮಾ ಸೀದ ಸಾಧ್ಯಾ । ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ವಿಶ್ವೇ ದೇವಾ [ದೇವಾಃ(೨೩)] ಯಜಮಾನಶ್ಚ ಸೀದತ ॥

ಪ್ರೇದ್ಧೋ ಅಗ್ನೇ ದೀದಿಹಿ ಪುರೋ ನೋಽಜಸ್ರಯಾ ಸೂರ್ಮ್ಯಾ ಯವಿಷ್ಠ । ತ್ವಾಗ್ಂ ಶಶ್ವಂತ ಉಪಯಂತಿ ವಾಜಾಃ ॥ ವಿಧೇಮ ತೇ ಪರಮೇ ಜನ್ಮನ್ನಗ್ನೇ ವಿಧೇಮ ಸ್ತೋಮೈರವರೇ ಸಧಸ್ಥೇ । ಯಸ್ಮಾದ್ಯೋನೇರುದಾರಿಥಾ ಯಜೇ ತಂ ಪ್ರ ತ್ವೇ ಹವೀಗ್ಂಷಿ ಜುಹುರೇ ಸಮಿದ್ಧೇ ॥ ತಾಗ್ಂ ಸವಿತುರ್ವರೇಣ್ಯಸ್ಯ ಚಿತ್ರಾಮಾಽಹಂ ವೃಣೇ ಸುಮತಿಂ ವಿಶ್ವಜನ್ಯಾಮ್ । ಯಾಮಸ್ಯ ಕಣ್ವೋ ಅದುಹತ್ಪ್ರಪೀನಾಗ್ಂ ಸಹಸ್ರಧಾರಾಂ [ಸಹಸ್ರಧಾರಾಮ್(೨೪)] ಪಯಸಾ ಮಹೀಂ ಗಾಮ್ ॥ ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಸಪ್ತರ್ಷಯಃ ಸಪ್ತ ಧಾಮ ಪ್ರಿಯಾಣಿ । ಸಪ್ತ ಹೋತ್ರಾಃ ಸಪ್ತಧಾ ತ್ವಾ ಯಜಂತಿ ಸಪ್ತ ಯೋನೀರಾ ಪೃಣಸ್ವಾ ಘೃತೇನ ॥ ಈದೃಙ್ಚಾನ್ಯಾದೃಙ್ಚೈತಾದೃಙ್ಚ ಪ್ರತಿದೃಙ್ಚ ಮಿತಶ್ಚ ಸಂಮಿತಶ್ಚ ಸಭರಾಃ । ಶುಕ್ರಜ್ಯೋತಿಶ್ಚ ಚಿತ್ರಜ್ಯೋತಿಶ್ಚ ಸತ್ಯಜ್ಯೋತಿಶ್ಚ ಜ್ಯೋತಿಷ್ಮಾಗ್ಂಶ್ಚ ಸತ್ಯಶ್ಚರ್ತಪಾಶ್ಚಾತ್ಯಗ್ಂಹಾಃ ॥ [(೨೫)]ಋತಜಿಚ್ಚ ಸತ್ಯಜಿಚ್ಚ ಸೇನಜಿಚ್ಚ ಸುಷೇಣಶ್ಚಾಂತ್ಯ ಮಿತ್ರಶ್ಚ ದೂರೇ ಅಮಿತ್ರಶ್ಚ ಗಣಃ । ಋತಶ್ಚ ಸತ್ಯಶ್ಚ ಧ್ರುವಶ್ಚ ಧರುಣಶ್ಚ ಧರ್ತಾ ಚ ವಿಧರ್ತಾ ಚ ವಿಧಾರಯಃ । ಈದೃಕ್ಷಾಸ ಏತಾದೃಕ್ಷಾಸ ಊ ಷು ಣಃ ಸದೃಕ್ಷಾಸಃ ಪ್ರತಿಸದೃಕ್ಷಾಸ ಏತನ । ಮಿತಾಸಶ್ಚ ಸಂಮಿತಾಸಶ್ಚ ನ ಊತಯೇ ಸಭರಸೋ ಮರುತೋ ಯಜ್ಞೇ ಅಸ್ಮಿನ್ನಿಂದ್ರಂ ದೈವೀರ್ವಿಶೋ ಮರುತೋಽನುವರ್ತ್ಮಾನೋ ಯಥೇಂದ್ರಂ ದೈವೀರ್ವಿಶೋ ಮರುತೋಽನುವರ್ತ್ಮಾನ ಏವ ಮಿಮಂ ಯಜಮಾನಂ ದೈವೀಶ್ಚ ವಿಶೋ ಮಾನುಷೀಶ್ಚಾನುವರ್ತ್ಮಾನೋ ಭವಂತು ॥ ೨೬ ॥

ಅಗಾಗ್ಂ ಸಹಸ್ರಾಕ್ಷ ದೇವಾಃ ಸಹಸ್ರಧಾರಾಮತ್ಯಗ್ಂಹಾ ಅನುವರ್ತ್ಮಾನಃ ಷೋಡಶ ಚ ॥ 5 ॥

ಜೀಮೂತಸ್ಯೇವ ಭವತಿ ಪ್ರತೀಕಂ ಯದ್ವರ್ಮೀ ಯಾತಿ ಸಮದಾಮುಪಸ್ಥೇ । ಅನಾವಿದ್ಧಯಾ ತನುವಾ ಜಯ ತ್ವಗ್ಂ ಸ ತ್ವಾ ವರ್ಮಣೋ ಮಹಿಮಾ ಪಿಪರ್ತು ॥ ಧನ್ವನಾ ಗಾ ಧನ್ವನಾಽಽಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ । ಧನುಃ ಶತ್ರೋರಪ ಕಾಮಂ ಕೃಣೋತಿ ಧನ್ವನಾ ಸರ್ವಾಃ ಪ್ರದಿಶೋ ಜಯೇಮ ॥ ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಗ್ಂ ಸಖಾಯಂ ಪರಿಷಸ್ವಜಾನಾ । ಯೋಷೇವ ಶಿಙ್ಕ್ತೇ ವಿತತಾಽಧಿ ಧನ್ವ [ಧನ್ವನ್ನ್(೨೭)ಜ್ಯಾ]ಞ್ಜ್ಯಾ ಇಯಗ್ಂ ಸಮನೇ ಪಾರಯಂತೀ ॥ ತೇ ಆಚರಂತೀ ಸಮನೇವ ಯೋಷಾ ಮಾತೇವ ಪುತ್ರಂ ಬಿಭೃತಾಮುಪಸ್ಥೇ । ಅಪ ಶತ್ರೂನ್, ವಿಧ್ಯತಾಗ್ಂ ಸಂವಿದಾನೇ ಆರ್ತ್ನೀ ಇಮೇ ವಿಷ್ಫುರಂತೀ ಅಮಿತ್ರಾನ್ ॥ ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾಽವಗತ್ಯ । ಇಷುಧಿಃ ಸಙ್ಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥ ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರಯತ್ರ ಕಾಮಯತೇ ಸುಷಾರಥಿಃ । ಅಭೀಶೂನಾಂ ಮಹಿಮಾನಂ[..ಮಾನಮ್(೨೮)ಪನಾಯತ]ಪನಾಯತ ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥ ತೀವ್ರಾನ್ಘೋಷಾನ್ಕೃಣ್ವತೇ ವೃಷಪಾಣಯೋಽಶ್ವಾ ರಥೇಭಿಃ ಸಹ ವಾಜಯಂತಃ । ಅವಕ್ರಾಮಂತಃ ಪ್ರಪದೈರಮಿತ್ರಾನ್ಕ್ಷಿಣಂತಿ ಶತ್ರೂಗ್ಂ ರನಪವ್ಯಯಂತಃ ॥ ರಥವಾಹನಗ್ಂ ಹವಿರಸ್ಯ ನಾಮ ಯತ್ರಾಽಽಯುಧಂ ನಿಹಿತಮಸ್ಯ ವರ್ಮ । ತತ್ರಾ ರಥಮುಪ ಶಗ್ಮಗ್ಂ ಸದೇಮ ವಿಶ್ವಾಹಾ ವಯಗ್ಂ ಸುಮನಸ್ಯಮಾನಾಃ ॥ ಸ್ವಾದುಷಗ್ಂಸದಃ ಪಿತರೋ ವಯೋಧಾಃ ಕೃಚ್ಛ್ರೇಶ್ರಿತಃ ಶಕ್ತೀವಂತೋ ಗಭೀರಾಃ । ಚಿತ್ರಸೇನಾ ಇಷುಬಲಾ ಅಮೃಧ್ರಾಃ

ಸತೋವೀರಾ ಉರವ್ರೋ ವ್ರಾತಸಾಹಾಃ ॥ ಬ್ರಾಹ್ಮಣಾಸಃ [ಬ್ರಾಹ್ಮಣಾಸಃ(೨೯)] ಪಿತರಃ ಸೋಮ್ಯಾಸಃ ಶಿವೇ ನೋ ದ್ಯಾವಾಪೃಥಿವೀ ಅನೇಹಸಾ । ಪೂಷಾ ನಃ ಪಾತು ದುರಿತಾದೃತಾವೃಧೋ ರಕ್ಷಾ ಮಾಕಿರ್ನೋ ಅಘಶಗ್ಂಸ ಈಶತ ॥ ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸನ್ನದ್ಧಾ ಪತತಿ ಪ್ರಸೂತಾ । ಯತ್ರಾ ನರಃ ಸಂ ಚ ವಿ ಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಗ್ಂಸನ್ನ್ ॥ ಋಜೀತೇ ಪರಿ ವೃಙ್ಗ್ಧಿ ನೋಽಶ್ಮಾ ಭವತು ನಸ್ತನೂಃ । ಸೋಮೋ ಅಧಿ ಬ್ರವೀತು ನೋಽದಿತಿಃ [ನೋಽದಿತಿಃ(೩೦)]ಶರ್ಮ ಯಚ್ಛತು ॥ ಆ ಜಙ್ಘಂತಿ ಸಾನ್ವೇಷಾಂ ಜಘನಾಗ್ಂ ಉಪ ಜಿಘ್ನತೇ । ಅಶ್ವಾಜನಿ ಪ್ರಚೇತಸೋಽಶ್ವಾನ್ಸ್ಸಮತ್ಸು ಚೋದಯ ॥ ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ ಪರಿಬಾಧಮಾನಃ । ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಗ್ಂಸಂ ಪರಿ ಪಾತು ವಿಶ್ವತಃ ॥ ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ । ಗೋಭಿಃ ಸನ್ನದ್ಧೋ ಅಸಿ ವೀಡಯಸ್ವಾಽಽಸ್ಥಾತಾ ತೇ ಜಯತು ಜೇತ್ವಾನಿ ॥ ದಿವಃ ಪೃಥಿವ್ಯಾಃ ಪರ್ಯೋ[ಪರಿ(೩೧)ಓಜ]ಜ ಉದ್ಭೃತಂ ವನಸ್ಪತಿಭ್ಯಃ ಪರ್ಯಾಭೃತಗ್ಂ ಸಹಃ । ಅಪಾಮೋಜ್ಮಾನಂ ಪರಿ ಗೋಭಿರಾವೃತಮಿಂದ್ರಸ್ಯ ವಜ್ರಗ್ಂ ಹವಿಷಾ ರಥಂ ಯಜ ॥ ಇಂದ್ರಸ್ಯ ವಜ್ರೋ ಮರುತಾಮನೀಕಂ ಮಿತ್ರಸ್ಯ ಗರ್ಭೋ ವರುಣಸ್ಯ ನಾಭಿಃ । ಸೇಮಾಂ ನೋ ಹವ್ಯದಾತಿಂ ಜುಷಾಣೋ ದೇವ ರಥ ಪ್ರತಿ ಹವ್ಯಾ ಗೃಭಾಯ ॥ ಉಪ ಶ್ವಾಸಯ ಪೃಥಿವೀ ಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ ಜಗತ್ । ಸ ದುಂದುಭೇ ಸಜೂರಿಂದ್ರೇಣ

ದೇವ್ಯೈದೂರ್ರಾ[ದೂರ್ರಾತ್(೩೨)ದವೀಯೋ]ದ್ದವೀಯೋ ಅಪ ಸೇಧ ಶತ್ರೂನ್ ॥ ಆ ಕ್ರಂದಯ ಬಲಮೋಜೋ ನ ಆ ಧಾ ನಿಷ್ಟನಿಹಿ ದುರಿತಾ ಬಾಧಮಾನಃ । ಅಪ ಪ್ರೋಥ ದುಂದುಭೇ ದುಚ್ಛುನಾಗ್ಂ ಇತ ಇಂದ್ರಸ್ಯ ಮುಷ್ಟಿರಸಿ ವೀಡಯಸ್ವ ॥ ಆಽಮೂರಜ ಪ್ರತ್ಯಾವರ್ತಯೇಮಾಃ ಕೇತುಮದ್ದುಂದುಭಿರ್ವಾವದೀತಿ । ಸಮಶ್ವಪರ್ಣಾಶ್ಚರಂತಿ ನೋ ನರೋಽಸ್ಮಾಕಮಿಂದ್ರ ರಥಿನೋ ಜಯಂತು ॥ ೩೩ ॥

ಧನ್ವನ್ಮಹಿಮಾನಂ ಬ್ರಾಹ್ಮಣಾಸೋಽದಿತಿಃ ಪೃಥಿವ್ಯಾಃ ಪರಿ ದೂರಾದೇಕಚತ್ವಾರಿಗ್ಂಶಚ್ಚ ॥ 6 ॥

ಯದಕ್ರಂದಃ ಪ್ರಥಮಂ ಜಾಯಮಾನ ಉದ್ಯನ್ಥ್ಸಮುದ್ರಾದುತ ವಾ ಪುರೀಷಾತ್ । ಶ್ಯೇನಸ್ಯ ಪಕ್ಷಾ ಹರಿಣಸ್ಯ ಬಾಹೂ ಉಪಸ್ತುತ್ಯಂ ಮಹಿ ಜಾತಂ ತೇ ಅರ್ವನ್ ॥ ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯತಿಷ್ಠತ್ । ಗಂಧರ್ವೋ ಅಸ್ಯ ರಶನಾಮಗೃಭ್ಣಾ ತ್ಸೂರಾದಶ್ವಂ ವಸವೋ ನಿರತಷ್ಟ ॥ ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ । ಅಸಿ ಸೋಮೇನ ಸಮಯಾ ವಿಪೃಕ್ತ [ವಿಪೃಕ್ತಃ(೩೪)] ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥ ತ್ರೀಣಿ ತ ಆಹುರ್ದಿವಿ ಬಂಧನಾನಿ ತ್ರೀಣ್ಯಪ್ಸು ತ್ರೀಣ್ಯಂತಃ ಸಮುದ್ರೇ । ಉತೇವ ಮೇ ವರುಣಶ್ಛಂತ್ಸ್ಯರ್ವನ್, ಯತ್ರಾ ತ ಆಹುಃ ಪರಮಂ ಜನಿತ್ರಮ್ ॥ ಇಮಾ ತೇ ವಾಜಿನ್ನವಮಾರ್ಜನಾನೀಮಾ ಶಫಾನಾಗ್ಂ ಸನಿತುರ್ನಿಧಾನಾ । ಅತ್ರಾ ತೇ ಭದ್ರಾ ರಶನಾ ಅಪಶ್ಯಮೃತಸ್ಯ ಯಾ ಅಭಿರಕ್ಷಂತಿ ಗೋಪಾಃ ॥ ಆತ್ಮಾನಂ ತೇ ಮನಸಾಽಽರಾದಜಾನಾಮವೋ ದಿವಾ [(೩೫)] ಪತಯಂತಂ ಪತಂಗಮ್ । ಶಿರೋ ಅಪಶ್ಯಂ ಪಥಿಭಿಃ ಸುಗೇಭಿರರೇಣುಭಿ

ಜೇಹಮಾನಂ ಪತತ್ರಿ ॥ ಅತ್ರಾ ತೇ ರೂಪಮುತ್ತಮಮಪಶ್ಯಂ ಜಿಗೀಷಮಾಣಮಿಷ ಆ ಪದೇ ಗೋಃ । ಯದಾ ತೇ ಮರ್ತೋ ಅನು ಭೋಗಮಾನಡಾದಿದ್ಗ್ರಸಿಷ್ಠ ಓಷಧೀರಜೀಗಃ ॥ ಅನು ತ್ವಾ ರಥೋ ಅನು ಮರ್ಯೋ ಅರ್ವನ್ನನು ಗಾವೋಽನು ಭಗಃ ಕನೀನಾಮ್ । ಅನು ವ್ರಾತಾಸಸ್ತವ ಸಖ್ಯಮೀಯುರನು ದೇವಾ ಮಮಿರೇ ವೀರ್ಯಂ [ವೀರ್ಯಮ್(೩೬) ತೇ ।] ತೇ ॥ ಹಿರಣ್ಯಶೃಂಗೋಽಯೋ ಅಸ್ಯ ಪಾದಾ ಮನೋಜವಾ ಅವರ ಇಂದ್ರ ಆಸೀತ್ । ದೇವಾ ಇದಸ್ಯ ಹವಿರದ್ಯಮಾಯನ್, ಯೋ ಅರ್ವಂತಂ ಪ್ರಥಮೋ ಅಧ್ಯತಿಷ್ಠತ್ ॥ ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಗ್ಂ ಶೂರಣಾಸೋ ದಿವ್ಯಾಸೋ ಅತ್ಯಾಃ । ಹಗ್ಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ ॥ ತವ ಶರೀರಂ ಪತಯಿಷ್ಣ್ವರ್ವ ನ್ತವ ಚಿತ್ತಂ ವಾತ ಇವ ಧ್ರಜೀಮಾನ್ । ತವ ಶೃಂಗಾಣಿ ವಿಷ್ಠಿತಾ ಪುರುತ್ರಾಽರಣ್ಯೇಷು ಜರ್ಭುರಾಣಾ ಚರಂತಿ ॥ ಉಪ [ಉಪ (೩೭)] ಪ್ರಾಗಾಚ್ಛಸನಂ ವಾಜ್ಯರ್ವಾ ದೇವದ್ರೀಚಾ ಮನಸಾ ದೀಧ್ಯಾನಃ । ಅಜಃ ಪುರೋ ನೀಯತೇ ನಾಭಿರಸ್ಯಾನು ಪಶ್ಚಾತ್ಕವಯೋ ಯಂತಿ ರೇಭಾಃ ॥ ಉಪ ಪ್ರಾಗಾತ್ಪರಮಂ ಯತ್ಸಧಸ್ಥಮರ್ವಾಗ್ಂ ಅಚ್ಛಾ ಪಿತರಂ ಮಾತರಂ ಚ । ಅದ್ಯಾ ದೇವಾಂಜುಷ್ಟತಮೋ ಹಿ ಗಮ್ಯಾ ಅಥಾಽಽಶಾಸ್ತೇ ದಾಶುಷೇ ವಾರ್ಯಾಣಿ ॥ ೩೮ ॥

ವಿಷ್ಪಕ್ತೋ ದಿವಾ ವೀರ್ಯಮುಪ್ಯೈಕಾನ್ನಚತ್ವಾರಿಗ್ಂಶಚ್ಚ ॥ 7 ॥

ಮಾ ನೋ ಮಿತ್ರೋ ವರುಣೋ ಅರ್ಯಮಾಽಽಯುರಿಂದ್ರ ಋಭುಕ್ಷಾ ಮರುತಃ ಪರಿಖ್ಯನ್ । ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ॥ ಯನ್ನಿರ್ಣಿಜಾ

ರೇಕ್ಣ್ಸಾ ಪ್ರಾವೃತಸ್ಯ ರಾತಿಂ ಗೃಭೀತಾಂ ಮುಖತೋ ನಯಂತಿ । ಸುಪ್ರಾಜಜೋ ಮೇಮ್ಯದ್ವಿಶ್ವರೂಪ ಇಂದ್ರಾಪೂಷ್ಣೋಃ ಪ್ರಿಯಮಪ್ಯೇತಿ ಪಾಥಃ ॥ ಏಷಚ್ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ । ಅಭಿಪ್ರಿಯಂ ಯತ್ಪುರೋಡಾಶಮರ್ವತಾ ತ್ವಷ್ಟೇ[ತ್ವಷ್ಟೇತ್(೩೯)ಏನಗ್ಂ ಸೌಶ್ರವಸಾಯ]ದೇನಗ್ಂ ಸೌಶ್ರವಸಾಯ ಜಿನ್ವತಿ ॥ ಯದ್ಧವಿಷ್ಯಮೃತುಶೋ ದೇವಯಾನಂ ತ್ರಿರ್ಮಾನುಷಾಃ ಪರ್ಯಶ್ವಂ ನಯಂತಿ । ಅತ್ರಾ ಪೂಷ್ಣಃ ಪ್ರಥಮೋ ಭಾಗ ಏತಿ ಯಜ್ಞಂ ದೇವೇಭ್ಯಃ ಪ್ರತಿವೇದಯನ್ನಜಃ ॥ ಹೋತಾಽಧ್ವರ್ಯುರಾವಯಾ ಅಗ್ನಿಮಿಂಧೋ ಗ್ರಾವಗ್ರಾಭ ಉತ ಶಗ್ಗ್ಂಸ್ತಾ ಸುವಿಪ್ರಃ । ತೇನ ಯಜ್ಞೇನ ಸ್ವರಂಕೃತೇನ ಸ್ವಿಷ್ಟೇನ ವಕ್ಷಣಾ ಆ ಪೃಣಧ್ವಮ್ ॥ ಯೂಪವ್ರಸ್ಕಾ ಉತ ಯೇ ಯೂಪವಾಹಾಶ್ಚಷಾಲಂ ಯೇ ಅಶ್ವಯೂಪಾಯ ತಕ್ಷತಿ । ಯೇ ಚಾರ್ವತೇ ಪಚನಗ್ಂ ಸಂಭರಂತ್ಯುತೋ[(೪೦)]ತೇಷಾಮಭಿಗೂರ್ತಿರ್ನ ಇನ್ವತು ॥ ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ । ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಮ್ ॥ ಯದ್ವಾಜಿನೋ ದಾಮ ಸಂದಾನ ಮರ್ವತೋ ಯಾ ಶೀರ್‌ಷಣ್ಯಾ ರಶನಾ ರಜ್ಜುರಸ್ಯ । ಯದ್ವಾ ಘಾಸ್ಯ ಪ್ರಭೃತಮಾಸ್ಯೇ ತೃಣಗ್ಂ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ಯದಶ್ವಸ್ಯ ಕ್ರವಿಷೋ[ಕ್ರವಿಷಃ(೪೧)]ಮಕ್ಷಿಕಾ ಽಽಶ ಯದ್ವಾ ಸ್ವರೌ ಸ್ವಧಿತೌ ರಿಪ್ತಮಸ್ತಿ । ಯದ್ಧಸ್ತಯೋಃ ಶಮಿತುರ್ಯನ್ನಖೇಷು ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ಯದೂವಧ್ಯಮುದರಸ್ಯಾಪವಾತಿ ಯ ಆಮಸ್ಯ ಕ್ರವಿಷೋ ಗಂಧೋ

ಅಸ್ತಿ । ಸುಕೃತಾ ತಚ್ಛಮಿತಾರಃ ಕೃಣ್ವಂತೂತ ಮೇಧಗ್ಂ ಶೃತಪಾಕಂ ಪಚಂತು ॥ ಯತ್ತೇ ಗಾತ್ರಾದಗ್ನಿನಾ ಪಚ್ಯಮಾನಾದಭಿ ಶೂಲಂ ನಿಹತಸ್ಯಾವಧಾವತಿ । ಮಾ ತದ್ಭೂಮ್ಯಾ ಮಾ ಶ್ರಿಷನ್ಮಾ ತೃಣೇಷು ದೇವೇಭ್ಯಸ್ತದುಶದ್ಭ್ಯೋ ರಾತಮಸ್ತು ॥ ೪೨ ॥

ಇದುತೋ ಕ್ರವಿಷಃ ಶ್ರಿಷಥ್ಸಪ್ತ ಚ ॥ 8 ॥

ಯೇ ವಾಜಿನಂ ಪರಿಪಶ್ಯಂತಿ ಪಕ್ವಂ ಯ ಈಮಾಹುಃ ಸುರಭಿರ್ನಿರ್ ಹರೇತಿ । ಯೇ ಚಾರ್ವತೋ ಮಾಗ್ಂಸಭಿಕ್ಷಾಮುಪಾಸತ ಉತೋ ತೇಷಾಮಭಿಗೂರ್ತಿರ್ನ ಇನ್ವತು ॥ ಯನ್ನೀಕ್ಷಣಂ ಮಾಗ್ಂಸ್ಪಚನ್ಯಾ ಉಖಾಯಾ ಯಾ ಪಾತ್ರಾಣಿ ಯೂಷ್ಣ ಆಸೇಚನಾನಿ । ಊಷ್ಮಣ್ಯಾಽಪಿಧಾನಾ ಚರೂಣಾಮಙ್ಕಾಃ ಸೂನಾಃ ಪರಿ ಭೂಷನ್ತ್ಯಶ್ವಮ್ ॥ ನಿಕ್ರಮಣಂ ನಿಷದನಂ ವಿವರ್ತನಂ ಯಚ್ಚ ಪಡ್ಬೀಶಮರ್ವತಃ । ಯಚ್ಚ ಪಪೌ ಯಚ್ಚ ಘಾಸಿಂ [(೪೩)] ಜಘಾಸ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ಮಾ ತ್ವಾಽಗ್ನಿರ್ಧ್ವನಯಿದ್ಧೂಮಗಂಧಿರ್ಮೋಖಾ ಭ್ರಾಜನ್ತ್ಯಭಿ ವಿಕ್ತ ಜಘ್ರಿಃ । ಇಷ್ಟಂ ವೀತಮಭಿಗೂರ್ತಂ ವಷಟ್ಕೃತಂ ತಂ ದೇವಾಸಃ ಪ್ರತಿ ಗೃಭ್ಣನ್ತ್ಯಶ್ವಮ್ ॥ ಯದಶ್ವಾಯ ವಾಸ ಉಪಸ್ತೃಣನ್ತ್ಯಧೀವಾಸಂ ಯಾ ಹಿರಣ್ಯಾನ್ಯಸ್ಮೈ । ಸನ್ದಾನಮರ್ವಂತಂ ಪಡ್ಬೀಶಂ ಪ್ರಿಯಾ ದೇವೇಷ್ವಾ ಯಾಮಯಂತಿ ॥ ಯತ್ತೇ ಸಾದೇ ಮಹಸಾ ಶೂಕೃತಸ್ಯ ಪಾರ್ಷ್ಣ್ಯಾ ವಾ ಕಶಯಾ [(೪೪) ವಾ ತುತೋದ ।] ವಾ ತುತೋದ । ಸ್ರುಚೇವ ತಾ ಹವಿಷೋ ಅಧ್ವರೇಷು ಸರ್ವಾ ತಾ ತೇ ಬ್ರಹ್ಮಣಾ ಸೂದಯಾಮಿ ॥ ಚತುಸ್ತ್ರಿಗ್ಂಶದ್ವಾಜಿನೋ ದೇವಬಂಧೋರ್ವಙ್ಕ್ರೀರಶ್ವಸ್ಯ ಸ್ವಧಿತಿಃ ಸಮೇತಿ । ಅಚ್ಛಿದ್ರಾ ಗಾತ್ರಾ

ವಯುನಾ ಕೃಣೋತ ಪರುಷ್ಪರುರನುಘುಷ್ಯಾ ವಿ ಶಸ್ತ ॥ ಏಕಸ್ತ್ವಷ್ಟುರಶ್ವಸ್ಯಾ ವಿಶಸ್ತಾ ದ್ವಾ ಯನ್ತಾರಾ ಭವತಸ್ತಥರ್ತುಃ । ಯಾ ತೇ ಗಾತ್ರಾಣಾಮೃತುಥಾ ಕೃಣೋಮಿ ತಾತಾ ಪಿಂಡಾನಾಂ ಪ್ರ ಜುಹೋಮ್ಯಗ್ನೌ ॥ ಮಾ ತ್ವಾ ತಪ[ತಪತ್(೪೫)ಪ್ರಿಯ]ತ್ಪ್ರಿಯ ಆತ್ಮಾಽಪಿ ಯಂತಂ ಮಾ ಸ್ವಧಿತಿಸ್ತನುವ ಆ ತಿಷ್ಠಿಪತ್ತೇ । ಮಾ ತೇ ಗೃಧ್ನುರವಿಶಸ್ತಾಽತಿಹಾಯ ಛಿದ್ರಾ ಗಾತ್ರಾಣ್ಯಸಿನಾ ಮಿಥೂ ಕಃ ॥ ನ ವಾ ಉವೇತನ್ಮ್ರಿಯಸೇ ನ ರಿಷ್ಯಸಿ ದೇವಾಗ್ಂ ಇದೇಷಿ ಪಥಿಭಿಃ ಸುಗೇಭಿಃ । ಹರೀ ತೇ ಯುಂಜಾ ಪೃಷತೀ ಅಭೂತಾಮುಪಾಸ್ಥಾದ್ವಾಜೀ ಧುರಿ ರಾಸಭಸ್ಯ ॥ ಸುಗವ್ಯಂ ನೋ ವಾಜೀ ಸ್ವಶ್ವಿಯಂ ಪುಗ್ಂಸಃ ಪುತ್ರಾಗ್ಂ ಉತ ವಿಶ್ವಾಪುಷಗ್ಂ ರಯಿಮ್ । ಅನಾಗಾಸ್ತ್ವಂ ನೋ ಅದಿತಿಃ ಕೃಣೋತು ಕ್ಷತ್ರಂ ನೋ ಅಶ್ವೋ ವನತಾಗ್ಂ ಹವಿಷ್ಮಾನ್ ॥ ೪೬ ॥

ಘಾಸಿಂ ಕಶಯಾ ತಪದ್ರಯಿಂ ನವ ಚ ॥ 9 ॥

ಅಶ್ಮನ್ ಯ ಇಮೋದೇನಮಾಶುಃ ಪ್ರಾಚೀಂ ಜೀಮೂತಸ್ಯ ಯದಕ್ರಂದೋ ಮಾ ನೋ ಮಿತ್ರೋ ಯೇ ವಾಜಿನಂ ನವ ॥ 9 ॥

ಅಶ್ಮನ್ಮನೋಯುಜಂ ಪ್ರಾಚೀಮನು ಶರ್ಮ ಯಚ್ಛತು ತೇಷಾಮಭಿಗೂರ್ತಿಷ್ಷಟ್ಚತ್ವಾರಿಗ್ಂಶತ್ ॥ 46 ॥

॥ ಅಶ್ಮನ್, ಹವಿಷ್ಮಾನ್ ॥

॥ ಹರಿಃ ಓಮ್ ॥ ॥ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ಚತುರ್ಥಕಾಂಡೇ ಷಷ್ಠಃ ಪ್ರಶ್ನಃ

* * * * *

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಸಪ್ತಮಃ ಪ್ರಶ್ನಃ

ಶ್ರೀ ಗುರುಭ್ಯೋ ನಮಃ ಹರಿಃ ಓಮ್

ಅಗ್ನಾವಿಷ್ಣೂ ಸಜೋಷಸೇಮಾ ವರ್ಧಂತು ವಾಂ ಗಿರಃ । ದ್ಯುಮ್ನೈರ್ವಾಜೇಭಿರಾ ಗತಮ್ ॥ ವಾಜಶ್ಚ ಮೇ ಪ್ರಸವಶ್ಚ ಮೇ ಪ್ರಯತಿಶ್ಚ ಮೇ ಪ್ರಸಿತಿಶ್ಚ ಮೇ ಧೀತಿಶ್ಚ ಮೇ ಕ್ರತುಶ್ಚ ಮೇ ಸ್ವರಶ್ಚ ಮೇ ಶ್ಲೋಕಶ್ಚ ಮೇ ಶ್ರಾವಶ್ಚ ಮೇ ಶ್ರುತಿಶ್ಚ ಮೇ ಜ್ಯೋತಿಶ್ಚ ಮೇ ಸುವಶ್ಚ ಮೇ ಪ್ರಾಣಶ್ಚ ಮೇಽಪಾನ [ಮೇಽಪಾನಃ(೧)ಚ ಮೇ] ಶ್ಚ ಮೇ ವ್ಯಾನಶ್ಚ ಮೇಽಸುಶ್ಚ ಮೇ ಚಿತ್ತಂ ಚ ಮ ಆಧೀತಂ ಚ ಮೇ ವಾಕ್ಚ ಮೇ ಮನಶ್ಚ ಮೇ ಚಕ್ಷುಶ್ಚ ಮೇ ಶ್ರೋತ್ರಂ ಚ ಮೇ ದಕ್ಷಶ್ಚ ಮೇ ಬಲಂ ಚ ಮ ಓಜಶ್ಚ ಮೇ ಸಹಶ್ಚ ಮ ಆಯುಶ್ಚ ಮೇ ಜರಾ ಚ ಮ ಆತ್ಮಾ ಚ ಮೇ ತನೂಶ್ಚ ಮೇ ಶರ್ಮ ಚ ಮೇ ವರ್ಮ ಚ ಮೇಽಂಗಾನಿ ಚ ಮೇಽಸ್ಥಾನಿ ಚ ಮೇ ಪರೂಗ್ಂಷಿ ಚ ಮೇ ಶರೀರಾಣಿ ಚ ಮೇ ॥ ೨ ॥

ಅಪಾನಸ್ತನೂಶ್ಚ ಮೇಽಷ್ಟಾದಶ ಚ ॥ 1 ॥

ಜ್ಯೈಷ್ಠ್ಯಂ ಚ ಮ ಆಧಿಪತ್ಯಂ ಚ ಮೇ ಮನ್ಯುಶ್ಚ ಮೇ ಭಾಮಶ್ಚ ಮೇಽಮಶ್ಚ ಮೇಽಂಭಶ್ಚ ಮೇ ಜೇಮಾ ಚ ಮೇ ಮಹಿಮಾ ಚ ಮೇ ವರಿಮಾ ಚ ಮೇ ಪ್ರಥಿಮಾ ಚ ಮೇ ವರ್ಷ್ಮಾ ಚ ಮೇ ದ್ರಾಘುಯಾ ಚ ಮೇ ವೃದ್ಧಂ ಚ ಮೇ ವೃದ್ಧಿಶ್ಚ ಮೇ ಸತ್ಯಂ ಚ ಮೇ ಶ್ರದ್ಧಾ ಚ ಮೇ ಜಗಚ್ಚ [(೩)] ಮೇ ಧನಂ ಚ ಮೇ ವಶಶ್ಚ ಮೇ ತ್ವಿಷಿಶ್ಚ ಮೇ ಕ್ರೀಡಾ ಚ ಮೇ ಮೋದಶ್ಚ ಮೇ

ಜಾತಂ ಚ ಮೇ ಜನಿಷ್ಯಮಾಣಂ ಚ ಮೇ ಸೂಕ್ತಂ ಚ ಮೇ ಸುಕೃತಂ ಚ ಮೇ ವಿತ್ತಂ ಚ ಮೇ ವೇದ್ಯಂ ಚ ಮೇ ಭೂತಂ ಚ ಮೇ ಭವಿಷ್ಯಚ್ಚ ಮೇ ಸುಗಂ ಚ ಮೇ ಸುಪಥಂ ಚ ಮ ಋದ್ಧಂ ಚ ಮ ಋದ್ಧಿಶ್ಚ ಮೇ ಕ್ಲೃಪ್ತಂ ಚ ಮೇ ಕ್ಲೃಪ್ತಿಶ್ಚ ಮೇ ಮತಿಶ್ಚ ಮೇ ಸುಮತಿಶ್ಚ ಮೇ ॥ ೪ ॥

ಜಗಚ್ಚರ್ದ್ಧಿಶ್ಚತುರ್ದಶ ಚ ॥ 2 ॥

ಶಂ ಚ ಮೇ ಮಯಶ್ಚ ಮೇ ಪ್ರಿಯಂ ಚ ಮೇಽನುಕಾಮಶ್ಚ ಮೇ ಕಾಮಶ್ಚ ಮೇ ಸೌಮನಸಶ್ಚ ಮೇ ಭದ್ರಂ ಚ ಮೇ ಶ್ರೇಯಶ್ಚ ಮೇ ವಸ್ಯಶ್ಚ ಮೇ ಯಶಶ್ಚ ಮೇ ಭಗಶ್ಚ ಮೇ ದ್ರವಿಣಂ ಚ ಮೇ ಯಂತಾ ಚ ಮೇ ಧರ್ತಾ ಚ ಮೇ ಕ್ಷೇಮಶ್ಚ ಮೇ ಧೃತಿಶ್ಚ ಮೇ ವಿಶ್ವಂ ಚ [(೫)] ಮೇ ಮಹಶ್ಚ ಮೇ ಸಂವಿಚ್ಚ ಮೇ ಜ್ಞಾತ್ರಂ ಚ ಮೇ ಸೂಶ್ಚ ಮೇ ಪ್ರಸೂಶ್ಚ ಮೇ ಸೀರಂ ಚ ಮೇ ಲಯಶ್ಚ ಮ ಋತಂ ಚ ಮೇಽಮೃತಂ ಚ ಮೇಽಯಕ್ಷ್ಮಂ ಚ ಮೇಽನಾಮಯಚ್ಚ ಮೇ ಜೀವಾತುಶ್ಚ ಮೇ ದೀರ್ಘಾಯುತ್ವಂ ಚ ಮೇಽನಮಿತ್ರಂ ಚ ಮೇಽಭಯಂ ಚ ಮೇ ಸುಗಂ ಚ ಮೇ ಶಯನಂ ಚ ಮೇ ಸೂಷಾ ಚ ಮೇ ಸುದಿನಂ ಚ ಮೇ ॥ ೬ ॥

ವಿಶ್ವಂ ಚ ಶಯನಮಷ್ಟೌ ಚ ॥ 3 ॥

ಊರ್ಕ್ಚ ಮೇ ಸೂನೃತಾ ಚ ಮೇ ಪಯಶ್ಚ ಮೇ ರಸಶ್ಚ ಮೇ ಘೃತಂ ಚ ಮೇ ಮಧು ಚ ಮೇ ಸಗ್ಧಿಶ್ಚ ಮೇ ಸಪೀತಿಶ್ಚ ಮೇ ಕೃಷಿಶ್ಚ ಮೇ ವೃಷ್ಟಿಶ್ಚ ಮೇ ಜೈತ್ರಂ ಚ ಮ ಔದ್ಭಿದ್ಯಂ ಚ ಮೇ ರಯಿಶ್ಚ ಮೇ ರಾಯಶ್ಚ ಮೇ ಪುಷ್ಟಂ ಚ ಮೇ ಪುಷ್ಟಿಶ್ಚ ಮೇ ವಿಭು ಚ [(೭) ಮೇ ಪ್ರಭು] ಮೇ ಪ್ರಭು ಚ ಮೇ  ಬಹು ಚ ಮೇ ಭೂಯಶ್ಚ ಮೇ ಪೂರ್ಣಂ ಚ ಮೇ ಪೂರ್ಣತರಂ ಚ

ಮೇऽಕ್ಷಿತಿಶ್ಚ ಮೇ ಕೂಯವಾಶ್ಚ ಮೇऽನ್ನಂ ಚ ಮೇऽಕ್ಷುಚ್ಚ ಮೇ ವ್ರೀಹಯಶ್ಚ ಮೇ ಯವಾಶ್ಚ ಮೇ ಮಾಷಾಶ್ಚ ಮೇ ತಿಲಾಶ್ಚ ಮೇ ಮುದ್ಗಾಶ್ಚ ಮೇ ಖಲ್ವಾಶ್ಚ ಮೇ ಗೋಧೂಮಾಶ್ಚ ಮೇ ಮಸುರಾಶ್ಚ ಮೇ ಪ್ರಿಯಂಗವಶ್ಚ ಮೇऽಣವಶ್ಚ ಮೇ ಶ್ಯಾಮಾಕಾಶ್ಚ ಮೇ ನೀವಾರಾಶ್ಚ ಮೇ ॥ ೯ ॥

ವಿಭು ಚ ಮಸುರಾಶ್ಚತುರ್ದಶ ಚ ॥ 4 ॥

ಅಶ್ಮಾ ಚ ಮೇ ಮೃತ್ತಿಕಾ ಚ ಮೇ ಗಿರಯಶ್ಚ ಮೇ ಪರ್ವತಾಶ್ಚ ಮೇ ಸಿಕತಾಶ್ಚ ಮೇ ವನಸ್ಪತಯಶ್ಚ ಮೇ ಹಿರಣ್ಯಂ ಚ ಮೇऽಯಶ್ಚ ಮೇ ಸೀಸಂ ಚ ಮೇ ತ್ರಪುಶ್ಚ ಮೇ ಶ್ಯಾಮಂ ಚ ಮೇ ಲೋಹಂ ಚ ಮೇऽಗ್ನಿಶ್ಚ ಮ ಆಪಶ್ಚ ಮೇ ವೀರುಧಶ್ಚ ಮ ಓಷಧಯಶ್ಚ ಮೇ ಕೃಷ್ಟಪಚ್ಯಂ ಚ [(೯) ಮೇऽಕೃಷ್ಟಪಚ್ಯಂ] ಮೇऽಕೃಷ್ಟಪಚ್ಯಂ ಚ ಮೇ ಗ್ರಾಮ್ಯಾಶ್ಚ ಮೇ ಪಶವ ಆರಣ್ಯಾಶ್ಚ ಯಜ್ಞೇನ ಕಲ್ಪಂತಾಂ ವಿತ್ತಂ ಚ ಮೇ ವಿತ್ತಿಶ್ಚ ಮೇ ಭೂತಂ ಚ ಮೇ ಭೂತಿಶ್ಚ ಮೇ ವಸು ಚ ಮೇ ವಸತಿಶ್ಚ ಮೇ ಕರ್ಮ ಚ ಮೇ ಶಕ್ತಿಶ್ಚ ಮೇऽರ್ಥಶ್ಚ ಮ ಏಮಶ್ಚ ಮ ಇತಿಶ್ಚ ಮೇ ಗತಿಶ್ಚ ಮೇ ॥ ೧೦ ॥

ಕೃಷ್ಟಪಚ್ಯಂ ಚಾಷ್ಟಾಚತ್ವಾರಿಗ್ಂಶಚ್ಚ ॥ 5 ॥

ಅಗ್ನಿಶ್ಚ ಮ ಇಂದ್ರಶ್ಚ ಮೇ ಸೋಮಶ್ಚ ಮ ಇಂದ್ರಶ್ಚ ಮೇ ಸವಿತಾ ಚ ಮ ಇಂದ್ರಶ್ಚ ಮೇ ಸರಸ್ವತೀ ಚ ಮ ಇಂದ್ರಶ್ಚ ಮೇ ಪೂಷಾ ಚ ಮ ಇಂದ್ರಶ್ಚ ಮೇ ಬೃಹಸ್ಪತಿಶ್ಚ ಮ ಇಂದ್ರಶ್ಚ ಮೇ ಮಿತ್ರಶ್ಚ ಮ ಇಂದ್ರಶ್ಚ ಮೇ ವರುಣಶ್ಚ ಮ ಇಂದ್ರಶ್ಚ ಮೇ ತ್ವಷ್ಟಾ ಚ [(೧೧)] ಮ ಇಂದ್ರಶ್ಚ ಮೇ ಧಾತಾ ಚ ಮ ಇಂದ್ರಶ್ಚ ಮೇ ವಿಷ್ಣುಶ್ಚ ಮ ಇಂದ್ರಶ್ಚ ಮೇऽಶ್ವಿನೌ ಚ ಮ ಇಂದ್ರಶ್ಚ

ಮೇ ಮರುತಶ್ಚ ಮ ಇಂದ್ರಶ್ಚ ಮೇ ವಿಶ್ವೇ ಚ ಮೇ ದೇವಾ ಇಂದ್ರಶ್ಚ ಮೇ ಪೃಥಿವೀ ಚ ಮ ಇಂದ್ರಶ್ಚ ಮೇಽಂತರಿಕ್ಷಂ ಚ ಮ ಇಂದ್ರಶ್ಚ ಮೇ ದ್ಯೌಶ್ಚಮ ಇಂದ್ರಶ್ಚ ಮೇ ದಿಶಶ್ಚ ಮ ಇಂದ್ರಶ್ಚ ಮೇ ಮೂರ್ಧಾ ಚ ಮ ಇಂದ್ರಶ್ಚ ಮೇ ಪ್ರಜಾಪತಿಶ್ಚ ಮ ಇಂದ್ರಶ್ಚ ಮೇ ॥ ೧೨ ॥

ತ್ವಷ್ಟಾ ಚ ದ್ಯೌಶ್ಚ ಮ ಏಕವಿಗ್ಂಶತಿಶ್ಚ ॥ 6 ॥

ಅಗ್ಂಶುಶ್ಚ ಮೇ ರಶ್ಮಿಶ್ಚ ಮೇಽದಾಭ್ಯಶ್ಚ ಮೇಽಧಿಪತಿಶ್ಚ ಮ ಉಪಾಗ್ಂಶುಶ್ಚ ಮೇಽಂತರ್ಯಾಮಶ್ಚ ಮ ಐಂದ್ರವಾಯವಶ್ಚ ಮೇ ಮೈತ್ರಾವರುಣಶ್ಚ ಮ ಆಶ್ವಿನಶ್ಚ ಮೇ ಪ್ರತಿಪ್ರಸ್ಥಾನಶ್ಚ ಮೇ ಶುಕ್ರಶ್ಚ ಮೇ ಮಂಥೀ ಚ ಮ ಆಗ್ರಯಣಶ್ಚ ಮೇ ವೈಶ್ವದೇವಶ್ಚ ಮೇ ಧ್ರುವಶ್ಚ ಮೇ ವೈಶ್ವಾನರಶ್ಚ ಮ ಋತುಗ್ರಹಾಶ್ಚ[(೧೩)ಮೇಽತಿಗ್ರಾಹ್ಯಾಶ್ಚ] ಮೇಽತಿಗ್ರಾಹ್ಯಾಶ್ಚ ಮ ಐಂದ್ರಾಗ್ನಶ್ಚ ಮೇ ವೈಶ್ವದೇವಶ್ಚ ಮೇ ಮರುತ್ವತೀಯಾಶ್ಚ ಮೇ ಮಾಹೇಂದ್ರಶ್ಚ ಮ ಆದಿತ್ಯಶ್ಚ ಮೇ ಸಾವಿತ್ರಶ್ಚ ಮೇ ಸಾರಸ್ವತಶ್ಚ ಮೇ ಪೌಷ್ಣಶ್ಚ ಮೇ ಪಾತ್ನೀವತಶ್ಚ ಮೇ ಹಾರಿಯೋಜನಶ್ಚ ಮೇ ॥ ೧೪ ॥

ಋತುಗ್ರಹಾಶ್ಚ ಚತುಸ್ತ್ರಿಗ್ಂಶಚ್ಚ ॥ 7 ॥

ಇಧ್ಮಶ್ಚ ಮೇ ಬರ್ಽಹಿಶ್ಚ ಮೇ ವೇದಿಶ್ಚ ಮೇ ಧಿಷ್ಣಿಯಾಶ್ಚ ಮೇ ಸ್ರುಚಶ್ಚ ಮೇ ಚಮಸಾಶ್ಚ ಮೇ ಗ್ರಾವಾಣಶ್ಚ ಮೇ ಸ್ವರವಶ್ಚ ಮ ಉಪರವಾಶ್ಚ ಮೇಽಧಿಷವಣೇ ಚ ಮೇ ದ್ರೋಣಕಲಶಶ್ಚ ಮೇ ವಾಯವ್ಯಾನಿ ಚ ಮೇ ಪೂತಭೃಚ್ಚ ಮ ಆಧವನೀಯಶ್ಚ ಮ ಆಗ್ನೀಧ್ರಂ ಚ ಮೇ ಹವಿರ್ಧಾನಂ ಚ ಮೇ ಗೃಹಾಶ್ಚ ಮೇ ಸದಶ್ಚ ಮೇ ಪುರೋಡಾಶಾಶ್ಚ ಮೇ ಪಚತಾಶ್ಚ ಮೇಽವ

ಭೃಥಶ್ಚ ಮೇ ಸ್ವಗಾಕಾರಶ್ಚ ಮೇ ॥ ೧೫ ॥

ಗೃಹಾಶ್ಚ ಷೋಡಶ ಚ ॥ 8 ॥

ಅಗ್ನಿಶ್ಚ ಮೇ ಘರ್ಮಶ್ಚ ಮೇಽರ್ಕಶ್ಚ ಮೇ ಸೂರ್ಯಶ್ಚ ಮೇ ಪ್ರಾಣಶ್ಚ ಮೇಽಶ್ವಮೇಧಶ್ಚ ಮೇ ಪೃಥಿವೀ ಚ ಮೇಽದಿತಿಶ್ಚ ಮೇ ದಿತಿಶ್ಚ ಮೇ ದ್ಯೌಶ್ಚ ಮೇ ಶಕ್ವರೀರಙ್ಗುಲಯೋ ದಿಶಶ್ಚ ಮೇ ಯಜ್ಞೇನ ಕಲ್ಪಂತಾಮೃಕ್ಚ ಮೇ ಸಾಮ ಚ ಮೇ ಸ್ತೋಮಶ್ಚ ಮೇ ಯಜುಶ್ಚ ಮೇ ದೀಕ್ಷಾ ಚ ಮೇ ತಪಶ್ಚ ಮ ಋತುಶ್ಚ ಮೇ ವ್ರತಂ ಚ ಮೇಽಹೋರಾತ್ರಯೋರ್ವೃಷ್ಟ್ಯಾ ಬೃಹದ್ರಥಂತರೇ ಚ ಮೇ ಯಜ್ಞೇನ ಕಲ್ಪೇತಾಮ್ ॥ ೧೬ ॥

ದೀಕ್ಷಾಽಷ್ಟಾದಶ ಚ ॥ 9 ॥

ಗರ್ಭಾಶ್ಚ ಮೇ ವತ್ಸಾಶ್ಚ ಮೇ ತ್ರ್ಯವಿಶ್ಚ ಮೇ ತ್ರ್ಯವೀ ಚ ಮೇ ದಿತ್ಯವಾಟ್ಚ ಮೇ ದಿತ್ಯೌಹೀ ಚ ಮೇ ಪಂಚಾವಿಶ್ಚ ಮೇ ಪಂಚಾವೀ ಚ ಮೇ ತ್ರಿವಥ್ಸಶ್ಚ ಮೇ ತ್ರಿವಥ್ಸಾ ಚ ಮೇ ತುರ್ಯವಾಟ್ ಚ ಮೇ ತುರ್ಯೌಹೀ ಚ ಮೇ ಪಷ್ಠವಾಚ್ಚ ಮೇ ಪಷ್ಠೌಹೀ ಚ ಮ ಉಕ್ಷಾ ಚ ಮೇ ವಶಾ ಚ ಮ ಋಷಭಶ್ಚ [(೧೭) ಮೇ ವೇಹಚ್ಚ] ಮೇ ವೇಹಚ್ಚ ಮೇಽನಡ್ವಾಂಚ್ಚ ಮೇ ಧೇನುಶ್ಚ ಮ ಆಯುರ್ಯಜ್ಞೇನ ಕಲ್ಪತಾಂ ಪ್ರಾಣೋ ಯಜ್ಞೇನ ಕಲ್ಪತಾಮಪಾನೋ ಯಜ್ಞೇನ ಕಲ್ಪತಾಂ ವ್ಯಾನೋ ಯಜ್ಞೇನ ಕಲ್ಪತಾಂ ಚಕ್ಷುರ್ಯಜ್ಞೇನ ಕಲ್ಪತಾಗ್ಂ ಶ್ರೋತ್ರಂ ಯಜ್ಞೇನ ಕಲ್ಪತಾಂ ಮನೋ ಯಜ್ಞೇನ ಕಲ್ಪತಾಂ ವಾಗ್ಯಜ್ಞೇನ ಕಲ್ಪತಾಮಾತ್ಮಾ ಯಜ್ಞೇನ ಕಲ್ಪತಾಂ ಯಜ್ಞೋ ಯಜ್ಞೇನ ಕಲ್ಪತಾಮ್ ॥ ೧೦ ॥

ಋಷಭಶ್ಚ ಚತ್ವಾರಿಗ್ಂಶಚ್ಚ ॥ 10 ॥

ಏಕಾ ಚ ಮೇ ತಿಸ್ರಶ್ಚ ಮೇ ಪಂಚ ಚ ಮೇ ಸಪ್ತ ಚ ಮೇ ನವ ಚ ಮ ಏಕಾದಶ ಚ ಮೇ ತ್ರಯೋದಶ ಚ ಮೇ ಪಂಚದಶ ಚ ಮೇ ಸಪ್ತದಶ ಚ ಮೇ ನವದಶ ಚ ಮ ಏಕವಿಗ್ಂಶತಿಶ್ಚ ಮೇ ತ್ರಯೋವಿಗ್ಂಶತಿಶ್ಚ ಮೇ ಪಂಚವಿಗ್ಂಶತಿಶ್ಚ ಮೇ ಸಪ್ತವಿಗ್ಂಶತಿಶ್ಚ ಮೇ ನವವಿಗ್ಂಶತಿಶ್ಚ ಮ ಏಕತ್ರಿಗ್ಂಶಚ್ಚ ಮೇ ತ್ರಯಸ್ತ್ರಿಗ್ಂಶಚ್ಚ [(೧೯)] ಮೇ ಚತಸ್ರಶ್ಚ ಮೇಽಷ್ಟೌ ಚ ಮೇ ದ್ವಾದಶ ಚ ಮೇ ಷೋಡಶ ಚ ಮೇ ವಿಗ್ಂಶತಿಶ್ಚ ಮೇ ಚತುರ್ವಿಗ್ಂಶತಿಶ್ಚ ಮೇಽಷ್ಟಾವಿಗ್ಂಶತಿಶ್ಚ ಮೇ ದ್ವಾತ್ರಿಗ್ಂಶಚ್ಚ ಮೇ ಷಟ್ತ್ರಿಗ್ಂಶಚ್ಚ ಮೇ ಚತ್ವಾರಿಗ್ಂಶಚ್ಚ ಮೇ ಚತುಶ್ಚತ್ವಾರಿಗ್ಂಶಚ್ಚ ಮೇಽಷ್ಟಾಚತ್ವಾರಿಗ್ಂಶಚ್ಚ ಮೇ ವಾಜಶ್ಚ ಪ್ರಸವಶ್ಚಾಪಿಜಶ್ಚ ಕ್ರತುಶ್ಚ ಸುವಶ್ಚ ಮೂರ್ಧಾ ಚ ವ್ಯಶ್ನಿಯಶ್ಚಾಽಽನ್ತ್ಯಾಯನಶ್ಚಾಂತ್ಯಶ್ಚ ಭೌವನಶ್ಚ ಭುವನಶ್ಚಾಧಿಪತಿಶ್ಚ ॥ ೨೦ ॥

ತ್ರಯಸ್ತ್ರಿಗ್ಂಶಚ್ಚ ವ್ಯಶ್ನಿಯ ಏಕಾದಶ ಚ ॥ 11 ॥

ವಾಜೋ ನಃ ಸಪ್ತ ಪ್ರದಿಶಶ್ಚತಸ್ರೋ ವಾ ಪರಾವತಃ । ವಾಜೋ ನೋ ವಿಶ್ವೈರ್ದೇವೈರ್ಧನಸಾತಾವಿಹಾವತು ॥ ವಿಶ್ವೇ ಅದ್ಯ ಮರುತೋ ವಿಶ್ವ ಊತೀ ವಿಶ್ವೇ ಭವಂತ್ವಗ್ನಯಃ ಸಮಿದ್ಧಾಃ । ವಿಶ್ವೇ ನೋ ದೇವಾ ಅವಸಾಽಽಗಮಂತು ವಿಶ್ವಮಸ್ತು ದ್ರವಿಣಂ ವಾಜೋ ಅಸ್ಮೇ ॥ ವಾಜಸ್ಯ ಪ್ರಸವಂ ದೇವಾ ರಥೈರ್ಯಾತಾ ಹಿರಣ್ಯಯೈಃ । ಅಗ್ನಿರಿಂದ್ರೋ ಬೃಹಸ್ಪತಿರ್ಮರುತಃ ಸೋಮಪೀತಯೇ ॥ ವಾಜೇವಾಜೇಽವತ ವಾಜಿನೋ ನೋ ಧನೇಷು

[(೨೧) ವಿಪ್ರಾ ಅಮೃತಾ ಋತಜ್ಞಾಃ।]ವಿಪ್ರಾ ಅಮೃತಾ ಋತಜ್ಞಾಃ। ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನ್ಯೈಃ॥ ವಾಜಃ ಪುರಸ್ತಾದುತ ಮಧ್ಯತೋ ನೋ ವಾಜೋ ದೇವಾಗ್ಂ ಋತುಭಿಃ ಕಲ್ಪಯಾತಿ। ವಾಜಸ್ಯ ಹಿ ಪ್ರಸವೋ ನನ್ನಮೀತಿ ವಿಶ್ವಾ ಆಶಾ ವಾಜಪತಿರ್ಭವೇಯಮ್ ॥ ಪಯಃ ಪೃಥಿವ್ಯಾಂ ಪಯ ಓಷಧೀಷು ಪಯೋ ದಿವ್ಯಂತರಿಕ್ಷೇ ಪಯೋ ಧಾಮ್ । ಪಯಸ್ವತೀಃ ಪ್ರದಿಶಃ ಸಂತು ಮಹ್ಯಮ್ ॥ ಸಂ ಮಾ ಸೃಜಾಮಿ ಪಯಸಾ ಘೃತೇನ ಸಂ ಮಾ ಸೃಜಾಮ್ಯಪ[..ಜಾಮ್ಯಪಃ(೨೨)]ಓಷಧೀಭಿಃ। ಸೋಽಹಂ ವಾಜಗ್ಂ ಸನೇಯಮಗ್ನೇ ॥ ನಕ್ತೋಷಾಸಾ ಸಮನಸಾ ವಿರೂಪೇ ಧಾಪಯೇತೇ ಶಿಶುಮೇಕಗ್ಂ ಸಮೀಚೀ । ದ್ಯಾವಾ ಕ್ಷಾಮಾ ರುಕ್ಮೋ ಅಂತರ್ವಿಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಃ॥ ಸಮುದ್ರೋಽಸಿ ನಭಸ್ವಾನಾರ್ದ್ರದಾನುಃ ಶಂಭೂರ್ಮಯೋಭೂರಭಿ ಮಾ ವಾಹಿ ಸ್ವಾಹಾ ಮಾರುತೋಽಸಿ ಮರುತಾಂ ಗಣಃ ಶಂಭೂರ್ಮಯೋಭೂರಭಿ ಮಾ ವಾಹಿ ಸ್ವಾಹಾಽವಸ್ಯುರಸಿ ದುವಸ್ವಾಞ್ಛಂಭೂರ್ಮಯೋಭೂರಭಿ ಮಾ ವಾಹಿ ಸ್ವಾಹಾ ॥ ೨೩ ॥

ಧನೇಷ್ವಪೋ ದುವಸ್ವಾಞ್ಛಂಭೂರ್ಮಯೋಭೂರಭಿ ಮಾ ದ್ವೇ ಚ ॥ 12 ॥

ಅಗ್ನಿಂ ಯುನಜ್ಮಿ ಶವಸಾ ಘೃತೇನ ದಿವ್ಯಗ್ಂ ಸುಪರ್ಣಂ ವಯಸಾ ಬೃಹಂತಮ್। ತೇನ ವಯಂ ಪತೇಮ ಬ್ರಧ್ನಸ್ಯ ವಿಷ್ಟಪಗ್ಂ ಸುವೋ ರುಹಾಣಾ ಅಧಿ ನಾಕ ಉತ್ತಮೇ ॥ ಇಮೌ ತೇ ಪಕ್ಷಾವಜರೌ ಪತತ್ರಿಣೋ ಯಾಭ್ಯಾಗ್ಂ ರಕ್ಷಾಗ್ಂಸ್ಯಪಹಗ್ಂಸ್ಯಗ್ನೇ। ತಾಭ್ಯಾಂ ಪತೇಮ ಸುಕೃತಾಮು ಲೋಕಂ ಯತ್ರರ್ಷಯಃ ಪ್ರಥಮಜಾ ಯೇ ಪುರಾಣಾಃ॥ ಚಿದಸಿ ಸಮುದ್ರಯೋನಿ

ರಿಂದುರ್ದಕ್ಷಃ ಶ್ಯೇನ ಋತಾವಾ । ಹಿರಣ್ಯಪಕ್ಷಃ ಶಕುನೋ ಭುರಣ್ಯುರ್ಮಹಾನ್ತ್ಸಧಸ್ಥೇ ಧ್ರುವ [ಧ್ರುವಃ(೨೪)]ಆ ನಿಷತ್ತಃ ॥ ನಮಸ್ತೇ ಅಸ್ತು ಮಾ ಮಾ ಹಿಗ್ಂಸೀರ್ವಿಶ್ವಸ್ಯ ಮೂರ್ಧನ್ನಧಿ ತಿಷ್ಠಸಿ ಶ್ರಿತಃ । ಸಮುದ್ರೇ ತೇ ಹೃದಯಮಂತರಾಯುರ್ದ್ಯಾವಾಪೃಥಿವೀ ಭುವನೇಷ್ವರ್ಪಿತೇ ॥ ಉದ್ನೋ ದತ್ತೋದಧಿಂ ಭಿಂತ ದಿವಃ ಪರ್ಜನ್ಯಾದಂತರಿಕ್ಷಾತ್ಪೃಥಿವ್ಯಾಸ್ತತೋ ನೋ ವೃಷ್ಟ್ಯಾಽವತ । ದಿವೋ ಮೂರ್ಧಾಽಸಿ ಪೃಥಿವ್ಯಾ ನಾಭಿರೂರ್ಗಪಾಮೋಷಧೀನಾಮ್ । ವಿಶ್ವಾಯುಃ ಶರ್ಮ ಸಪ್ರಥಾ ನಮಸ್ಪಥೇ ॥ ಯೇನರ್ಷಯಸ್ತಪಸಾ ಸತ್ರಮಾ[ಸತ್ರಮ್(೨೫) ಆಸತೇ..]ಸತೇನ್ಧಾನಾ ಅಗ್ನಿಗ್ಂ ಸುವರಾಭರಂತಃ । ತಸ್ಮಿನ್ನಹಂ ನಿ ದಧೇ ನಾಕೇ ಅಗ್ನಿಮೇತಂ ಯಮಾಹುರ್ಮನವಃ ಸ್ತೀರ್ಣಬರ್ಹಿಷಮ್ ॥ ತಂ ಪತ್ನೀಭಿರನು ಗಚ್ಛೇಮ ದೇವಾಃ ಪುತ್ರೈ ಭ್ರಾತೃಭಿರುತ ವಾ ಹಿರಣ್ಯೈಃ । ನಾಕಂ ಗೃಹ್ಣಾನಾಃ ಸುಕೃತಸ್ಯ ಲೋಕೇ ತೃತೀಯೇ ಪೃಷ್ಠೇ ಅಧಿ ರೋಚನೇ ದಿವಃ ॥ ಆ ವಾಚೋ ಮಧ್ಯಮರುಹದ್ಭುರಣ್ಯುರಯಮಗ್ನಿಃ ಸತ್ಪತಿ ಶ್ಚೇಕಿತಾನಃ । ಪೃಷ್ಠೇ ಪೃಥಿವ್ಯಾ ನಿಹಿತೋ ದವಿದ್ಯುತದಧಸ್ಪದಂ ಕೃಣುತೇ [ಕೃಣುತೇ(೨೬)] ಯೇ ಪೃತನ್ಯವಃ ॥ ಅಯಮಗ್ನಿರ್ವೀರತಮೋ ವಯೋಧಾಃ ಸಹಸ್ರಿಯೋ ದೀಪ್ಯತಾಮ ಪ್ರಯುಚ್ಛನ್ । ವಿಭ್ರಾಜಮಾನಃ ಸರಿರಸ್ಯ ಮಧ್ಯ ಉಪ ಪ್ರ ಯಾತ ದಿವ್ಯಾನಿ ಧಾಮ ॥ ಸಂ ಪ್ರ ಚ್ಯವಧ್ವಮನು ಸಂ ಪ್ರ ಯಾತಾಗ್ನೇ ಪಥೋ ದೇವಯಾನಾನ್ಕೃಣುಧ್ವಮ್ । ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ವಿಶ್ವೇ ದೇವಾ ಯಜಮಾನಶ್ಚ ಸೀದತ ॥ ಯೇನಾ ಸಹಸ್ರಂ ವಹಸಿ ಯೇನಾಗ್ನೇ ಸರ್ವವೇದಸಮ್ । ತೇನೇಮಂ ಯಜ್ಞಂ ನೋ ವಹ ದೇವಯಾನೋ ಯ[ಯಃ(೨೭)ಉತ್ತಮಃ ।]

ಉತ್ತಮಃ ॥ ಉದ್ಬುಧ್ಯಸ್ವಾಗ್ನೇ ಪ್ರತಿ ಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂಸೃಜೇಥಾಮಯಂ ಚ । ಪುನಃ ಕೃಣ್ವಗ್ಗ್ಂಸ್ತ್ವಾ ಪಿತರಂ ಯುವಾನಮನ್ವಾತಾಗ್ಂಸೀತ್ತ್ವಯಿ ತಂತುಮೇತಮ್ ॥ ಅಯಂ ತೇ ಯೋನಿರ್, ಋತ್ವಿಯೋ ಯತೋ ಜಾತೋ ಅರೋಚಥಾಃ । ತಂ ಜಾನನ್ನಗ್ನ ಆ ರೋಹಾಥಾ ನೋ ವರ್ಧಯಾ ರಯಿಮ್ ॥ ೨೮ ॥

ಧ್ರುವಃ ಸತ್ರಂ ಕೃಣುತೇ ಯಃ ಸಪ್ತತ್ರಿಗ್ಂಶಚ್ಚ ॥ 13 ॥

ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನುವಂ ಪುಷೇಮ । ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಽಧ್ಯಕ್ಷೇಣ ಪೃತನಾ ಜಯೇಮ ॥ ಮಮ ದೇವಾ ವಿಹವೇ ಸಂತು ಸರ್ವ ಇಂದ್ರಾವಂತೋ ಮರುತೋ ವಿಷ್ಣುರಗ್ನಿಃ । ಮಮಾಂತರಿಕ್ಷಮುರು ಗೋಪಮಸ್ತು ಮಹ್ಯಂ ವಾತಃ ಪವತಾಂ ಕಾಮೇ ಅಸ್ಮಿನ್ನ್ ॥ ಮಯಿ ದೇವಾ ದ್ರವಿಣಮಾ ಯಜಂತಾಂ ಮಯ್ಯಾಶೀರಸ್ತು ಮಯಿ ದೇವಹೂತಿಃ । ದೈವ್ಯಾ ಹೋತಾರಾ ವನಿಷಂತ [..ಷಂತ(೨೯)] ಪೂರ್ವೇಽರಿಷ್ಟಾಸ್ಸ್ಯಾಮ ತನುವಾ ಸುವೀರಾಃ ॥ ಮಹ್ಯಂ ಯಜಂತು ಮಮ ಯಾನಿ ಹವ್ಯಾಽಽಕೂತಿಸ್ಸತ್ಯಾ ಮನಸೋ ಮೇ ಅಸ್ತು । ಏನೋ ಮಾ ನಿ ಗಾಂ ಕತಮಚ್ಚ ನಾಹಂ ವಿಶ್ವೇ ದೇವಾಸೋ ಅಧಿ ವೋಚತಾ ಮೇ ॥ ದೇವೀಷ್ಷಡುರ್ವೀರುರು ಣಃ ಕೃಣೋತ ವಿಶ್ವೇ ದೇವಾಸ ಇಹ ವೀರಯಧ್ವಮ್ । ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿರ್ಮಾ ರಧಾಮ ದ್ವಿಷತೇ ಸೋಮ ರಾಜನ್ನ್ ॥ ಅಗ್ನಿರ್ಮನ್ಯುಂ ಪ್ರತಿನುದನ್ಪುರಸ್ತಾ[..ನ್ಪುರಸ್ತಾತ್ (೩೦)ಅದಬ್ಧೋ] ದದಬ್ಧೋ ಗೋಪಾಃ ಪರಿ ಪಾಹಿ ನಸ್ತ್ವಮ್ । ಪ್ರತ್ಯಂಚೋ ಯಂತು

ನಿಗುತಃ ಪುನಸ್ತೇಽಮ್ಯೈಷಾಂ ಚಿತ್ತಂ ಪ್ರಬುಧಾ ವಿ ನೇಶತ್ ॥ ಧಾತಾ ಧಾತೃಣಾಂ ಭುವನಸ್ಯ ಯಸ್ಪತಿರ್ದೇವಗ್ಂ ಸವಿತಾರಮಭಿಮಾತಿಷಾಹಮ್ । ಇಮಂ ಯಜ್ಞಮಶ್ವಿನೋಭಾ ಬೃಹಸ್ಪತಿರ್ದೇವಾಃ ಪಾಂತು ಯಜಮಾನಂ ನ್ಯರ್ಥಾತ್ ॥ ಉರುವ್ಯಚಾ ನೋ ಮಹಿಷಃ ಶರ್ಮ ಯಗ್ಂಸದಸ್ಮಿನ್, ಹವೇ ಪುರುಹೂತಃ ಪುರುಕ್ಷು । ಸ ನಃ ಪ್ರಜಾಯೈ ಹರ್ಯಶ್ವ ಮೃಡಯೇಂದ್ರ ಮಾ [(೩೧) ನೋ ರೀರಿಷೋ ಮಾ] ನೋ ರೀರಿಷೋ ಮಾ ಪರಾ ದಾಃ ॥ ಯೇ ನಃ ಸಪತ್ನಾ ಅಪ ತೇ ಭವಂತ್ವಿಂದ್ರಾಗ್ನಿಭ್ಯಾಮವ ಬಾಧಾಮಹೇ ತಾನ್ । ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ ಚೇತ್ತಾರಮಧಿರಾಜಮಕ್ರನ್ನ್ ॥ ಅರ್ವಾಂಚ ಮಿಂದ್ರಮಮುತೋ ಹವಾಮಹೇ ಯೋ ಗೋಜಿದ್ಧನಜಿದಶ್ವಜಿದ್ಯಃ । ಇಮಂ ನೋ ಯಜ್ಞಂ ವಿಹವೇ ಜುಷಸ್ವಾಸ್ಯ ಕುರ್ಮೋ ಹರಿವೋ ಮೇದಿನಂ ತ್ವಾ ॥ ೩೨ ॥

ವನಿಷಂತ ಪುರಸ್ತಾನ್ನಾ ತ್ರಿಚತ್ವಾರಿಗ್ಂಶಚ್ಚ ॥ ೧೪ ॥

ಅಗ್ನೇರ್ಮನ್ವೇ ಪ್ರಥಮಸ್ಯ ಪ್ರಚೇತಸೋ ಯಂ ಪಾಂಚಜನ್ಯಂ ಬಹವಃ ಸಮಿಂಧತೇ । ವಿಶ್ವಸ್ಯಾಂ ವಿಶಿ ಪ್ರವಿವಿಶಿವಾಗ್ಂಸಮೀಮಹೇ ಸ ನೋ ಮುಂಚತ್ವಗ್ಂಹಸಃ ॥ ಯಸ್ಯೇದಂ ಪ್ರಾಣನ್ನಿಮಿಷದ್ಯದೇಜತಿ ಯಸ್ಯ ಜಾತಂ ಜನಮಾನಂ ಚ ಕೇವಲಮ್ । ಸ್ತೌಮ್ಯಗ್ನಿಂ ನಾಥಿತೋ ಜೋಹವೀಮಿ ಸ ನೋ ಮುಂಚತ್ವಗ್ಂಹಸಃ ॥ ಇಂದ್ರಸ್ಯ ಮನ್ವೇ ಪ್ರಥಮಸ್ಯ ಪ್ರಚೇತಸೋ ವೃತ್ರಘ್ನಃ ಸ್ತೋಮಾ ಉಪ ಮಾಮುಪಾಗುಃ । ಯೋ ದಾಶುಷಃ ಸುಕೃತೋ ಹವಮುಪ ಗಂತಾ [ಗಂತಾ(೩೩)] ಸ ನೋ ಮುಂಚತ್ವಗ್ಂಹಸಃ ॥ ಯಃ ಸಂಗ್ರಾಮಂ ನಯತಿ ಸಂ ವಶೀ

ಯುಧೇ ಯಃ ಪ್ರುಷ್ಠಾನಿ ಸಗ್ಂಸ್ರುಜತಿ ತ್ರಯಾಣಿ । ಸ್ತೌಮೀಂದ್ರಂ ನಾಥಿತೋ ಜೋಹವೀಮಿ ಸ ನೋ ಮುಂಚತ್ವಗ್ಂಹಸಃ ॥ ಮನ್ವೇ ವಾಂ ಮಿತ್ರಾವರುಣಾ ತಸ್ಯ ವಿತ್ತಗ್ಂ ಸತ್ಯೌಜಸಾ ದೃಗ್ಂಹಣಾ ಯಂ ನುದೇಥೇ । ಯಾ ರಾಜಾನಗ್ಂ ಸರಥಂ ಯಾಥ ಉಗ್ರಾ ತಾ ನೋ ಮುಂಚತಮಾಗಸಃ ॥ ಯೋ ವಾಗ್ಂ ರಥ ಋಜುರಶ್ಮಿಃ ಸತ್ಯಧರ್ಮಾ ಮಿಥುಶ್ಚರಂತಮುಪ ಯಾತಿ ದೂಷಯನ್ನ್ । ಸ್ತೌಮಿ[(೩೪)]ಮಿತ್ರಾವರುಣಾ ನಾಥಿತೋ ಜೋಹವೀಮಿ ತೌ ನೋ ಮುಂಚತಮಾಗಸಃ । ವಾಯೋಃ ಸವಿತುರ್ವಿದಥಾನಿ ಮನ್ಮಹೇ ಯಾವಾತ್ಮನ್ವದ್ಬಿಭೃತೋ ಯೌ ಚ ರಕ್ಷತಃ । ಯೌ ವಿಶ್ವಸ್ಯ ಪರಿಭೂ ಬಭೂವತುಸ್ತೌ ನೋ ಮುಂಚತಮಾಗಸಃ ॥ ಉಪ ಶ್ರೇಷ್ಠಾ ನ ಆಶಿಷೋ ದೇವಯೋರ್ಧರ್ಮೇ ಅಸ್ಥಿರನ್ನ್ । ಸ್ತೌಮಿ ವಾಯುಗ್ಂ ಸವಿತಾರಂ ನಾಥಿತೋ ಜೋಹವೀಮಿ ತೌ ನೋ ಮುಂಚತಮಾಗಸಃ ॥ ರಥೀತಮೌ ರಥೀನಾಮಹ್ವ ಊತಯೇ ಶುಭಂ ಗಮಿಷ್ಠೌ ಸುಯಮೇಭಿರಶ್ವೈಃ । ಯಯೋ[ಯಯೋಃ(೩೫)ವಾಂ ದೇವೌ ದೇವೇ..]ರ್ವಾಂ ದೇವೌ ದೇವೇಷ್ವನಿಶಿತಮೋಜಸ್ತೌ ನೋ ಮುಂಚತಮಾಗಸಃ ॥ ಯದಯಾತಂ ವಹತುಗ್ಂ ಸೂರ್ಯಾಯಾಸ್ತ್ರಿಚಕ್ರೇಣ ಸಗ್ಂಸದಮಿಚ್ಛಮಾನೌ । ಸ್ತೌಮಿ ದೇವಾವಶ್ವಿನೌ ನಾಥಿತೋ ಜೋಹವೀಮಿ ತೌ ನೋ ಮುಂಚತಮಾಗಸಃ ॥ ಮರುತಾಂ ಮನ್ವೇ ಅಧಿ ನೋ ಬ್ರುವಂತು ಪ್ರೇಮಾಂ ವಾಚಂ ವಿಶ್ವಾಮವಂತು ವಿಶ್ವೇ । ಆಶೂನ್, ಹುವೇ ಸುಯಮಾ ನೂತಯೇ ತೇ ನೋ ಮುಂಚಂತ್ವೇನಸಃ ॥ ತಿಗ್ಮಮಾಯುಧಂ ವೀಡಿತಗ್ಂ ಸಹಸ್ವದ್ದಿವ್ಯಗ್ಂ ಶರ್ಧಃ [ಶರ್ಧಃ(೩೬)]ಪೃತನಾಸು ಜಿಷ್ಣು । ಸ್ತೌಮಿ ದೇವಾನ್ಮರುತೋ ನಾಥಿತೋ ಜೋಹವೀಮಿ

ತೇ ನೋ ಮುಂಚಂತ್ವೇನಸಃ ॥ ದೇವಾನಾಂ ಮನ್ವೇ ಅಧಿ ನೋ ಬ್ರುವಂತು ಪ್ರೇಮಾಂ ವಾಚಂ ವಿಶ್ವಾಮವಂತು ವಿಶ್ವೇ । ಆಶೂನ್, ಹುವೇ ಸುಯಮಾನೂತಯೇ ತೇ ನೋ ಮುಂಚಂತ್ವೇನಸಃ ॥ ಯದಿದಂ ಮಾಽಭಿಶೋಚತಿ ಪೌರುಷೇಯೇಣ ದೈವ್ಯೇನ । ಸ್ತೌಮಿ ವಿಶ್ವಾನ್ದೇವಾನ್ನಾಥಿತೋ ಜೋಹವೀಮಿ ತೇ ನೋ ಮುಂಚಂತ್ವೇನಸಃ ॥ ಅನುನೋಽದ್ಯಾನುಮತಿರನ್ವಿ [..ಮತಿರನು(೩೭)ಇದನುಮತೇ]ದನುಮತೇ ತ್ವಂ ವೈಶ್ವಾನರೋ ನ ಊತ್ಯಾ ಪೃಷ್ಟೋ ದಿವಿ ॥ ಯೇ ಅಪ್ರಥೇತಾಮಮಿತೇಭಿರೋಜೋಭಿರ್ಯೇ ಪ್ರತಿಷ್ಠೇ ಅಭವತಾಂ ವಸೂನಾಮ್ । ಸ್ತೌಮಿ ದ್ಯಾವಾಪೃಥಿವೀ ನಾಥಿತೋ ಜೋಹವೀಮಿ ತೇ ನೋ ಮುಂಚತಮಗ್ಂಹಸಃ ॥ ಉರ್ವೀ ರೋದಸೀ ವರಿವಃ ಕೃಣೋತಂ ಕ್ಷೇತ್ರಸ್ಯ ಪತ್ನೀ ಅಧಿ ನೋ ಬ್ರೂಯಾತಮ್ । ಸ್ತೌಮಿ ದ್ಯಾವಾಪೃಥಿವೀ ನಾಥಿತೋ ಜೋಹವೀಮಿ ತೇ ನೋ ಮುಂಚತಮಗ್ಂಹಸಃ ॥ ಯತ್ತೇ ವಯಂ ಪುರುಷತ್ರಾ ಯವಿಷ್ಠಾ ವಿದ್ವಾಗ್ಂಸಶ್ಚಕೃಮಾ ಕಚ್ಚನಾ[ಕಚ್ಚನ (೩೮)ಆಗಃ]ಗಃ । ಕೃಧೀ ಸ್ವಸ್ಮಾಗ್ಂ ಅದಿತೇರನಾಗಾ ವ್ಯೇನಾಗ್ಂಸಿ ಶಿಶ್ರಥೋ ವಿಷ್ವಗಗ್ನೇ ॥ ಯಥಾ ಹ ತದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ । ಏವಾ ತ್ವಮಸ್ಮತ್ಪ್ರ ಮುಂಚಾ ವ್ಯಗ್ಂಹಃ ಪ್ರಾತಾರ್ಯಗ್ನೇ ಪ್ರತರಾಂ ನ ಆಯುಃ ॥ ೩೯ ॥

ಗಂತಾ ದೂಷಯನ್ತ್ಸ್ತೌಮಿ ಯಯೋಃ ಶರ್ಧೋಽನುಮತಿರನು ಚನ ಚತುಸ್ತ್ರಿಗ್ಂಶಚ್ಚ ॥ 15 ॥

ಅಗ್ನಾವಿಷ್ಣೂ ಜ್ಯೈಷ್ಠ್ಯಗ್ಂ ಶಂಚೋರ್ಕ್ಚಾಶ್ಮಾಚಾಗ್ನಿಶ್ಚಾಗ್ಂಶುಶ್ಚೇಧ್ಮಶ್ಚಾಗ್ನಿಶ್ಚ ಗರ್ಭಾಶ್ಚೈಕಾ ಚ ವಾಜೋ ನೋಽಗ್ನಿಂ ಯುನಜ್ಮಿ ಮಮಾಗ್ನೇಽಗ್ನೇರ್ಮನ್ವೇ ಪಂಚದಶ ॥ 15 ॥

ಅಗ್ನಾವಿಷ್ಣೂ ಅಗ್ನಿಶ್ಚ ವಾರ್ಜೋ ನೋ ಅದಬ್ಧೋ ಗೋಪಾ ನವತ್ರಿಗ್‌ಂಶತ್ ॥ 39 ॥

॥ ಅಗ್ನಾವಿಷ್ಣೂ ಪ್ರತರಾಂ ನ ಆಯುಃ ॥

ಹರಿಃ ಓಮ್

॥ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ಚತುರ್ಥಕಾಂಡೇ ಸಪ್ತಮಃ ಪ್ರಶ್ನಃ । ಇತಿ ಚತುರ್ಥಕಾಂಡಃ ಸಮಾಪ್ತಃ ।

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಪಂಚಮಃ ಪ್ರಶ್ನಃ

### ಉಪೋದ್ಘಾತ
(ಸಾಯಣಭಾಷ್ಯ)

ಇಷ್ಟಕಾಚಿತಯಃ ಸರ್ವಾಶ್ಚತುರ್ಥೇ ಹಿ ಸಮಾಪಿತಾಃ ।
ರುದ್ರಾಧ್ಯಾಯೇ ಪಂಚಮೇ ತು ಚಿತ್ಯಾಗ್ನೌ ಹೋಮ ಉಚ್ಯತೇ ॥

ಕರ್ಮಪ್ರಕರಣೇ ಪಾಠಾತ್ಕರ್ಮಾಂಗತ್ವಮಪೀಷ್ಯತೇ ।
ಜ್ಞಾನಹೇತುತ್ವಮಪ್ಯಸ್ಯ ತಥೋಪನಿಷದೀರಿತಮ್ ॥

ಕಿಂಜಪ್ಯೇನಾಮೃತತ್ವಂ ನೋ ಬ್ರೂಹೀತ್ಯುಕ್ತೌ ಮುನಿರ್ಜಗೌ ।
ಶತರುದ್ರೀಯಕೇಣೇತಿ ಜಾಬಾಲಾ ಆಮನಂತಿ ಹಿ ॥

ಸ್ಮೃತ್ಯಾಗಮಪುರಾಣೇಷು ರುದ್ರಾಧ್ಯಾಯಪ್ರಶಂಸನಮ್ ।
ಬಹ್ವಸ್ತಿ ತದ್ವಿಸ್ತರೇಣ ರುದ್ರಕಲ್ಪೇಽಭಿಧಾಸ್ಯತೇ ॥

ಇಹ ಕರ್ಮಾಂಗತಾ ಯಾದೃಗ್ವರ್ಣಿತಾ ಬ್ರಾಹ್ಮಣೇನ ತಾಮ್ ।
ಬೋದ್ಧುಂ ಶಬ್ದಾರ್ಥಮಾತ್ರಸ್ಯ ವಿವೃತಿಃ ಕ್ರಿಯತೇ ಸ್ಫುಟಾ ॥

ಹಿಂದಿನ ನಾಲ್ಕನೆಯ ಪ್ರಪಾಠಕದೊಂದಿಗೆ ಎಲ್ಲ ಇಷ್ಟಕೆಗಳ ಚಯನವನ್ನು ಪೂರ್ಣವಾಗಿ ತಿಳಿಸಿದಂತಾಯಿತು. ಈ ರುದ್ರಾಧ್ಯಾಯವು ಚಯನಪ್ರಕರಣದ ಪಂಚಮಚಿತಿಯ ಅಗ್ನಿಯಲ್ಲಿ ಹೋಮದಲ್ಲಿ ವಿನಿಯುಕ್ತವಾಗಿದೆ. ಕರ್ಮಪ್ರಕರಣದಲ್ಲಿ ಈ ರುದ್ರಾಧ್ಯಾಯದ ಪಾಠವಿರುವುದರಿಂದ ಚಯನರೂಪಕರ್ಮಾಂಗವಾಗಿದೆ. ಈ ರುದ್ರವು ಜ್ಞಾನಕ್ಕೂ ಹೇತುವೆಂಬುದಾಗಿ ಜಾಬಾಲೋಪನಿಷತ್ತು ಮೊದಲಾದವುಗಳಲ್ಲಿ ಉಕ್ತವಾಗಿದೆ. ಯಾವುದರ ಜಪದಿಂದ ನಮಗೆ ಅಮೃತತ್ವವು ದೊರಕುವುದೆಂದು ಬ್ರಹ್ಮಚಾರಿಗಳು ಕೇಳಿಕೊಂಡಾಗ ಯಾಜ್ಞವಲ್ಕ್ಯರು [ಈ ರುದ್ರಾಧ್ಯಾಯದಿಂದ] ಶತರುದ್ರೀಯಕದಿಂದೆಂದು ತಿಳಿಸಿದರು [ಜಾ. ಉ. 3 ಖಂಡ]. ಸ್ಮೃತಿ–ಆಗಮ–ಪುರಾಣಗಳಲ್ಲಿ ರುದ್ರಾಧ್ಯಾಯಪ್ರಶಂಸೆಯು ಬಹುಲವಾಗಿದೆ. ಅದನ್ನು 'ರುದ್ರಕಲ್ಪ' ದಲ್ಲಿ ವಿಸ್ತೃತವಾಗಿ ತಿಳಿಸಲಾಗುವುದು. ಇಲ್ಲಿ ಬ್ರಾಹ್ಮಣದಿಂದ ಈ ಮಂತ್ರಗಳಿಗೆ ಕರ್ಮಾಂಗತ್ವವು ಹೇಳಲ್ಪಟ್ಟಿರುವುದರಿಂದ ಅದನ್ನನುಸರಿಸಿ, ಕಲ್ಪದಲ್ಲಿ ಹೇಳಿರುವಂತೆ ಮಂತ್ರಗಳ ಶಬ್ದಾರ್ಥವನ್ನು ತಿಳಿಯಲು

ವಿವರಣೆಯನ್ನು ನೀಡಲಾಗುವುದು.

ಈ ರುದ್ರಾಧ್ಯಾಯಕ್ಕೆ ಶ್ರೌತಕರ್ಮದಲ್ಲಿ ವಿನಿಯೋಗವಿರುವಂತೆಯೇ ಸ್ಮೃತಿ, ಇತಿಹಾಸ, ಪುರಾಣಗಳಲ್ಲಿ ಆಯುಷ್ಯ, ಆರೋಗ್ಯಾದಿಗಳಿಗಾಗಿಯೂ ವಿನಿಯೋಗವು ಉಕ್ತವಾಗಿದೆ.

ಮಂತ್ರಗಳಿಗೆ ಶ್ರೌತಕರ್ಮದಲ್ಲಿ ಮಾತ್ರ ವಿನಿಯೋಗವನ್ನು ತಿಳಿಸುವ ಕಲ್ಪವನ್ನು **'ಯಜ್ಞಸಂಯುಕ್ತಕಲ್ಪ'** ವೆಂದೂ, ಶ್ರೌತೇತರಕರ್ಮಗಳಲ್ಲಿ ವಿನಿಯೋಗವನ್ನು ತಿಳಿಸುವ ಕಲ್ಪವನ್ನು **'ಅಯಜ್ಞಸಂಯುಕ್ತಕಲ್ಪ'** ವೆಂದೂ ಹೇಳುವರು. **ಕಲ್ಪಯತಿ ಪ್ರಯೋಗಮ್ ಇತಿ ಕಲ್ಪಃ** ಎಂಬುದು ಕಲ್ಪಶಬ್ದದ ವಿವರಣೆ.

***ಕಲ್ಪಃ:-ಶತರುದ್ರೀಯಂ ಜುಹೋತಿ ಜರ್ತಿಲಯವಾಗ್ವಾ ವಾ ಗವೀಧುಕಯವಾಗ್ವಾ ವಾ ಜರ್ತಿಲೈರ್ಗವೀಧುಕಸಕ್ತುಭಿರ್ವಾ, ಕುಶಯವಸರ್ಪಿಷಾ, ಅಜಾಕ್ಷೀರೇಣ, ಮೃಗೀಕ್ಷೀರೇಣ ವಾರ್ಕಪರ್ಣೇನೋದಙ್ತಿಷ್ಠನ್ ಉತ್ತರಸ್ಯ ಪಕ್ಷಸ್ಯ, ಉತ್ತರಾಪರಸ್ಯಾಂ ಸ್ರಕ್ತ್ಯಾಂ, ವಿಕರ್ಣ್ಯಾಂ, ಸ್ವಯಮಾತೃಣ್ಣಾಯಾಂ, ಅನುಪರಿಚಾರಂ ವಾ। [ಆ. ಶ್ರೌ. ಸೂ. 17.11.3-6]**

[ಶತರುದ್ರೀಯಹೋಮದ ದ್ರವ್ಯ ಹಾಗೂ ಹೋಮ ಮಾಡಬೇಕಾದ ಸ್ಥಾನವನ್ನು ಇಲ್ಲಿ ತಿಳಿಸಿದೆ. ಜರ್ತಿಲ ಎಂದರೆ ಆರಣ್ಯತಿಲ. ಗವೀಧುಕವೆಂದರೆ ಆರಣ್ಯಗೋಧೂಮ. ಜರ್ತಿಲದ ಗಂಜಿಯಿಂದಲಾಗಲೀ, ಗವೀಧುಕದ ಗಂಜಿಯಿಂದಾಗಲೀ, ಜರ್ತಿಲದಿಂದಲಾಗಲೀ, ಗವೀಧುಕದ ಹಿಟ್ಟಿನಿಂದಾಗಲೀ, ದರ್ಭ, ಯವಧಾನ್ಯ, ತುಪ್ಪದಿಂದಾಗಲೀ, ಆಡಿನ ಹಾಲಿನಿಂದಾಗಲೀ, ಜಿಂಕೆಯ ಹಾಲಿನಿಂದಾಗಲೀ ಅರ್ಕಪರ್ಣದಿಂದ ಉತ್ತರಾಭಿಮುಖವಾಗಿ ನಿಂತುಕೊಂಡು ಅಗ್ನಿಚಿತಿಯ ಉತ್ತರದ ರೆಕ್ಕೆಯ ವಾಯವ್ಯದ ಮೂಲೆಯಲ್ಲಿ *1ವಿಕರ್ಣಿಯಲ್ಲಿ *1ಸ್ವಯಮಾತೃಣ್ಣೆಯಲ್ಲಿ ಅಥವಾ ಸುತ್ತಲೂ ಹೋಮವನ್ನು ಮಾಡಬೇಕು]

**ನಮಸ್ತೇ ರುದ್ರ ಮನ್ಯವ ಇತ್ಯೇತಾನನುವಾಕಾಂಸ್ತ್ರೇಧಂ ವಿಭಜ್ಯಾಪಿ ವಾ ಪ್ರಥಮಾದುಪಕ್ರಮ್ಯ ನಮಸ್ತಕ್ಷಭ್ಯ ಇತಿ ಜಾನುದಘ್ನೇ ಧಾರಯಮಾಣಃ ರಥಕಾರೇಭ್ಯಶ್ಚ ವಃ ಇತ್ಯುಪಕ್ರಮ್ಯ ನಮಃ ಸ್ವಾಯುಧಾಯ ಚೇತಿ ನಾಭಿದಘ್ನೇ, ಶೇಷೇಣ ಪ್ರಾಗವತಾನೇಭ್ಯ ಆಸ್ಯದಘ್ನೇ ಹುತ್ವಾ*2 ಸಹಸ್ರಾಣಿ ಸಹಸ್ರಶ ಇತಿ ದಶಾವತಾನಾನ್ ಹುತ್ವಾ ಅನ್ವಾರೋಹಾನ್ ಜುಹೋತಿ। [ಆ. ಶ್ರೌ. ಸೂ. 17.11.3.6]**

[ನಮಸ್ತೇ ರುದ್ರ ಎಂದು ಆರಂಭಗೊಳ್ಳುವ ಅನುವಾಕಗಳನ್ನು ಮೂರು ವಿಭಾಗ ಮಾಡಿ 'ನಮಸ್ತೇ ರುದ್ರ...'ಎಂದು ಪ್ರಾರಂಭಿಸಿ, (ನಮ ಆವ್ಯಾಧಿನೀಭ್ಯಃ ಎಂಬ ಅನುವಾಕದಲ್ಲಿ) ನಮಸ್ತಕ್ಷಭ್ಯಃ ಎಂದು ಹೇಳಿ ಮೊಳಕಾಲಿನ ಎತ್ತರದಲ್ಲಿ ಅರ್ಕಪರ್ಣದಿಂದ ಹೋಮ ಮಾಡಿ, ರಥಕಾರೇಭ್ಯಶ್ಚ ಎಂದು ಪ್ರಾರಂಭಿಸಿ (ನಮೋ ದುಂದುಭ್ಯಾಯ ಚ ಎಂಬ ಅನುವಾಕದಲ್ಲಿ) ನಮಃ ಸ್ವಾಯುಧಾಯ ಚ ಎಂದು ನಾಭಿಯ ಎತ್ತರದಲ್ಲಿ ಹವನವನ್ನು ಮಾಡಿ, ಸುಧನ್ವನೇ ಚ ಎಂದು ಪ್ರಾರಂಭಿಸಿ, ✦ಅವತಾನಮಂತ್ರಗಳಿಗಿಂತಲೂ ಮೊದಲು ಮುಖದ ಎತ್ತರಕ್ಕೆ ಹವನವನ್ನು ಮಾಡಿ, ಹತ್ತು ಅವತಾನಮಂತ್ರಗಳಿಂದ ಹವನವನ್ನು ಮಾಡಿ

---

* ಶ್ರೀ ಸಾಯಣರು ಉಪೋದ್ಘಾತ ಶ್ಲೋಕಗಳ ಬಳಿಕ ಆಪಸ್ತಂಬಶ್ರೌತಸೂತ್ರವನ್ನು ಉಲ್ಲೇಖಿಸಿದ್ದಾರೆ.

*1 ಕೊನೆಯ ಇಷ್ಟಕೆ.

ತಾನಾಗಿಯೇ ರಂಧ್ರವುಂಟಾಗಿರುವ ಕಲ್ಲು. ಇದು ಕೊನೆಯಲ್ಲಿ ಉಪಧಾನ ಮಾಡಲ್ಪಡುತ್ತದೆ.

***2 ಇಲ್ಲಿಯವರೆಗೆ ರುದ್ರಾಧ್ಯಾಯದ ಆಪಸ್ತಂಬೋಕ್ತ ತ್ರೇಧಾವಿಭಾಗ.**

✦ ಸಹಸ್ರಾಣಿ ಸಹಸ್ರಶಃ ಎಂಬ ಅನುವಾಕದಲ್ಲಿ ನಮೋ ರುದ್ರೇಭ್ಯಃ ಎಂಬಲ್ಲಿಯವರೆಗಿನ ಮಂತ್ರಗಳಿಗೆ **'ಅವತಾನ'** ಎಂಬ ಸಂಜ್ಞೆ.

✦ಅನ್ವಾರೋಹಗಳಿಂದ ಹೋಮವನ್ನು ಮಾಡಬೇಕು]

**ನಮೋ ರುದ್ರೇಭ್ಯೋ ಯೇ ಪೃಥಿವ್ಯಾಮಿತಿ ಜಾನುದಘ್ನೇ ಧಾರಯಮಾಣಃ ನಮೋ ರುದ್ರೇಭ್ಯೋ ಯೇಽಂತರಿಕ್ಷ ಇತಿ ನಾಭಿದಘ್ನೇ, ನಮೋ ರುದ್ರೇಭ್ಯೋ ಯೇ ದಿವೀತ್ಯಾಸ್ಯದಘ್ನೇ ಹುತ್ವಾ ಏತಾನೇವ ಯಜಮಾನಂ ವಾಚಯಿತ್ವಾ ಏತಾನೇವ ವಿಪರೀತಾನ್ ಪ್ರತ್ಯವರೋಹಾನ್ ಹುತ್ವಾ ಅಸಂಚರೇ ಪಶೂನಾಮರ್ಕಪರ್ಣಮುದಸ್ಯತಿ ಯಂ ದ್ವಿಷ್ಯಾತ್ ತಸ್ಯ ಸಂಚರೇ [ಆಪ. ಶ್ರೌ. ಸೂ. 17.11.3-6]**

[ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ...ದಧಾಮಿ ಎಂಬ ಮಂತ್ರದಿಂದ ಮೊಳಕಾಲಿನ ಎತ್ತರದಲ್ಲಿಯೂ, ನಮೋ ರುದ್ರೇಭ್ಯೋ ಯೇಽಂತರಿಕ್ಷೇ...ದಧಾಮಿ ಎಂಬ ಮಂತ್ರದಿಂದ ನಾಭಿಯಷ್ಟು ಎತ್ತರದಲ್ಲಿಯೂ, ನಮೋ ರುದ್ರೇಭ್ಯೋ ಯೇ ದಿವಿ..ದಧಾಮಿ ಎಂಬ ಮಂತ್ರದಿಂದ ಮುಖದ ಎತ್ತರಕ್ಕೂ ಇಟ್ಟುಕೊಂಡು ಅರ್ಕಪರ್ಣದಿಂದ ಹೋಮ ಮಾಡಬೇಕು. ಈ ಮಂತ್ರಗಳನ್ನು ಯಜಮಾನನು ಪಠಿಸಬೇಕು. **'ನಮೋ ರುದ್ರೇಭ್ಯಃ..ದಿವಿ, ಅಂತರಿಕ್ಷೇ, ಪೃಥಿವ್ಯಾಂ'** ಎಂದು ಪುನಃ ಹವನ ಮಾಡಬೇಕು. ಇವು ಪ್ರತ್ಯವರೋಹಗಳು. ಬಳಿಕ ಅರ್ಕಪರ್ಣವನ್ನು ಪಶುಗಳು ಸಂಚರಿಸದ ಸ್ಥಳದಲ್ಲಿ ಹಾಕಬೇಕು. ಶತ್ರುವಿದ್ದರೆ ಅವನ ಪಶುಗಳು ಸಂಚರಿಸುವ ಸ್ಥಳದಲ್ಲಿ ಹಾಕಬೇಕು.]

ಸಾಯಣಾಚಾರ್ಯರು ತಮ್ಮ ಭಾಷ್ಯದ ಉಪೋದ್ಘಾತದಲ್ಲಿ ಈ ವಿಷಯಗಳನ್ನು ತಿಳಿಸಿ ಮಂತ್ರವ್ಯಾಖ್ಯಾನವನ್ನು ಪ್ರಾರಂಭಿಸಿರುತ್ತಾರೆ.

---

✦ ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಎಂದು ಆರಂಭವಾಗಿ ಅಂತರಿಕ್ಷೇ, ದಿವಿ ಎಂಬ ಪದಗಳನ್ನು ಅನುಷಂಗ ಮಾಡಿ ಕ್ರಮವಾಗಿ ಅನ್ನಂ, ವಾತಃ, ವರ್‌ಷಮ್, ಎಂಬ ಪದಗಳನ್ನು ಸೇರಿಸಿದಾಗ ಆಗುವ ಮೂರು ಮಂತ್ರಗಳು.

## ಉಪೋದ್ಘಾತ
## (ಭಟ್ಟಭಾಸ್ಕರಭಾಷ್ಯ)

**'ನಮಸ್ತೇ ರುದ್ರ ಮನ್ಯವೇ'** ಎಂದು ಆರಂಭಿಸಿ ಇಷ್ಟಕೆಗಳ ಚಯನದಲ್ಲಿ ಶತರುದ್ರೀಯಹೋಮವಿದೆ. **'ರುದ್ರೋ ವಾ ಏಷ ಯದಗ್ನಿಃ'** [ತೈ. ಸಂ. 5.4.3] ಎಂಬ ಅನುವಾಕದಲ್ಲಿ ರುದ್ರಹೋಮದ ಬ್ರಾಹ್ಮಣವು ಹೇಳಲ್ಪಟ್ಟಿದೆ. ಈ ರುದ್ರಹೋಮದ ವಿಧಿಯು ಯಜ್ಞಕ್ಕೆ ಸಂಬಂಧಿಸಿರುವುದರಿಂದ ಈ ಕಲ್ಪವು **'ಯಜ್ಞಸಂಯುಕ್ತಕಲ್ಪ'**ವೆನಿಸಿದೆ.

ಈ ಕಲ್ಪದಂತೆ ಇನ್ನೂ ಕೆಲವು ಬ್ರಾಹ್ಮಣವಾಕ್ಯಗಳು ಹೀಗಿವೆ.

* **ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ [ತೈ. ಸಂ. 5.7.3]**
* **ಅಜಕ್ಷೀರೇಣ ಜುಹೋತಿ [ತೈ. ಸಂ. 5.4.3]**
* **ಯದ್ಗ್ರಾಮ್ಯಾಣಾಂ ಪಶೂನಾಂ ಪಯಸಾ ಜುಹುಯಾತ್ [ತೈ.ಸಂ. 5.4.3]**
* **ಅರ್ಕಪರ್ಣೇನ ಜುಹೋತಿ [ತೈ. ಸಂ. 5.4.3]**
* **ಅಂಗಿರಸಃ ಸುವರ್ಗಂ ಲೋಕಂ ಯಂತೋಽಜಾಯಾಮ್ [ತೈ. ಸಂ. 5.4.3] ಇತ್ಯಾದಿ.**

ಈ ಯಜ್ಞಸಂಯುಕ್ತಕಲ್ಪದಂತೆ ಭಟ್ಟಭಾಸ್ಕರಮಿಶ್ರರು ಬೌಧಾಯನಶ್ರೌತಸೂತ್ರವನ್ನು ಅನುಸರಿಸಿ ಪ್ರಯೋಗಕ್ರಮವನ್ನು ತಿಳಿಸಿರುತ್ತಾರೆ.

**✦ಉದಙ್ಮುಖಃ ತಿಷ್ಠನ್, ಮುಖದಘ್ನೇ ಧಾರಯನ್, ನಮಸ್ತೇ ರುದ್ರ ಮನ್ಯವೇ ಇತಿ ಪ್ರತಿಪದ್ಯ ಆಂತಮೇನಮನುವಾಕಂ ತನ್ನಿಗದ್ಯ, ದ್ವಿತೀಯತೃತೀಯೌ ಚತುರ್ಥಸ್ಯ ಯತ್ರಾಭಿಜಾನಾತಿ ನಮಃ ಕ್ಷತ್ತೃಭ್ಯಃ ಇತಿ ತತಃ ಸ್ವಾಹಾಕರೋತಿ । [ಬೋಧಾಯನ ಶ್ರೌತಸೂತ್ರ. 10.48]**

[ಕಡೆಯ ಇಷ್ಟಕೆಯಲ್ಲಿ ಶತರುದ್ರೀಯಹೋಮವನ್ನು ಮಾಡುವ ಅಧ್ವರ್ಯುವು ಉತ್ತರಾಭಿಮುಖವಾಗಿ ನಿಂತು ಮುಖದ ಎತ್ತರಕ್ಕೆ ಸಮಾನವಾಗಿ ಅರ್ಕದ ಎಲೆಯನ್ನು ಹಿಡಿದುಕೊಂಡು **'ನಮಸ್ತೇ ರುದ್ರ ಮನ್ಯವೇ'** ಎಂದು ಆರಂಭಿಸಿ ಆ ಅನುವಾಕವನ್ನು ಪೂರ್ಣವಾಗಿ ಹೇಳಿ, ಎರಡು ಮತ್ತು ಮೂರನೆಯ ಅನುವಾಕಗಳನ್ನೂ ಹೇಳಿ [ನಮ ಆವ್ಯಾಧಿನೀಭ್ಯಃ ಎಂಬಲ್ಲಿ] ನಾಲ್ಕನೆಯ ಅನುವಾಕದಲ್ಲಿ **'ನಮಃ ಕ್ಷತ್ತೃಭ್ಯಃ'** ಎಂಬುದರಿಂದ ಹೋಮವನ್ನು ಮಾಡಬೇಕು.]

**ತತಃ ಪ್ರಾಗಾವೃತ್ಯ, ನಾಭಿದಘ್ನೇ ಧಾರಯನ್, 'ಸಂಗ್ರಹೀತೃಭ್ಯಶ್ಚ ವಃ' ಇತಿ ಪ್ರತಿಪದ್ಯ ಅವಶಿಷ್ಟಮನುವಾಕಸ್ಯ ತನ್ನಿಗದ್ಯ, ಪಂಚಮಂ, ಷಷ್ಠಂ ಸಪ್ತಮಸ್ಯ ಯತ್ರಾಭಿಜಾನಾತಿ 'ನಮೋ ವರ್ಷ್ಯಾಯ ಚ' ಇತಿ ತತಃ ಸ್ವಾಹಾಕರೋತಿ । [ಬೌ. ಶ್ರೌ. ಸೂ. 10.48]**

[ಬಳಿಕ ಪೂರ್ವಕ್ಕೆ ತಿರುಗಿಕೊಂಡು ನಾಭಿಯ ಪ್ರಮಾಣದಷ್ಟು ಎತ್ತರದಲ್ಲಿ ಅರ್ಕಪರ್ಣವನ್ನು ಹಿಡಿದುಕೊಂಡು

---

✦ ತ್ರೇಧಾವಿಭಕ್ತಂ ಜುಹೋತಿ, ಇಯತ್ಯಗ್ರೇ ಜುಹೋತಿ, ಸಮಾವದ್ವೀರ್ಯಾನ್ ಕರೋತಿ, ಎಂಬ ಬ್ರಾಹ್ಮಣವಾಕ್ಯಗಳಂತೆ ಈ ಶ್ರೌತಸೂತ್ರವಿದೆ.

**'ಸಂಗ್ರಹೀತೃಭ್ಯಶ್ಚ ವಃ'** ಎಂದು ಆರಂಭಿಸಿ ಆ ಅನುವಾಕದ ಉಳಿದ ಮಂತ್ರಗಳನ್ನು ಹೇಳಿ, ಐದು ಮತ್ತು ಆರನೆಯ ಅನುವಾಕಗಳನ್ನು ಹೇಳಿ, ಏಳನೆಯ ಅನುವಾಕದಲ್ಲಿ (ನಮೋ ದುಂದುಭ್ಯಾಯ ಚ ಎಂಬಲ್ಲಿ) ನಮೋ ವರ್ಷ್ಯಾಯ ಚ ಎಂಬ ಮಂತ್ರದಿಂದ ಹೋಮ ಮಾಡಬೇಕು.]

**ತತೋ ದಕ್ಷಿಣಾವೃತ್ಯ ಜಾನುದಘ್ನೇ ಧಾರಯನ್ 'ಅವರ್ಷ್ಯಾಯ ಚ' ಇತಿ ಪ್ರತಿಪದ್ಯ ಅವಶಿಷ್ಟಮನುವಾಕಸ್ಯ ನಿಗದ್ಯ, ಅಷ್ಟಮಂ, ನವಮಂ, ದಶಮಂ ಚ ಏಕಾದಶಸ್ಯ ಯತ್ರಾಭಿಜಾನಾತಿ 'ಯ ಏತಾವಂತಶ್ಚ' ಇತಿ ತತಃ ಸ್ವಾಹಾಕರೋತಿ [ಬೌ. ಶ್ರೌ. ಸೂ. 10.48]**

[ಬಳಿಕ ದಕ್ಷಿಣಕ್ಕೆ ತಿರುಗಿಕೊಂಡು ಮೊಳಕಾಲಿನ ಪ್ರಮಾಣದ ಎತ್ತರಕ್ಕೆ ಅರ್ಕಪರ್ಣವನ್ನು ಹಿಡಿದುಕೊಂಡು **'ಅವರ್ಷ್ಯಾಯ ಚ'** ಎಂದು ಆರಂಭಿಸಿ, ಆ ಅನುವಾಕದ ಉಳಿದ ಮಂತ್ರಗಳನ್ನು ಹೇಳಿ, ಎಂಟು, ಒಂಬತ್ತು ಮತ್ತು ಹತ್ತನೆಯ ಅನುವಾಕಗಳನ್ನು ಹೇಳಿ, ಹನ್ನೊಂದನೆಯ ಅನುವಾಕದಲ್ಲಿ **'ಯ ಏತಾವಂತಶ್ಚ'** ಎಂಬ ಮಂತ್ರವನ್ನು ಹೇಳಿ ಹೋಮವನ್ನು ಮಾಡಬೇಕು.+1

**ಸಃ ಅತ ಏವ ಪ್ರತ್ಯಙ್ಙಾವೃತ್ಯ ಗುಲ್ಫದಘ್ನೇ ಧಾರಯನ್ ನಮೋ ರುದ್ರೇಭ್ಯೋ ಯೇ ಪೃಥಿವ್ಯಾಮಿತ್ಯೇತದ್ಯಜಮಾನಂ ವಾಚಯತಿ, ನಾಭಿದಘ್ನೇ ಧಾರಯನ್ 'ನಮೋ ರುದ್ರೇಭ್ಯೋ ಯೇಽಂತರಿಕ್ಷೇ' ಇತ್ಯೇತದ್ಯಜಮಾನಂ ವಾಚಯತಿ, ಗ್ರೀವದಘ್ನೇ ಧಾರಯನ್ 'ನಮೋ ರುದ್ರೇಭ್ಯೋ ಯೇ ದಿವಿ' ಇತ್ಯೇತದ್ಯಜಮಾನಂ ವಾಚಯತಿ । [ಬೌ. ಶ್ರೌ. ಸೂ. 10.48]**

[ಅಧ್ವರ್ಯುವು ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಅರ್ಕಪರ್ಣವನ್ನು ಕಾಲುಗಂಟಿನ ಪ್ರಮಾಣದ ಎತ್ತರದಲ್ಲಿ ಹಿಡಿದುಕೊಂಡು **ನಮೋ...ಪೃಥಿವ್ಯಾಂ** ಎಂದು ಯಜಮಾನನಿಂದ ಹೇಳಿಸಿ, ಹವನ ಮಾಡಬೇಕು. (ಹೀಗೆಯೇ) ಹೊಕ್ಕಳಿನ ಪ್ರಮಾಣದ ಎತ್ತರದಲ್ಲಿ ಹಿಡಿದು **'ನಮೋ..ಅಂತರಿಕ್ಷೇ'** ಎಂದು ಯಜಮಾನನಿಂದ ಹೇಳಿಸಿ ಹೋಮ ಮಾಡಬೇಕು. (ಬಳಿಕ) ಕುತ್ತಿಗೆಯ ಪ್ರಮಾಣದ ಎತ್ತರದಲ್ಲಿ ಹಿಡಿದು **'ನಮೋ..ದಿವಿ'** ಎಂದು ಯಜಮಾನನಿಂದ ಹೇಳಿಸಿ ಹೋಮ ಮಾಡಬೇಕು.]

ಈ ಮೂರು ಆಹುತಿಗಳಿಂದ ರುದ್ರಾಧ್ಯಾಯದ ಆರು ಆಹುತಿಗಳಾಗುತ್ತವೆ.

**ಏತದರ್ಕಪರ್ಣಂ ಯಂ ದ್ವೇಷ್ಟಿ ತಸ್ಯ ಪಶೂನಾಂ ಸಂಚರೇ ಪಶೂನಾಂ ನ್ಯಸ್ಯತಿ –[ಬೌ.ಶ್ರೌ.ಸೂ. 10.48]**

[ಹವನಸಾಧನವಾದ ಎಕ್ಕದ ಎಲೆಯನ್ನು ಯಾರು ಯಜಮಾನನ ದ್ವೇಷಿಯೋ ಅವನ ಪಶುಗಳು ಸಂಚರಿಸುವ ಸ್ಥಳದಲ್ಲಿ ಇಡಬೇಕು.]

ಈ ರೀತಿ ಶ್ರೌತವಿನಿಯೋಗದಂತೆ ರುದ್ರಾಧ್ಯಾಯದ ಮೂರು ಖಂಡಗಳಲ್ಲಿ ಒಂದೊಂದು ಖಂಡದಲ್ಲಿ ಅವಾಂತರ ಮಂತ್ರಗಳು 96 ಆಗುತ್ತವೆ. *

ವಾರಾಹಶ್ರೌತಸೂತ್ರಾನುಸಾರಿಯಾದ ಇನ್ನೊಂದು ಕ್ರಮದಂತೆ ರುದ್ರಾಧ್ಯಾಯದಲ್ಲಿ ತ್ರೇಧಾವಿಭಾಗವು ಇನ್ನೊಂದು ರೀತಿಯಾಗಿದೆ.

ಸಾಯಣಾಚಾರ್ಯರು ತಿಳಿಸಿರುವ ತ್ರೇಧಾವಿಭಾಗದ ಇನ್ನೊಂದು ಪಕ್ಷವಿದೆ. ಹೀಗೆ ಶ್ರೌತವಿನಿಯೋಗವನ್ನು ಅನುಸರಿಸಿದ ರುದ್ರಾಧ್ಯಾಯದ ತ್ರೇಧಾವಿಭಾಗಪಕ್ಷವು ನಾಲ್ಕು ಬಗೆಗಳಲ್ಲಿದೆ.

---

+1 ಇದು ರುದ್ರಾಧ್ಯಾಯದ ಬೋಧಾಯನೋಕ್ತ ತ್ರೇಧಾವಿಭಾಗ. **'ತಿಸ್ರ ಉತ್ತರಾ ಆಹುತೀಃ ಜುಹೋತಿ'** ಎಂಬ ವಾಕ್ಯದಂತೆ ನಮೋ ರುದ್ರೇಭ್ಯೋ... ಪೃಥಿವ್ಯಾಂ...ಅಂತರಿಕ್ಷೇ...ದಿವಿ ಎಂಬಲ್ಲಿ ಅನುಷಂಗದಿಂದ ಮೂರು ಮಂತ್ರಗಳು.

* ಕೋಷ್ಟಕವನ್ನು ನೋಡಿ ಪುಟ–೧೫.

೧) ಬೌಧಾಯನೋಕ್ತ [ಇದನ್ನೇ ಭಟ್ಟಭಾಸ್ಕರರು ತಿಳಿಸಿರುತ್ತಾರೆ.]
೨) ಆಪಸ್ತಂಬೋಕ್ತ [ಇದನ್ನು ಸಾಯಣಾಚಾರ್ಯರು ಉಲ್ಲೇಖಿಸಿದ್ದಾರೆ.]
೩) ಸಾಯಣಭಾಷ್ಯೋಕ್ತ [ಇದು ಸಾಯಣಭಾಷ್ಯದಲ್ಲಿದೆ]
೪) ವಾರಾಹಶ್ರೌತಾನುಸಾರಿಯಾದದ್ದು.

ಇವುಗಳನ್ನು ಮುಂದೆ ಕೋಷ್ಟಕದ ಮೂಲಕ ತಿಳಿಸಲಾಗಿದೆ. ಪುಟ ಸಂಖ್ಯೆ–೧೫

# ಶ್ರೀ ರುದ್ರಾಧ್ಯಾಯಭಾಷ್ಯ

## ಪೀಠಿಕೆ*1

ಕೃಷ್ಣಯಜುರ್ವೇದದ ತೈತ್ತಿರೀಯಶಾಖೆಯ ಸಂಹಿತೆಯ ನಾಲ್ಕನೆಯ ಕಾಂಡದ ಐದನೆಯ ಪ್ರಶ್ನವಾಗಿರುವ ರುದ್ರಾಧ್ಯಾಯದ ಮಹಿಮೆಯು ಶ್ರುತಿ-ಸ್ಮೃತಿ, ಇತಿಹಾಸ-ಪುರಾಣಗಳಲ್ಲಿ ವಿಶೇಷವಾಗಿ ವರ್ಣಿತವಾಗಿದೆ. ಕರ್ಮಕಾಂಡದಲ್ಲಿ ಅಗ್ನಿಚಯನದ ಶತರುದ್ರೀಯಹೋಮದಲ್ಲಿ ವಿನಿಯುಕ್ತವಾಗಿರುವ ರುದ್ರಾಧ್ಯಾಯವು ವೇದಭಾಷ್ಯಗಳಲ್ಲಿಯೂ ಹಾಗೆಯೇ ವಿವರಿಸಲ್ಪಟ್ಟಿದೆ.

ರುದ್ರಕಲ್ಪದಲ್ಲಿ ಬೇರೆ ವಿನಿಯೋಗವು ಹೇಳಲ್ಪಟ್ಟಿದೆ.

ಬೋಧಾಯನಮಹರ್ಷಿಗಳು ರುದ್ರಾಭಿಷೇಕದಲ್ಲಿ ಇದರ ವಿನಿಯೋಗವನ್ನು ತಿಳಿಸುತ್ತಾ, 'ಪಾಪಕ್ಷಯಾರ್ಥೀ ವ್ಯಾಧಿಮೋಕ್ಷಾರ್ಥೀ, ಶ್ರೀಕಾಮಃ, ಶಾಂತಿಕಾಮಃ, ಪುಷ್ಟಿಕಾಮಃ, ತುಷ್ಟಿಕಾಮಃ, ಆಯುಷ್ಯಕಾಮಃ [ಆಯುಷ್ಕಾಮಃ] ಆರೋಗ್ಯಕಾಮಃ ಏವಂ ಕುರ್ಯಾತ್' ಎಂದು ಹಲವು ಫಲಗಳಿಗಾಗಿ ಅಭಿಷೇಕವನ್ನು ಹೇಳಿರುತ್ತಾರೆ.

ಮಳೆಯು ಬರದೆ ಇದ್ದಾಗ ಮಳೆಗಾಗಿ ರುದ್ರಾಭಿಷೇಕ ಮಾಡುವ ಕ್ರಮವು ಹಿಂದಿನಿಂದಲೂ ನಡೆದು ಬಂದಿದೆ.

ರುದ್ರಾಧ್ಯಾಯದ ಜಪವನ್ನು ಪಾಪನಿವೃತ್ತಿಗಾಗಿ ಪ್ರಾಯಶ್ಚಿತ್ತರೂಪವಾಗಿ ಅನುಷ್ಠಿಸಬೇಕೆಂದು ವಿಹಿತವಾಗಿದೆ.

ಶಂಖಸ್ಮೃತಿ:- **ರಹಸಿ ಕೃತಾನಾಂ ಮಹಾಪಾತಕಾನಾಮಪಿ *2ಶತರುದ್ರೀಯಂ ಪ್ರಾಯಶ್ಚಿತ್ತಮ್ ।**
[ಗುಪ್ತವಾಗಿ ಮಾಡಿದ ಮಹಾಪಾಪಗಳಿಗೂ ಸಹ ಶತರುದ್ರೀಯವು ಪ್ರಾಯಶ್ಚಿತ್ತವಾಗಿದೆ.]

ಕೈವಲ್ಯೋಪನಿಷತ್:- **ಯಃ ಶತರುದ್ರೀಯಮಧೀತೇ-ಸೋಽಗ್ನಿಪೂತೋ ಭವತಿ, ಸ ಸುರಾಪಾನಾತ್ ಪೂತೋ ಭವತಿ, ಸ ಬ್ರಹ್ಮಹತ್ಯಾತ್ಪೂತೋ ಭವತಿ, ಸ ಸುವರ್ಣಸ್ತೇಯಾತ್ಪೂತೋ ಭವತಿ, ಸ ಕೃತ್ಯಾಕೃತ್ಯಾತ್ಪೂತೋ ಭವತಿ** [2 ಖಂಡ-1]

[ಶತರುದ್ರೀಯಜಪವನ್ನು ಮಾಡುವವನು ಅಗ್ನಿಯಲ್ಲಿನ [ವಸ್ತುವಿನಂತೆ] ಶುದ್ಧನಾಗುವನು. ಸುರಾಪಾನ, ಬ್ರಹ್ಮಹತ್ಯೆ, ಸ್ವರ್ಣಚೌರ್ಯ, ಆಭಿಚಾರಿಕಕಾರ್ಯಗಳ ಅನುಷ್ಠಾನ ಇವುಗಳಿಂದ ಉಂಟಾಗುವ ಪಾಪಗಳಿಂದ ಮುಕ್ತನಾಗುವನು.

---

*1 ಸಾಯಣಾಚಾರ್ಯರ ಭಾಷ್ಯದಲ್ಲಿ ರುದ್ರಾಧ್ಯಾಯವು ಕರ್ಮಾಂಗವಾಗಿಯೂ ಇರುವುದರಿಂದ ಮಂತ್ರಗಳ ಶಬ್ದಾರ್ಥವನ್ನು ತಿಳಿಸಲಾಗುವುದೆಂದು ಹೇಳಿ, ಶ್ರೌತವಿನಿಯೋಗವನ್ನು ಅನುಸರಿಸಿ ಆಪಸ್ತಂಬರ ಶ್ರೌತಸೂತ್ರವನ್ನು ಉಲ್ಲೇಖಿಸಲಾಗಿದೆ.

ರುದ್ರಾಧ್ಯಾಯಕ್ಕೆ ಶ್ರೌತೇತರವಿನಿಯೋಗವು ವಿಪುಲವಾಗಿರುವುದರಿಂದ ಪ್ರಸ್ತುತಸಂಪುಟದಲ್ಲಿ ಆ ವಿನಿಯೋಗಗಳನ್ನೂ ತಿಳಿಸಲಾಗಿದೆ.

ಈ ಶ್ರೌತೇತರವಿನಿಯೋಗವು ಭಟ್ಟಭಾಸ್ಕರಮಿಶ್ರರ ಭಾಷ್ಯದಲ್ಲಿ ವಿಸ್ತಾರವಾಗಿ ಈ ಪ್ರಪಾಠಕದ ಭಾಷ್ಯದಲ್ಲಿಯೇ ಹೇಳಲ್ಪಟ್ಟಿದೆ. ಈ ಶ್ರೌತೇತರವಿನಿಯೋಗವು ಉಭಯಭಾಷ್ಯಸಮ್ಮತವಾಗಿರುವುದರಿಂದ ಪ್ರಕೃತಸಂಪುಟದಲ್ಲಿ ಪೀಠಿಕೆಯಲ್ಲಿ ಅದೆಲ್ಲವನ್ನೂ ತಿಳಿಸಲಾಗಿದೆ.

*2 **ಶತರುದ್ರಾಃ=ದೇವಸ್ಯ ಇಚ್ಛಾತನುವಃ ನಾನಾಸ್ವಭಾವಾಃ ರುದ್ರಾಃ ।** ತೇ ದೇವತಾ ಅಸ್ಯ=ಶತರುದ್ರೀಯಮ್ । ಪರವಸ್ತುವು ಇಚ್ಛೆಯಿಂದ ಪರಿಗ್ರಹಿಸುವ ನಾನಾ ಸ್ವಭಾವವುಳ್ಳ ರುದ್ರರು ಶತರುದ್ರರು. ಅವರನ್ನೇ ದೇವತೆಯನ್ನಾಗಿ ಹೊಂದಿರುವ ಮಂತ್ರ.

ಶತ ಎಂಬ ಶಬ್ದಕ್ಕೆ ಅನಂತ ಎಂದರ್ಥ. **ಶತಶಬ್ದೋಽನಂತವಾಚೀ [ [ಮಹಾಭಾಷ್ಯ. ಉದ್ಯೋತ 4.2.28] ನೂರಾರು ಎಂಬಂತೆ. 'ಶತರುದ್ರಾತ್ ಘ ಚ' [ಪಾ.ಸೂ. 4.2.28 ರಲ್ಲಿ ವಾರ್ತಿಕ] ಎಂಬುದರಿಂದ 'ಘ' ಮತ್ತು 'ಛ' ಪ್ರತ್ಯಯಗಳು ವಿಧಿಸಲ್ಪಟ್ಟಿವೆ. ಶತರುದ್ರಿಯ, ಶತರುದ್ರೀಯ ಎಂಬ ಎರಡೂ ರೂಪಗಳಿವೆ.**

**ಶಾತಾತಪಃ:– ಸ್ತೇಯಂ ಕೃತ್ವಾ ಗುರುದಾರಾಂಶ್ಚ ಗತ್ವಾ ಮದ್ಯಂ ಪೀತ್ವಾ ಬ್ರಹ್ಮಹತ್ಯಾಂ ಚ ಕೃತ್ವಾ । ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ ॥**

*[ಕಳ್ಳತನ, ಗುರುಪತ್ನೀಗಮನ, ಮದ್ಯಪಾನ, ಬ್ರಹ್ಮಹತ್ಯೆಯನ್ನು ಮಾಡಿಯೂ ಭಸ್ಮವನ್ನು ಲೇಪಿಸಿಕೊಂಡು, ಭಸ್ಮದ ಹಾಸಿಗೆಯಲ್ಲಿಯೇ ಮಲಗುವ ವ್ರತವುಳ್ಳವನು ರುದ್ರಾಧ್ಯಾಯವನ್ನು ಜಪಿಸಿ ಎಲ್ಲ ಪಾಪಗಳಿಂದ ಮುಕ್ತನಾಗುವನು]

**ಯಾಜ್ಞವಲ್ಕ್ಯ:–ಸುರಾಪಃ ಸ್ವರ್ಣಹಾರೀ ಚ [ಬ್ರಾಹ್ಮಣಸ್ವರ್ಣಹಾರೀ ತು] ರುದ್ರಜಾಪೀ ಜಲೇ ಸ್ಥಿತಃ** [ಮದ್ಯಪಾನಿಯೂ, ಸ್ವರ್ಣಾಪಹಾರಿಯೂ, ಬ್ರಾಹ್ಮಣಸ್ವರ್ಣವನ್ನು ಅಪಹರಿಸಿದವನೂ ನೀರಿನಲ್ಲಿ ನಿಂತು ರುದ್ರಜಪವನ್ನು ಅನುಷ್ಠಿಸಬೇಕು.]

**ಶುಕ್ರಿಯಾರಣ್ಯಕಜಪೋ ಗಾಯತ್ರ್ಯಾಶ್ಚ ವಿಶೇಷತಃ ।**
**ಸರ್ವಪಾಪಹರಾಶ್ಚೈತೇ ರುದ್ರೈಕಾದಶಿನೀ ತಥಾ ॥**

[ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಪ್ರಕರಣ 303-308]

[ಶುಕ್ರಿಯಮಂತ್ರಗಳು, ಆರಣ್ಯಕ, ಗಾಯತ್ರೀಮಂತ್ರದ ವಿಶೇಷಜಪ, ಹಾಗೂ ರುದ್ರೈಕಾದಶಿನೀ ಇವು ಎಲ್ಲ ಪಾಪಗಳನ್ನೂ ದೂರಮಾಡತಕ್ಕವು]

**ವೇದಮೇಕಗುಣಂ ಜಪ್ತ್ವಾ ತದಹ್ನೈವ ವಿಶುಧ್ಯತಿ ।**
**ರುದ್ರೈಕಾದಶಿನೀಂ ಜಪ್ತ್ವಾ ತತ್ಕ್ಷಣಾದೇವ ಶುಧ್ಯತಿ ॥**

[ವೇದವನ್ನು ಒಂದು ಬಾರಿ ಜಪಿಸಿದರೆ ಆ ದಿನದಂದೇ ಶುದ್ಧನಾಗುವನು. ರುದ್ರೈಕಾದಶಿನಿಯನ್ನು ಜಪಿಸಿದರೆ ಆ ಕ್ಷಣದಲ್ಲಿಯೇ ಶುದ್ಧನಾಗುವನು.]

**ಏಕಾದಶಗುಣಾನ್ ವಾಪಿ ರುದ್ರಾನಾವೃತ್ಯ ಧರ್ಮವಿತ್ ।**
**ಮಹಾಪಾಪೈರಪಿ ಸ್ಪೃಷ್ಟೋ ಮುಚ್ಯತೇ ನಾತ್ರ ಸಂಶಯಃ ॥** –ಅತ್ರಿ,ಅಂಗಿರಸರು.

[ಅನುಷ್ಠೇಯಧರ್ಮವನ್ನರಿತವನು ಹನ್ನೊಂದು ಬಾರಿ ರುದ್ರಮಂತ್ರವನ್ನು ಜಪಿಸಿದರೆ, *ಮಹಾಪಾಪಗಳಿಂದ ಕೂಡಿದ್ದರೂ ಸಂದೇಹವಿಲ್ಲದೆ ಮುಕ್ತನಾಗುವನು.]

ವಾಯುವಿನಿಂದ ಹೇಳಲ್ಪಟ್ಟ ಪುರಾಣದಲ್ಲಿ:–

**ಯಶ್ಚ ರುದ್ರಾನ್ ಜಪೇನ್ನಿತ್ಯಂ ಧ್ಯಾಯಮಾನೋ ಮಹೇಶ್ವರಮ್ ।**
**ಯಶ್ಚ ಸಾಗರಪರ್ಯಂತಾಂ ಸಶೈಲವನಕಾನನಾಮ್ ॥**

**ಸರ್ವಾನ್ನಾತ್ಮಗುಣೋಪೇತಾಂ ಸುವೃಕ್ಷಜಲಶೋಭಿತಾಮ್ ।**
**ದದ್ಯಾತ್ಕಾಂಚನಸಂಯುಕ್ತಾಂ ಭೂಮಿಂ ಚೌಷಧಿಸಂಯುತಾಮ್ ॥**

---

* ಮಹಾಪಾತಕಗಳನ್ನೆಸಗುವವನೂ ರುದ್ರಜಪದಿಂದ ಶುದ್ಧನಾಗುವನು ಎಂಬ ವಚನಗಳ ತಾತ್ಪರ್ಯವನ್ನು ಗಮನಿಸಬೇಕು. ರುದ್ರಾಧ್ಯಾಯಜಪವೆಂಬ ಪರಿಹಾರವಿರುವಾಗ ಯಾವುದೇ ಪಾಪಗಳನ್ನು ಆಚರಿಸಲು ಇದು ಅನುಮತಿಯಲ್ಲ. ಮಹಾಪಾಪಗಳನ್ನೇ ದೂರ ಮಾಡುವ ಶಕ್ತಿಯು ರುದ್ರಾಧ್ಯಾಯಕ್ಕಿದೆ. ಹೀಗಾಗಿ ರುದ್ರಾಧ್ಯಾಯವು ಅತಿಪ್ರಶಸ್ತ. ಮಹಾಪಾಪಹಾರಿ ಎಂಬುದಾಗಿ ರುದ್ರಾಧ್ಯಾಯದ ಪ್ರಾಶಸ್ತ್ಯವನ್ನು ತಿಳಿಸುವುದು ಶ್ರುತಿ–ಸ್ಮೃತಿಗಳ ತಾತ್ಪರ್ಯ.

ತಸ್ಮಾದಪ್ಯಧಿಕಂ ತಸ್ಯ ಸಕೃದ್ರುದ್ರಜಪಾದ್ಭವೇತ್ ।
ಮಮಭಾವಂ ಪರಿತ್ಯಜ್ಯ ಯಸ್ತು ರುದ್ರಾನ್ ಜಪೇತ್ ಸದಾ ॥

ಸ ತೇನೈವ ಚ ದೇಹೇನ ರುದ್ರಃ ಸಂಜಾಯತೇ ಧ್ರುವಮ್ ।
ಜಪೇನಾನೇನ ವಿಪ್ರೇಂದ್ರಾ ನೃಪಾಶ್ಚಾನ್ಯೇ ದ್ವಿಜಾತಯಃ ॥

ಹಿತ್ವೈವ ಸಕಲಂ ಪಾಪಂ ಗತಾಃ ಶಿವಪುರಂ ಪುರಾ ।
ಅಹಂ ಚ ಪರಮೇಶಸ್ಯ ಸಾಮೀಪ್ಯಂ ಲಬ್ಧವಾಂಸ್ತಥಾ ॥

[ಮಹೇಶ್ವರನನ್ನು ಧ್ಯಾನಿಸುತ್ತಾ ಯಾವನು ರುದ್ರಾಧ್ಯಾಯವನ್ನು ಜಪಿಸುವನೋ, ಅವನು ಒಮ್ಮೆ ಜಪಿಸಿದ ರುದ್ರಾಧ್ಯಾಯದಿಂದ ಉಂಟಾದ ಪುಣ್ಯವು-ಸಾಗರದವರೆಗೆ ಇರುವ, ಬೆಟ್ಟಕಾಡುಗಳಿಂದ ಕೂಡಿದ ಎಲ್ಲ ಬಗೆಯ ಆಹಾರವನ್ನು ಬೆಳೆಯುವ, ವೃಕ್ಷ-ಜಲಗಳಿಂದ ಶೋಭಿತವಾದ, ಓಷಧಿಗಳಿಂದ ಕೂಡಿರುವ, ಬಂಗಾರದಿಂದ ಕೂಡಿರುವ ಭೂಮಿಯನ್ನು ದಾನ ಮಾಡಿದರೆ ಉಂಟಾಗುವ ಪುಣ್ಯವನ್ನೂ-ಮೀರುವುದು.

ನನ್ನದು ಎಂಬ ಭಾವನೆಯನ್ನು ಬಿಟ್ಟು ಎಲ್ಲವೂ ಮಹೇಶ್ವರನದು ಎಂಬ ಭಾವನೆಯಿಂದ ಯಾರು ರುದ್ರಾಧ್ಯಾಯವನ್ನು ಜಪಿಸುವನೋ ಅವನು ಅದೇ ದೇಹದಿಂದಲೇ ಸಾಧನೆಯಿಂದ ರುದ್ರನಾಗುವನು. ಈ ರುದ್ರಾಧ್ಯಾಯದ ಜಪದಿಂದ, ವಿಪ್ರಶ್ರೇಷ್ಠರೂ, ರಾಜರೂ ಪಾಪಗಳನ್ನು ಕಳೆದುಕೊಂಡು ಶಿವಪುರವನ್ನು [ಶಿವಸ್ಥಾನವನ್ನು] ಹಿಂದೆ ಸೇರಿದ್ದಾರೆ. ನಾನೂ ಸಹ [ವಾಯುದೇವ] ಹಾಗೆಯೇ ಪರಮೇಶ್ವರನ ಸಾಮೀಪ್ಯವನ್ನು ಹೊಂದಿರುವೆನು.

ಹಾಗೆಯೇ

ನಮಕಂ ಚಮಕಂ ಚೈವ ಪುರುಷಸೂಕ್ತಂ ತಥೈವ ಚ ।
ನಿತ್ಯಂ ತ್ರಯಂ ಪ್ರಯುಞ್ಜಾನೋ ಬ್ರಹ್ಮಲೋಕೇ ಮಹೀಯತೇ ॥

[ನಿತ್ಯವೂ ನಮಕವನ್ನೂ (ರುದ್ರಾಧ್ಯಾಯ), ಚಮಕ(ಚಮಕಾಧ್ಯಾಯ)ವನ್ನೂ, ಪುರುಷಸೂಕ್ತವನ್ನೂ ಪಠಿಸುವವನು ಬ್ರಹ್ಮಲೋಕದಲ್ಲಿ ಪೂಜಿತನಾಗುವನು.]

ಹಾಗೆಯೇ

ನಮಕಂ ಚಮಕಂ ಹೋತ್ರ್ಯಾನ್ ಪುರುಷಸೂಕ್ತಂ ಜಪೇತ್ಸದಾ ।
ಪ್ರವಿಶೇತ್ ಸ ಮಹಾದೇವಂ ಗೃಹಂ ಗೃಹಪತಿರ್ಯಥಾ ॥

ಯಾವಾಗಲೂ ರುದ್ರಾಧ್ಯಾಯ, ಚಮಕಾಧ್ಯಾಯ, ಪುರುಷಸೂಕ್ತ ಹಾಗೂ *ಹೋತೃಮಂತ್ರಗಳನ್ನು ಪಠಿಸುವವನು ಮನೆಯ ಯಜಮಾನನು ತನ್ನ ಮನೆಯನ್ನು ಪ್ರವೇಶಿಸುವಂತೆ ಮಹಾದೇವನನ್ನು ಸುಲಭವಾಗಿ ಸೇರುವನು.

ಭಸ್ಮದಿಗ್ಧಶರೀರಸ್ತು ಭಸ್ಮಶಾಯೀ ಜಿತೇಂದ್ರಿಯಃ ।
ಸತತಂ ರುದ್ರಜಾಪ್ಯೋಽಸೌ ಪರಾಂ ಮುಕ್ತಿಮವಾಪ್ಸ್ಯತಿ ॥

[ಶರೀರದಲ್ಲಿ ಭಸ್ಮವನ್ನು ಧರಿಸಿ, ಭಸ್ಮಶಯ್ಯೆಯಲ್ಲಿಯೇ ಮಲಗುವ ವ್ರತವಿದ್ದವನು, ಜಿತೇಂದ್ರಿಯನಾದವನು

* ತೈ. ಆರಣ್ಯಕ. 3 ನೆಯ ಪ್ರಪಾಠಕದಲ್ಲಿವೆ.

ಸತತವಾಗಿ ರುದ್ರಜಪವನ್ನು ಮಾಡುವವನಾಗಿ ಶ್ರೇಷ್ಠವಾದ ಮುಕ್ತಿಯನ್ನು ಪಡೆಯುವನು.

**ರೋಗವಾನ್ ಪಾಪವಾಂಶ್ಚೈವ ರುದ್ರಂ ಜಪ್ತ್ವಾ ಜಿತೇಂದ್ರಿಯಃ।**
**ರೋಗಾತ್ಪಾಪಾದ್ವಿನಿರ್ಮುಕ್ತೋ ಹ್ಯತುಲಂ ಸುಖಮಶ್ನುತೇ॥**

ರೋಗದಿಂದ ಪೀಡಿತನಾದವನು, ಪಾಪದಿಂದ ತುಂಬಿದವನು ಜಿತೇಂದ್ರಿಯನಾಗಿ ರುದ್ರಾಧ್ಯಾಯವನ್ನು ಜಪಿಸಿದರೆ, ಪಾಪ–ರೋಗಗಳಿಂದ ಬಿಡಲ್ಪಟ್ಟವನಾಗಿ ಅತಿಶಯಸುಖವನ್ನು ಹೊಂದುವನು.

**ಯಸ್ಯ ರುದ್ರಃ ಪ್ರಜಾಂ ಪಶೂನ್ ವಾಭಿಮನ್ಯೇತೋದಙ್ ಪರೇತ್ಯ ರುದ್ರಾನ್ ಜಪನ್ ಚರೇದಿತ್ಯಯಜ್ಞ ಸಂಯುಕ್ತಃ ಕಲ್ಪಃ।** [ಆಪ. ಶ್ರೌ. ಸೂ. 17.11.6]

ಯಾವ ಯಜಮಾನನ ಪಶುಗಳನ್ನು ರುದ್ರನು ಹಿಂಸಿಸುವನೋ [ಪಶುಗಳು ನಾಶಹೊಂದುತ್ತವೆಯೋ] ಆ ಯಜಮಾನನು ಉತ್ತರದಿಕ್ಕಿಗೆ ಹೋಗಿ ರುದ್ರಾಧ್ಯಾಯವನ್ನು ಜಪಿಸಬೇಕು. ಇದು ಅಯಜ್ಞಸಂಯುಕ್ತ ಕಲ್ಪವಾಗಿದೆ.

**ಈಶಾನಯಜ್ಞೇ ಚ**

**ಅತ್ರ ರುದ್ರಾನ್ ಜಪೇತ್ ಪ್ರಥಮೋತ್ತಮೌ ವಾ**

**[ಆಪ. ಗೃ. ಸೂ. 7 ಪಟಲ. ಖಂಡ 20 ಸೂ. 8.9]**

ಈಶಾನಬಲಿಯಲ್ಲಿ 'ನಮಸ್ತೇ ರುದ್ರ ಮನ್ಯವ' ಎಂದು ಆರಂಭವಾಗುವ ಹನ್ನೊಂದು ಅನುವಾಕಗಳನ್ನು ಅಥವಾ ಮೊದಲಿನ ಮತ್ತು ಕಡೆಯ ಅನುವಾಕಗಳನ್ನು ಜಪಿಸಬೇಕು.

ಈ ರುದ್ರಾಧ್ಯಾಯವು ಶ್ರೌತ–ಸ್ಮಾರ್ತ ಕರ್ಮಾಂಗವಾಗಿಯೂ ವಿನಿಯುಕ್ತವಾಗಿದೆ. ಪ್ರಾಯಶ್ಚಿತ್ತರೂಪವಾಗಿಯೂ ವಿನಿಯುಕ್ತವಾಗಿದೆ. ಇದೂ ಅಲ್ಲದೆ ಇದು ಜ್ಞಾನಸಾಧಕವಾಗಿಯೂ ಇರುವುದರಿಂದ ಮಾನವನ ಚತುರ್ವಿಧ ಪುರುಷಾರ್ಥಗಳಿಗೂ ಸಾಧಕವೆನಿಸಿದೆ.

ಮೋಕ್ಷಪ್ರಾಪ್ತಿಗೂ ಶ್ರೀ ರುದ್ರಾಧ್ಯಾಯವು ಸಾಧನವಾಗಿದೆಯೆಂದು ಜಾಬಾಲೋಪನಿಷತ್ತಿನಲ್ಲಿ ಹೇಳಿದೆ.

**ಅಥ ಹೈನಂ ಬ್ರಹ್ಮಚಾರಿಣಃ ಊಚುಃ ಕಿಂ ಜಪ್ಯೇನಾಮೃತತ್ವಂ ಬ್ರೂಹೀತಿ । ಸ ಹೋವಾಚ ಯಾಜ್ಞವಲ್ಕ್ಯಃ ಶತರುದ್ರೀಯೇಣೇತ್ಯೇತಾನಿ ಹ ವಾ ಅಮೃತನಾಮಧೇಯಾನ್ಯೇತೈರ್ಹ ವಾ ಅಮೃತೋ ಭವತೀತಿ।**

[ಬ್ರಹ್ಮಚಾರಿಗಳು (ತತ್ತ್ವಸಾಕ್ಷಾತ್ಕಾರಕ್ಕಾಗಿ ವ್ರತಧಾರಿಗಳಾದವರು] ಯಾವ ಜಪದಿಂದ ಅಮೃತತ್ವವನ್ನು ಹೊಂದಬಹುದೆಂದು ಹೇಳಬೇಕೆಂದು ಯಾಜ್ಞವಲ್ಕ್ಯರನ್ನು ಕೇಳಿದಾಗ ಅವರು ಶತರುದ್ರೀಯದ ಎಲ್ಲ ಶಬ್ದಗಳೂ ಪರವಸ್ತುವಿನ ನಾಮಧೇಯಗಳೆಂದು ಹೇಳಿ ಅದನ್ನು ಜಪಿಸಿದರೆ ಮೋಕ್ಷವನ್ನು ಹೊಂದುವನೆಂದು ಹೇಳಿದರು.

ರುದ್ರಾಧ್ಯಾಯದ ಮಧ್ಯಮಣಿಯಂತಿರುವ **'ನಮಃ ಶಿವಾಯ'** ಎಂಬ ಪಂಚಾಕ್ಷರೀಮಂತ್ರವು ಶ್ರೇಷ್ಠ ಜಪಸಾಧನವಾಗಿದೆ.

**ತಸ್ಮಾದವಿಮುಕ್ತಮಾಶ್ರಿತೋ ಭವತಿ, ಅತ್ಯಾಶ್ರಮೀ ಸರ್ವದಾ ಸಕೃದ್ವಾ ಜಪೇತ್। ಅನೇನ ಜ್ಞಾನಮಾಪ್ನೋತಿ ಸಂಸಾರಾರ್ಣವತಾರಕಂ, ತಸ್ಮಾದೇವಂ ವಿದಿತ್ವೈವಂ ಕೈವಲ್ಯಂ ಫಲಮಶ್ನುತೇ–**[ಕೈವಲ್ಯೋಪನಿಷತ್. 2.1]

ಈ ಶತರುದ್ರೀಯಜಪದಿಂದ ಜ್ಞಾನವನ್ನು ಆಶ್ರಯಿಸುವನು. ಜ್ಞಾನದಿಂದ ಆಶ್ರಮಧರ್ಮಗಳನ್ನು ಮೀರಿದವನು ಯಾವಾಗಲೂ ಅಥವಾ ಒಮ್ಮೆಯಾದರೂ ಜಪಿಸಬೇಕು. ಇದರಿಂದ ಭವಸಮುದ್ರವನ್ನು ದಾಟುವ ಜ್ಞಾನವನ್ನು ಹೊಂದಿ ಕೈವಲ್ಯವನ್ನು (ಮುಕ್ತಿ) ಹೊಂದುವನು.

ರುದ್ರಾಧ್ಯಾಯವನ್ನು ***ರುದ್ರೋಪನಿಷತ್** ಎಂದೂ ಕರೆದಿರುತ್ತಾರೆ. ಉಳಿದ ಉಪನಿಷತ್ತುಗಳಂತೆ ಇದು ಬ್ರಹ್ಮಪ್ರತಿಪಾದಕವೂ ಆಗಿದೆ. ಇದು ಉಪನಿಷತ್ತಾಗಿರುವುದರಿಂದಲೇ ಶ್ರುತಿಯಲ್ಲಿ ರಹಸ್ಯವಿದ್ಯೆಯನ್ನು ಹೇಳುವ ಉಪನಿಷತ್ತಿನ ಪ್ರಕರಣದಲ್ಲಿ ಇದರ ಉಲ್ಲೇಖವಿದೆ. ಯಜುರ್ವೇದದ ಎಲ್ಲ ನೂರ ಒಂದು ಶಾಖೆಗಳಲ್ಲಿಯೂ ಈ ರುದ್ರೋಪನಿಷತ್ ಹೇಳಲ್ಪಟ್ಟಿದೆ.

## ರುದ್ರಾಧ್ಯಾಯದ ತಾತ್ಪರ್ಯ

ಈ ರುದ್ರಾಧ್ಯಾಯದಿಂದ ಮುಖ್ಯವಾಗಿ ಪ್ರತಿಪಾದ್ಯವಾದುದು ಪರವಸ್ತು ಬ್ರಹ್ಮವೇ. ಬ್ರಹ್ಮನಿಗೆ ಮೂರು ರೂಪಗಳು. ಒಂದು ಕಾರ್ಯರೂಪವಾಗಿ ಎಲ್ಲಕ್ಕೂ ಉಪಾದಾನವಾಗಿ ಸರ್ವಾತ್ಮಕವಾದುದು. ಮತ್ತೊಂದು ಸೃಷ್ಟಿ-ಸ್ಥಿತಿ-ಸಂಹಾರನಿಮಿತ್ತವಾಗಿ ಪುರುಷರೂಪವಾಗಿದೆ. ಈ ಎರಡೂ ಅವಿದ್ಯೆಯಿಂದ ಕಲ್ಪಿತರೂಪವಾದುದರಿಂದ ಆವಿದ್ಯಕಗಳೆನಿಸಿವೆ. ಮೂರನೆಯ ರೂಪವಾದುದು ನಿರ್ಗುಣವೂ, ನಿರಂಜನವೂ ಆದ ಸಚ್ಚಿದಾನಂದರೂಪವಾಗಿದೆ.

**'ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ । ಸರ್ವೋ ಹ್ಯೇಷ ರುದ್ರಃ'** [ತೈ. ಆ. 10.16]

**'ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಯೋ ರುದ್ರೋ ಮಹರ್ಷಿಃ'** [ತೈ. ಆ. 10.10]

ಮುಂತಾದ ಶ್ರುತಿವಚನಗಳೂ ಇದನ್ನೇ ಹೇಳುತ್ತಿವೆ.

**ಸಂಸಾರೀ ಚಿದಚಿದ್ಭ್ಯೋಽನ್ಯಃ ಕ್ವಚಿತ್ ಕ್ವಚಿದನಾವಿಲಮ್ ।**
**ಜಯತ್ವನಾದಿನಿಧನೋ ಮಹಾದೇವೋ ಮಹಾರ್ಣವೇ ॥**

**ಮೂರ್ತ್ಯಷ್ಟಕಮಧಿಷ್ಠಾಯ ಬಿಭರ್ತೀದಂ ಚರಾಚರಮ್ ।**
**ಆತ್ಮತ್ರಯಮಧಿಷ್ಠಾಯ ಸೃಷ್ಟ್ಯಾದಿ ಪ್ರಕರೋತಿ ಸಃ ॥**

ಎಂಬ ವಚನಗಳೂ ಇದನ್ನೇ ತಿಳಿಸುತ್ತಿವೆ.

ರುದ್ರನಿಗೆ ಘೋರಾ ಹಾಗೂ ಶಿವಾ ಎಂಬ ಎರಡು ರೂಪಗಳಿವೆ. **'ತಸ್ಯೈತೇ ತನುವೌ ಘೋರಾಽನ್ಯಾ ಶಿವಾಽನ್ಯಾ'** [ತೈ. ಸಂ 5.7.3] ಎಂಬ ಶ್ರುತಿವಚನವಿದೆ. ಸಂಹಾರಕಾರ್ಯವನ್ನು ಮಾಡುವ ರೂಪವುಳ್ಳದ್ದು ಘೋರತನುಗಳು. ಅವುಗಳಿಂದ ಭಯವುಂಟಾಗದಂತೆ ಪ್ರಥಮಾನುವಾಕದಲ್ಲಿ ಆಯುಧಗಳನ್ನು ಉಪಸಂಹರಿಸಲು ನಮಸ್ಕರಿಸಿ ಪ್ರಾರ್ಥಿಸಲಾಗಿದೆ. ಹೀಗೆ ಘೋರರೂಪವನ್ನು ಉಪಸಂಹಾರಗೊಳಿಸಿ, ಎರಡನೆಯ ಅನುವಾಕದಿಂದ ಒಂಬತ್ತನೆಯ ಅನುವಾಕದ ಪೂರ್ಣ ಮಂತ್ರಗಳಿಂದ ರುದ್ರನ ವಿಶ್ವಾತ್ಮಕತೆಯನ್ನು ಸ್ತುತಿಸಿ ನಮಸ್ಕರಿಸಲಾಗಿದೆ. ಬಳಿಕ ರುದ್ರನು ಅತಿ ಪ್ರಸನ್ನನಾಗುವುದರಿಂದ ಹತ್ತು ಹಾಗೂ ಹನ್ನೊಂದನೆಯ ಅನುವಾಕಗಳಿಂದ ಅಭಯವನ್ನು ಬೇಡಿಕೊಳ್ಳಲಾಗಿದೆ. ಇದು ರುದ್ರಾಧ್ಯಾಯದ **ಮಹಾವಾಕ್ಯಾರ್ಥ ಹಾಗೂ ಮುಖ್ಯ**

* ಉಪನಿಷತ್=ವಿದ್ಯೆ=ಜ್ಞಾನ=ಬ್ರಹ್ಮಜ್ಞಾನ। ಆ ಜ್ಞಾನವೇ ಪ್ರಯೋಜನವಾಗಿರುವುದರಿಂದ ಗ್ರಂಥಕ್ಕೂ ಉಪನಿಷತ್ ಎಂದು ಹೆಸರು. ಶಾಂಕರಭಾಷ್ಯ-ತೈ. ಉ. 1

ತಾತ್ಪರ್ಯವಾಗಿದೆ.✦

## ರುದ್ರಪದದ ಅರ್ಥವಿವರಣೆ

**'ರುದ್ರ'** ಎಂಬ ಪದದ ನಿರ್ವಚನವನ್ನು ಅನೇಕ ವಿಧವಾಗಿ ಭಟ್ಟಭಾಸ್ಕರ ಮಿಶ್ರರು ತಿಳಿಸಿದ್ದಾರೆ. **'ಅಪ್ಯಕ್ಷರ ವರ್ಣಸಾಮಾನ್ಯಾನ್ನಿರ್ಬ್ರೂಯಾತ್'** ಎಂಬ ವಚನದಂತೆ ಯಾಸ್ಕರು–ವೈದಿಕಶಬ್ದಗಳ ನಿರ್ವಚನವನ್ನು ಮಾಡುವಾಗ ಯಾವ ಧಾತುವಿನಿಂದ ಆ ಶಬ್ದವು ನಿಷ್ಪನ್ನವಾಗಿದೆಯೆಂದು ತಿಳಿಸಿರುತ್ತಾರೆಯೋ, ಆ ಧಾತುವಿನ ಅರ್ಥವು ಪೂರ್ಣವಾಗಿ ಹೊಂದದಿದ್ದರೂ ನಿರ್ವಚನ ಮಾಡಬೇಕಾಗಿರುವ ಶಬ್ದದಲ್ಲಿರುವ ಅಕ್ಷರವನ್ನು ಯಾವ ಧಾತುವು ಹೊಂದಿರುತ್ತದೆಯೋ ಆ ಧಾತುವಿನಿಂದ ನಿರ್ವಚನ ಮಾಡಬೇಕೆಂದೂ, ನಿರ್ವಚನಪರಿತ್ಯಾಗವನ್ನು ಮಾಡಬಾರದೆಂದು–ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ರುದ್ರ ಎಂಬ ಶಬ್ದಕ್ಕೆ ಈ ಕೆಳಗಿನ ನಿರ್ವಚನಗಳು ಇವೆ.

೧) **ಸರ್ವಮ್ ಅಂತಕಾಲೇ ರೋದಯತಿ ಇತಿ ರುದ್ರಃ**–ಪ್ರಳಯಕಾಲದಲ್ಲಿ ಎಲ್ಲರನ್ನೂ ಅಳುವಂತೆ ಮಾಡುವವನು.

೨) **ರುದಮ್**=ಸಂಸಾರದುಃಖಂ **ದ್ರಾವಯತಿ** ಇತಿ ರುದ್ರಃ– ಸಂಸಾರದುಃಖವನ್ನು ದೂರಮಾಡುವವನು.

೩) **ರುತಿಮ್**=ಶಬ್ದಮ್ ವೇದಾತ್ಮಾನಂ ಬ್ರಹ್ಮಣೇ **ದದಾತಿ** ಇತಿ ರುದ್ರಃ– ಸೃಷ್ಟಿಯ ಆದಿಯಲ್ಲಿ ವೇದಗಳನ್ನು ಬ್ರಹ್ಮನಿಗೆ ಬೋಧಿಸುವವನು.

೪) **ರುಕ್=ತೇಜಃ** । ಭೂಮ್ನಿ ನಿತ್ಯಯೋಗೇ ರಪ್ರತ್ಯಯಃ । ವರ್ಣವ್ಯಾವೃತ್ತ್ಯಾ **ರುದ್ರಃ । ರುಕ್+ರ/ರುದ್+ರ =ರುದ್ರಃ=ಯಾವಾಗಲೂ ಅಧಿಕ** ತೇಜಸ್ವಿಯಾದವನು.

೫) **ರುತ್ಯಾ**=ಪ್ರಣವರೂಪಯಾ ಸ್ವಾತ್ಮಾನಂ ಪ್ರಾಪಯತಿ ಇತಿ **ರುದ್ರಃ**=ಪ್ರಣವಶಬ್ದದಿಂದ ತನ್ನ ಸ್ವರೂಪವನ್ನು ತಿಳಿಸಿಕೊಡುವವನು.

೬) **ರೋಧಿಕಾ**=ಬಂಧಿಕಾ=ಮೋಹಿಕಾ ವಾ ಶಕ್ತಿಃ ತದ್ವಾನ್, **ತಸ್ಯಾಃ ದ್ರಾವಯಿತಾ** ವಾ ಭಕ್ತೇಭ್ಯಃ ಇತಿ ರುದ್ರಃ–ಬಂಧಿಸುವ ಮತ್ತು ಮೋಹಗೊಳಿಸುವ ಶಕ್ತಿಯುಳ್ಳವನು ಅಥವಾ ಭಕ್ತರ ಬಳಿಯಿಂದ ಆ ಶಕ್ತಿಗಳನ್ನು ದೂರ ಮಾಡುವವನು.

೭) **ರುತ್ಯಾ**=ವೇದರೂಪಯಾ ಧರ್ಮಾದೀನ್ **ದ್ರಾವಯತಿ=ಬೋಧಯತಿ** ಇತಿ **ರುದ್ರಃ**=ವೇದಶಬ್ದಗಳಿಂದ ತನ್ನ ಹಾಗೂ ಧರ್ಮದ ಸ್ವರೂಪವನ್ನು ಭಕ್ತರಿಗೆ ತಿಳಿಸಿಕೊಡುವವನು.

೮) **ರುತಿಮ್**=ಶಬ್ದಮ್ ರಾತಿ=**ದದಾತಿ** ಇತಿ ಪ್ರಾಣಃ ರುದ್ರಃ–ಶಬ್ದವನ್ನು ಉಂಟುಮಾಡಿಕೊಡುವ ಪ್ರಾಣ ವಾಯುಸ್ವರೂಪನು. ಹೀಗೆ ಸರ್ವಸ್ವರೂಪನಾದ ಪರಮಾತ್ಮನನ್ನು ರುದ್ರಶಬ್ದವು ಬಗೆಬಗೆಯಾಗಿ ತಿಳಿಸುತ್ತದೆ.

---

✦ ಕಾಳಿದಾಸಮಹಾಕವಿಯ **'ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ'(ವಿಕ್ರಮೋರ್ವಶೀಯ ಮಂಗಲಪದ್ಯ) 'ನ ಸಂತಿ ಯಾಥಾರ್ಥ್ಯವಿದಃ ಪಿನಾಕಿನಃ'** [ಕುಮಾರಸಂಭವ ಮಹಾಕಾವ್ಯ ಸರ್ಗ–5] ಎಂಬ ವಚನಗಳು–ರುದ್ರನ ಅನಂತಲೀಲೆಗಳನ್ನು ಯಾರೂ ಅರಿಯಲಾರರು, ಸ್ತುತಿಸುವವರಿಗೆ ಅನಂತ ಫಲದಾತೃವಾದರೂ ತಾನು ಚರ್ಮಾಂಬರನಾಗಿರುವ–ರುದ್ರನ ತತ್ತ್ವವು ದುರ್ಜ್ಞೇಯವೆಂದು ತಿಳಿಸುತ್ತಿವೆ. ಶತರುದ್ರೀಯದ ಮಹಿಮೆಯನ್ನು ಇದರಿಂದ ತಿಳಿಯಬಹುದು.

## ಶಿವಶಬ್ದದ ನಿರ್ವಚನ

1) ಹದಿನಾರು ಬಗೆಯ ಶಿವಗುಣಗಳುಳ್ಳವನು. ಆ ಹದಿನಾರು ಶಿವಗುಣಗಳು ಹೀಗಿವೆ.

ಹತ್ತು ಅವ್ಯಯಗಳು ಹಾಗೂ ಷಡಂಗಗಳೆಂಬ ಆರು ಅಂಗಗಳು.

೧) ಜ್ಞಾನ ೨) ವೈರಾಗ್ಯ ೩) ಐಶ್ವರ್ಯ ೪)ತಪಸ್ಸು ೫)ಸತ್ಯ ೬) ಕ್ಷಮೆ ೭) ಧೃತಿ ೮) ಸ್ರಷ್ಟೃತ್ವ ೯) ಆತ್ಮಜ್ಞಾನ ೧೦) ಅಧಿಷ್ಠಾತೃತ್ವ- **ಇವು ಹತ್ತುಅವ್ಯಯಗಳು.**

೧) ಸರ್ವಜ್ಞತ್ವ ೨) ತೃಪ್ತಿ ೩) ಅನಾದಿಜ್ಞಾನ ೪) ಸ್ವಾತಂತ್ರ್ಯ ೫) ಅಲುಪ್ತಶಕ್ತಿ ೬) ಅನಂತಶಕ್ತಿ **ಇವು ಷಡಂಗಗಳು.** ಒಟ್ಟು ಹದಿನಾರು ಶಿವಗುಣಗಳುಳ್ಳವನು ಶಿವ.

2) ಮೂರು ಮಲಗಳು ಇಲ್ಲದವನು.

*ಆಣವ ✦ಕಾರ್ಮಣ ✦ಮಾಯೀಯಗಳೆಂಬ ಮೂರು ಮಲ(ದೋಷ)ಗಳು ಇಲ್ಲದವನು.

ಅವಿದ್ಯೆ, ಕರ್ಮವಾಸನೆ ಹಾಗೂ ಆವರಣಗಳೆಂಬ ಮೂರು ಮಲರಹಿತನು.

3) ಜಗತ್ತೆಲ್ಲವೂ ಆಧಾರವಾಗಿ ಮಾಡಿಕೊಂಡಿರುವವನು/ಜಗದಾಧಾರ.

4) ಲೋಕಹಿತವನ್ನು ಬಯಸುವವನು.

5) ಸಕಲರಿಗೂ ಮಂಗಲವನ್ನುಂಟುಮಾಡುವವನು.

ಹೀಗೆ **ಶಿವಶಬ್ದ**ದ ನಿರ್ವಚನವಿದೆ.

## ಶಿವಪಂಚಾಕ್ಷರೀಮಂತ್ರ

ಈ ರುದ್ರಾಧ್ಯಾಯದ ಮಧ್ಯದಲ್ಲಿ ಮಂತ್ರಗಳ ಮಾಲೆಯಲ್ಲಿ ಮಧ್ಯಮಣಿಯಂತೆ **'ನಮಃ ಸೋಮಾಯ ಚ'** ಎಂಬ ಎಂಟನೆಯ ಅನುವಾಕದಲ್ಲಿ **'ನಮಃ ಶಿವಾಯ'** ಎಂಬ ಮಂತ್ರವು ಪಠಿತವಾಗಿದೆ.

ಈ ಶಿವಪಂಚಾಕ್ಷರೀಮಂತ್ರವು ಅತಿಮಹಿಮೆಯುಳ್ಳದ್ದು ಎಂದು ಹೇಳಬೇಕಾಗಿಲ್ಲ.

## ರುದ್ರಾಧ್ಯಾಯದ ಋಷಿ, ದೇವತೆ, ಛಂದಸ್ಸುಗಳು

ಈ ರುದ್ರಾಧ್ಯಾಯಕ್ಕೆ ಭಗವಂತನೇ ಋಷಿ. ಆಗ್ನೇಯಕಾಂಡದಲ್ಲಿ ಈ ಅಧ್ಯಾಯಕ್ಕೆ ಅಗ್ನಿಯು ಕಾಂಡರ್ಷಿ. ಮಹಾವಿರಾಟ್ ಛಂದಸ್ಸು. ಶಂಭುವೇ ದೇವತೆ.

ಭಟ್ಟಭಾಸ್ಕರಮಿಶ್ರರ ಭಾಷ್ಯದಲ್ಲಿ ಪ್ರತ್ಯೇಕ ಮಂತ್ರಗಳಿಗೂ ಋಷಿ, ದೇವತೆ, ಛಂದಸ್ಸು ಹಾಗೂ ವಿನಿಯೋಗವನ್ನು ಅಯಜ್ಞಸಂಯುಕ್ತಕಲ್ಪದಂತೆ ವಿವರಿಸಲಾಗಿದೆ. ಅದನ್ನು ಆಯಾ ಮಂತ್ರದ ವಿವರಣೆಯಲ್ಲಿಯೇ ಪ್ರತ್ಯೇಕ ನೀಡಲಾಗುವುದು.

---

* ಚೈತನ್ಯಸ್ವರೂಪನಾದ ಆತ್ಮನಲ್ಲಿ ಆತ್ಮನೆಂಬ ಅರಿವು ಇಲ್ಲದಿರುವುದು ಮತ್ತು ಆತ್ಮವಲ್ಲದ ದೇಹದಲ್ಲಿ ಆತ್ಮನೆಂಬ ತಿಳುವಳಿಕೆ. ಇವೆರಡೂ ಸೇರಿ **ಆಣವಮಲ** ಎನ್ನಿಸುತ್ತದೆ.

✦ ವಿಹಿತ ಹಾಗೂ ನಿಷಿದ್ಧಕರ್ಮಗಳಿಂದ ಶರೀರಪ್ರಾಪ್ತಿಯನ್ನುಂಟುಮಾಡುವುದು ಕರ್ಮ. ಅದು ಪುಣ್ಯ-ಪಾಪರೂಪವಾಗಿರುತ್ತದೆ. ಇವೆರಡೂ ಸೇರಿ **ಕಾರ್ಮಣಮಲ** ಎನಿಸುವುದು.

✦ ಒಂದೇ ಆತ್ಮನಲ್ಲಿ ನಾನಾ[ಅನೇಕ] ಎಂಬ ಬುದ್ಧಿ ಬಂದಿರುವುದು ಮಾಯೆಯಿಂದ. ಇದು **ಮಾಯೀಯ ಮಲ.**

**-ಸೌಭಾಗ್ಯಭಾಸ್ಕರ** [ಪಶುಪಾಶವಿಮೋಚಿನೀನಾಮದ ಭಾಷ್ಯದಲ್ಲಿ]

# ರುದ್ರಾಧ್ಯಾಯ
## ಶ್ರೌತವಿನಿಯೋಗ
## ತ್ರೇಧಾವಿಭಾಗದ ಕೋಷ್ಟಕ

ರುದ್ರಾಧ್ಯಾಯದ ಶ್ರೌತವಿನಿಯೋಗದಲ್ಲಿ **'ತ್ರೇಧಾವಿಭಕ್ತಂ ಜುಹೋತಿ'** ಎಂದು ಅಧ್ಯಾಯವನ್ನು ಮೂರು ವಿಭಾಗ ಮಾಡಿ ಶತರುದ್ರೀಯಹವನದ ಅನುಷ್ಠಾನವು ಉಕ್ತವಾಗಿದೆ. 'ನಮೋ ರುದ್ರೇಭ್ಯಃ' ಎಂದು ಆರಂಭವಾಗುವ ಅಂತಿಮಮಂತ್ರಗಳು ಈ ತ್ರೇಧಾವಿಭಾಗದಲ್ಲಿ ಸೇರುವುದಿಲ್ಲ ಅವು ಅನ್ವಾರೋಹ-ಪ್ರತ್ಯವರೋಹಗಳು.

ನಾಲ್ಕು ರೀತಿಯ ವಿಭಾಗಕ್ರಮವನ್ನು ಕೋಷ್ಟಕದ ಮೂಲಕ ತಿಳಿಸಲಾಗಿದೆ.

* ನಾಲ್ಕು ರೀತಿಯ ತ್ರೇಧಾವಿಭಾಗದಲ್ಲಿಯೂ 'ನಮೋ ರುದ್ರೇಭ್ಯಃ' ಎಂದು ಆರಂಭವಾಗುವ ಅಧ್ಯಾಯದ ಕಡೆಯ ಮೂರು ಮಂತ್ರಗಳು ತ್ರೇಧಾವಿಭಾಗಕ್ಕೆ ಒಳಪಡುವುದಿಲ್ಲ.

* ಶ್ರೌತವಿನಿಯೋಗದಲ್ಲಿ ಅನುವಾಕಗಳ ಮೂರು ಸಮೂಹವು ಮೂರು ಮಂತ್ರಗಳೆಂದು ಪರಿಗಣಿತವಾಗುತ್ತವೆ.

ನಾಲ್ಕುರೀತಿಯ ತ್ರೇಧಾವಿಭಾಗದಲ್ಲಿ ಒಳಪಡುವ ಮಂತ್ರಗಳ ಒಟ್ಟು ಸಂಖ್ಯೆಯು ಹೀಗಿದೆ.

**೧) ಭಟ್ಟಭಾಸ್ಕರಭಾಷ್ಯೋಕ್ತ/ಬೋಧಾಯನೋಕ್ತ-288**

**೨) ಆಪಸ್ತಂಬೋಕ್ತಃ-278**

**೩) ಸಾಯಣಭಾಷ್ಯೋಕ್ತಃ-288**

**೪) ವರಾಹಶ್ರೌತಾನುಸಾರಿ(ವರಾಹಶ್ರೌತಸೂತ್ರ)-288**

* ಅನುವಾಕದಲ್ಲಿರುವ ಮಂತ್ರಗಳ ಪ್ರತ್ಯೇಕಸಂಖ್ಯೆಯನ್ನು ಕೋಷ್ಟಕದಲ್ಲಿ ನೀಡಿದೆ.

* ಶ್ರೌತೇತರವಿನಿಯೋಗವಾದ ರುದ್ರಹೋಮದಲ್ಲಿ 1, 3, 6, 16, 48, 169 [ಏಕಧಾ, ತ್ರೇಧಾ, ಷೋಢಾ, ಷೋಡಶಧಾ, ಅಷ್ಟಾಚತ್ವಾರಿಂಶದ್ಧಾ, ಏಕೋನಸಪ್ತತ್ಯುತ್ತರಶತಧಾ- ಈ ರೀತಿ ಮಂತ್ರವಿಭಾಗವಿದೆ. ಇದನ್ನು ಅಯಜ್ಞಸಂಯುಕ್ತ ಕಲ್ಪದಂತೆ ಪ್ರತ್ಯೇಕ ತಿಳಿಸಲಾಗುವುದು.

# ರುದ್ರಾಧ್ಯಾಯಮಂತ್ರವಿಭಾಗ (ತ್ರೇಧಾ-ಶ್ರೌತ)
# (ಶತರುದ್ರೀಯಹೋಮ)

## 1. ಭಟ್ಟಭಾಸ್ಕರಭಾಷ್ಯೋಕ್ತ*/ಬೋಧಾಯನೋಕ್ತ

| I | | II | | III | |
|---|---|---|---|---|---|
| ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು |
| ೧. ನಮಸ್ತೇ ರುದ್ರ | 15 | ಸಂಗ್ರಹೀತೃಭ್ಯಃ... ಶ್ವಪತಿಭ್ಯಶ್ಚ ವೋ ನಮಃ | 13 | ಅವಷ್ಯಾರ್ಯ ಚ... ವಾಸ್ತುಪಾಯ ಚ | 9 |
| ೨. ನಮೋ ಹಿರಣ್ಯಬಾಹವೇ | 26+ | ೫) ನಮೋ ಭವಾಯ ಚ | 30 | ೮)ನಮಃ ಸೋಮಾಯ ಚ | 32+ |
| ೩. ನಮಃ ಸಹಮಾನಾಯ | 34+ | ೬)ನಮೋ ಜ್ಯೇಷ್ಠಾಯ ಚ | 30 | ೯) ನಮ ಇರಿಣ್ಯಾಯ ಚ | 33 |
| ೪. ನಮ ಆವ್ಯಾಧಿನೀಭ್ಯಃ (ನಮಃ ಕ್ಷತ್ತೃಭ್ಯಃ) ಮಂತ್ರದವರೆಗೆ | 21+ | ೭)ನಮೋ ದುಂದುಭ್ಯಾಯ ಚ (ನಮೋ ವರ್ಷ್ಯಾಯ ಚ) ಮಂತ್ರದವರೆಗೆ | 23 | ೧೦) ದ್ರಾಪೇ ಅಂಧಸಃ<br>೧೧) ಸಹಸ್ರಾಣಿ ಸಹಸ್ರಶಃ (ನಮೋ ರುದ್ರೇಭ್ಯಃ) ಮಂತ್ರದವರೆಗೆ | 12<br>10 |
| | 96 | | 96 | | 96 |

* ಈ ವಿಭಾಗವನ್ನು ಭಟ್ಟಭಾಸ್ಕರಮಿಶ್ರರು ತಿಳಿಸಿದ್ದಾರೆ. ಇದನ್ನು ಇದೇ ಸಂಪುಟದ ೪ನೆಯ ಪುಟದಲ್ಲಿ ತಿಳಿಸಲಾಗಿದೆ. ಇದು ಬೋಧಾಯನ ಶ್ರೌತಸೂತ್ರವನ್ನು ಅನುಸರಿಸಿದೆ. (10.48)ಈ ವಿವರಣೆಯನ್ನು ತೈ. ಸಂ. 5.4.3ರಲ್ಲಿಯೂ ಮಿಶ್ರರು ವಿವರಿಸಿದ್ದಾರೆ.

✦ ಯಾಸ್ಕಾಚಾರ್ಯರ ಮತ. ಪುಟಸಂಖ್ಯೆ...೩೯. ಇದೇ ಸಂಪುಟದ ಎರಡನೆಯ ಅನುವಾಕದ ಪೀಠಿಕೆಯಲ್ಲಿದೆ.

✦ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಎಂಬುದೂ, ನಮಸ್ತಾರಾಯ ಎಂಬುದೂ ಒಂದೊಂದು. ಉಳಿದವು ಎರೆಡೆರಡು.

# ರುದ್ರಾಧ್ಯಾಯಮಂತ್ರವಿಭಾಗ (ತ್ರೇಧಾ-ಶ್ರೌತ)
## ಶತರುದ್ರೀಯಹೋಮ
## 2. ಆಪಸ್ತಂಬೋಕ್ತ*

| I | | II | | III | |
|---|---|---|---|---|---|
| ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು |
| ೧. ನಮಸ್ತೇ ರುದ್ರ | 15 | ರಥಕಾರೇಭ್ಯಶ್ಚ... ಶ್ವಪತಿಭ್ಯಶ್ಚ ವೋ ನಮಃ | 11 | ಸುಧನ್ವನೇ ಚ... ವಾಸ್ತುಪಾಯ ಚ | 21 |
| ೨. ನಮೋ ಹಿರಣ್ಯಬಾಹವೇ | 26 | ೫) ನಮೋ ಭವಾಯ ಚ | 30 | ೮)ನಮಃ ಸೋಮಾಯ ಚ | 32 |
| ೩. ನಮಃ ಸಹಮಾನಾಯ | 34 | ೬)ನಮೋ ಜ್ಯೇಷ್ಠಾಯ ಚ | 30 | ೯) ನಮ ಇರಿಣ್ಯಾಯ ಚ | 33 |
| ೪. ನಮ ಆವ್ಯಾಧಿನೀಭ್ಯಃ (ನಮಸ್ತಕ್ಷಭ್ಯಃ) ಮಂತ್ರದವರೆಗೆ | 23 | ೭)ನಮೋ ದುಂದುಭ್ಯಾಯ ಚ (ನಮಃ ಸ್ವಾಯುಧಾಯ ಚ) ಮಂತ್ರದವರೆಗೆ | 11 | ೧೦) ದ್ರಾಪೇ ಅಂಧಸಃ | 12+ |
| | 98 | | 82 | | 98 |

* ಈ ವಿಭಾಗವನ್ನು ಸಾಯಣಭಾಷ್ಯದಲ್ಲಿ ವಿವರಿಸಿದ್ದಾರೆ. ಇದನ್ನು ಈ ಸಂಪುಟದ ೨ ಪುಟದಲ್ಲಿ ತಿಳಿಸಲಾಗಿದೆ. (ಆಪ. ಶ್ರೌ. ಸೂ. 17.11.3.6)

✦ ಆಪಸ್ತಂಬೋಕ್ತ ತ್ರೇಧಾವಿಭಾಗವು ಈ ಅನುವಾಕವು ಮುಗಿಯುವವರೆಗೆ ಮಾತ್ರ. ಸಹಸ್ರಾಣಿ ಸಹಸ್ರಶಃ...ನಮೋ ರುದ್ರೇಭ್ಯಃ...ದಧಾಮಿ ಮಂತ್ರದವರೆಗೆ ಬೇರೆ ವಿನಿಯೋಗವಿದೆ. ಪುಟಸಂಖ್ಯೆ...೨

# ರುದ್ರಾಧ್ಯಾಯಮಂತ್ರವಿಭಾಗ (ತ್ರೇಧಾ-ಶ್ರೌತ)
## ಶತರುದ್ರೀಯಹೋಮ
### 3. ಸಾಯಣಭಾಷ್ಯೋಕ್ತ*

| I | | II | | III | |
|---|---|---|---|---|---|
| ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು |
| ೧. ನಮಸ್ತೇ ರುದ್ರ | 15 | ನಮೋ ಅಶ್ವೇಭ್ಯೋ...ವೋ ನಮಃ | 2 | ನಮಃ ಪ್ರತರಣಾಯ ಚ.. ಪ್ರವಾಹ್ಯಾಯ ಚ। | 8 |
| ೨. ನಮೋ ಹಿರಣ್ಯಬಾಹವೇ | 26 | ೪) ನಮ ಆವ್ಯಾಧಿನೀಭ್ಯಃ..ನಮಃ | 34 | ೯)ನಮ ಇರಿಣ್ಯಾಯ ಚ | 33 |
| ೩. ನಮಃ ಸಹಮಾನಾಯ (ಸಭಾಪತಿಭ್ಯಶ್ಚ ವೋ ನಮಃ) ಮಂತ್ರದವರೆಗೆ | 32 | ೫) ನಮೋ ಭವಾಯ ಚ | 30 | ೧೦)ದ್ರಾಪೇ ಅಂಧಸಃ | 12 |
| | | ೬) ನಮೋ ಜ್ಯೇಷ್ಠಾಯ ಚ | 30 | ೧೧)ಸಹಸ್ರಾಣಿ ಸಹಸ್ರಶಃ (...ವಿತಸ್ಥಿರೇ ತೇಷಾಗ್ಂ..ತನ್ಮಸಿ ಎಂಬಲ್ಲಿಯವರೆಗೆ) | 10 |
| | | ೭) ನಮೋ ದುಂದುಭ್ಯಾಯ ಚ | 32 | | |
| | | ೮) ನಮಃ ಸೋಮಾಯ ಚ (ಆವಾರ್ಯಾಯ ಚ) ಮಂತ್ರದವರೆಗೆ | 24 | | |
| | 73 | | 152 | | 63 |

* ಇದನ್ನು ಶ್ರೀ ಸಾಯಣಾಚಾರ್ಯರು ರುದ್ರಾಧ್ಯಾಯದ ಅಂತ್ಯದಲ್ಲಿ ಭಾಷ್ಯದಲ್ಲಿ ತಿಳಿಸಿದ್ದಾರೆ. ಇದು ಯಾವ ಶ್ರೌತ ಸೂತ್ರಾನುಸಾರಿ ಎಂಬುದನ್ನು ತಿಳಿಸಿಲ್ಲ.

# ರುದ್ರಾಧ್ಯಾಯಮಂತ್ರವಿಭಾಗ (ತ್ರೇಧಾ–ಶ್ರೌತ)
## ಶತರುದ್ರೀಯಹೋಮ

## 4. ವಾರಾಹಶ್ರೌತಸೂತ್ರಾನುಸಾರಿ.

| I | | II | | III | |
|---|---|---|---|---|---|
| ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು | ಅನುವಾಕ | ಮಂತ್ರಗಳು |
| ೧) ನಮಸ್ತೇ ರುದ್ರ | 15 | ೪. ನಮಃ ಕ್ಷತ್ತೃಭ್ಯಃ.. ಶ್ವಪತಿಭ್ಯಶ್ಚ ವೋ ನಮಃ | 14 | ನಮ ಈಧ್ರಿಯಾಯ... ವಾಸ್ತುಪಾಯ ಚ | 6 |
| ೨) ನಮೋ ಹಿರಣ್ಯಬಾಹವೇ | 26 | ೫) ನಮೋ ಭವಾಯ ಚ | 30 | ೮)ನಮಸ್ಸೋಮಾಯ | 32 |
| ೩. ನಮಃ ಸಹಮಾನಾಯ | 34 | ೬) ನಮೋ ಜ್ಯೇಷ್ಠಾಯ ಚ | 30 | ೯)ನಮ ಇರಿಣ್ಯಾಯ ಚ | 33 |
| ೪) ನಮ ಆವ್ಯಾಧಿನೀಭ್ಯಃ.. (ಸೇನಾನಿಭ್ಯಶ್ಚ ವೋ ನಮಃ) ಮಂತ್ರದವರೆಗೆ | 20 | ೭) ನಮೋ ದುಂದುಭ್ಯಾಯ ಚ (ವಿದ್ಯುತ್ಯಾಯ ಚ) ಮಂತ್ರದವರೆಗೆ | 26 | ೧೦)ದ್ರಾಪೇ ಅಂಧಸಃ | 12 |
| | | | | ೧೧)ಸಹಸ್ರಾಣಿ ಸಹಸ್ರಶಃ (...ವಿತಸ್ಥಿರೇ ತೇಷಾಗ್ಂ..ತನ್ಮಸಿ ಎಂಬಲ್ಲಿಯವರೆಗೆ) | 10 |
| | 95 | | 100 | | 93 |

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಪಂಚಮಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

**ನಮಸ್ತೇ ರುದ್ರ ಮನ್ಯವ ಉತೋ ತ ಇಷವೇ ನಮಃ ।**

**ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ ॥**

---

ನಮಃ । ತೇ । ರುದ್ರ । ಮನ್ಯವೇ । ಉತೋ ಇತಿ । ತೇ । ಇಷವೇ । ನಮಃ ॥ ನಮಃ । ತೇ । ಅಸ್ತು । ಧನ್ವನೇ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ಉತ । ತೇ । ನಮಃ ॥

---

| ಮಂತ್ರ | ವಿನಿಯೋಗ |
| --- | --- |
| ನಮಸ್ತೇ...ತೇ ನಮಃ ॥ | ಅಗ್ನಿಚಯನದಲ್ಲಿ *1ಶತರುದ್ರೀಯಹೋಮವನ್ನು ಅನುಷ್ಠಿಸಲು/ ರುದ್ರನ ಕೋಪವನ್ನು ಹೋಗಲಾಡಿಸಲು ಮೊದಲನೆಯ ಪ್ರಾರ್ಥನಾ ಮಂತ್ರ. |

ಪದಶಃ ಅರ್ಥ– ಸಾ. ಭಾ.

🔔 **ರುದ್ರ**=ಓ ರುದ್ರದೇವನೇ! **ತೇ**=[ಧರ್ಮವಿರೋಧಿಗಳ ವಿಷಯದಲ್ಲಿರುವ] ನಿನ್ನ; **ಮನ್ಯವೇ**= ಕೋಪಕ್ಕೆ; **ನಮಃ**=ನಮಸ್ಕಾರ; [ನಮಸ್ಕರಿಸುತ್ತೇನೆ.] **ಉತೋ**=ಮತ್ತು; **ತೇ**=ನಿನ್ನ; **ಇಷವೇ**=ಬಾಣಕ್ಕೂ; **ನಮಃ**=ನಮಸ್ಕಾರ; **ತೇ**=ನಿನ್ನ; **ಧನ್ವನೇ**=ಬಿಲ್ಲಿಗೂ; **ನಮಃ ಅಸ್ತು**=ನಮಸ್ಕಾರವಿರಲಿ; **ಉತ**=ಮತ್ತು; **ತೇ**=ನಿನ್ನ; **ಬಾಹುಭ್ಯಾಮ್**=ತೋಳುಗಳಿಗೆ; **ನಮಃ**=ನಮಸ್ಕಾರವಿರಲಿ.

ಪದಶಃ ಅರ್ಥ– ಭ. ಭಾ. ಭಾ.

🔔 **ರುದ್ರ**=ಪರಬ್ರಹ್ಮರೂಪನಾದ ರುದ್ರದೇವನೇ! **ತೇ**=ನಿನ್ನದಾಗಿರುವ; **ಮನ್ಯವೇ**=ಕೋಪಕ್ಕೆ; **ನಮಃ**=ನಮಸ್ಕಾರವು; [✦ಅಸ್ತು=ಇರಲಿ] ✦**ಉತೋ**=ಮತ್ತು; **ತೇ**=ನಿನ್ನ; **ಇಷವೇ**=ಅಗ್ನಿರೂಪವಾದ ಬಾಣಕ್ಕೆ; **ನಮಃ**=ನಮಸ್ಕಾರ; **ತೇ**=ನಿನ್ನ; **ಧನ್ವನೇ**=[ಕನಕಮೇರುರೂಪವಾದ] ಬಿಲ್ಲಿಗೆ; **ನಮಃ ಅಸ್ತು**= ನಮಸ್ಕಾರವಿರಲಿ; **ಉತ**=ಮತ್ತು; **ತೇ**=ನಿನ್ನ; **ಬಾಹುಭ್ಯಾಮ್**=ಎರಡು ತೋಳುಗಳಿಗೂ/ಹಲವು ತೋಳುಗಳಿಗೂ; **ನಮಃ**=ನಮಸ್ಕಾರವಿರಲಿ.

---

*1 ಈ ಪ್ರಪಾಠಕದಲ್ಲಿ **'ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ'** ಎಂದು ಆರಂಭಗೊಳ್ಳುವವರೆಗೆ ಶ್ರೌತವಿನಿಯೋಗದಂತೆ ತ್ರೇಧಾವಿಭಾಗ ವಿರುವುದರಿಂದ ಮಂತ್ರವಿಭಾಗದಲ್ಲಿ ಮತಭೇದವಿರುವ ಕಡೆಯಲ್ಲಿ ಮಾತ್ರ ವಿನಿಯೋಗವನ್ನು ಸೂಚಿಸಲಾಗುವುದು. ಎಲ್ಲರ ಮತದಂತೆಯೂ ಶತರುದ್ರೀಯಹವನದಲ್ಲಿಯೇ ವಿನಿಯೋಗವಿರುತ್ತದೆ. ✦ ಮೂರನೆಯ ಪಾದದಿಂದ ಅನುಕರ್ಷ. ✦ ಉತ+ಉ=ಅಪಿ ಚ.

**ಯಾ ತ ಇಷುಃ ಶಿವತಮಾ ಶಿವಂ ಬಭೂವ ತೇ ಧನುಃ ।**

**ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ ॥**

---

**ಯಾ । ತೇ । ಇಷುಃ । ಶಿವತಮೇತಿ ಶಿವ-ತಮಾ । ಶಿವಮ್ । ಬಭೂವ । ತೇ । ಧನುಃ ॥ ಶಿವಾ । ಶರವ್ಯಾ । ಯಾ । ತವ । ತಯಾ । ನಃ । ರುದ್ರ । ಮೃಡಯ ॥**

---

| ಮಂತ್ರ | ವಿನಿಯೋಗ |
|---|---|
| **ಯಾ ತೇ...ಮೃಡಯ ॥** | ಶತರುದ್ರೀಯಹವನ/ಎರಡನೆಯ ಪ್ರಾರ್ಥನಾಮಂತ್ರ. |

**ಪದಶಃ ಅರ್ಥ- ಸಾ. ಭಾ.**

**ರುದ್ರ**=ಹೇ ರುದ್ರದೇವನೇ! **ಯಾ**=ಯಾವ; **ತೇ**=ನಿನ್ನ; **ಇಷುಃ**=ಬಾಣವು; **ಶಿವತಮಾ**=ಅತ್ಯಂತ ಸುಖಕರವಾಗಿದೆಯೋ; **ತೇ**=ನಿನ್ನ; **ಧನುಃ**=(ಯಾವ) ಬಿಲ್ಲು; **ಶಿವಮ್**=ಮಂಗಳಕರವಾಗಿ; **ಬಭೂವ**= ಆಗಿದೆಯೋ; **ಯಾ**=ಯಾವ; **ತವ**=ನಿನ್ನ; **ಶರವ್ಯಾ**=ಬತ್ತಳಿಕೆಯು; **ಶಿವಾ**=ಕಲ್ಯಾಣಕರವಾಗಿದೆಯೋ; **ತಯಾ**=ಆ ಬತ್ತಳಿಕೆಯಿಂದಲೂ; ಆ ಬಿಲ್ಲು-ಬಾಣಗಳಿಂದಲೂ **ನಃ**=ನಮ್ಮನ್ನು; **ಮೃಡಯ**=ಸುಖವಾಗಿಡು.

**ಪದಶಃ ಅರ್ಥ- ಭ. ಭಾ. ಭಾ.**

**ರುದ್ರ**=ಹೇ ರುದ್ರದೇವನೇ! **ಯಾ**=ಯಾವ; **ತೇ**=ನಿನ್ನ; **ಇಷುಃ**=ಬಾಣವು; **ಶಿವತಮಾ**= (ಹಸ್ತಾಲಂಕಾರವಾಗದೇ ಭಕ್ತರಿಗೆ) ಸುಖವನ್ನುಂಟುಮಾಡುವುದಾಗಿ; **ಬಭೂವ/(ಭವತಿ)**=ಆಗಿದೆಯೋ; [ಯತ್]**ತೇ**=ಯಾವ ನಿನ್ನ; **ಧನುಃ**=ಬಿಲ್ಲು; **ಶಿವಮ್** ಬಭೂವ=(ಹಸ್ತಾಲಂಕಾರವಾಗದೇ ಭಕ್ತರಿಗೆ) ಸುಖಕರವಾಗಿದೆಯೋ; **ಯಾ**=ಯಾವ; **ತವ**=ನಿನ್ನ; **ಶರವ್ಯಾ**=ಚಕ್ರವೇ ಮುಂತಾದ ಆಯುಧಗಳು ಅಥವಾ ಬತ್ತಳಿಕೆಯು; **ಶಿವಾ**=ಸುಖಕರವಾಗಿದೆಯೋ; **ತಯಾ**=ಆ ಬಿಲ್ಲು, ಬತ್ತಳಿಕೆ, ಬಾಣ, ಆಯುಧಗಳಿಂದ **ನಃ ಮೃಡಯ**=ನಮ್ಮನ್ನು ಸುಖವಾಗಿಡು.

**: ತಾತ್ಪರ್ಯ- ಸಾ. ಭಾ. :**

**ಓ! ರುದ್ರದೇವನೇ! ಧರ್ಮವಿರೋಧಿಗಳ ವಿಷಯದಲ್ಲಿರುವ ನಿನ್ನ ಕೋಪಕ್ಕೆ ನಮಸ್ಕಾರ. ರುದ್ರದೇವನ ಆ ಕೋಪವೂ, ಆ ಕೋಪವನ್ನು ಕಾರ್ಯರೂಪಕ್ಕೆ ತರುವ ಬಾಣವೂ, ಬಿಲ್ಲೂ, ಧನುರ್ಬಾಣಧಾರಿಗಳಾದ ತೋಳುಗಳು- ಇವೆಲ್ಲವೂ ನಮ್ಮನ್ನು ಗುರಿಮಾಡಿಕೊಳ್ಳದೆ ನಮ್ಮ ವೈರಿಗಳಲ್ಲಿ ಪ್ರಸರಿಸಲಿ. ಭಕ್ತರಾದ ನಮ್ಮಲ್ಲಿ ಪ್ರಸರಿಸದಿರಲಿ.**

**: ತಾತ್ಪರ್ಯ- ಭ. ಭಾ. ಭಾ. :**

**ಭಟ್ಟಭಾಸ್ಕರಭಾಷ್ಯದಲ್ಲಿ ಭಾಷ್ಯಕಾರರು ಉಪೋದ್ಘಾತದಲ್ಲಿ ಶ್ರೌತವಿನಿಯೋಗವನ್ನು ತಿಳಿಸಿ, ರುದ್ರಶಬ್ದ ನಿರ್ವಚನ, ರುದ್ರಾಧ್ಯಾಯದ ಮಹತ್ತ್ವ, ಕರ್ಮಕಾಂಡ, ಪ್ರಾಯಶ್ಚಿತ್ತಕಾಂಡ, ಜ್ಞಾನಕಾಂಡಗಳಲ್ಲಿ ವಿನಿಯೋಗವನ್ನು ಹೇಳಿ, ಅಧ್ಯಾಯದ ಮಹಾವಾಕ್ಯಾರ್ಥವನ್ನು ತಿಳಿಸಿ ಪ್ರತಿಮಂತ್ರಕ್ಕೂ ಪ್ರತ್ಯೇಕ ವಿನಿಯೋಗವನ್ನೂ ಹೇಳಿರುತ್ತಾರೆ.**

**ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ । ತಯಾ ನಸ್ತನುವಾ**

**ಶಂತಮಯಾ ಗಿರಿಶಂತಾಭಿ ಚಾಕಶೀಹಿ ॥**

---

ಯಾ । ತೇ । ರುದ್ರ । ಶಿವಾ । ತನೂಃ । ಅಘೋರಾ । ಅಪಾಪಕಾಶಿನೀತ್ಯಪಾಪ-ಕಾಶಿನೀ ॥ ತಯಾ । ನಃ । ತನುವಾ ।

ಶಂತಮಯೇತಿ ಶಮ್-ತಮಯಾ । ಗಿರಿಶಂತೇತಿ ಗಿರಿ-ಶಂತ । ಅಭೀತಿ । ಚಾಕಶೀಹಿ ॥

---

| ಮಂತ್ರ | ವಿನಿಯೋಗ |
|---|---|
| ಯಾ ತೇ...ಚಾಕಶೀಹಿ ॥ | ಶತರುದ್ರೀಯಹವನ/ಮೂರನೆಯ ಪ್ರಾರ್ಥನಾಮಂತ್ರ. |

ಪದಶಃ ಅರ್ಥ- ಸಾ. ಭಾ.

**ರುದ್ರ**=ರುದ್ರದೇವನೇ! **ಗಿರಿಶಂತ**=ಕೈಲಾಸಪರ್ವತದಲ್ಲಿ ಸುಖವಾಗಿದ್ದು ಭಕ್ತರಿಗೆ ಸುಖವನ್ನು ನೀಡುವವನೇ!; **ಯಾ**=ಯಾವ; **ತೇ**=ನಿನ್ನ; **ಶಿವಾ**=ಶಾಂತವಾದ; **ತನೂಃ**=ಶರೀರವು; **ಅಘೋರಾ**= ಹಿಂಸೆಯನ್ನು ಮಾಡದೇ ಇರುವುದಾಗಿದೆ. **ಅಪಾಪಕಾಶಿನೀ**=ಅನಿಷ್ಟರೂಪವಾದ ಹಿಂಸೆಯನ್ನು/ಪಾಪವನ್ನು ಪ್ರಕಾಶಪಡಿಸದಂತೆ ಇದೆಯೋ; **ತಯಾ**=ಆ; **ಶಂತಮಯಾ**=ಅತಿಶಾಂತವಾದ; **ತನುವಾ**=ಶರೀರದಿಂದ; **ನಃ**=ನಮಗೆ; **ಅಭಿಚಾಕಶೀಹಿ**=ಪ್ರಕಾಶವನ್ನುಂಟುಮಾಡು.

ಪದಶಃ ಅರ್ಥ- ಭ. ಭಾ. ಭಾ.

**ರುದ್ರ**=ಹೇ! ರುದ್ರದೇವನೇ! **ತೇ**=ನಿನ್ನ; **ಯಾ**=ಯಾವ; **ಶಿವಾ**=ಶಾಂತವಾದ/ಅಭಯವನ್ನೀಯುವ; **ತನೂಃ**=ಶರೀರವು; **ಅಘೋರಾ**=ಕ್ರೂರವಲ್ಲದುದಾಗಿದೆ; **ಅಪಾಪಕಾಶಿನೀ**=(ಆಯುಧವಿಲ್ಲದುದರಿಂದ) ವ್ಯಸನವಿಲ್ಲದಿರುವಿಕೆಯನ್ನು ಪ್ರಕಟಿಸುವ/ಪಾಪಫಲವಾದ ದುಃಖವನ್ನು ನೀಡದ;[ಶರೀರವಾಗಿದೆ] **ತಯಾ**=ಆ; **ಶಂತಮಯಾ**=[ಅತಿಶಯವಾದ ಆನಂದಸ್ವಭಾವವಿರುವುದರಿಂದ ನೆನಸುವವರಿಗೆ] ಅತ್ಯಂತ ಸುಖಕ್ಕೆ ಕಾರಣವಾದ; **ತನುವಾ**=ಶರೀರದಿಂದ; **ನಃ**=ನಮ್ಮನ್ನು [ಕುರಿತು] **ಗಿರಿಶಂತ**=ಕೈಲಾಸದಲ್ಲಿ ಯಾವಾಗಲೂ ಆವಿರ್ಭವಿಸಿದವನಾಗಿ ಪ್ರಾಣಿಗಳಿಗೆ ಸುಖವನ್ನುಂಟುಮಾಡುವವನೇ! **ಅಭಿಚಾಕಶೀಹಿ**=ಮತ್ತೆ ಮತ್ತೆ ಆ ಶಾಂತತನುವನ್ನು ಪ್ರಕಾಶಪಡಿಸು.

: ತಾತ್ಪರ್ಯ- ಭ. ಭಾ. ಭಾ. :

ಈ ಮಂತ್ರದಿಂದ ಆರಂಭಿಸಿ **ಶಿವೇನ...ಅಸತ್** ಎಂಬಲ್ಲಿಯವರೆಗಿನ ಐದು ಮಂತ್ರಗಳು *ಪ್ರತ್ಯಕ್ಷಕೃತಗಳು. ಓಮ್,

---

* **ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಸರ್ವನಾಮ್ನಾ** [ನಿರುಕ್ತ-ದೈವತಕಾಂಡ] ತ್ವಮ್, ಅಹಮ್, ಮೊದಲಾಗಿ ಯುಷ್ಮದ್, ಅಸ್ಮದ್ ಎಂಬ ಪ್ರಾತಿಪದಿಕಗಳಿಂದ ಉಂಟಾಗಿರುವ ಶಬ್ದಗಳ ಅರ್ಥವನ್ನು ಅನ್ವಯಿಸುವ ಅರ್ಥವುಳ್ಳ ವಾಕ್ಯಗಳು **ಪ್ರತ್ಯಕ್ಷಕೃತಗಳು.**

ಏಳು ವಿಭಕ್ತಿಗಳಲ್ಲಿ ಯಾವುದೇ ವಿಭಕ್ತಿಯಿಂದ ಕೂಡಿರುವ ಯಾವುದೇ ನಾಮಪದವುಳ್ಳ, ಕ್ರಿಯಾಪದದ ಪ್ರಥಮಪುರುಷದ **ಸಃ, ಅದಸ್** ಮುಂತಾದ ಕರ್ತೃಪದವುಳ್ಳ ಮಂತ್ರಗಳು **ಪರೋಕ್ಷಕೃತಗಳು.**

**ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ- ನಿರುಕ್ತ, ದೈವತಕಾಂಡ.**

## ಯಾಮಿಷುಂ ಗಿರಿಶಂತ ಹಸ್ತೇ [ಹಸ್ತೇ (೧)] ಬಿಭರ್ಷ್ಯಸ್ತವೇ । ಶಿವಾಂ ಗಿರಿತ್ರ ತಾಂ ಕುರು ಮಾ ಹಿಗ್‍ಂಸೀಃ ಪುರುಷಂ ಜಗತ್ ॥

ಯಾಮ್ । ಇಷುಮ್ । ಗಿರಿಶಂತೇತಿ ಗಿರಿ–ಶಂತ । ಹಸ್ತೇ । (೧) । ಬಿಭರ್‌ಷಿ । ಅಸ್ತವೇ ॥ ಶಿವಾಮ್ । ಗಿರಿತ್ರೇತಿ ಗಿರಿ–ತ್ರ । ತಾಮ್ । ಕುರು । ಮಾ । ಹಿಗ್‍ಂಸೀಃ । ಪುರುಷಮ್ । ಜಗತ್ ॥

| ಮಂತ್ರ | ವಿನಿಯೋಗ |
|---|---|
| **ಯಾಮಿಷುಂ...ಜಗತ್ ॥** | ಶತರುದ್ರೀಯಹವನ/ನಾಲ್ಕನೆಯ ಪ್ರಾರ್ಥನಾಮಂತ್ರ. |

**ಪದಶಃ ಅರ್ಥ– ಸಾ. ಭಾ.**

▲ **ಗಿರಿಶಂತ**=ಕೈಲಾಸದಲ್ಲಿ ಇದ್ದುಕೊಂಡು ಲೋಕಕ್ಕೆ ಸುಖವನ್ನುಂಟುಮಾಡುವ ರುದ್ರದೇವನೇ! [ನೀನು] **ಯಾಮ್**=ಯಾವ; **ಇಷುಮ್**=ಬಾಣವನ್ನು; **ಅಸ್ತವೇ**=[ವೈರಿಗಳಲ್ಲಿ] ಪ್ರಯೋಗಿಸಲು; **ಹಸ್ತೇ**=ಕೈಯಲ್ಲಿ; **ಬಿಭರ್‌ಷಿ**=ಧರಿಸಿರುತ್ತೀಯೋ; **ತಾಮ್**=ಆ ಬಾಣವನ್ನು; **ಶಿವಾಮ್ ಕುರು**=ನಮ್ಮಲ್ಲಿ ಶಾಂತವನ್ನಾಗಿ ಮಾಡು. **ಗಿರಿತ್ರ**=ಕೈಲಾಸಗಿರಿಯನ್ನು ರಕ್ಷಿಸುವ ರುದ್ರದೇವನೇ! **ಪುರುಷಮ್**=ನಮಗೆ ಸಂಬಂಧಿಸಿದ ಮನುಷ್ಯರನ್ನೂ; **ಜಗತ್**=ಗೋವುಗಳು ಮುಂತಾದ ಜಂಗಮಪ್ರಾಣಿಗಳನ್ನೂ; **ಮಾ ಹಿಗ್‍ಂಸೀಃ**=ಹಿಂಸಿಸಬೇಡ.

**ಪದಶಃ ಅರ್ಥ– ಭ. ಭಾ. ಭಾ.**

▲ **ಗಿರಿಶಂತ**=ಕೈಲಾಸದಲ್ಲಿ ಇದ್ದು ಸುಖವನ್ನುಂಟುಮಾಡುವವನೇ! [ನೀನು] **ಯಾಮ್**=ಯಾವ; **ಇಷುಮ್**=ಬಾಣವನ್ನು; **ಅಸ್ತವೇ** =[ದುಷ್ಟರಾದ ತ್ರಿಪುರಾಸುರರ ಮೇಲೆ] ಪ್ರಯೋಗಿಸಲು;/ಹುಲ್ಲಿನಷ್ಟು ಅನಾಯಾಸವಾಗಿ ತ್ರಿಪುರದಹನದ ಬಳಿಕ ಉಪಸಂಹಾರ ಮಾಡುವುದಕ್ಕಾಗಿ; **ಹಸ್ತೇ**=ಕೈಯಲ್ಲಿ; **ಬಿಭರ್‌ಷಿ** =ಧರಿಸಿರುವೆಯೋ; **ತಾಮ್**=ಆ ಬಾಣವನ್ನು; **ಶಿವಾಮ್ ಕುರು**=ಶಾಂತವನ್ನಾಗಿ ಮಾಡು. **ಗಿರಿತ್ರ**= ಕೈಲಾಸವನ್ನು ಮೆಚ್ಚುವವನೇ!/ಮೇಘದಿಂದ (ವೃಷ್ಟಿಯಿಂದ) ಲೋಕವನ್ನು ಪಾಲಿಸುವವನೇ! ಪ್ರಾರ್ಥನೆಯನ್ನು ನಡೆಸಿಕೊಟ್ಟು ಆ ಮಾತನ್ನು ಕಾಪಾಡುವವನೇ!; **ಪುರುಷಮ್**=ಒಳ್ಳೆಯ ಸ್ವಭಾವದ ಸೇವಕನನ್ನು; **ಜಗತ್**=ಚಲಿಸುವ ಗೋವು, ಎಮ್ಮೆ ಮುಂತಾದವುಗಳನ್ನೂ/ಚಲಿಸದ ಮರ, ಲತೆ ಮುಂತಾದವುಗಳನ್ನೂ **ಮಾ ಹಿಗ್‍ಂಸೀಃ**=ಹಿಂಸಿಸಬೇಡ.

**: ತಾತ್ಪರ್ಯ– ಭ. ಭಾ. ಭಾ. :**

ನಮಃ, ಸ್ವಾಹಾ, ಸ್ವಧಾ, ವಷಟ್–ಈ ಶಬ್ದಗಳು ಬ್ರಹ್ಮವಾಚಕಗಳು. ವಾಕ್, ಮನಸ್ಸು ಮತ್ತು ಶರೀರದಿಂದ ಆರಾಧ್ಯವಾಗಿ ಆತ್ಮತ್ವಸಂಪಾದಕವಾದ ಬ್ರಹ್ಮರೂಪನಾದವನು ರುದ್ರದೇವನು.

**ಅಶುಭದ್ರಾವಕೋ ರುದ್ರೋ ಯಜ್ಜಹಾರ ಪುನರ್ಭವಮ್ ।**
**ತಸ್ಮಾಚ್ಛಿವಸ್ತತೋ ರುದ್ರಶಬ್ದೇನಾತ್ರಾಭಿಧೀಯತೇ ॥**

**ಶಿವೇನ ವಚಸಾ ತ್ವಾ ಗಿರಿಶಾಚ್ಛಾ ವದಾಮಸಿ ।**

**ಯಥಾ ನಸ್ಸರ್ವಮಿಜ್ಜಗದಯಕ್ಷ್ಮಗ್ಂ ಸುಮನಾ ಅಸತ್ ॥**

---

ಶಿವೇನ । ವಚಸಾ । ತ್ವಾ । ಗಿರಿಶ । ಅಚ್ಛ । ವದಾಮಸಿ ॥ ಯಥಾ । ನಃ । ಸರ್ವಮ್ । ಇತ್ । ಜಗತ್ । ಅಯಕ್ಷ್ಮಮ್ ।
ಸುಮನಾ ಇತಿ ಸು-ಮನಾಃ । ಅಸತ್ ॥

---

| ಮಂತ್ರ | ವಿನಿಯೋಗ |
|---|---|
| **ಶಿವೇನ...ಅಸತ್ ॥** | ಶತರುದ್ರೀಯಹವನ/ಐದನೆಯ ಪ್ರಾರ್ಥನಾಮಂತ್ರ. |

**ಪದಶಃ ಅರ್ಥ- ಸಾ. ಭಾ.**

**ಗಿರಿಶ**=ಕೈಲಾಸವಾಸಿಯಾದ ರುದ್ರನೇ! **ತ್ವಾ**=ನಿನ್ನನ್ನು; **ಅಚ್ಛ**=ಹೊಂದಲು; **ಶಿವೇನ**=ಮಂಗಳಕರ ವಾದ; **ವಚಸಾ**=ಸ್ತುತಿವಾಕ್ಯಗಳಿಂದ; **ವದಾಮಸಿ**=ಪ್ರಾರ್ಥಿಸುತ್ತೇವೆ. **ಯಥಾ**=ಹೇಗೆ; **ನಃ**=ನಮಗೆ ಸಂಬಂಧಿಸಿದ; **ಸರ್ವಮ್**=ಎಲ್ಲಾ; **ಜಗತ್ ಇತ್**=ಮನುಷ್ಯರು ಮತ್ತು ಪಶುಗಳೆಂಬ ಚಲಿಸುವ ಸಮೂಹ ವೆಲ್ಲವೂ; **ಅಯಕ್ಷ್ಮಮ್**=ರೋಗರಹಿತವೂ; **ಸುಮನಾಃ**=ಪರಸ್ಪರ ಸದ್ಭಾವನೆಯನ್ನು ಹೊಂದಿರುವು ದಾಗಿ; **ಅಸತ್**= ಆಗುತ್ತದೆಯೋ; [ಹಾಗೆ ನೀನು ಅನುಗ್ರಹಿಸು].

**ಪದಶಃ ಅರ್ಥ- ಭ. ಭಾ. ಭಾ.**

**ಗಿರಿಶ**=ಕೈಲಾಸದಲ್ಲಿ ಮಲಗಿರುವ ಪರಮೇಶ್ವರನೇ!/ನಿನ್ನ ನಿವಾಸದಿಂದಲೇ ಪ್ರಶಸ್ತವಾದ ಗಿರಿಯುಳ್ಳವನೇ!/ಮೇಘರಕ್ಷಕನಾಗಿ ಮಳೆಯನ್ನು ಕರುಣಿಸುವವನೇ!/ವೇದ, ಓಂಕಾರಗಳ ಒಡೆಯನೇ!; **ಶಿವೇನ**=[ನಿನ್ನ ಗುಣಗಾನ ಮಾಡುವುದರಿಂದ] ಮಂಗಲವಾದ/ನಿನಗೆ ಪ್ರೀತಿಯನ್ನುಂಟುಮಾಡುವ ಸ್ತೋತ್ರ ರೂಪವಾದ; **ವಚಸಾ**=ಮಾತಿನಿಂದ; **ತ್ವಾ**=[ಎಲ್ಲ ಐಶ್ವರ್ಯಗುಣಯುಕ್ತನಾದ] ನಿನ್ನನ್ನು; **ಅಚ್ಛ**=ಅಭಿ ಮುಖನನ್ನಾಗಿ ಮಾಡಿಕೊಂಡು; **ವದಾಮಸಿ**=ಸ್ತೋತ್ರಮಾಡುತ್ತೇವೆ. **ಯಥಾ**=ಯಾವ ರೀತಿಯಿಂದ; **ನಃ**= ನಮಗೆ ಸಂಬಂಧಿಸಿದ; **ಸರ್ವಮ್ ಇತ್**=ಎಲ್ಲ; **ಜಗತ್**=ಸ್ಥಾವರ-ಜಂಗಮಾತ್ಮಕವಾದ ಜಗತ್ತು [ಪುತ್ರ, ಪಶು, ವೃಕ್ಷಾದಿಗಳು] **ಅಯಕ್ಷ್ಮಮ್**=ರೋಗರಹಿತವೂ; ***ಸುಮನಾಃ**=ಒಳ್ಳೆಯ ಮನಸ್ಸುಳ್ಳದ್ದಾಗಿಯೂ; **ಅಸತ್**=ಆದೀತೋ; [ಅದಕ್ಕಾಗಿ ನಿನ್ನನ್ನು ಸ್ತುತಿಸುತ್ತೇವೆ] [ಹೇಗೆ ಸ್ತುತಿಸಿದರೆ ಈ ರೀತಿ ಆದೀತೋ ಆ ರೀತಿಯಲ್ಲಿ ಸ್ತುತಿಸುತ್ತೇವೆ]

**: ತಾತ್ಪರ್ಯ- ಭ. ಭಾ. ಭಾ. :**

**ಅಮಂಗಲವನ್ನು ದೂರ ಮಾಡಿ ಪುನರ್ಜನ್ಮವನ್ನು ನೀಗಿಸುವವನು ಶಿವನು. ಮುಕ್ತಿಯನ್ನು ನೀಡುವವನು. ಇಲ್ಲಿ ಆ ಶಿವನನ್ನೇ ರುದ್ರ ಎಂಬುದಾಗಿ ಹೇಳಲಾಗಿದೆ.**

---

*'ಸುಮನಾಃ' ಎಂಬುದು ಜಗತ್ ಎಂಬುದಕ್ಕೆ ವಿಶೇಷಣವಾದರೂ ಮಂತ್ರಗಳಲ್ಲಿ ಲಿಂಗ-ವಿಭಕ್ತಿವ್ಯತ್ಯಯವಾಗುವುದರಿಂದ ಪುಲ್ಲಿಂಗದಲ್ಲಿದೆ.

**ಅಧ್ಯವೋಚದಧಿವಕ್ತಾ ಪ್ರಥಮೋ ದೈವ್ಯೋ ಭಿಷಕ್ । ಅಹೀಗ್‌ಂಶ್ಚ**

**ಸರ್ವಾಞ್ಜಂಭಯನ್ಥ್ಸರ್ವಾಶ್ಚ ಯಾತುಧಾನ್ಯಃ ॥**

---

ಅಧೀತಿ । ಅವೋಚತ್ । ಅಧಿವಕ್ತೇತ್ಯಧಿ-ವಕ್ತಾ । ಪ್ರಥಮಃ । ದೈವ್ಯಃ । ಭಿಷಕ್ ॥ ಅಹೀನ್ । ಚ । ಸರ್ವಾನ್ । ಜಂಭಯನ್ನ್ । ಸರ್ವಾಃ । ಚ । ಯಾತುಧಾನ್ಯ ಇತಿ ಯಾತು-ಧಾನ್ಯಃ ॥

---

| ಮಂತ್ರ | ವಿನಿಯೋಗ |
|---|---|
| **ಅಧ್ಯವೋಚತ್...ಯಾತುಧಾನ್ಯಃ ॥** | ಶತರುದ್ರೀಯಹವನ/ಆರನೆಯ ಸ್ತುತಿಮಂತ್ರ. |

ಪದಶಃ ಅರ್ಥ- ಸಾ. ಭಾ. ———————

**ಅಧಿವಕ್ತಾ**=ಭಕ್ತರನ್ನು ಅಧಿಕರೆಂದು ಎಲ್ಲರೂ ಹೇಳುವಂತೆ ಮಾಡುವ [ರುದ್ರದೇವನು] **ಪ್ರಥಮಃ**=[ದೇವತೆಗಳಲ್ಲಿ] ಮೊದಲನೆಯವನಾಗಿ; **ದೈವ್ಯಃ**=ದೇವತೆಗಳನ್ನು ರಕ್ಷಿಸಲು ಸಮರ್ಥನಾದ; **ಭಿಷಕ್**=[ಸ್ಮರಣಮಾತ್ರದಿಂದಲೇ ಸರ್ವರೋಗಪರಿಹಾರಕನಾದ] ವೈದ್ಯನಾಗಿರುವನು. [ಅವನು] **ಅಹೀನ್ ಸರ್ವಾನ್**=ಹಿಂಸಕವಾದ ವ್ಯಾಘ್ರಸರ್ಪಾದಿಗಳನ್ನೂ; **ಚ**=ಮತ್ತು; **ಸರ್ವಾಃ**=ಎಲ್ಲ; **ಯಾತುಧಾನ್ಯಃ ಚ**=ರಾಕ್ಷಸ ಜಾತಿಗಳನ್ನೂ; **ಜಂಭಯನ್**=ನಾಶಪಡಿಸುತ್ತಾ; **ಅಧ್ಯವೋಚತ್**=ನಮ್ಮನ್ನು ಅಧಿಕರನ್ನಾಗಿ ಹೇಳಲಿ.

ಪದಶಃ ಅರ್ಥ- ಭ. ಭಾ. ಭಾ. ———————

**ಅಧಿವಕ್ತಾ**=ರುದ್ರನು [ಭಕ್ತರನ್ನು ಕುರಿತು] ಅಧಿಕೃತವಾದ ವಚನವನ್ನು ಹೇಳಲು ಅರ್ಹನಾದ; **ಪ್ರಥಮಃ**=ಪ್ರಧಾನನಾದ; **ದೈವ್ಯಃ**=ದೇವತೆಗಳಲ್ಲಿರುವ; **ಭಿಷಕ್**=ಚಿಕಿತ್ಸಕನಾಗಿರುತ್ತಾನೆ. [ಅವನು] **ಸರ್ವಾನ್ ಚ**=ಎಲ್ಲಾ; **ಅಹೀನ್**=[ಪ್ರತ್ಯಕ್ಷವಾಗಿ ಪ್ರಜೆಗಳನ್ನು ಮುನ್ನುಗ್ಗಿ ಹಿಂಸಿಸುವ] ಹುಲಿ, ಸರ್ಪ, ವೃಶ್ಚಿಕ ಮುಂತಾದವುಗಳನ್ನು; **ಜಂಭಯನ್**=ನಾಶ ಮಾಡುತ್ತಾ; **ಚ**=ಮತ್ತು; **ಸರ್ವಾಃ**=ಎಲ್ಲಾ; **ಯಾತುಧಾನ್ಯಃ**=[ಪರೋಕ್ಷವಾಗಿ/ಕಣ್ಣಿಗೆ ಕಾಣದೆ ಹಿಂಸಿಸುವ] ರಾಕ್ಷಸಜಾತಿಗಳನ್ನೂ; ಜಂಭಯನ್=ನಾಶಪಡಿಸುತ್ತಾ; **ಅಧ್ಯವೋಚತ್**=[ನನ್ನನ್ನು] ಮೇಲಿನವನನ್ನಾಗಿ ಮಾಡಲಿ.

———————: ತಾತ್ಪರ್ಯ- ಭ. ಭಾ. ಭಾ. :———

ಅಂತಹ ರುದ್ರನೇ! ನಿನ್ನ ಕೋಪವು ನಮ್ಮ ವಿಷಯದಲ್ಲಿ ಶಾಂತವಾಗಲಿ. ಆ ಕೋಪಕ್ಕೆ ನಮಸ್ಕಾರ. *ಅಗ್ನಿರೂಪವಾದ ನಿನ್ನ ಬಾಣಕ್ಕೆ ನಮಸ್ಕಾರ. ಕನಕಮೇರುರೂಪವಾದ* ನಿನ್ನ ಬಿಲ್ಲಿಗೆ ನಮಸ್ಕಾರ.

---

* ಉಪಸದ್ಹೋಮಪ್ರಸಂಗದಲ್ಲಿ-ರಾಕ್ಷಸರನ್ನು ಅವರ ಮೂರು ಪ್ರಾಕಾರಗಳನ್ನು ಭೇದಿಸಿ ರುದ್ರನು ಹೊರದೂಡಿದನೆಂದೂ, ಆಗ ಯುದ್ಧಕ್ಕಾಗಿ ಬೇಕಾದ ಬಾಣದಲ್ಲಿ ಅಗ್ನಿ, ಸೋಮ ಮತ್ತು ವಿಷ್ಣು ಈ ಮೂವರು ದೇವತೆಗಳ ಅಂಶವಿತ್ತೆಂದೂ **'ಅಗ್ನಿಮನೀಕಗ್‌ಂ ಸೋಮಗ್‌ಂ ಶಲ್ಯಂ ವಿಷ್ಣುಂ ತೇಜನಂ'** ಎಂದು ಶ್ರುತಿಯು ತಿಳಿಸಿದೆ. [ತೈ. ಸಂ 6.2.3] ಅನೀಕ=ಬಾಣದ ಪ್ರಥಮಭಾಗದ ಮರ.

ರುದ್ರನು ಬಂಗಾರದ ಪರ್ವತವಾದ ಮೇರುವನ್ನು ಬಿಲ್ಲನ್ನಾಗಿ ಹೊಂದಿರುವವನೆಂದು ಪುರಾಣದಲ್ಲಿದೆ. ಮಹಾಭಾರತದಲ್ಲಿ:-

**ಸ ಕೃತ್ವಾ ಧನುರೋಂಕಾರಂ ಸಾವಿತ್ರೀಂ ಜ್ಯಾಂ ಮಹೇಶ್ವರಃ ।**
**ಹಯಾಂಶ್ಚ ಚತುರೋ ವೇದಾನ್ ಸರ್ವದೇವಮಯಂ ರಥಮ್ ॥**

## ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಃ ಸುಮಂಗಲಃ ।

---

ಅಸೌ । ಯಃ । ತಾಮ್ರಃ । ಅರುಣಃ । ಉತ । ಬಭ್ರುಃ । ಸುಮಂಗಲ ಇತಿ ಸು-ಮಂಗಲಃ ॥

---

| ಮಂತ್ರ | ವಿನಿಯೋಗ |
|---|---|
| **ಅಸೌ...ಈಮಹೇ ॥** | ಶತರುದ್ರೀಯಹವನ/ಆದಿತ್ಯರೂಪನಾಗಿ ರುದ್ರನ ಪ್ರಾರ್ಥನೆ. |

**ಪದಶಃ ಅರ್ಥ- ಸಾ. ಭಾ.** ——————

▲ **ಯಃ**=ಯಾವ ರುದ್ರನು; **ಅಸೌ**=ಮಂಡಲದಲ್ಲಿರುವ ಆದಿತ್ಯರೂಪವಾಗಿರುವನೋ; **ತಾಮ್ರಃ**=[ಉದಯಕಾಲದಲ್ಲಿ] ಅತ್ಯಂತ ಕೆಂಪಾಗಿರುವನೋ; **ಅರುಣಃ**=[ಬಳಿಕ] ಎಳೆಗೆಂಪಾಗಿರುವನೋ; **ಉತ**=ಮತ್ತು; **ಬಭ್ರುಃ**=[ಬಳಿಕ] ಪಿಂಗಲವರ್ಣನಾಗಿರುವನೋ; [ಅವನು] **ಸುಮಂಗಲಃ**=[ತನ್ನ ಭಕ್ತರಿಗೆ] ಒಳ್ಳೆಯ ಮಂಗಲಕರನಾಗಿರುತ್ತಾನೆ.

**ಪದಶಃ ಅರ್ಥ- ಭ. ಭಾ. ಭಾ.** ——————

▲ **ಅಸೌ**=[ಊರ್ಧ್ವಲೋಕದಲ್ಲಿರುವ ಈ] ಆದಿತ್ಯನು; **ತಾಮ್ರಃ**=[ಉದಯದಲ್ಲಿ] ಅತಿಕೆಂಪಾಗಿರುವನು. **ಅರುಣಃ**=[ಬಳಿಕ] ಎಳೆಗೆಂಪಾಗಿರುವನು; **ಉತ**=ಬಳಿಕ; **ಬಭ್ರುಃ**=ಪಿಂಗಲ/ಗೌರವರ್ಣನಾಗಿರುವನು/ಚೈತನ್ಯವನ್ನು ಅನುಗ್ರಹಿಸುವವನಾಗಿರುವನು. **ಸುಮಂಗಲಃ**=ಸರ್ವಮಂಗಲಕಾರಣನು; [ಇಂತಹ ಆದಿತ್ಯನು] **ಯಃ**=ಯಾವ ರುದ್ರನಾಗಿರುವನೋ;

—————— : **ತಾತ್ಪರ್ಯ- ಸಾ. ಭಾ.** : ——————

**ಹೇ ರುದ್ರನೇ! ನಿನ್ನ ಬಾಣ, ಬಿಲ್ಲು, ಬತ್ತಳಿಕೆಗಳು ಭಕ್ತರಾದ ನಮ್ಮಲ್ಲಿ ಪ್ರವೃತ್ತವಾಗದೆ ಶಾಂತವಾಗಿವೆ, ಅವುಗಳನ್ನು ನಮ್ಮ ಶತ್ರುಗಳಾದ ಅಧರ್ಮಿಗಳ ಮೇಲೆ ಉಪಯೋಗಿಸಿ, ನಮ್ಮನ್ನು ಸುಖವಾಗಿಡಲಿ ಎಂದು ಪ್ರಾರ್ಥಿಸುತ್ತೇವೆ.**

—————— : **ತಾತ್ಪರ್ಯ- ಭ. ಭಾ. ಭಾ.** : ——————

**ನೀನು ಹಲವು ತೋಳುಗಳುಳ್ಳವನಾದರೂ, ಬಿಲ್ಲು-ಬಾಣಗಳನ್ನು ಹಿಡಿದಿರುವ ಎರಡು ಬಾಹುಗಳನ್ನು ನಮಸ್ಕರಿಸುತ್ತೇವೆ.**

**ಎಲ್ಲ ದುಃಖಕ್ಕೂ ಮೂಲವಾದ ಕೋಪವನ್ನು ಮೊದಲು ನಮಸ್ಕರಿಸಿ, ನೇರವಾಗಿ ಹಿಂಸಾಕಾರಿಯಾದ ಬಾಣವನ್ನೂ, ಬಳಿಕ ಅದನ್ನು ಬಿಡಲು ಸಾಧನವಾದ ಬಿಲ್ಲನ್ನೂ, ಅವೆರಡನ್ನೂ ಧರಿಸಿರುವ ಬಾಹುಗಳೆರಡನ್ನೂ ಕುರಿತು ನಮಸ್ಕಾರವನ್ನು ಶ್ರುತಿಯು ತಿಳಿಸುತ್ತಿದೆ. ಕೋಪ ಮುಂತಾದವುಗಳು ರುದ್ರನ ಯೋಧರೂ ಹೌದು.**

---

**ಆ ಮಹೇಶ್ವರನು ಎಲ್ಲ ದೇವತೆಗಳನ್ನೂ ರಥವನ್ನಾಗಿಸಿ, ಓಂಕಾರವನ್ನು ಬಿಲ್ಲನ್ನಾಗಿಸಿ, ಗಾಯತ್ರೀಮಂತ್ರವನ್ನು ಹೆದೆಯನ್ನಾಗಿಸಿ, ನಾಲ್ಕು ವೇದಗಳನ್ನು ಕುದುರೆಗಳನ್ನಾಗಿಸಿಕೊಂಡವನಾದನು ಎಂದು ಇದೆ. [ಮಹಾಭಾರತ- ದ್ರೋಣಪರ್ವ-7.173.56]**

**ಯೇ ಚೇಮಾಗ್ಂ ರುದ್ರಾ ಅಭಿತೋ ದಿಕ್ಷು [(೨)] ಶ್ರಿತಾಃ**
**ಸಹಸ್ರಶೋಽವೈಷಾಗ್ಂ ಹೇಡ ಈಮಹೇ ॥**

---

**ಯೇ । ಚ । ಇಮಾಮ್ । ರುದ್ರಾಃ । ಅಭಿತಃ । ದಿಕ್ಷು । (೨) । ಶ್ರಿತಾಃ । ಸಹಸ್ರಶ ಇತಿ ಸಹಸ್ರ-ಶಃ । ಅವೇತಿ । ಏಷಾಮ್ । ಹೇಡಃ । ಈಮಹೇ ॥**

ಪದಶಃ ಅರ್ಥ- ಸಾ. ಭಾ.

**ಯೇ ಚ ರುದ್ರಾಃ**=ಅಲ್ಲದೆ ಯಾವ ರಶ್ಮಿರೂಪರಾದ ರುದ್ರರು; **ಸಹಸ್ರಶಃ**= ಸಾವಿರಾರು ಸಂಖ್ಯೆಯಲ್ಲಿ; **ಇಮಾಮ್**=ಈ ಭೂಮಿಯ; **ಅಭಿತಃ**=ಸುತ್ತಲೂ; **ದಿಕ್ಷು**=[ಪೂರ್ವವೇ ಮೊದಲಾದ] ದಿಕ್ಕುಗಳೆಲ್ಲದ ರಲ್ಲಿಯೂ; **ಶ್ರಿತಾಃ**=ವ್ಯಾಪಿಸಿರುತ್ತಾರೆಯೋ; **ಏಷಾಮ್**=ಇವರ; **ಹೇಡಃ**=ಅತಿತಾಪರೂಪವಾದ ಕೋಪ ವನ್ನು; **ಅವ ಈಮಹೇ**=[ಸ್ತೋತ್ರನಮಸ್ಕಾರಾದಿಗಳಿಂದ] ಹೋಗಲಾಡಿಸುತ್ತೇವೆ.

ಪದಶಃ ಅರ್ಥ- ಭ. ಭಾ. ಭಾ.

**ಚ**=ಮತ್ತು; **ಯೇ**=[ರುದ್ರನಂತೆಯೇ ವೇಷ-ಮಾಹಾತ್ಮ್ಯವುಳ್ಳ ಅವನಿಂದಲೇ ಸೃಷ್ಟಿಸಲ್ಪಟ್ಟವರಾಗಿರುವ] **ರುದ್ರಾಃ**=ಅನುಚರರಾಗಿರುವ ರುದ್ರರು; **ಇಮಾಮ್**=ಈ ಭೂಮಿಯ; **ಅಭಿತಃ**=ಸುತ್ತಲೂ; **ದಿಕ್ಷು**=ದಿಕ್ಕು ಗಳಲ್ಲಿಯೂ; **ಸಹಸ್ರಶಃ**=ಸಾವಿರಾರು ಸಂಖ್ಯೆಯಲ್ಲಿ; **ಶ್ರಿತಾಃ**=[ಜಗತ್ತಿಗೆ ಪುಣ್ಯ-ಪಾಪಗಳಿಗೆ ಅನುರೂಪ ವಾದ ಫಲವನ್ನು ನೀಡಲು] ಇರುತ್ತಾರೆ. **ಏಷಾಮ್**=ಈ ರುದ್ರನ ಹಾಗೂ ಅವನ ಅನುಚರರ; **ಹೇಡಃ**= ಕೋಪವನ್ನೂ, ಅನಾದರವನ್ನೂ; **ಅವ ಈಮಹೇ**=[ಸ್ತುತಿಗಳಿಂದಲೂ, ನಮಸ್ಕಾರಗಳಿಂದಲೂ] ಹೋಗ ಲಾಡಿಸುತ್ತೇವೆ.

: ತಾತ್ಪರ್ಯ- ಸಾ. ಭಾ. :

ಹೇ! ರುದ್ರದೇವನೇ! ಕೈಲಾಸದಲ್ಲಿ ಇದ್ದುಕೊಂಡು ಸುಖವನ್ನು ಕೊಡುವವನೇ! ಶ್ರುತಿಯು **'ತಸ್ಯೈತೇ ತನುವೌ ಘೋರಾಽನ್ಯಾ ಶಿವಾಽನ್ಯಾ'** ಎಂದು ಹೇಳಿರುವಂತೆ ಯಾವ ನಿನ್ನ ಶರೀರವು ದುಃಖವನ್ನು ನೀಡುವುದಿಲ್ಲವೋ ಅಂತಹ ಸುಖಕರವಾದ ಶರೀರದಿಂದ ನಮಗೆ ಪ್ರಕಾಶವನ್ನು/ಜ್ಞಾನವನ್ನು ಮಾಡಿಕೊಡು.

ಹೇ ಗಿರಿಶಂತನೇ! ಯಾವ ಬಾಣವನ್ನು ವೈರಿಗಳಲ್ಲಿ ಪ್ರಯೋಗಿಸಲು ಕೈಯಲ್ಲಿ ಹಿಡಿದಿರುವೆಯೋ, ಅದು ನಮ್ಮ ವಿಷಯದಲ್ಲಿ ಶಾಂತವಾಗಿರುವಂತೆ ಮಾಡು. ಕೈಲಾಸಪಾಲಕನೇ! ನಮ್ಮವರಾದ ಮನುಷ್ಯರನ್ನೂ, ಪಶುಗಳನ್ನೂ ಹಿಂಸಿಸದಿರು.

: ತಾತ್ಪರ್ಯ- ಭ. ಭಾ. ಭಾ. :

ಎಲೈ! ರುದ್ರದೇವನೇ! ಕೇವಲ ಹಸ್ತಾಲಂಕಾರವಾಗದೆ ನಮ್ಮನ್ನು ರಕ್ಷಿಸುವ ನಿನ್ನ ಬಾಣ, ಬಿಲ್ಲು, ಬತ್ತಳಿಕೆ, ಆಯುಧ ಗಳನ್ನಿಟ್ಟುಕೊಳ್ಳುವ ಆಯುಧಕೋಶಗಳು, ಶತ್ರುಗಳ ಮೇಲೆ ಉಪಯೋಗಿಸುವ ಚಕ್ರಾದ್ಯಾಯುಧಗಳು-ಇವುಗಳಿಂದ ನಮ್ಮನ್ನು ಸುಖಪಡಿಸು. ನಮ್ಮ ವಿಷಯದಲ್ಲಿ ನಿನ್ನ ಆಯುಧಸಹಿತವಾದ ಶಾಂತಮೂರ್ತಿಯು ಶಾಂತವಾಗಿರಲಿ.

ರುದ್ರನ ಶಾಂತಮೂರ್ತಿಗಳು ಎರಡು ಬಗೆ. ಆಯುಧರಹಿತವಾದ ರೂಪವು ಒಂದು. ಆಯುಧಸಹಿತವಾದುದು ಒಂದು. ಹಿಂದಿನ ಮಂತ್ರದಿಂದ ಆಯುಧಸಹಿತವಾದ ಮೂರ್ತಿಯು ಪ್ರತಿಪಾದಿತವಾಗಿದೆ. ಇಲ್ಲಿ ಆಯುಧರಹಿತ ವಾದ ಶಾಂತವಾದ ಅಭಯಪ್ರದವಾದ ಮೂರ್ತಿಯು ಹೇಳಲ್ಪಟ್ಟಿದೆ.

## ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ ।

---

ಅಸೌ । ಯಃ । ಅವಸರ್ಪತೀತ್ಯವ-ಸರ್ಪತಿ । ನೀಲಗ್ರೀವ ಇತಿ ನೀಲ-ಗ್ರೀವಃ । ವಿಲೋಹಿತ ಇತಿ ವಿ-ಲೋಹಿತಃ ॥

---

| ಮಂತ್ರ | ವಿನಿಯೋಗ |
| --- | --- |
| **ಅಸೌ ಯೋಽವಸರ್ಪತಿ...ನಃ ॥** | ಶತರುದ್ರೀಯಹವನ/ಆದಿತ್ಯಾತ್ಮಕರುದ್ರನ ಸ್ತುತಿ. |

**ಪದಶಃ ಅರ್ಥ- ಸಾ. ಭಾ.**

**ಯಃ**=ಯಾವ ಆದಿತ್ಯಾತ್ಮಕರುದ್ರನು ಇರುವನೋ; **ಅಸೌ**=ಈತನೇ; **ನೀಲಗ್ರೀವಃ**=[ವಿಷಪಾನದಿಂದ] ಕಪ್ಪಾದ ಕಂಠವುಳ್ಳವನೂ; **ವಿಲೋಹಿತಃ**=[ಆಯಾ ಕಾಲದಲ್ಲಿ] ಕೆಂಪಾಗಿಯೂ ಇರುತ್ತಾನೆ. [ಅವನು] **ಅವಸರ್ಪತಿ**=[ಉದಯಾಸ್ತಗಳನ್ನು ಉಂಟುಮಾಡಲು] ಪ್ರವರ್ತಿಸುತ್ತಾನೆ.

**ಪದಶಃ ಅರ್ಥ- ಭ. ಭಾ. ಭಾ.**

**ಅಸೌ**=ಇಗೋ! ಈ ಆದಿತ್ಯಾತ್ಮಕನಾದ; **ಯಃ**=ಯಾವ ರುದ್ರನು; **ಅವಸರ್ಪತಿ**=[ಮುಳುಗುವಾಗ] ಕೆಳಗೆ ಇಳಿಯುವಂತೆ ತೋರುವನೋ/ದೇಶಾಂತರಕ್ಕೆ ಹೋಗುವನೋ [ಅವನು] **ನೀಲಗ್ರೀವಃ**=ಕಾಲ ಕೂಟವಿಷದ ಬಣ್ಣದಿಂದ ಕಪ್ಪಾದ ಕುತ್ತಿಗೆಯುಳ್ಳವನು. **ವಿಲೋಹಿತಃ**=ಉರಿಯುತ್ತಿರುವ ಬೆಂಕಿಯ ಬಣ್ಣವುಳ್ಳವನು. [ಆದಿತ್ಯನು ನೀಲಗ್ರೀವಃ=ನೀರನ್ನು ಹೀರಿ ಮುಳುಗುವಾಗ ಕತ್ತಲಿನ ಛಾಯೆಯಿಂದ ಕೂಡಿ ನಸುಗಪ್ಪಾದ ಕಿರಣಗಳುಳ್ಳವನು;/ರಶ್ಮಿಗಳು ಆಡಗುತ್ತಿರುವುದರಿಂದ; ವಿಲೋಹಿತಃ=ಕೆಂಪಾದ ಮಂಡಲ ವುಳ್ಳವನಾಗಿದ್ದಾನೆ.]

**: ತಾತ್ಪರ್ಯ- ಸಾ. ಭಾ. :**

ಕೈಲಾಸದಲ್ಲಿ ಮಲಗಿರುವ ಪರಮೇಶ್ವರನೇ! ನಿನ್ನನ್ನು ಹೊಂದುವುದಕ್ಕಾಗಿ ಮಂಗಲವಾದ, ಸ್ತೋತ್ರರೂಪವಾದ ವಚನಗಳಿಂದ ನಿನ್ನನ್ನು ಪ್ರಾರ್ಥಿಸುತ್ತೇವೆ. ಇದರಿಂದ ಪ್ರಸನ್ನನಾದ ನೀನು ನಮಗೆ ಸಂಬಂಧಿಸಿದ ಮನುಷ್ಯ-ಪಶುಗಳೆಂಬ ಜಂಗಮಜಗತ್ತೆಲ್ಲವೂ ರೋಗರಹಿತವಾಗಿಯೂ ಒಳ್ಳೆಯ ಮನಸ್ಸಿನಿಂದ ಕೂಡಿದುದನ್ನಾಗಿಯೂ ಇರುವಂತೆ ಅನುಗ್ರಹಿಸು.

**: ತಾತ್ಪರ್ಯ- ಭ. ಭಾ. ಭಾ. :**

ಹೇ! ರುದ್ರದೇವನೇ! ನೀನು ಕ್ರೂರವಲ್ಲದ, ತಪ್ಪು ಮಾಡಿದರೂ ಅಭಯಪ್ರದವಾದ, ವ್ಯಸನಗಳನ್ನು ಕೊಡದಿರುವ ತನುವಿನಿಂದ ನಮ್ಮ ವಿಷಯದಲ್ಲಿ ಶಾಂತನಾಗಿರು. ನೀನು ಕೈಲಾಸದಲ್ಲಿದ್ದುಕೊಂಡು ಭಕ್ತರಿಗೆ ಸುಖವನ್ನೀಯು ವವನು. ನಮಗೆ ಬೆಳಕನ್ನು/ಜ್ಞಾನವನ್ನು ಕೊಡು.

ಗಿರಿಶಂತ ಎಂಬ ಶಬ್ದಕ್ಕೆ ವಿವಿಧ ಅರ್ಥಗಳನ್ನು ಭಟ್ಟಭಾಸ್ಕರರು ಹೇಳಿರುತ್ತಾರೆ. ಅವು ಹೀಗಿವೆ.

ಕೈಲಾಸದಲ್ಲಿ ಪ್ರಕಟವಾಗಿರುವವನು, ಮಳೆಯನ್ನು ಸುರಿಸುವವನು, ವೇದರೂಪವಾದ ವಾಕ್ಕಿನಲ್ಲಿದ್ದು ಅರ್ಥರೂಪದಿಂದ ಸುಖವನ್ನೀಯುವವನು, ಪ್ರಣವದಲ್ಲಿ ಇರುವವನಾಗಿ ಧ್ಯಾನಕ್ಕೆ ವಿಷಯವಾಗಿ ಬ್ರಹ್ಮಾನಂದ ವೆಂಬ ಸುಖವನ್ನೀಯುವವನು-ಹೀಗೆ ವಿವರಿಸಿರುತ್ತಾರೆ.

ಉತ್ತೈನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ । ಉತ್ತೈನಂ ವಿಶ್ವಾ ಭೂತಾನಿ ಸ ದೃಷ್ಟೋ ಮೃಡಯಾತಿ ನಃ ॥

ಉತ । ಏನಮ್ । ಗೋಪಾ ಇತಿ ಗೋ-ಪಾಃ । ಅದೃಶನ್ನ್ । ಅದೃಶನ್ನ್ । ಉದಹಾರ್ಯ ಇತ್ಯುದ-ಹಾರ್ಯಃ ॥

ಉತ । ಏನಮ್ । ವಿಶ್ವಾ । ಭೂತಾನಿ । ಸಃ । ದೃಷ್ಟಃ । ಮೃಡಯಾತಿ । ನಃ ॥

ಪದಶಃ ಅರ್ಥ- ಸಾ. ಭಾ.

**ಉತ**=ಮತ್ತು; **ಏನಮ್**=ಈ ಸೂರ್ಯಮಂಡಲಸ್ಥನಾದ ರುದ್ರನನ್ನು; **ಗೋಪಾಃ**=ಗೊಲ್ಲರೂ; **ಅದೃಶನ್**=ನೋಡುತ್ತಾರೆ. ಉತ=ಮತ್ತು; **ಉದಹಾರ್ಯಃ**=ನೀರನ್ನು ತರುವ ಸ್ತ್ರೀಯರೂ; **ಅದೃಶನ್**=ನೋಡುತ್ತಾರೆ. **ಉತ**=ಮತ್ತು; **ಏನಮ್**=ಈ ಆದಿತ್ಯರೂಪನಾದ ರುದ್ರನನ್ನು; **ವಿಶ್ವಾ**=ಎಲ್ಲಾ; **ಭೂತಾನಿ**=ಪ್ರಾಣಿಗಳೂ; ಅದೃಶನ್=ನೋಡುತ್ತವೆ. **ದೃಷ್ಟಃ ಸಃ**=ಕಂಡಮಾತ್ರದಿಂದಲೇ ಆದಿತ್ಯಾತ್ಮಕರುದ್ರನು; **ನಃ**=ನಮ್ಮೆಲ್ಲರನ್ನೂ; **ಮೃಡಯಾತಿ**=ಸುಖಪಡಿಸುತ್ತಾನೆ/ಸುಖಪಡಿಸಲಿ.

ಪದಶಃ ಅರ್ಥ- ಭ. ಭಾ. ಭಾ.

**ಉತ**=ಮತ್ತು; **ಏನಮ್**=[ಆದಿತ್ಯರೂಪನಾದ] ದೇವನನ್ನು; **ಗೋಪಾಃ**=ಗೋಪಾಲಕರೂ ಕೂಡ; **ಅದೃಶನ್**=ನೋಡುತ್ತಾರೆ. **ಉದಹಾರ್ಯಃ**=ನೀರನ್ನು ತರುವ ಸ್ತ್ರೀಯರು; **ಅದೃಶನ್**=ನೋಡುತ್ತಾರೆ. **ಉತ**=ಮತ್ತು; **ಏನಮ್**=ಈ ಆದಿತ್ಯನನ್ನು; **ವಿಶ್ವಾ**=ಎಲ್ಲಾ; **ಭೂತಾನಿ**=ಪಶುಪಕ್ಷಿಗಳೇ ಮುಂತಾದ ಪ್ರಾಣಿಗಳು; ಅದೃಶನ್=ನೋಡುತ್ತಾರೆ; **ದೃಷ್ಟಃ**=[ಹೀಗೆ ಎಲ್ಲರಿಂದಲೂ] ಕಾಣಲ್ಪಡುತ್ತಿರುವ; **ಸಃ**=ಆ ದೇವನು; **ನಃ**=ನಮ್ಮನ್ನು; **ಮೃಡಯಾತಿ**=ಸುಖಿಗಳನ್ನಾಗಿ ಮಾಡಲಿ.

: ತಾತ್ಪರ್ಯ- ಸಾ. ಭಾ. :

ಭಕ್ತರನ್ನು ಅಧಿಕರೆಂದು ಎಲ್ಲರ ಮುಂದೆಯೂ ಹೇಳಲು ತಕ್ಕವನಾದ, ದೇವತೆಗಳ ನಡುವೆ ಮುಖ್ಯನಾದ, ದೇವತೆಗಳನ್ನು ರಕ್ಷಿಸಲು ಸಮರ್ಥನಾದ, ತನ್ನ ಧ್ಯಾನಮಾತ್ರದಿಂದಲೇ ಐಹಿಕ-ಆಮುಷ್ಮಿಕವಾದ ಸರ್ವರೋಗಗಳನ್ನೂ ಪರಿಹರಿಸುವ ಭವರೋಗವೈದ್ಯನಾದ ರುದ್ರನು ದೇವತೆಗಳ ಮಧ್ಯದಲ್ಲಿ ಶ್ರೇಷ್ಠನೆಂದು ನನ್ನನ್ನು ಪ್ರಸಿದ್ಧಿಪಡಿಸಲಿ. ವ್ಯಾಘ್ರ-ಸರ್ಪಾದಿಗಳನ್ನೂ, ರಾಕ್ಷಸಜಾತಿಗಳನ್ನೂ ನಾಶಪಡಿಸಿ ನಮ್ಮನ್ನು ಕಾಪಾಡಲಿ.

: ತಾತ್ಪರ್ಯ- ಭ. ಭಾ. ಭಾ. :

ಹೇ! ಗಿರಿಶಂತನೇ! ದುಷ್ಟರಾದ ತ್ರಿಪುರಾಸುರರ ದಹನದ ಬಳಿಕ ಉಪಸಂಹಾರಕ್ಕಾಗಿ ಕೈಯಲ್ಲಿ ಹಿಡಿದಿರುವ ಬಾಣವನ್ನು ನಮ್ಮ ವಿಷಯದಲ್ಲಿ ಶಾಂತವನ್ನಾಗಿ ಮಾಡು. ನೀನು ನಮ್ಮ ಪುರುಷರನ್ನೂ, ಪಶುಗಳನ್ನೂ, ಸ್ಥಾವರ-ಜಂಗಮಗಳೆಲ್ಲವನ್ನೂ ರಕ್ಷಿಸು. ಮಳೆಯನ್ನು ನೀಡುವುದರಿಂದ ರಕ್ಷಿಸು.

ಈ ಮಂತ್ರ ಮತ್ತು ಮುಂದಿನ ಮಂತ್ರದಿಂದ ತ್ರಿಪುರದಹನಪ್ರಯುಕ್ತವಾದ ಘೋರವಾದ ರುದ್ರತನುವು ಪ್ರಾರ್ಥಿಸಲ್ಪಡುತ್ತದೆ.

ಹೇ! ಗಿರಿಶನೇ! ಮಳೆಯನ್ನು ಕರುಣಿಸುವವನೇ! ವೇದ-ಪ್ರಣವಗಳ ಒಡೆಯನೇ! ನಿನ್ನ ಸದ್ಗುಣಗಳನ್ನು

# ನಮೋ ಅಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ । ಅಥೋ ಯೇ ಅಸ್ಯ ಸತ್ವಾನೋಽಹಂ ತೇಭ್ಯೋಽಕರಂ ನಮಃ ॥

ನಮಃ । ಅಸ್ತು । ನೀಲಗ್ರೀವಾಯೇತಿ ನೀಲ-ಗ್ರೀವಾಯ । ಸಹಸ್ರಾಕ್ಷಾಯೇತಿ ಸಹಸ್ರ-ಅಕ್ಷಾಯ । ಮೀಢುಷೇ ॥

ಅಥೋ ಇತಿ । ಯೇ । ಅಸ್ಯ । ಸತ್ವಾನಃ । ಅಹಮ್ । ತೇಭ್ಯಃ । ಅಕರಮ್ । ನಮಃ ॥

| ಮಂತ್ರ | ವಿನಿಯೋಗ |
|---|---|
| **ನಮೋ ಅಸ್ತು...ನಮಃ ॥** | **ಶತರುದ್ರೀಯಹವನ/ಒಂಬತ್ತನೆಯ ರುದ್ರಸ್ತುತಿಮಂತ್ರ.** |

**ಪದಶಃ ಅರ್ಥ- ಸಾ. ಭಾ.**

▲ **ನೀಲಗ್ರೀವಾಯ**=ನೀಲಕಂಠನಾದ; **ಸಹಸ್ರಾಕ್ಷಾಯ**=ಇಂದ್ರರೂಪದಿಂದ ಸಾವಿರಾರು ಕಣ್ಣುಗಳನ್ನು ಹೊಂದಿರುವ; **ಮೀಢುಷೇ**=[ಪರ್ಜನ್ಯಮೂರ್ತಿಯನ್ನು ಧರಿಸಿ] ವೃಷ್ಟಿಕಾರಣನಾದ ರುದ್ರನಿಗೆ; **ನಮಃ ಅಸ್ತು**=ನಮಸ್ಕಾರವಿರಲಿ./ನಮಸ್ಕರಿಸುವೆನು; **ಅಥೋ**=ಅಲ್ಲದೆ; **ಅಸ್ಯ**=ಈ ರುದ್ರನಿಗೆ; **ಯೇ**=ಯಾರು; **ಸತ್ವಾನಃ**=ಭೃತ್ಯರೂಪರಾಗಿರುವರೋ; **ತೇಭ್ಯಃ**=ಅವರಿಗೆ; **ಅಹಮ್**=ನಾನು; **ನಮಃ**=ನಮಸ್ಕಾರವನ್ನು; **ಅಕರಮ್**=ಮಾಡುವೆನು.

**ಪದಶಃ ಅರ್ಥ- ಭ. ಭಾ. ಭಾ.**

▲ **ನೀಲಗ್ರೀವಾಯ**=ನೀಲಕಂಠನಾದ; **ಸಹಸ್ರಾಕ್ಷಾಯ**=ಅನೇಕ ಕಣ್ಣುಗಳಿಂದ ಕೂಡಿ ಇಂದ್ರರೂಪನಾಗಿ ರುವ; [ರುದ್ರನಿಗೆ] **ಮೀಢುಷೇ**=ಮಳೆಯ ಮೂಲಕ ಭೂಮಿಯನ್ನು ತೋಯಿಸುವ/ಜಗತ್ತಿಗೆ ಕಾರಣನಾದ /ಪುರುಷರೂಪನಾಗಿ ಗರ್ಭಕ್ಕೆ ಕಾರಣನಾದ; [ರುದ್ರನಿಗೆ] **ನಮಃ ಅಸ್ತು**=ನಮಸ್ಕಾರವಿರಲಿ. **ಅಥೋ**= ಮತ್ತು; **ಯೇ**=ಯಾರು; **ಅಸ್ಯ**=ಈ ರುದ್ರನ; **ಸತ್ವಾನಃ**=ಸಮೀಪದಲ್ಲಿಯೇ ಇರುವ ಪ್ರಮಥಗಣ ಗಳಿವೆಯೋ; **ತೇಭ್ಯಃ**=ಅವರಿಗೂ **ಅಹಮ್**=ನಾನು; **ನಮಃ**=ನಮಸ್ಕಾರವನ್ನು; **ಅಕರಮ್**= ಮಾಡುತ್ತೇನೆ.

**: ತಾತ್ಪರ್ಯ- ಸಾ. ಭಾ. :**

ರುದ್ರನು ಸರ್ವವ್ಯಾಪಿಯು ಮತ್ತು ಸರ್ವಾತ್ಮಕನು. ಆದಿತ್ಯಾತ್ಮಕನಾದ ರುದ್ರನು ಮಂಡಲದಲ್ಲಿ ಇದ್ದವನಾಗಿ ಉದಯಿಸುವಾಗ ಕೆಂಪಾಗಿರುತ್ತಾನೆ. ಸ್ವಲ್ಪ ಹೊತ್ತಿನ ಮೇಲೆ ಎಳೆಗೆಂಪಾಗುತ್ತಾನೆ. ಅನಂತರ ಕೆಂಪು ಬೆರೆತ ಹಳದಿ ಅಂದರೆ ಪಿಂಗಲವರ್ಣನಾಗುತ್ತಾನೆ.

**: ತಾತ್ಪರ್ಯ- ಭ. ಭಾ. ಭಾ. :**

ಎತ್ತಿ ಹೇಳುವುದರಿಂದ ಮಂಗಲಕರವಾದ, ನಿನಗೆ ಪ್ರೀತಿಯನ್ನುಂಟುಮಾಡುವ ಸ್ತೋತ್ರದಿಂದ ನಿನ್ನನ್ನು ನಮ್ಮ ಅಭಿಮುಖನನ್ನಾಗಿ ಮಾಡಿಕೊಂಡು ಸರ್ವಾತ್ಮಕನನ್ನಾಗಿ ಸ್ತುತಿಸುತ್ತೇವೆ. ನಿನ್ನನ್ನು ಯಾವ ಬಗೆಯಲ್ಲಿ ಸ್ತುತಿಸಿದರೆ

ಪ್ರಮುಂಚ ಧನ್ವನಸ್ತ್ವಮುಭಯೋರಾರ್ತ್ನಿಯೋರ್ಜ್ಯಾಮ್ । ಯಾಶ್ಚ ತೇ ಹಸ್ತ ಇಷವಃ [ಇಷವಃ (೩)] ಪರಾ ತಾ ಭಗವೋ ವಪ ॥

---

ಪ್ರೇತಿ । ಮುಂಚ । ಧನ್ವನಃ । ತ್ವಮ್ । ಉಭಯೋಃ । ಆರ್ತ್ನಿಯೋಃ । ಜ್ಯಾಮ್ ॥ ಯಾಃ । ಚ । ತೇ । ಹಸ್ತೇ । ಇಷವಃ । (೩) । ಪರೇತಿ । ತಾಃ । ಭಗವ ಇತಿ ಭಗ-ವಃ । ವಪ ॥

---

| ಮಂತ್ರ | ವಿನಿಯೋಗ |
|---|---|
| ಪ್ರಮುಂಚ....ವಪ ॥ | ಶತರುದ್ರೀಯಹವನ/ಹತ್ತನೆಯ ರುದ್ರಸ್ತುತಿಯ ಮಂತ್ರ.<br>ಆಯುಧೋಪಸಂಹಾರದ ಪ್ರಾರ್ಥನೆಯ ಪ್ರಥಮಮಂತ್ರ-ಭ.ಭಾ. |

ಪದಶಃ ಅರ್ಥ- ಸಾ. ಭಾ. ——

▲ **ಭಗವಃ**=ಪೂಜ್ಯನಾದ/ಷಡ್ಗುಣಸಂಪನ್ನನಾದ ರುದ್ರನೇ! **ತ್ವಮ್**=ನೀನು; **ಧನ್ವನಃ**=ಬಿಲ್ಲಿನ; **ಉಭಯೋಃ**=ಎರಡು; **ಆರ್ತ್ನಿಯೋಃ**=ತುದಿಗಳಲ್ಲಿ [ಕಟ್ಟಿರುವ] **ಜ್ಯಾಮ್**=ನಾಣನ್ನು/ಹಗ್ಗವನ್ನು; **ಪ್ರ ಮುಂಚ**=ಬಿಚ್ಚಿ ಬಿಡು. **ಚ**=ಮತ್ತು; **ತೇ**=ನಿನ್ನ; **ಹಸ್ತೇ**=ಕೈಯಲ್ಲಿ; **ಯಾಃ**=ಯಾವ; **ಇಷವಃ**=[ದುಷ್ಟರ ಮೇಲೆ ಪ್ರಯೋಗಿಸಲು ಸಿದ್ಧಗೊಳಿಸಿರುವ] ಬಾಣಗಳು [ಇವೆಯೋ]; **ತಾಃ**=ಅವುಗಳನ್ನು; **ಪರಾ ವಪ**= ಹಿಂದಿರುಗಿಸು.

ಪದಶಃ ಅರ್ಥ- ಭ. ಭಾ. ಭಾ. ——

▲ **ಭಗವಃ**=ಷಡ್ಗುಣಸಂಪನ್ನನಾದ ಭಗವಂತನಾದ ರುದ್ರದೇವನೇ! **ತ್ವಮ್**=ನೀನು; **ಧನ್ವನಃ**=ಬಿಲ್ಲಿನ; **ಉಭಯೋಃ**=ಎರಡು; **ಆರ್ತ್ನಿಯೋಃ**=ತುದಿಗಳಲ್ಲಿರುವ; **ಜ್ಯಾಮ್**=ನಾಣನ್ನು/ಹಗ್ಗವನ್ನು; **ಪ್ರ ಮುಂಚ** =ಸಡಿಲಿಸು. **ಚ**=ಮತ್ತು; **ತೇ**=ನಿನ್ನ; **ಹಸ್ತೇ**=ಕೈಯಲ್ಲಿರುವ; **ಯಾಃ**=ಯಾವ; **ಇಷವಃ**=[ಜಗತ್ತನ್ನು ಉಪಸಂಹಾರ ಮಾಡಲು] ಬಾಣಗಳು ಇವೆಯೋ; **ತಾಃ**=ಅವುಗಳನ್ನು; **ಪರಾ ವಪ**= ಬಿಟ್ಟುಬಿಡು.

——: ತಾತ್ಪರ್ಯ- ಸಾ. ಭಾ. :——

ಸೂರ್ಯನ ರಶ್ಮಿಗಳೂ ರುದ್ರರೂಪವೇ. ಆ ರುದ್ರರು ಸಾವಿರಾರು ಸಂಖ್ಯೆಯಲ್ಲಿ ಭೂಮಿಯೆಲ್ಲವನ್ನೂ ಆಶ್ರಯಿಸಿರುತ್ತಾರೆ. ನಾವು ಸ್ತುತಿ-ನಮಸ್ಕಾರಗಳಿಂದ ಅವರ ಕ್ರೋಧದಂತಿರುವ ತೀಕ್ಷ್ಣತೆಯನ್ನು ದೂರ ಮಾಡುತ್ತೇವೆ.

——: ತಾತ್ಪರ್ಯ- ಭ. ಭಾ. ಭಾ. :——

ನಮ್ಮ ಪಶು, ಪುತ್ರ ಮುಂತಾದ ಜಂಗಮವೂ, ವೃಕ್ಷ ಮುಂತಾದ ಸ್ಥಾವರವೂ-ಈ ಎಲ್ಲವೂ ನೀರೋಗವೂ, ಒಳ್ಳೆಯ ಮನಸ್ಸಿನಿಂದ ಕೂಡಿದ್ದಾಗುವುದೋ ಆ ರೀತಿ ಸ್ತೋತ್ರ ಮಾಡುತ್ತೇವೆ.

**'ಅಧ್ಯವೋಚತ್'** ಎಂದು ಆರಂಭವಾಗುವ ಈ ಮಂತ್ರ ಮೊದಲಾಗಿ ನಾಲ್ಕು ಮಂತ್ರಗಳು ಪರೋಕ್ಷಕೃತಗಳು.

## ಅವತತ್ಯ ಧನುಸ್ತ್ವಗ್ಂ ಸಹಸ್ರಾಕ್ಷ ಶತೇಷುಧೇ । ನಿಶೀರ್ಯ ಶಲ್ಯಾನಾಂ ಮುಖಾ ಶಿವೋ ನಸ್ಸುಮನಾ ಭವ ॥

---

ಅವತತ್ಯೇತ್ಯವ-ತತ್ಯ । ಧನುಃ । ತ್ವಮ್ । ಸಹಸ್ರಾಕ್ಷೇತಿ ಸಹಸ್ರ-ಅಕ್ಷ । ಶತೇಷುಧ ಇತಿ ಶತ-ಇಷುಧೇ ॥

ನಿಶೀರ್ಯೇತಿ ನಿ-ಶೀರ್ಯ । ಶಲ್ಯಾನಾಮ್ । ಮುಖಾ । ಶಿವಃ । ನಃ । ಸುಮನಾ ಇತಿ ಸು-ಮನಾಃ । ಭವ ॥

---

| ಮಂತ್ರ | ವಿನಿಯೋಗ |
|---|---|
| ಅವತತ್ಯ....ಭವ ॥ | ಶತರುದ್ರೀಯಹವನ/ಹನ್ನೊಂದನೆಯ ರುದ್ರಸ್ತುತಿಯ ಮಂತ್ರ. ಆಯುಧೋಪಸಂಹಾರದ ಪ್ರಾರ್ಥನೆಯ ದ್ವಿತೀಯಮಂತ್ರ-ಭ.ಭಾ. |

ಪದಶಃ ಅರ್ಥ- ಸಾ. ಭಾ.

▲ **ಸಹಸ್ರಾಕ್ಷ**=ಇಂದ್ರರೂಪನಾಗಿ ಸಾವಿರ ಕಣ್ಣುಗಳನ್ನು ಹೊಂದಿರುವ; **ಶತೇಷುಧೇ**=ನೂರಾರು ಬತ್ತಳಿಕೆಗಳುಳ್ಳ ರುದ್ರದೇವನೇ!; **ತ್ವಮ್**=ನೀನು; **ಧನುಃ**=ಬಿಲ್ಲನ್ನು; **ಅವತತ್ಯ**=ನಾಣನ್ನು ಬಿಚ್ಚಿ ಇಳಿಸಿ; **ಶಲ್ಯಾನಾಮ್**=ಬಾಣಗಳ; **ಮುಖಾ**=ಲೋಹದ ತುದಿಗಳನ್ನು; **ನಿಶೀರ್ಯ**=ಕೆಳಮುಖವನ್ನಾಗಿ ಮಾಡಿ; **ನಃ**=ನಮ್ಮ ವಿಷಯದಲ್ಲಿ; **ಶಿವಃ**=ಶಾಂತನಾಗಿಯೂ; **ಸುಮನಾಃ**=ಅನುಗ್ರಹಯುಕ್ತವಾದ ಮನಸ್ಸುಳ್ಳವನಾಗಿಯೂ; **ಭವ**=ಆಗು. [ಹೀಗೆ ನಿನ್ನನ್ನು ಪ್ರಾರ್ಥಿಸುತ್ತೇನೆ].

ಪದಶಃ ಅರ್ಥ- ಭ. ಭಾ. ಭಾ.

▲ **ಸಹಸ್ರಾಕ್ಷ**=ಇಂದ್ರರೂಪನಾಗಿಯೂ, ಸಹಸ್ರಸಂಖ್ಯೆಯ ರುದ್ರರೂಪನಾದುದರಿಂದ ಸಹಸ್ರನೇತ್ರನೇ! **ಶತೇಷುಧೇ**=ಅನೇಕ ಬತ್ತಳಿಕೆಗಳನ್ನು ಹೊಂದಿರುವವನೇ! **ತ್ವಮ್**=ನೀನು; **ಧನುಃ**=ಪಿನಾಕವೆಂಬ ಬಿಲ್ಲನ್ನು; **ಅವತತ್ಯ**=ನಾಣನ್ನು ಬಿಚ್ಚಿದುದನ್ನಾಗಿ ಮಾಡಿ; **ಶಲ್ಯಾನಾಮ್**=ಬಾಣಗಳ; **ಮುಖಾ**=ಅಗ್ರಗಳನ್ನು; **ನಿಶೀರ್ಯ**=ಕ್ರಿಯಾರಹಿತಗಳನ್ನಾಗಿ ಮಾಡಿ; **ನಃ**=ನಮ್ಮ ವಿಷಯದಲ್ಲಿ; **ಶಿವಃ**=ಅಪಚಾರವನ್ನು ಮಾಡಿದ್ದರೂ ಕ್ಷಮಿಸುವವನಾಗಿಯೂ; **ಸುಮನಾಃ**=[ನನ್ನ ಭಕ್ತನು ಇವನೆಂದು] ಒಳ್ಳೆಯ ಮನಸ್ಸುಳ್ಳವನಾಗಿಯೇ; **ಭವ**=ಇರು.

: ತಾತ್ಪರ್ಯ- ಭ. ಭಾ. ಭಾ. :

**ಭಕ್ತಪಕ್ಷಪಾತಿಯಾದ ಶಿವನು ನನ್ನನ್ನು ಅಧಿಕನೆಂದು ಹೇಳಲಿ. ಆತನು ಹಾಗೆ ಹೇಳಲು ಅರ್ಹನು. ಸಾಮಾನ್ಯರು ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ ಅವನು ದಿವ್ಯಜ್ಞಾನವುಳ್ಳವರಲ್ಲಿ ಪ್ರಥಮನು. ಕ್ರೀಡೆಯಲ್ಲಿ ಸುಖರೂಪನಾಗಿ, ಗೆಲ್ಲುವ ಬಯಕೆಯಲ್ಲಿ ಗೆಲುವಿನ ರೂಪನಾಗಿ, ವ್ಯವಹಾರದಲ್ಲಿ ಲೇಪವಿಲ್ಲದವನಾಗಿ, ಬೆಳಕಿನ ರೂಪದವನಾಗಿ, ಸ್ತುತಿಕ್ರಿಯೆಯಲ್ಲಿ ಸ್ತುತಿಗೆ ಅರ್ಹನಾಗಿ, ಗತಿಕ್ರಿಯೆಯಲ್ಲಿ ಗಮ್ಯನಾಗಿ-ದೈವ್ಯನೆನಿಸಿದ್ದಾನೆ. ವ್ಯಾಧಿಸಂಸಾರಾದಿ ವ್ಯಸನಗಳಿಗೆ ವೈದ್ಯನು. ವೈದ್ಯರ ಮಧ್ಯದಲ್ಲಿ ವೈದ್ಯೇಶ್ವರನೆನಿಸಿರುವವನು. 'ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ'**

# ವಿಜ್ಯಂ ಧನುಃ ಕಪರ್ದಿನೋ ವಿಶಲ್ಯೋ ಬಾಣವಾಗ್ಂ ಉತ ।

ವಿಜ್ಯಮಿತಿ ವಿ-ಜ್ಯಮ್ । ಧನುಃ । ಕಪರ್ದಿನಃ । ವಿಶಲ್ಯ ಇತಿ ವಿ-ಶಲ್ಯಃ । ಬಾಣವಾನಿತಿ ಬಾಣ-ವಾನ್ । ಉತ ॥

| ಮಂತ್ರ | ವಿನಿಯೋಗ |
|---|---|
| ವಿಜ್ಯಂ...ನಿಷಂಗಥಿಃ ॥ | ಶತರುದ್ರೀಯಹವನ/ಹನ್ನೆರಡನೆಯ ಸ್ತುತಿಮಂತ್ರ.<br>ಆಯುಧೋಪಸಂಹಾರದ ಪ್ರಾರ್ಥನೆಯ ಮೂರನೆಯ ಮಂತ್ರ-ಭ.ಭಾ. |

ಪದಶಃ ಅರ್ಥ- ಸಾ. ಭಾ.

**ಕಪರ್ದಿನಃ**=ಕಪರ್ದವೆಂಬ ಜಟಾಜೂಟವುಳ್ಳ ರುದ್ರದೇವನ; **ಧನುಃ**=ಪಿನಾಕವೆಂದು ಪ್ರಸಿದ್ಧವಾದ ಬಿಲ್ಲು; **ವಿಜ್ಯಮ್**=ಇಳಿಸಿದ ಹೆದೆಯುಳ್ಳದುದಾಗಲಿ. **ಉತ**=ಮತ್ತು; **ಬಾಣವಾನ್**=ಬಾಣಗಳನ್ನು ಹೊಂದಿರುವ ಬತ್ತಳಿಕೆಯು; **ವಿಶಲ್ಯಃ**=[ಬಾಣಗಳ ಅಗ್ರಗಳು ಅದರ ಒಳಗೆ ಮುಚ್ಚಿಟ್ಟಿರುವುದರಿಂದ] ಪ್ರಕಟಪಡಿಸದ ಚೂಪಾದ ಅಗ್ರವುಳ್ಳದುದಾಗಿ [ಆಗಲಿ].

ಪದಶಃ ಅರ್ಥ- ಭ. ಭಾ. ಭಾ.

**ಕಪರ್ದಿನಃ**=ಕಪರ್ದವೆಂಬ ಜಟಾಜೂಟವನ್ನು ಧರಿಸಿರುವ ರುದ್ರನ; **ಧನುಃ**=ಪಿನಾಕವು; **ವಿಜ್ಯಮ್**=ಬಿಚ್ಚಿದ ಹೆದೆಯುಳ್ಳದ್ದಾಗಿ [ಆಗಲಿ] [ಈ ರುದ್ರನ] **ಬಾಣವಾನ್ ಉತ**=ಬತ್ತಳಿಕೆಯು ಬಾಣಗಳನ್ನು ಮೊದಲು ಹೊಂದಿದ್ದರೂ ಕೂಡ; [ಈಗ] **ವಿಶಲ್ಯಃ**=ಬಾಣರಹಿತವಾಗಲಿ.

: ಭಾವಾರ್ಥ- ಭ. ಭಾ. ಭಾ. :

[ಋ. ಸಂ. 2.33.4] ಎಂದು ಪ್ರಸಿದ್ಧನಾದವನು.

ಭಯವನ್ನು ನಿವಾರಿಸುವುದರಿಂದಲೂ, ಹೆದರಿದವನು ಅವನನ್ನು ಮನಸ್ಸಿನಿಂದ ಕೋರುವುದರಿಂದಲೂ ಅವನು **'ಭಿಷಕ್'** ಎನ್ನಿಸಿಕೊಂಡಿರುವವನು. **'ಭಿಯಾಂ ಸಾದಯಿತಾ, ಭೀತೌ ಸಜ್ಜತೇ ಇತಿ ಭಿಷಕ್ ।'** ಅಂತಹ ರುದ್ರನು ಪ್ರತ್ಯಕ್ಷವಾಗಿ ಹಿಂಸಿಸುವ ವ್ಯಾಘ್ರ-ಸರ್ಪಾದಿಗಳನ್ನೂ ಕಣ್ಣಿಗೆ ಕಾಣದೆ ಪರೋಕ್ಷವಾಗಿದ್ದುಕೊಂಡು ಹಿಂಸಿಸುವ ರಾಕ್ಷಸ-ಪಿಶಾಚಾದಿಗಳೆಲ್ಲವನ್ನೂ ನಾಶಪಡಿಸಲಿ. ನನ್ನನ್ನು ಸರ್ವಾಧಿಕಗೊಳಿಸಲಿ. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪೀಡಿಸುವ ಎಲ್ಲರಿಂದಲೂ 'ಹೆದರದಿರಿ, ನಿಮ್ಮನ್ನು ಕಾಪಾಡುವೆನು' ಎಂದು ಹೇಳಲು ಸಮರ್ಥನಾದ ದೇವನು ನಮ್ಮನ್ನು ಮೇಲಾಗಿಸಲಿ.

ಜಗತ್ತನ್ನು ಸಂಹರಿಸುವ ಮೂರ್ತಿಗಳಲ್ಲಿ ಆದಿತ್ಯನೂ ಒಬ್ಬನಾದುದರಿಂದ ಭಕ್ತರ ವಿಷಯದಲ್ಲಿ ಅನುಗ್ರಹವನ್ನು ಮಾಡಬೇಕೆಂದು ಈ ಮಂತ್ರಗಳಿಂದ ಯಜಮಾನನು ಪ್ರಾರ್ಥಿಸಿಕೊಳ್ಳುತ್ತಾನೆ.

ಈ ಮಂತ್ರದಲ್ಲಿಯೂ ಮುಂದಿನ ಮಂತ್ರದಲ್ಲಿಯೂ **'ಅಸೌ'** ಎಂಬುದಾಗಿ ಬೆರಳಿನಿಂದ ನಿರ್ದೇಶಿಸಿ ಪ್ರಾರ್ಥಿಸಲಾಗಿದೆ.

ಊರ್ಧ್ವಲೋಕದಲ್ಲಿರುವ ಈ ಆದಿತ್ಯನು ಉದಯಸಮಯದಲ್ಲಿ ಅತಿಕೆಂಪಾಗಿದ್ದು ಬಳಿಕ ಭೂಮಿಯ ಕಾಂತಿಯ ಸಂಪರ್ಕದಿಂದ ಎಳೆಗೆಂಪಾಗಿರುವನು. ಆ ಆದಿತ್ಯಾತ್ಮಕರುದ್ರನು ಜ್ಞಾನ-ಪ್ರಕಾಶಗಳನ್ನು ಕರುಣಿಸುವನು.

# ಅನೇಶನ್ನಸ್ಯೇಷವ ಆಭುರಸ್ಯ ನಿಷಂಗಥಿಃ ॥

ಅನೇಶನ್ನ್ । ಅಸ್ಯ । ಇಷವಃ । ಆಭುಃ । ಅಸ್ಯ । ನಿಷಂಗಥಿಃ ॥

ಪದಶಃ ಅರ್ಥ– ಸಾ. ಭಾ.

**ಅಸ್ಯ**=ಈ ರುದ್ರದೇವನ; **ಇಷವಃ**=ಬಾಣಗಳು; **ಅನೇಶನ್**=ಹಿಂಸಿಸಲು ಅಸಮರ್ಥವಾಗಲಿ. **ಅಸ್ಯ**=ಈ ರುದ್ರದೇವನ; **ನಿಷಂಗಥಿಃ**=ಖಡ್ಗಕೋಶವೂ/ಬತ್ತಳಿಕೆಯೂ; **ಆಭುಃ**=[ಬೇರೆ ಕಡೆ ತೆಗೆದಿಟ್ಟಿರುವುದ ರಿಂದ/ಗೋಡೆಗೆ ತೂಗುಹಾಕಿರುವುದರಿಂದ] ಖಡ್ಗವನ್ನು, ಬಾಣಗಳನ್ನು ಧರಿಸಿರುವಂತಿರಲಿ./ಅವುಗಳಿಂದ ಸೆಳೆಯದಂತೆ ಇರಲಿ.

ಪದಶಃ ಅರ್ಥ– ಭ. ಭಾ. ಭಾ.

**ಅಸ್ಯ**=ಈ ರುದ್ರದೇವನ; **ಇಷವಃ**=ಬಾಣಗಳು; **ಅನೇಶನ್**=[ಕಣ್ಣಿಗೆ] ಕಾಣದಿರಲಿ/ಬತ್ತಳಿಕೆಯಲ್ಲಿ ಲ್ಲದಿರಲಿ; **ಅಸ್ಯ**=ಈ ರುದ್ರದೇವನ; **ನಿಷಂಗಥಿಃ**=ಖಡ್ಗಕೋಶವು; **ಆಭುಃ**=ನೆಪಮಾತ್ರಕ್ಕಿರಲಿ. [ಖಡ್ಗ ರಹಿತವಾಗಿರುವುದರಿಂದ ಇದ್ದಂತೆ ಇರಲಿ]/ನಿಷಂಗಥಿಃ=ಖಡ್ಗವು; ಆಭುಃ=ಕುಗ್ಗಿದ ಶಕ್ತಿಯಿಂದ ನೆಪಕ್ಕಿರಲಿ.

: ತಾತ್ಪರ್ಯ– ಭ. ಭಾ. ಭಾ. :

ಮಂಗಲಕಾರಣನು. ಆ ರುದ್ರನಂತೆಯೇ ಮಹತ್ತ್ವವನ್ನು ಹೊಂದಿರುವ ಅನುಚರರು ಕರ್ಮಾನುಗುಣವಾದ ಫಲವನ್ನು ಜಗತ್ತಿಗೆ ನೀಡಲು ಭೂಮಿಯ ಎಲ್ಲ ದಿಕ್ಕುಗಳಲ್ಲಿಯೂ ಸಾವಿರಾರು ಸಂಖ್ಯೆಯಲ್ಲಿ ಇರುತ್ತಾರೆ. ಇಂತಹ ರುದ್ರನ ಹಾಗೂ ಅವನ ಅನುಚರರಿಗೆ ವಿಹಿತವಾದ ಕರ್ಮಗಳನ್ನು ನಾವು ಅನುಷ್ಠಿಸದೆ ಇರುವುದರಿಂದ ಉಂಟಾದ ತಿರಸ್ಕಾರಭಾವನೆಯನ್ನೂ, ನಿಷಿದ್ಧವಾದ ಕರ್ಮಗಳನ್ನು ನಾವು ಮಾಡಿದುದರಿಂದ ನಮ್ಮಲ್ಲಿ ಅವರಿಗೆ ಉಂಟಾಗಿರುವ ಕೋಪವನ್ನೂ ಸ್ತುತಿ–ನಮಸ್ಕಾರಗಳಿಂದ ಹೋಗಲಾಡಿಸುತ್ತೇವೆ.

ಇಗೋ! ಈ ಪ್ರತ್ಯಕ್ಷನಾಗಿರುವ ಆದಿತ್ಯಾತ್ಮಕರುದ್ರನು ಮುಳುಗುವಾಗ ಕೆಳಗಿಳಿಯುವಂತೆ ತೋರುವವನು. ಈ ಆದಿತ್ಯನ ರಶ್ಮಿಗಳು ಕಾಲಭೇದದಿಂದ ಬೇರೆ ಬೇರೆ ಬಣ್ಣವುಳ್ಳವುಗಳು. *ರುದ್ರನು ನೀಲಕಂಠನು. ಆದಿತ್ಯನು ನೀರನ್ನು ಹೀರಿ ನಸುಗಪ್ಪಾದ ಕಿರಣಗಳಿಂದ ನೀಲಗ್ರೀವನು. ರುದ್ರನು ಬೆಂಕಿಯ ಪ್ರಕಾಶವುಳ್ಳವನು. ಸೂರ್ಯನು ಕೆಂಪು ಮಂಡಲವುಳ್ಳವನು. ಇಬ್ಬರೂ ವಿಲೋಹಿತರು.

ಈ ಆದಿತ್ಯಾತ್ಮಕರುದ್ರನು ಶ್ರುತಿಗಳೇ ಮೊದಲಾದವುಗಳಿಂದ ಮಾತ್ರ ಪ್ರತಿಪಾದಿತವಾಗುವ ಮೂರ್ತಿಯಂತಲ್ಲ. ಈತನನ್ನು ಅಜ್ಞರಾದ ಗೊಲ್ಲರೂ, ನೀರನ್ನು ತರುವ ಹೆಂಗಸರೂ ನೋಡುತ್ತಾರೆ. ಅತಿಮಹಿಮಾನ್ವಿತನಾದ ದೇವನನ್ನು ತಿಳಿಯುವುದರಲ್ಲಿ ಎಲ್ಲರೂ ಅಜ್ಞರೇ! ಸೂರ್ಯನನ್ನು ಮಾತ್ರ ಪಶು–ಪ್ರಾಣಿಗಳೂ ನೋಡುತ್ತವೆ. ಶ್ರುತ್ಯಾದಿಗಳಿಂದ ಅರಿಯಲಾಗದವನಿಗೆ ಪ್ರತ್ಯಕ್ಷವಾಗಿ ಕಾಣುವ ದೇವನು ಆದಿತ್ಯಾತ್ಮಕರುದ್ರನು. ಅವನು ನಮಗೆ ನೆಮ್ಮದಿಯನ್ನು ಕರುಣಿಸಲಿ.

ಈ ಮಂತ್ರವನ್ನು ಅಸ್ತಮಾನಗೊಳ್ಳುತ್ತಿರುವ ಸೂರ್ಯನ ಪರವಾಗಿ ಕೆಲವರು ವಿವರಿಸುತ್ತಾರೆಂದು ಮಿಶ್ರರು ತಿಳಿಸಿದ್ದಾರೆ.

ಅಸ್ತಂಗತನಾಗುತ್ತಿರುವ ಸೂರ್ಯನಿಂದಲೂ ಜಗತ್ತಿಗೆ ಉಪಕಾರವಿದೆ. ಸೂರ್ಯಾಸ್ತವಾಗುತ್ತಿರುವಂತೆಯೇ ಗೊಲ್ಲರು ಹಸುಗಳನ್ನು ಅವುಗಳ ಸ್ಥಾನಗಳಿಗೆ ಹಿಂದಿರುಗಿಸುತ್ತಾರೆ. ನೀರನ್ನು ತರುವ ಸ್ತ್ರೀಯರೂ ಸಹ ಸೂರ್ಯಾಸ್ತಕ್ಕೆ

* ನೀಲಗ್ರೀವ, ವಿಲೋಹಿತ ಪದಗಳನ್ನು ರುದ್ರನಿಗೂ ಸೂರ್ಯನಿಗೂ ಪ್ರತ್ಯೇಕವಾಗಿ ವಿಶೇಷಣ ಮಾಡಿ ಮಿಶ್ರರು ವಿವರಿಸಿದ್ದಾರೆ.

# ಯಾ ತೇ ಹೇತಿರ್ಮೀಢುಷ್ಟಮ ಹಸ್ತೇ ಬಭೂವ ತೇ ಧನುಃ ।

ಯಾ । ತೇ । ಹೇತಿಃ । ಮೀಢುಷ್ಟಮೇತಿ ಮೀಢುಃ-ತಮ । ಹಸ್ತೇ । ಬಭೂವ । ತೇ । ಧನುಃ ॥

| ಮಂತ್ರ | ವಿನಿಯೋಗ |
|---|---|
| **ಯಾ ತೇ ಹೇತಿಃ...ಭುಜ ॥** | **ಶತರುದ್ರೀಯಹವನ/ಹದಿಮೂರನೆಯ ಸ್ತುತಿಮಂತ್ರ/ಆಯುಧೋಪಸಂಹಾರದ ಪ್ರಾರ್ಥನೆಯ ಅನುಷ್ಟುಪ್ಛಂದಸ್ಸಿನ ಪ್ರಥಮಮಂತ್ರ-ಭ.ಭಾ.** |

**ಪದಶಃ ಅರ್ಥ- ಸಾ. ಭಾ.**

**ಮೀಢುಷ್ಟಮ**=ಅತಿಶಯವಾಗಿ ಕಾಮನೆಗಳನ್ನು ಪೂರೈಸುವ ರುದ್ರದೇವನೇ! **ಯಾ**=ಯಾವ; **ಹೇತಿಃ**= ಆಯುಧವು; **ತೇ**=ನಿನ್ನ; **ಹಸ್ತೇ**=ಕೈಯಲ್ಲಿ; **ಬಭೂವ**=ಇದೆಯೋ; **ತೇ ಹಸ್ತೇ**=ನಿನ್ನ ಕೈಯಲ್ಲಿ; **ಧನುಃ**= ಬಿಲ್ಲು; **ಬಭೂವ**=ಇದೆಯೋ;

**ಪದಶಃ ಅರ್ಥ- ಭ. ಭಾ. ಭಾ.**

**ಮೀಢುಷ್ಟಮ**=ಕಾಮನೆಗಳನ್ನು ಬೇಕಾದಂತೆ ಪೂರೈಸುವವನೇ! **ಯಾ**=ಯಾವ; **ತೇ**=ನಿನ್ನ; **ಹೇತಿಃ**= ಪ್ರಸಿದ್ಧವಾದ ಆಯುಧವಾದ; **ಧನುಃ**=ಪಿನಾಕವೆಂಬ ಬಿಲ್ಲು; **ತೇ ಹಸ್ತೇ**=ನಿನ್ನ ಕೈಯಲ್ಲಿ; **ಬಭೂವ**= ಇದೆಯೋ;

**: ತಾತ್ಪರ್ಯ- ಸಾ. ಭಾ. :**

ರುದ್ರನು ಕಾಲಕೂಟವಿಷದಿಂದ ಕಪ್ಪಾದ ಕಂಠವುಳ್ಳವನು. ಆದಿತ್ಯಮಂಡಲವರ್ತಿಯಾಗಿ ಉದಯಕಾಲದಲ್ಲಿ ಕೆಂಪಾಗಿರುತ್ತಾನೆ. ಬಳಿಕ ವಿವಿಧ ಬಣ್ಣಗಳನ್ನು ತಳೆಯುತ್ತಾನೆ. ಎಲ್ಲರೂ ಸುಲಭವಾಗಿ ದರ್ಶನ ಮಾಡಲೆಂದೇ ರುದ್ರನು ಆದಿತ್ಯಮೂರ್ತಿಯನ್ನು ಧರಿಸಿರುತ್ತಾನೆ. ಅವನು ಉದಯಾಸ್ತಗಳ ಪ್ರವರ್ತಕನೂ ಹೌದು. ಈತನು ಪ್ರತ್ಯಕ್ಷದೈವನು. ಅಜ್ಞರಾದ ಗೊಲ್ಲರೂ, ನೀರನ್ನು ತರುವ ಹೆಂಗಸರೂ, ಪಶುಪಕ್ಷಿಗಳೂ ಅವನನ್ನು ಕಾಣುತ್ತಾರೆ. ವೇದ-ಶಾಸ್ತ್ರಜ್ಞರು ಕೈಲಾಸದಲ್ಲಿರುವ ಮೂರ್ತಿಯನ್ನು ತಿಳಿಯುತ್ತಾರೆ. ಅವನ ಆದಿತ್ಯರೂಪವೂ ಸರ್ವರಿಗೂ ಗೋಚರವಾಗಿದೆ. ಇಂತಹ ಆದಿತ್ಯಸ್ವರೂಪನಾದ ರುದ್ರನೂ, ಅವನ ಕಿರಣಗಳ ರೂಪವನ್ನು ಹೊಂದಿದ ಆದಿತ್ಯರೂ ನಮ್ಮನ್ನು ಸುಖಿಗಳನ್ನಾಗಿಸಲಿ.

ಈಶ್ವರನು ವಿಷಪಾನದ ಫಲವಾಗಿ ನೀಲಕಂಠನು. ಸರ್ವಾತ್ಮನಾದ ರುದ್ರನು ಇಂದ್ರನ ರೂಪದಿಂದ ಸಹಸ್ರನೇತ್ರನು. ಪರ್ಜನ್ಯರೂಪದಿಂದ ವೃಷ್ಟಿಕರ್ತನು. ಆತನಿಗೂ, ಅವನ ಭೃತ್ಯರಿಗೂ ನಾನು ನಮಸ್ಕರಿಸುವೆನು.

**: ತಾತ್ಪರ್ಯ- ಭ. ಭಾ. ಭಾ. :**

ಮೊದಲೇ ಜಲಸಂಗ್ರಹ ಮಾಡಬೇಕೆಂಬ ವಿಧಿ ಇರುವುದರಿಂದ ಜಲಸಂಗ್ರಹಕ್ಕೆ ತೊಡಗುತ್ತಾರೆ. ಜಿಂಕೆಗಳು, ಪಕ್ಷಿಗಳು, ಹಂದಿಗಳು-ಮುಂತಾದ ಪಶು-ಪಕ್ಷಿಗಳು ಸೂರ್ಯಾಸ್ತವನ್ನು ನೋಡಿ ತಮ್ಮ ಸ್ಥಾನಗಳಿಗೆ ಹಿಂದಿರುಗುತ್ತವೆ.

ದ್ವಿಜರು ಸೂರ್ಯಾಸ್ತವನ್ನು ನೋಡಿ ಅಗ್ನಿಹೋತ್ರ-ಸಂಧ್ಯಾವಂದನೆಗಳಲ್ಲಿ ತೊಡಗುತ್ತಾರೆ. ಅಸ್ತನಾಗುತ್ತಿರುವ ಸೂರ್ಯನ ದರ್ಶನವು ಶಾಸ್ತ್ರನಿಷಿದ್ಧ. ಸೂರ್ಯೋಪಸ್ಥಾನಸಮಯದಲ್ಲಿ ನೋಡಿದ ದೋಷಪರಿಹಾರಕ್ಕಾಗಿ ಪ್ರಾರ್ಥನೆಯನ್ನು ಮಾಡಿ ಸೂರ್ಯನನ್ನು ಒಲಿಸಿಕೊಳ್ಳುತ್ತಾರೆ. ಇಂತಹ ಆದಿತ್ಯಾತ್ಮಕರುದ್ರನು ನಮ್ಮನ್ನು ಸುಖಪಡಿಸಲಿ.

# ತಯಾಽಸ್ಮಾನ್, ವಿಶ್ವತಸ್ತ್ವಮಯಕ್ಷ್ಮಯಾ ಪರಿಬ್ಭುಜ ॥

ತಯಾ । ಅಸ್ಮಾನ್ । ವಿಶ್ವತಃ । ತ್ವಮ್ । ಅಯಕ್ಷ್ಮಯಾ । ಪರೀತಿ । ಭುಜ ॥

ಪದಶಃ ಅರ್ಥ– ಸಾ. ಭಾ.

**ಅಯಕ್ಷ್ಮಯಾ**=ತೊಂದರೆಯನ್ನು ಮಾಡದಿರುವ; **ತಯಾ**=ಆ ಆಯುಧದಿಂದಲೂ, ಬಿಲ್ಲಿನಿಂದಲೂ; **ತ್ವಮ್**=ನೀನು; **ಅಸ್ಮಾನ್**=ನಮ್ಮನ್ನು; **ವಿಶ್ವತಃ**=ಎಲ್ಲೆಡೆಯಿಂದಲೂ; **ಪರಿ ಬ್ಭುಜ**=ರಕ್ಷಿಸು.

ಪದಶಃ ಅರ್ಥ– ಭ. ಭಾ. ಭಾ.

**ಅಯಕ್ಷ್ಮಯಾ**=ಭಕ್ತರಿಗೆ ರೋಗಭಯಕಾರಣವಾಗದೆ ಇರುವ/ಆರೋಗವನ್ನುಂಟುಮಾಡುವ; **ತಯಾ**= ಆ ಧನುಸ್ಸಿನಿಂದ; **ತ್ವಮ್**=ನೀನು; **ಅಸ್ಮಾನ್**=ನಮ್ಮನ್ನು; **ವಿಶ್ವತಃ**=ಸರ್ವವಿಧವಾದ ಭಯದಿಂದಲೂ; **ಪರಿ ಬ್ಭುಜ**=[ಎಲ್ಲ ಕಾಲದಲ್ಲಿಯೂ ಎಲ್ಲ ರೀತಿಯ ಪಾಪಗಳಿಂದಲೂ] ಕಾಪಾಡು.

: ತಾತ್ಪರ್ಯ– ಸಾ. ಭಾ. :

ಪೂಜ್ಯವಾದ ಮಹದೈಶ್ವರ್ಯಸಂಪನ್ನನಾದ ರುದ್ರದೇವನೇ! ನೀನು ಹೆದೆಯೇರಿಸಿರುವ ಬಿಲ್ಲಿನ ಎರಡು ತುದಿಗಳ ನಾಣುಗಳನ್ನು ಬಿಚ್ಚಿ ದೂರವಿಡು.ನಿನ್ನ ಕೈಯಲ್ಲಿರುವ ಬಾಣಗಳನ್ನು ಬತ್ತಳಿಕೆಯಲ್ಲಿಯೇ ಇಡು.

ರುದ್ರನು ಸರ್ವಾತ್ಮಕನು. ಆತನು ಇಂದ್ರರೂಪನಾಗಿ ಸಹಸ್ರನೇತ್ರನಾಗಿರುತ್ತಾನೆ. ಆತನಿಗೆ ದುಷ್ಟರನ್ನು ನಿಗ್ರಹಿಸಲು ಸಾಧನವಾಗಿ ನೂರಾರು ಬತ್ತಳಿಕೆಗಳು ಇವೆ. ಇಂತಹ ರುದ್ರನು ನಮ್ಮ ಸ್ತೋತ್ರಗಳಿಂದ ಪ್ರಸನ್ನನಾಗಿ ಬಿಲ್ಲನ್ನು ಹೆದೆಯಿಳಿಸಲಿ. ಹಾಗೆಯೇ ಆಯುಧಗಳ ಮುಖಗಳನ್ನು ಕೆಳಮುಖವಾಗಿ ಮಾಡಲಿ. ನಮ್ಮನ್ನು ಅನುಗ್ರಹದೃಷ್ಟಿಯಿಂದ ನೋಡಲಿ ಎಂದು ಪ್ರಾರ್ಥಿಸುತ್ತೇವೆ.

: ತಾತ್ಪರ್ಯ– ಭ. ಭಾ. ಭಾ. :

ರುದ್ರದೇವನು ನೀಲಕಂಠನು. ಸರ್ವಾತ್ಮಕನಾದ ರುದ್ರನು ಸಹಸ್ರಾಕ್ಷನಾದ ಇಂದ್ರರೂಪನು. ವೃಷ್ಟಿಯನ್ನುಂಟು ಮಾಡುವ ಪರ್ಜನ್ಯರೂಪನು. ಜಗತ್ಕಾರಣನು. ಪುರುಷರೂಪನಾಗಿ ಗರ್ಭಗಳಿಗೆ ಕಾರಣನು. ಅವನಿಗೆ ನಮಸ್ಕಾರ ಮಾಡುವೆನು. ಅವನ ಅನುಚರರಾದ ಮಹಾಂತರಾದ ಪ್ರಮಥಗಳಿಗೂ ನಮಸ್ಕಾರವನ್ನು ಮಾಡುವೆನು.

ಕೋಪಗೊಂಡಿರುವ ರುದ್ರನನ್ನು **'ನಮಸ್ತೇ ರುದ್ರ'** ಮೊದಲಾದ ಒಂಬತ್ತು ಮಂತ್ರಗಳಿಂದ ಪ್ರಸನ್ನನಾಗುವಂತೆ ಪ್ರಾರ್ಥಿಸಿ, ಶಾಂತನಾದ ರುದ್ರನನ್ನು ಆಯುಧಗಳನ್ನು ತೆಗೆದಿಡುವಂತೆ ಈ ಮಂತ್ರಗಳಿಂದ ಪ್ರಾರ್ಥಿಸಲಾಗಿದೆ. **'ಪ್ರಮುಂಚ...ವಪ' 'ಅವತತ್ಯ...ಭವ'** ಈ ಎರಡು ಮಂತ್ರಗಳಲ್ಲಿ ರುದ್ರನ ಸಂಬೋಧನೆಯು ಇರುವುದರಿಂದ ಪ್ರತ್ಯಕ್ಷಕೃತಗಳು. **'ವಿಜ್ಯಂ...ನಿಷಂಗಥಿಃ'** ಎಂಬ ಮಂತ್ರವು ಪರೋಕ್ಷಕೃತವಾಗಿದೆ.

ಈ ಮಂತ್ರದಲ್ಲಿ ಭಗವಃ=ಭಗವನ್! ಎಂಬ ಸಂಬೋಧನೆಯು ಇದೆ.

**'ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ ।**
**ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥' –ವಿಷ್ಣುಪುರಾಣ ಅಂಶ–6, ಅಧ್ಯಾಯ–5**

ಎಲ್ಲ ಬಗೆಯ ಐಶ್ವರ್ಯ [ಒಡೆತನ] ಧರ್ಮ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯಗಳೆಂಬ ಷಡ್ಗುಣಗಳು– ಇವುಗಳಿಂದ ಕೂಡಿರುವವನು ಭಗವಾನ್.

**ನಮಸ್ತೇ ಅಸ್ತ್ವಾಯುಧಾಯಾನಾತತಾಯ ಧೃಷ್ಣವೇ । ಉಭಾಭ್ಯಾಮುತ ತೇ**

**ನಮೋ ಬಾಹುಭ್ಯಾಂ ತವ ಧನ್ವನೇ ॥**

---

ನಮಃ । ತೇ । ಅಸ್ತು । ಆಯುಧಾಯ । ಅನಾತತಾಯೇತ್ಯನಾ-ತತಾಯ । ಧೃಷ್ಣವೇ ॥ ಉಭಾಭ್ಯಾಮ್ ।

ಉತ । ತೇ । ನಮಃ । ಬಾಹುಭ್ಯಾಮಿತಿ ಬಾಹು-ಭ್ಯಾಮ್ । ತವ । ಧನ್ವನೇ ॥

---

| ಮಂತ್ರ | ವಿನಿಯೋಗ |
|---|---|
| **ನಮಸ್ತೇ ಅಸ್ತು...ಧನ್ವನೇ ॥** | **ಶತರುದ್ರೀಯಹವನ/ಹದಿನಾಲ್ಕನೆಯ ಸ್ತುತಿಮಂತ್ರ.-ಆಯುಧೋಪಸಂಹಾರದ ಪ್ರಾರ್ಥನೆಯ ಅನುಷ್ಟುಪ್ಛಂದಸ್ಸಿನ ಎರಡನೆಯ ಮಂತ್ರ-ಭ.ಭಾ.** |

**ಪದಶಃ ಅರ್ಥ- ಸಾ. ಭಾ.**

ರುದ್ರದೇವನೇ! **ಅನಾತತಾಯ**=ಪ್ರಯೋಗಿಸದಿರುವುದರಿಂದ ವ್ಯಾಪಿಸದಿರುವ; **ಧೃಷ್ಣವೇ**=ಆದರೆ ಸಮರ್ಥವಾದ; **ತೇ**=ನಿನ್ನ; **ಆಯುಧಾಯ**=ಬಾಣರೂಪವಾದ ಆಯುಧಕ್ಕೆ; **ನಮಃ ಅಸ್ತು**=ನಮಸ್ಕಾರ ವಿರಲಿ. **ಉತ**=ಮತ್ತು; **ತೇ**=ನಿನ್ನ; **ಉಭಾಭ್ಯಾಮ್**=ಎರಡು; **ಬಾಹುಭ್ಯಾಮ್**=ತೋಳುಗಳಿಗೆ; **ನಮಃ**=ನಮಸ್ಕರಿಸುತ್ತೇನೆ. **ತವ**=ನಿನ್ನ; **ಧನ್ವನೇ**=ಬಿಲ್ಲಿಗೂ; [ನಮಸ್ಕಾರವಿರಲಿ.]

**ಪದಶಃ ಅರ್ಥ- ಭ. ಭಾ. ಭಾ.**

ಹೇ! ರುದ್ರದೇವನೇ! **ತೇ**=ನಿನ್ನದಾಗಿರುವ; **ಅನಾತತಾಯ**=ಹೂಡದಿರುವ; **ಆಯುಧಾಯ**=ಆಯುಧವಾದ; **ಧೃಷ್ಣವೇ**=ಸುದೃಢವಾದ [ಬಿಲ್ಲಿಗೆ] ದುಷ್ಟರನ್ನು ಶಿಕ್ಷಿಸುವ [ಬಿಲ್ಲಿಗೆ]; **ನಮಃ**=ನಮಸ್ಕಾರವು **ಅಸ್ತು**= ಇರಲಿ; **ಉತ**=ಮತ್ತು; **ತೇ**=ನಿನ್ನ; **ಉಭಾಭ್ಯಾಮ್**=ಎಡ-ಬಲದ; **ಬಾಹುಭ್ಯಾಮ್**=ತೋಳುಗಳಿಗೆ; **ನಮಃ**=ನಮಸ್ಕಾರವಿರಲಿ. **ತವ**=ನಿನ್ನ; **ಧನ್ವನೇ**=ಬಿಲ್ಲಿಗೆ [ಪುನಃ ನಮಸ್ಕರಿಸುವೆನು]

**: ತಾತ್ಪರ್ಯ- ಭ. ಭಾ. ಭಾ. :**

**ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ ।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**

ಪ್ರಾಣಿಗಳ ಉತ್ಪತ್ತಿ-ವಿನಾಶವನ್ನೂ, ಆಗಮನ-ನಿರ್ಗಮನವನ್ನೂ, ವಿದ್ಯೆ-ಅವಿದ್ಯೆಗಳನ್ನೂ ಅರಿತಿರುವವನು **'ಭಗವಾನ್'** ಎನ್ನಿಸಿಕೊಳ್ಳುವನು- ವಿಷ್ಣುಪುರಾಣ ಅಂಶ-6, ಅಧ್ಯಾಯ-5

ಹೇ ಭಗವಂತನಾದ ರುದ್ರನೇ! ನಿನ್ನ ಬಿಲ್ಲಿನ ತುದಿಗಳ ನಾಣನ್ನು ಸಡಿಲಿಸು. ಜಗತ್ತನ್ನು ಉಪಸಂಹರಿಸುವ ಬಾಣಗಳನ್ನು ಬಿಟ್ಟುಬಿಡು. ಭಕ್ತರಿಗೆ ಭಯವನ್ನುಂಟುಮಾಡುವ ಇವುಗಳಿಂದೇನು?

ಹಲವು ಬಾಣಗಳುಳ್ಳವನಾದುದರಿಂದ ಹಲವು ಬತ್ತಳಿಕೆಗಳನ್ನು ಹೊಂದಿರುವ ರುದ್ರದೇವನೇ! ಆಯುಧಗಳ ಅಲಗುಗಳು ಮೊಂಡಾಗಿರುವಂತೆ ಮಾಡು. ಬಿಲ್ಲಿನ ಹೆದೆಯಿಳಿಸು. ಶಾಂತನಾಗು. ನಮ್ಮ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವನಾಗು.

## ಪರಿ ತೇ ಧನ್ವನೋ ಹೇತಿರಸ್ಮಾನ್ವೃಣಕ್ತು ವಿಶ್ವತಃ । ಅಥೋ ಯ ಇಷುಧಿಸ್ತವಾರೇ ಅಸ್ಮನ್ನಿಧೇಹಿ ತಮ್ ॥ ೪-1 ॥

[ಹಸ್ತೇ ದಿಕ್ಷ್ವಿಷವ ಉಭಾಭ್ಯಾಂ ದ್ವಾವಿಗ್ಂಶತಿಶ್ಚ ॥]

---

ಪರೀತಿ । ತೇ । ಧನ್ವನಃ । ಹೇತಿಃ । ಅಸ್ಮಾನ್ । ವೃಣಕ್ತು । ವಿಶ್ವತಃ ॥ ಅಥೋ ಇತಿ । ಯಃ । ಇಷುಧಿರಿತೀಷು-ಧಿಃ । ತವ । ಆರೇ । ಅಸ್ಮತ್ । ನೀತಿ । ಧೇಹಿ । ತಮ್ ॥ (೪) ॥

---

| ಮಂತ್ರ | ವಿನಿಯೋಗ |
|---|---|
| **ಪರಿ ತೇ...ಧೇಹಿ ತಮ್ ॥** | **ಶತರುದ್ರೀಯಹವನ/ಹದಿನೈದನೆಯ ಸ್ತುತಿಮಂತ್ರ-ಆಯುಧೋಪಸಂಹಾರದ ಪ್ರಾರ್ಥನೆಯ ಅನುಷ್ಟುಪ್ಛಂದಸ್ಸಿನ ಮೂರನೆಯ ಮಂತ್ರ-ಭ.ಭಾ.** |

**ಪದಶಃ ಅರ್ಥ- ಸಾ. ಭಾ.**

▲ ರುದ್ರದೇವನೇ! **ತೇ**=ನಿನ್ನ; **ಧನ್ವನಃ**=ಬಿಲ್ಲಿನ; **ಹೇತಿಃ**=ಬಾಣಾಗ್ರವು; **ಅಸ್ಮಾನ್**=ನಮ್ಮನ್ನು; **ವಿಶ್ವತಃ**=ಸರ್ವಪ್ರಕಾರಗಳಿಂದಲೂ; **ಪರಿ ವೃಣಕ್ತು**=ಬಿಟ್ಟುಬಿಡಲಿ/ಹಿಂಸಿಸದಿರಲಿ; **ಅಥೋ**=ಮತ್ತು; **ತವ**=ನಿನ್ನ; **ಯಃ**=ಯಾವ; **ಇಷುಧಿಃ**=ಬತ್ತಳಿಕೆಯುಂಟೋ; **ತಮ್**=ಅದನ್ನು; **ಅಸ್ಮತ್**=ನಮ್ಮಿಂದ; **ಆರೇ**=ದೂರದಲ್ಲಿ; **ನಿಧೇಹಿ**=ಸ್ಥಾಪಿಸು.

**ಪದಶಃ ಅರ್ಥ- ಭ. ಭಾ. ಭಾ.**

▲ ರುದ್ರದೇವನೇ! **ತೇ**=ನಿನ್ನ; **ಧನ್ವನಃ**=ಬಿಲ್ಲಿನ [ನಿಮಿತ್ತವಾದ] **ಹೇತಿಃ**=ಹಿಂಸೆಯು; **ಅಸ್ಮಾನ್**=ನಮ್ಮನ್ನು; **ವಿಶ್ವತಃ**=ಎಲ್ಲ ರೀತಿಯಿಂದಲೂ; **ಪರಿ ವೃಣಕ್ತು**=ದೂರಮಾಡಲಿ. **ಅಥೋ**=ಅಲ್ಲದೇ; **ಯಃ**=ಯಾವ; **ತವ**=ನಿನ್ನ; **ಇಷುಧಿಃ**=ಕ್ರೂರವಾದ ಬಾಣಗಳಿಂದ ತುಂಬಿರುವ ಬತ್ತಳಿಕೆಯುಂಟೋ; **ತಮ್**=ಅದನ್ನು; **ಅಸ್ಮತ್**=ನಮಗಿಂತಲೂ; **ಆರೇ**=ದೂರದಲ್ಲಿ [ನಮ್ಮನ್ನು ಬಿಟ್ಟು ಶತ್ರುಗಳ ವಿಷಯದಲ್ಲಿ] **ನಿಧೇಹಿ**=ಸ್ಥಾಪಿಸು.

**: ತಾತ್ಪರ್ಯ- ಸಾ. ಭಾ. :**

ಜಟಾಜೂಟವುಳ್ಳ ಶಿವನ ಪಿನಾಕಧನುಸ್ಸು ಇಳಿಸಿದ ನಾಣುಳ್ಳದ್ದಾಗಲಿ. ಬಾಣಗಳ ಚೀಲವು ಮುಚ್ಚಿಟ್ಟಿರುವ ಬಾಣಗಳುಳ್ಳದ್ದಾಗಲಿ. ಬಾಣಗಳನ್ನು ಮೇಲಕ್ಕೆ ತೆಗೆಯದೆ ಒಳಗೇ ಇಟ್ಟಿರಲಿ. ಅವುಗಳ ಅಲಗುಗಳು ಭೇದಿಸದೆ ಇರಲಿ. ಖಡ್ಗಕೋಶವನ್ನು ಗೋಡೆಗೆ ತೂಗುಹಾಕಿರುವುದರಿಂದ ಹೊರಗೆ ಬರದೆ ಇರುವ ಕತ್ತಿಗಳನ್ನು ಹೊಂದಿರಲಿ. ಆಯುಧಗಳೆಲ್ಲವೂ ಅಲಂಕಾರಮಾತ್ರವಾಗಿರಲಿ. ನಮಗೆ ಭೀತಿಯನ್ನು ಉಂಟುಮಾಡದೆ ಇರಲಿ.

ಭಕ್ತರ ಕಾಮನೆಗಳನ್ನು ಪೂರೈಸುವ ಪರಮಾತ್ಮನಾದ ರುದ್ರನೇ! ಯಾವ ಖಡ್ಗವೇ ಮುಂತಾದ ಆಯುಧ ಹಾಗೂ ಬಿಲ್ಲು-ಇವು ನಿನ್ನ ಕೈಯಲ್ಲಿ ಇದೆಯೋ ತೊಂದರೆಯನ್ನುಂಟುಮಾಡದಿರುವ ಆ ಆಯುಧ-ಧನುಸ್ಸುಗಳಿಂದ ನಮ್ಮನ್ನು

———: ತಾತ್ಪರ್ಯ- ಸಾ. ಭಾ. :———

ಎಲ್ಲೆಡೆಯಿಂದಲೂ ಕಾಪಾಡು.

ಹೇ ರುದ್ರದೇವನೇ! ಪ್ರಯೋಗಿಸಲು ಸಜ್ಜುಗೊಳಿಸದಿರುವ, ಆದರೆ ಸಮಯವು ಒದಗಿದರೆ ಶತ್ರುಗಳನ್ನು ಸಂಹರಿಸಬಲ್ಲ ನಿನ್ನ ಬಾಣಕ್ಕೂ, ಧನುರ್ಬಾಣಗಳನ್ನು ಧರಿಸಿರುವ ನಿನ್ನ ಎರಡು ತೋಳುಗಳಿಗೂ, ನಿನ್ನ ಬಿಲ್ಲಿಗೂ ನಮಸ್ಕರಿಸುವೆನು.

ಹೇ! ರುದ್ರನೇ! ನಿನ್ನ ಬಿಲ್ಲಿನ ಬಾಣಾಗ್ರಗಳೇ ಮೊದಲಾದ ಹಿಂಸಾಸಾಧನಗಳು ನಮ್ಮನ್ನು ಹಿಂಸಿಸದಂತೆ ದೂರವಿಡು. ಹಾಗೆಯೇ ನಿನ್ನ ಬಾಣಪೂರ್ಣವಾದ ಬತ್ತಳಿಕೆಯನ್ನು ನಮ್ಮಿಂದ ದೂರದಲ್ಲಿಡು. ನಮ್ಮನ್ನು ರಕ್ಷಿಸು.

———: ತಾತ್ಪರ್ಯ- ಭ. ಭಾ. ಭಾ. :———

ಜಟಾಜೂಟವುಳ್ಳ ಶಿವನ ಧನುಸ್ಸು ಇಳಿಸಿದ ನಾಣುಳ್ಳದ್ದಾಗಲಿ. ಬತ್ತಳಿಕೆಯು ಬಾಣರಹಿತವಾಗಲಿ. ಶಿವನ ಬಾಣಗಳು ಕಾಣದಿರಲಿ. ಖಡ್ಗಕೋಶವು ನೆಪಕ್ಕಿರಲಿ/ಅಲಂಕಾರಕ್ಕಿರಲಿ. ಖಡ್ಗವೂ ಶಕ್ತಿಯನ್ನು ದರ್ಶಿಸದಿರಲಿ ಎಂದು ಪ್ರಾರ್ಥನೆ.

ಭಕ್ತರ ಕಾಮನೆಗಳನ್ನು ಬೇಕಾದಂತೆ ಪೂರೈಸಿಕೊಡುವ ರುದ್ರದೇವನೇ! ನೀನು ನಿನ್ನ ಪ್ರಸಿದ್ಧವಾದ ಆಯುಧವಾಗಿರುವ ಅರೋಗಕಾರಣವಾದ ಧನುಸ್ಸಿನಿಂದ ಎಲ್ಲ ಪ್ರಕಾರಗಳಿಂದಲೂ, ಎಲ್ಲ ಕಡೆಗಳಿಂದಲೂ ಪುತ್ರಮಿತ್ರಾದಿಸಹಿತರಾದ ನಮ್ಮೆಲ್ಲರನ್ನೂ ರಕ್ಷಿಸು.

ಹೇ! ರುದ್ರನೇ! ನಿನ್ನದಾಗಿರುವ ಹೂಡದಿರುವ ಸುದೃಢವಾಗಿ ದುಷ್ಟರನ್ನು ಶಿಕ್ಷಿಸುವ ಬಿಲ್ಲಿಗೆ ನಮಸ್ಕಾರವಿರಲಿ. ಮತ್ತು ನಿನ್ನ ಎಡ-ಬಲದ ತೋಳುಗಳಿಂದ ನಮಗೆ ಭೀತಿ ಇದೆ. ಅವುಗಳಿಗೂ ನಮಸ್ಕಾರವಿರಲಿ. ಬಿಲ್ಲು-ಬಾಣಗಳಿಂದ ಕೂಡಿದ ತೋಳುಗಳಿಂದ ಭೀತಿಯಿರುವುದರಿಂದ ಇನ್ನೊಮ್ಮೆ ಬಿಲ್ಲಿಗೆ ನಮಸ್ಕಾರವನ್ನು ಅರ್ಪಿಸುತ್ತೇವೆ.

ರುದ್ರನಿಗೆ ಅನೇಕ ತೋಳುಗಳು ಇರುವುದರಿಂದ ಗದೆ ಮುಂತಾದ ಆಯುಧಗಳೂ ದರ್ಶನದಿಂದ ಭೀತಿಯನ್ನುಂಟುಮಾಡುತ್ತವೆ. ಅವುಗಳಿಗೂ ನಮಸ್ಕಾರವಿರಲಿ.

ಹೇ! ರುದ್ರದೇವನೇ! ನಿನ್ನ ಬಿಲ್ಲಿನಿಂದಾಗುವ ಹಿಂಸೆಯು ನಮ್ಮನ್ನು ದೂರಮಾಡಲಿ. ಭಯಂಕರವಾದ ಬಾಣಗಳಿಂದ ಕೂಡಿರುವ ಬತ್ತಳಿಕೆಯನ್ನು ನಮ್ಮಿಂದ ದೂರವಿಟ್ಟು ಎದುರಿನಲ್ಲಿ ಇಡದೆ ಶತ್ರುಗಳ ಸಮೂಹದಲ್ಲಿ ಪ್ರಯೋಗಿಸು ಎಂದು ಪ್ರಾರ್ಥನೆ.

# ॥ ದ್ವಿತೀಯೋಽನುವಾಕಃ ॥

## ಪೀಠಿಕೆ

## (ಸಾಯಣಭಾಷ್ಯ)

ರುದ್ರಾಧ್ಯಾಯದ ಪ್ರಥಮಾನುವಾಕದಲ್ಲಿ ಭಗವಂತನಾದ ರುದ್ರನ ಆಯುಧಯುಕ್ತವಾದ ಪ್ರಧಾನಮೂರ್ತಿಯನ್ನು ಬಹುಪ್ರಕಾರದಿಂದ ಸ್ತುತಿಸಿ ಆ ಮೂರ್ತಿಯನ್ನು ಪ್ರಸನ್ನಗೊಳಿಸಿಕೊಳ್ಳಲಾಗಿದೆ.

ಈ ಮುಂದಿನ ಎಂಟು ಅನುವಾಕಗಳಲ್ಲಿ ರುದ್ರನ ಲೋಕವ್ಯವಹಾರನಿರ್ವಾಹಕ್ಕೆ ಕಾರಣಗಳಾದ ಲೀಲಾಮೂರ್ತಿಗಳನ್ನು ಪ್ರಸನ್ನಗೊಳಿಸಿಕೊಳ್ಳಲು ಪ್ರಾರ್ಥನೆಯು ಇದೆ. ನಮಸ್ಕಾರಾರ್ಪಣೆಯು ಇದೆ.

ಈ ಎಂಟು ಅನುವಾಕಗಳಲ್ಲಿ ಪಠಿತವಾದ ಎಲ್ಲ ಮಂತ್ರಗಳೂ ಯಜುಸ್ಸುಗಳೇ. ಈ ಯಜುರ್ಮಂತ್ರಗಳು ಎರಡು ಬಗೆಗಳಾಗಿವೆ. ಯಜುರ್ಮಂತ್ರಗಳ ಮೊದಲಿನಲ್ಲಿಯೂ ಕಡೆಯಲ್ಲಿಯೂ **'ನಮಃ'** ಶಬ್ದವು ಇರುವಾಗ ಅವು ಉಭಯತೋನಮಸ್ಕಾರಗಳುಳ್ಳ ಯಜುರ್ಮಂತ್ರಗಳು. ಈ ರೀತಿಯ ಮಂತ್ರಗಳು ಎರಡು, ಮೂರು ಹಾಗೂ ನಾಲ್ಕನೆಯ ಅನುವಾಕಗಳಲ್ಲಿ ಪಠಿತವಾಗಿವೆ. ಯಜುರ್ಮಂತ್ರಗಳ ಆದಿಯಲ್ಲಿ ನಮಸ್ಕಾರವನ್ನು ತಿಳಿಸುವ **'ನಮಃ'** ಶಬ್ದವು ಇರುವಾಗ ಅವು ಅನ್ಯತರತೋನಮಸ್ಕಾರವುಳ್ಳ ಯಜುರ್ಮಂತ್ರಗಳು. ಈ ರೀತಿಯ ಮಂತ್ರಗಳು ಐದರಿಂದ ಎಂಟನೆಯ ಅನುವಾಕವು ಮುಗಿಯುವವರೆಗೆ ಪಠಿತವಾಗಿವೆ. ಈ ಎರಡನೆಯ ಅನುವಾಕದಲ್ಲಿ ಹದಿಮೂರು ಯಜುರ್ಮಂತ್ರಗಳು ಇವೆ.

## ಪೀಠಿಕೆ

## (ಭಟ್ಟಭಾಸ್ಕರಭಾಷ್ಯ)

ಕ್ರುದ್ಧನಾದ ರುದ್ರದೇವನನ್ನು ಮೊದಲನೆಯ ಅನುವಾಕದ ಮಂತ್ರಗಳಿಂದ ಶಾಂತಗೊಳಿಸಿ, ಅವನ ಸಂಹಾರಸಾಧನವಾದ ಆಯುಧಗಳನ್ನು ಸ್ತುತಿಸಿ, ಪ್ರಸನ್ನಗೊಳಿಸಿ, ಮುಂದಿನ ಎಂಟು ಅನುವಾಕಗಳಿಂದ ರುದ್ರನನ್ನು ಸರ್ವಾತ್ಮಕನನ್ನಾಗಿಯೂ, ಅವನ ವಿಶ್ವರೂಪತೆಯನ್ನೂ ಸ್ತುತಿಸಿ ನಮಸ್ಕರಿಸಿರುವುದನ್ನು ಹೇಳಲಾಗಿದೆ. ಮುಂದಿನ ಮೂರು ಅನುವಾಕಗಳಲ್ಲಿ **'ನಮಃ'** ಶಬ್ದವನ್ನು ಮೊದಲಲ್ಲೂ ಕೊನೆಯಲ್ಲಿಯೂ ಹೊಂದಿರುವ ಮಂತ್ರಗಳು ಇವೆ. **'ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮಃ ॥'** ಎಂಬಲ್ಲಿ **'ನಮಃ'** ಶಬ್ದವನ್ನು ಆದಿಯಲ್ಲಿಯೂ ಅಂತ್ಯದಲ್ಲಿಯೂ ಹೊಂದಿರುವ ಇದು ಒಂದೇ ಯಜುರ್ಮಂತ್ರ ಎಂದು ಶಾಕಪೂಣಿ ಆಚಾರ್ಯರ ಮತ.* ಯಾಸ್ಕಾಚಾರ್ಯರು ನಮಸ್ಕಾರಾದಿಯಾದುದು **'ಸೇನಾನ್ಯೇ'** ಎಂಬಲ್ಲಿಯವರೆಗೆ ಒಂದು, **'ದಿಶಾಂ ಚ ಪತಯೇ ನಮಃ'** ಎಂಬುದಾಗಿ ನಮಸ್ಕಾರಾಂತವಾದುದು ಇನ್ನೊಂದು–ಹೀಗೆ ಎರಡು ಯಜುಸ್ಸುಗಳೆಂದು ಹೇಳುತ್ತಾರೆ. ಐದನೆಯ ಅನುವಾಕದಿಂದ ಒಂಬತ್ತನೆಯ ಅನುವಾಕದ ಪೂರ್ಣ ನಮಸ್ಕಾರಾದಿಯಾದ ಯಜುಸ್ಸುಗಳೇ ಇವೆ.

ಎಂಟು ಅನುವಾಕಗಳು ಎಂಟು ಯಜುಸ್ಸುಗಳು ಎಂದು ಕಾಶಕೃತ್ಸ್ನಾಚಾರ್ಯರ ಮತ.

---

* ಈ ಮತದಂತೆ ಮಂತ್ರವಿಭಾಗವೇ ಹೆಚ್ಚು ಪ್ರಚಲಿತ.

ಈ ಮಂತ್ರಗಳಲ್ಲಿ ಒಂದೊಂದು ಮಂತ್ರದಲ್ಲಿ ಇಬ್ಬರಿಬ್ಬರು ರುದ್ರರಿಗೆ ಸ್ತುತಿ–ನಮಸ್ಕಾರಗಳು ಇವೆ. **'ದ್ವಿದ್ವಿಭ್ಯೋ ಜುಹೋತಿ'** [ಶತಪಥಬ್ರಾಹ್ಮಣ 9.1.1.20] ಎಂಬ ಶತಪಥಬ್ರಾಹ್ಮಣವಾಕ್ಯವು ಇದಕ್ಕೆ ಪ್ರಮಾಣ. ರುದ್ರನು ಒಬ್ಬನೇ ಆದರೂ ಅವನನ್ನು ಸ್ತುತಿಸುವ, ನಮಸ್ಕರಿಸಲು ಶ್ರುತಿಯು ಹೇಳುತ್ತಿರುವ ಶಬ್ದಪ್ರವೃತ್ತಿನಿಮಿತ್ತವು ಬೇರೆ ಬೇರೆಯಾದುದರಿಂದ ಅದನ್ನು ಅನುಸರಿಸಿ ಭೇದವನ್ನು ಆರೋಪಿಸಲಾಗಿದೆ. ಪ್ರಥಮಮಂತ್ರದಲ್ಲಿ ಹಿರಣ್ಯಬಾಹುತ್ವ, ದಿಕ್ಪತಿತ್ವ-ಎಂಬ ಪ್ರವೃತ್ತಿನಿಮಿತ್ತಗಳು ಭಿನ್ನಗಳು. ಹೀಗೆ ರುದ್ರನಲ್ಲಿ ದ್ವಿತ್ವವು ಇದೆ. **'ನಮೋ ಹಿರಣ್ಯಬಾಹವೇ ಸೇನಾನ್ಯೇ'** ಎಂಬಲ್ಲಿ ಸೇನಾನೀತ್ವ ಎಂಬ ಪ್ರತ್ಯೇಕ ಪ್ರವೃತ್ತಿನಿಮಿತ್ತವೇ? ಎಂಬ ಸಂಶಯಕ್ಕೆ ಮಿಶ್ರರು **'ಹಿರಣ್ಯಬಾಹುವಾದ ಸೇನಾನಿಯಾದ' 'ಸೇನಾನಿಯಾದ ಹಿರಣ್ಯಬಾಹು'** ಎಂಬುದಾಗಿ ಒಂದು ಇನ್ನೊಂದಕ್ಕೆ ವಿಶೇಷಣವಾಗುವುದು ಎಂದು ಸಮಾಧಾನವನ್ನು ಹೇಳಿದ್ದಾರೆ. ಹೀಗಾಗಿ ಇಬ್ಬರಿಬ್ಬರು ರುದ್ರರಿಗೇ ಸ್ತುತಿ–ನಮಸ್ಕಾರಗಳು. ಮುಂದಿನ ಎಂಟು ಅನುವಾಕಗಳಲ್ಲಿ ಮೂರರಲ್ಲಿ ಉಭಯತೋನಮಸ್ಕಾರ ರೂಪವಾದ ಯಜುಸ್ಸುಗಳು. ಅನಂತರ ಐದು ಅನುವಾಕಗಳಲ್ಲಿ ಅನ್ಯತರತೋನಮಸ್ಕಾರರೂಪವಾದ ಯಜುಸ್ಸುಗಳು.

ಶತಪಥಬ್ರಾಹ್ಮಣದಲ್ಲಿ **'ತೇ ಹ ತೇ ಘೋರತರಾ ರುದ್ರಾ ಉಭಯತೋನಮಸ್ಕಾರಾಃ, ಅಥೈತೇ ಶಾಂತತರಾ ಯೇಽನ್ಯತರತೋ ನಮಸ್ಕಾರಾಃ'** [ಶತ. ಬ್ರಾ. 9.1.1.20] ಘೋರತರವಾದ ಮೂರ್ತಿಯುಳ್ಳ ರುದ್ರರಿಗೆ ಆದಿಯಲ್ಲಿಯೂ, ಅಂತ್ಯದಲ್ಲಿಯೂ, ಶಾಂತರಾದ ರುದ್ರರಿಗೆ ಆದಿಯಲ್ಲಿ ನಮಸ್ಕಾರ ಎಂದು ಹೇಳಿದೆ. ರುದ್ರನು ಸೃಷ್ಟಿಯ ಆದಿಯಲ್ಲಿ ಸೃಷ್ಟಿಸಿದ ರುದ್ರಗಣಗಳು ರುದ್ರರು. ಬಹುವಚನದಿಂದ ಕೂಡಿರುವ ಮಂತ್ರಗಳಲ್ಲಿ ಅಂತಹ ರುದ್ರರಿಗೂ ಅಥವಾ ರುದ್ರಾನುಚರರಿಗೂ ನಮಸ್ಕಾರವೆಂಬುದಾಗಿ ತಿಳಿಯಬೇಕು. ಏಕವಚನದಿಂದ ಕೂಡಿರುವ ಮಂತ್ರಗಳಲ್ಲಿ ರುದ್ರನ ಸರ್ವಾತ್ಮಕತ್ವದಿಂದ ಒಂದೊಂದರಲ್ಲಿಯೂ ಇರುವ ರುದ್ರನಿಗೆ ನಮಸ್ಕಾರವನ್ನು ಹೇಳಿದೆ.

ಈ ಎರಡನೆಯ ಅನುವಾಕದಿಂದ ರುದ್ರನನ್ನು ವಿಶ್ವದ ಅಧಿಪತಿಯೆಂದು ಪ್ರತಿಪಾದಿಸಲಾಗಿದೆ. ಈ ವಿಶ್ವಕ್ಕೆಲ್ಲವೂ ರುದ್ರನೇ ಸ್ವಾಮಿಯೆಂದು ಹೇಳಿ, ಯಾವ ಒಡೆಯನೂ ತನ್ನದಾದ ವಸ್ತುವನ್ನು ಹಿಂಸಿಸುವುದಿಲ್ಲವಾದುದರಿಂದ ರುದ್ರನು ಈ ವಿಶ್ವವನ್ನು ಹಿಂಸಿಸುವುದಿಲ್ಲವೆಂಬುದು ಸಿದ್ಧವಾಗುತ್ತದೆ.

ರುದ್ರನು ವಿಶ್ವಕ್ಕೆ ಅಧಿಪತಿಯಾಗಿರುವಾಗ ಅವನು ಮೊದಲು ದ್ರವ್ಯಗಳಿಗೆ ಅಧಿಪತಿಯೆಂದು ತಿಳಿಸಲು **'ನಮೋ ಹಿರಣ್ಯಬಾಹವೇ'** ಎಂದು ಮಂತ್ರಗಳ ಆರಂಭವಾಗುತ್ತದೆ.

---

# ॥ ದ್ವಿತೀಯೋಽನುವಾಕಃ ॥

**ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮೋ ನಮೋ**

**ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂ ಪತಯೇ ನಮೋ**

---

ನಮಃ। ಹಿರಣ್ಯಬಾಹವ ಇತಿ ಹಿರಣ್ಯ-ಬಾಹವೇ। ಸೇನಾನ್ಯ ಇತಿ ಸೇನಾ-ನ್ಯೇ। ದಿಶಾಮ್। ಚ। ಪತಯೇ। ನಮಃ।

ನಮಃ। ವೃಕ್ಷೇಭ್ಯಃ। ಹರಿಕೇಶೇಭ್ಯ ಇತಿ ಹರಿ-ಕೇಶೇಭ್ಯಃ। ಪಶೂನಾಮ್। ಪತಯೇ। ನಮಃ।

---

| ಮಂತ್ರ | ವಿನಿಯೋಗ |
|---|---|
| **ನಮೋ ಹಿರಣ್ಯಬಾಹವೇ...ದಿಶಾಂ...ನಮಃ ॥** <br> **ನಮೋ ವೃಕ್ಷೇಭ್ಯೋ...ಪಶೂನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲೆಗಳನ್ನೂ ಸರ್ವಾತ್ಮಕತ್ವವನ್ನೂ ಪ್ರತಿಪಾದಿಸುತ್ತಾ ಆ ಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲(ಹೇ! ರುದ್ರನೇ) **ಹಿರಣ್ಯಬಾಹವೇ**=ಚಿನ್ನದಿಂದ ಮಾಡಿರುವ ಆಭರಣಗಳನ್ನು ಧರಿಸಿರುವ; **ಸೇನಾನ್ಯೇ**=ಸೇನೆಗಳನ್ನು ನಡೆಸುವ ಸೇನಾನಾಯಕನಾದ ನಿನಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ದಿಶಾಮ್**=ದಿಕ್ಕುಗಳ; **ಪತಯೇ**=ಪಾಲಕನಾದ/ದಿಕ್ಪಾಲಸ್ವರೂಪನಾದ ನಿನಗೆ; **ನಮಃ**=ನಮಸ್ಕಾರವು.(ಇರಲಿ) ▲(ಹೇ! ರುದ್ರನೇ) **ಹರಿಕೇಶೇಭ್ಯಃ**=ಹಸಿರು ಬಣ್ಣದ ಎಲೆಗಳೇ ಕೇಶದಂತೆ ಇರುವ; **ವೃಕ್ಷೇಭ್ಯಃ**=ವೃಕ್ಷಸ್ವರೂಪನಾದ/ವೃಕ್ಷಗಳಲ್ಲಿರುವ ನಿನಗೆ/ವೃಕ್ಷಾಕಾರವಾದ ರುದ್ರಮೂರ್ತಿಗಳಿಗೆ; **ನಮಃ**=ನಮಸ್ಕಾರವು; **ಪಶೂನಾಮ್**=ದ್ವಿಪಾದರಾದ ಹಾಗೂ ಚತುಷ್ಪಾದರಾದ ಪ್ರಾಣಿಗಳ ಸಮೂಹಕ್ಕೆ; **ಪತಯೇ**=ಪತಿಯಾದ ರುದ್ರನಿಗೆ; **ನಮಃ**=ನಮಸ್ಕಾರವು.

**ಪದಶಃ ಅರ್ಥ- ಭ. ಭಾ. ಭಾ.**

▲ **ಹಿರಣ್ಯಬಾಹವೇ**=ಹಿರಣ್ಯಬಾಹುವಾದ/ಕಟಕ-ಅಂಗದಾದಿಗಳಿಂದ ಭೂಷಿತವಾದ ತೋಳುಗಳುಳ್ಳವನಾದ; **ಸೇನಾನ್ಯೇ**=ದೇವ-ಮನುಷ್ಯಾದಿ ಭೋಕ್ತೃಸಮೂಹವನ್ನೂ ಪೃಥಿವ್ಯಾದಿ ಭೋಗ್ಯಸಮೂಹವನ್ನೂ ಮುನ್ನಡೆಸುವ ಪ್ರೇರಕನಾದ/ನಿಯಂತ್ರಕನಾದ [ರುದ್ರನಿಗೆ] **ನಮಃ**=ನಮಸ್ಕಾರ. **ಚ**=ಮತ್ತು; **ದಿಶಾಮ್**=ಪೂರ್ವಾದಿದಿಕ್ಕುಗಳಿಗೆ; **ಪತಯೇ**=ಒಡೆಯನಾದ/ಲೋಕಪಾಲನಾದ/ಆದಿತ್ಯರೂಪನಾದ/ ಧರ್ಮ-ಅಧರ್ಮಗಳ ನಿರ್ಣಾಯಕನಾದ/ದಿಕ್ಪಾಲರನ್ನು ನಿಯಮಿಸುವ ರುದ್ರದೇವನಿಗೆ; **ನಮಃ**= ನಮಸ್ಕಾರ. ▲ **ವೃಕ್ಷೇಭ್ಯಃ ಹರಿಕೇಶೇಭ್ಯಃ**=ಕೇಶಗಳಂತಿರುವ ಹಸಿರಾದ ಎಲೆಗಳುಳ್ಳ ವೃಕ್ಷಗಳ ಸ್ವರೂಪರಾದ, ವೃಕ್ಷಗಳಲ್ಲಿ ಇರುವ/ಹರಿತವರ್ಣದ ಕೇಶಗಳಿಂದ ಕೂಡಿರುವ [ರುದ್ರರಿಗೆ] **ನಮಃ**=ನಮಸ್ಕಾರವು; **ಪಶೂನಾಮ್**=ಪಶುಗಳ; **ಪತಯೇ**=ಒಡೆಯನಾದ [ರುದ್ರನಿಗೆ] **ನಮಃ**=ನಮಸ್ಕಾರ.

# ನಮಃ ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ ನಮೋ

ನಮಃ । ಸಸ್ಪಿಂಜರಾಯ । ತ್ವಿಷೀಮತ ಇತಿ ತ್ವಿಷಿ–ಮತೇ । ಪಥೀನಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮಸ್ಸಸ್ಪಿಂಜರಾಯ...ಪಥೀನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

(ಹೇ! ರುದ್ರನೇ)**ಸಸ್ಪಿಂಜರಾಯ**=ಎಳಸಾದ ಹಳದಿ–ಕೆಂಪು ಬಣ್ಣಗಳುಳ್ಳವನಾದ; **ತ್ವಿಷೀಮತೇ**= ಅತ್ಯಂತ ತೇಜಸ್ವಿಯಾದ ನಿನಗೆ; **ನಮಃ**=ನಮಸ್ಕಾರವು. **ಪಥೀನಾಮ್**=ಶಾಸ್ತ್ರೋಕ್ತವಾದ ದಕ್ಷಿಣೋತ್ತರ ತೃತೀಯಮಾರ್ಗಗಳ; **ಪತಯೇ**=ರಕ್ಷಕನಾದ; **ನಮಃ**=[ರುದ್ರನಿಗೆ]ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.**

**ಸಸ್ಪಿಂಜರಾಯ**=ಎಳೆಯ ಹುಲ್ಲಿನ ಬಣ್ಣವುಳ್ಳ/ಯಜ್ಞದ್ವೇಷಿಗಳಾದ ರಾಕ್ಷಸರನ್ನು ನಾಶ ಮಾಡುವ/ ಕೆಂಪು–ಹಳದಿ ಬಣ್ಣದಿಂದ ಕೂಡಿರುವ; **ತ್ವಿಷೀಮತೇ**=ಅಧಿಕತೇಜಸ್ವಿಯಾದ/ಸ್ವಯಂಪ್ರಕಾಶಜ್ಞಾನ ರೂಪನಾದವನಿಗೆ; **ನಮಃ**=ನಮಸ್ಕಾರವು; **ಪಥೀನಾಮ್ ಪತಯೇ**=ಲೌಕಿಕ–ವೈದಿಕ ಸನ್ಮಾರ್ಗಗಳಿಗೆ/ ಧೂಮ–ಅರ್ಚಿರಾದಿ ಮಾರ್ಗಗಳಿಗೆ ಪ್ರವರ್ತಕನು/ಲೋಕಕ್ಕೆ ದಾರಿಯನ್ನು ತೋರಿಸುವ ಬ್ರಹ್ಮಾದಿಗಳ ನಿಯಾಮಕನಾದವನಿಗೆ [ಅಂತಹ ರುದ್ರನಿಗೆ] **ನಮಃ**=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಚಿನ್ನದಿಂದ ಮಾಡಿರುವ ಆಭರಣಗಳನ್ನು ಧರಿಸಿರುವ ತೋಳುಗಳುಳ್ಳ ದೇವಸೇನಾಧಿಪತಿಯಾದ ರುದ್ರನಿಗೆ ನಮಸ್ಕಾರವು. ದಿಕ್ಕುಗಳಿಗೆ ಒಡೆಯನಾದ ರುದ್ರನಿಗೆ ನಮಸ್ಕಾರ.

ಹಸಿರು ಬಣ್ಣದ ಎಲೆಗಳೇ ಕೂದಲಿನಂತಿರುವ ವೃಕ್ಷಾಕಾರವಾದ ರುದ್ರಮೂರ್ತಿಗಳಿಗೆ ನಮಸ್ಕಾರವು. ಪ್ರಾಣಿಗಳ ಸಮೂಹಕ್ಕೆ ಪತಿಯಾದ ರುದ್ರನಿಗೆ ನಮಸ್ಕಾರವು.

**: ತಾತ್ಪರ್ಯ– ಭ. ಭಾ. ಭಾ. :**

ರುದ್ರನು ಹಿರಣ್ಯಬಾಹುವು. ಆವನು ಆಭರಣಗಳಿಂದ ಅಲಂಕೃತವಾದ ಸರ್ವಾಂಗವುಳ್ಳವನು. ಸುವರ್ಣವರ್ಣದ ದೇಹವುಳ್ಳವನು. ಭಕ್ತರಿಗೆ ಹಿತವೂ, ರಮಣೀಯವೂ ಆಗಿರುವ, ಅಭ್ಯುದಯ–ನಿಃಶ್ರೇಯಸಗಳಿಗೆ ಕಾರಣವಾದ ಬಾಹುಗಳುಳ್ಳವನು. ಇಂತಹ ರುದ್ರನಿಗೆ ನಮಸ್ಕಾರವು.

ಪೂರ್ವಾದಿದಿಕ್ಕುಗಳಿಗೆ ಒಡೆಯನಾಗಿರುವ, ಆದಿತ್ಯರೂಪನಾದ ಧರ್ಮಾಧರ್ಮನಿಯಾಮಕನಾದ ರುದ್ರನಿಗೆ ನಮಸ್ಕಾರ. ಹೀಗೆ ಹಿರಣ್ಯಬಾಹುವೂ, ಸೇನಾಪತಿಯೂ, ದಿಕ್ಪತಿಯೂ ಆದ ರುದ್ರನಿಗೆ ನಮಸ್ಕಾರ.

ಹಸಿರಾದ ಎಲೆಗಳುಳ್ಳ ವೃಕ್ಷಸ್ವರೂಪನಾದ, ಪಶುಪತಿಯಾದ ರುದ್ರನಿಗೆ ನಮಸ್ಕಾರ. ಬ್ರಹ್ಮಾಂಡವೆಂಬ ಭೂಮಿಯಲ್ಲಿ ಬೆಳೆದಿರುವುದೆಲ್ಲವೂ ವೃಕ್ಷವೇ. ಏಕೆಂದರೆ ವಿನಾಶವನ್ನು ಹೊಂದುವುದರಿಂದ **ವ್ರಶ್ಚನ =ಕತ್ತರಿಸುವಿಕೆ** ಎಂಬ ಅರ್ಥದ **ವೃಕ್ಷ** ಎಂಬ ಶಬ್ದಕ್ಕೆ ಅರ್ಹವೇ. ಆ ಸಮಸ್ತವಸ್ತುಸ್ವರೂಪನಾದ ರುದ್ರನಿಗೆ ನಮಸ್ಕಾರ.

ರುದ್ರನು ಪಶುಪತಿಯೆಂಬುದು ಮಂತ್ರ–ಪುರಾಣಗಳಲ್ಲಿ ಪ್ರಸಿದ್ಧ. **'ತಸ್ಮಾದ್ರುದ್ರಃ ಪಶೂನಾಮಧಿಪತಿಃ' 'ಯೇಷಾಮೀಶೇ ಪಶುಪತಿಃ ಪಶೂನಾಂ ಚತುಷ್ಪದಾಮುತ ಚ ದ್ವಿಪದಾಮ್'** ಎಂದೂ ಶ್ರುತಿವಚನವಿದೆ.

## ನಮೋ ಬಭ್ಲುಶಾಯ ವಿವ್ಯಾಧಿನೇಽನ್ನಾನಾಂ ಪತಯೇ ನಮೋ ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮೋ

ನಮಃ । ಬಭ್ಲುಶಾಯ । ವಿವ್ಯಾಧಿನ ಇತಿ ವಿ-ವ್ಯಾಧಿನೇ । ಅನ್ನಾನಾಮ್ । ಪತಯೇ । ನಮಃ । ನಮಃ । ಹರಿಕೇಶಾಯೇತಿ ಹರಿ-ಕೇಶಾಯ । ಉಪವೀತಿನ ಇತ್ಯುಪ-ವೀತಿನೇ । ಪುಷ್ಟಾನಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮೋ ಬಭ್ಲುಶಾಯ..ಅನ್ನಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮೋ ಹರಿಕೇಶಾಯ..ಪುಷ್ಟಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

🔔 **ಬಭ್ಲುಶಾಯ**=ವೃಷಭವಾಹನನಾದ; **ವಿವ್ಯಾಧಿನೇ**=ದ್ವೇಷಿಗಳನ್ನು ಬಗೆಬಗೆಯಲ್ಲಿ ಹಿಂಸಿಸುವ; [ನಿನಗೆ] **ನಮಃ**=ನಮಸ್ಕಾರವು. **ಅನ್ನಾನಾಮ್**=ಅನ್ನಗಳಿಗೆ; **ಪತಯೇ**=ಪಾಲಕನಾದ/ಒಡೆಯನಾದ [ನಿನಗೆ] **ನಮಃ**=ನಮಸ್ಕಾರವು; 🔔 **ಹರಿಕೇಶಾಯ**=ಕಪ್ಪಾದ ಕೂದಲಿನಿಂದ ಕೂಡಿರುವ, **ಉಪವೀತಿನೇ**= ಮಂಗಲಾಚಾರಕ್ಕಾಗಿ ಯಜ್ಞೋಪವೀತವನ್ನು ಧರಿಸಿರುವ [ರುದ್ರದೇವನಿಗೆ] **ನಮಃ**=ನಮಸ್ಕಾರವು; **ಪುಷ್ಟಾನಾಮ್**=ಪರಿಪೂರ್ಣವಾದ ಉತ್ತಮಗುಣಗಳಿಂದ ಕೂಡಿರುವ ಪುರುಷರನ್ನು [ರಕ್ಷಿಸುವ] ಅವರ; **ಪತಯೇ**=ರಕ್ಷಕನಾದ [ರುದ್ರನಿಗೆ] **ನಮಃ**=ನಮಸ್ಕಾರವು/ಐಹಿಕ-ಆಮುಷ್ಮಿಕ ಸಂಪತ್ತುಗಳ ಒಡೆಯನಿಗೆ ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

🔔 **ಬಭ್ಲುಶಾಯ**=ಪಿಂಗಲವರ್ಣದವನಾದ/ವೃಷಭವನ್ನು ಹೊಂದಿರುವ/ವೃಷಭವಾಹನನಾದ; **ವಿವ್ಯಾಧಿನೇ**=ಹಸಿವು ಮೊದಲಾದವುಗಳಿಂದ ಪೀಡಿಸತಕ್ಕವನಾದ;/ವಿದ್ವೇಷಿಗಳನ್ನು ಒಂದೇ ಬಾಣದಿಂದ ಹೊಡೆದುಕೆಡಹಬಲ್ಲ; **ನಮಃ**=[ರುದ್ರನಿಗೆ]ನಮಸ್ಕಾರ. **ಅನ್ನಾನಾಮ್**=[ವೃಷ್ಟಿಯನ್ನು ಕೊಟ್ಟು ಅದರಿಂದ] ಅನ್ನದ ಸಾಧನವಾಗಿರುವ ಓಷಧಿಗಳ; **ಪತಯೇ**=ಒಡೆಯನಾದ ರುದ್ರನಿಗೆ; **ನಮಃ**= ನಮಸ್ಕಾರ. 🔔 **ಹರಿಕೇಶಾಯ**=ಕಪ್ಪಾದ ಕೂದಲುಳ್ಳವನಾಗಿ ನಿತ್ಯಯುವಕನಾಗಿರುವ; **ಉಪವೀತಿನೇ**= ಯಜ್ಞೋಪವೀತ ವನ್ನು ಧರಿಸಿ ಮಂಗಲವೇಷದಿಂದ ಕೂಡಿರುವ; **ನಮಃ**=[ರುದ್ರದೇವನಿಗೆ]ನಮಸ್ಕಾರ. **ಪುಷ್ಟಾನಾಮ್**= ಪರಿಪೂರ್ಣಗುಣವುಳ್ಳವರಿಗೆ;/*ಹತ್ತು ಬಗೆಯ ಪುಷ್ಟಿಯುಳ್ಳವರಿಗೆ; **ಪತಯೇ**=ರಕ್ಷಕನಾಗಿರುವ [ರುದ್ರನಿಗೆ]; **ನಮಃ**=ನಮಸ್ಕಾರ.

* ೧) ವಾಕ್ಪುಷ್ಟಿ=ತೂಕವಾದ ಮಾತುಗಾರಿಕೆ. ೨)ಜ್ಞಾನಪುಷ್ಟಿ=ಅರಿವಿನ ವಿಸ್ತಾರ ೩) ಶರೀರ-ಇಂದ್ರಿಯಪುಷ್ಟಿ=ದೇಹ-ಇಂದ್ರಿಯಗಳ ಸಾಮರ್ಥ್ಯ. ೪) ಗೃಹ-ಕ್ಷೇತ್ರಪುಷ್ಟಿ=ಮನೆ-ಭೂಮಿಯ ಸಮೃದ್ಧಿ. ೫) ಧನ-ಧಾನ್ಯಪುಷ್ಟಿ=ಧನ-ಧಾನ್ಯಗಳ ಪೂರ್ಣತೆ. ೬) ಪ್ರಜಾಪುಷ್ಟಿ=ಸತ್ಸಂತಾನಸಮೃದ್ಧಿ. ೭) ಪಶುಪುಷ್ಟಿ=ಗೋಸಂಪತ್ತು. ೮) ಗ್ರಾಮಪುಷ್ಟಿ=ಉತ್ತಮ ಗ್ರಾಮವಾಸಲಾಭ. ೯) ಧರ್ಮಪುಷ್ಟಿ=ಧರ್ಮಾಚರಣೆಯ ಹೆಚ್ಚಳ. ೧೦) ಅಣಿಮಾದಿ ಪುಷ್ಟಿ=ಅಣಿಮಾ ಮುಂತಾದ ಅಸಾಧಾರಣ ಸಿದ್ಧಿಗಳು.

# ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮೋ

ನಮಃ । ಭವಸ್ಯ । ಹೇತ್ಯೈ । ಜಗತಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮೋ ಭವಸ್ಯ..ಜಗತಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

ಪದಶಃ ಅರ್ಥ– ಸಾ. ಭಾ.

▲ **ಭವಸ್ಯ**=ಸಂಸಾರಕ್ಕೆ; **ಹೇತ್ಯೈ**=ಕತ್ತರಿಸುವ ಆಯುಧದಂತೆ ಇರುವ; [ರುದ್ರನಿಗೆ] ಭಕ್ತರಿಗೆ ಪುನರ್ಜನ್ಮವು ಬರದಂತೆ ಮೋಕ್ಷವನ್ನು ಅನುಗ್ರಹಿಸುವ; [ರುದ್ರನಿಗೆ;] **ನಮಃ**=ನಮಸ್ಕಾರವು; **ಜಗತಾಮ್**=ಜಗತ್ತುಗಳ; **ಪತಯೇ**=ಪಾಲಕನಾದ; [ರುದ್ರದೇವನಿಗೆ] **ನಮಃ**=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

▲ **ಭವಸ್ಯ**=ಸಂಸಾರದ; **ಹೇತ್ಯೈ**=[ಛೇದಕವಾದ] ಆಯುಧವಾದ/ಸಂಸಾರನಿಮಿತ್ತವಾದ ದುಃಖವನ್ನು ಕೊಡುವವನಾದ/ಆ ದುಃಖವನ್ನು ದೂರ ಮಾಡುವ [ರುದ್ರದೇವನಿಗೆ] **ನಮಃ**=ನಮಸ್ಕಾರ; **ಜಗತಾಮ್**=ಪೃಥಿವಿಯೇ ಮೊದಲಾದ ಲೋಕಗಳ; **ಪತಯೇ**=ಪಾಲಕನಾದ; [ರುದ್ರನಿಗೆ] **ನಮಃ**=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ರುದ್ರದೇವನು ಎಳೆಯ ಹುಲ್ಲಿನಂತೆ ಕೆಂಪು–ಹಳದಿ ಮಿಶ್ರವಾದ ಬಣ್ಣವುಳ್ಳವನು. ಅಧಿಕಪ್ರಕಾಶವುಳ್ಳವನು. ಶಾಸ್ತ್ರೋಕ್ತವಾದ ದಕ್ಷಿಣೋತ್ತರತೃತೀಯಮಾರ್ಗಗಳ ಪಾಲಕನು. ಇಂತಹ ರುದ್ರದೇವನಿಗೆ ನಮಸ್ಕಾರ.

ರುದ್ರದೇವನನ್ನು ಹೊತ್ತುಕೊಂಡು ಒಯ್ಯುವ ವೃಷಭದಲ್ಲಿ ಇರುವ, ವಿದ್ವೇಷಿಗಳನ್ನು ವಿಶೇಷವಾಗಿ ಬಗ್ಗಿಸುವ, ಪ್ರಾಣಿಗಳ ಮತ್ತು ಮಾನವರ ಅನ್ನವನ್ನು ಕೊಡತಕ್ಕವನಾದ ರುದ್ರನಿಗೆ ನಮಸ್ಕಾರ. ಬಭ್ರು ಎಂಬ ಶಬ್ದವು ಬಭ್ಲು ಎಂದಾಗಿದೆ.

: ತಾತ್ಪರ್ಯ– ಭ. ಭಾ. ಭಾ. :

ಹಾಗೆಯೇ–

**‘ಬ್ರಹ್ಮಾದ್ಯಾಃ ಸ್ಥಾವರಾಂತಾಶ್ಚ ಪಶವಃ ಪರಿಕೀರ್ತಿತಾಃ ।**
**ತೇಷಾಂ ಪತಿತ್ವಾದ್ವಿಶ್ವೇಶೋ ಭವಃ ಪಶುಪತಿಃ ಸ್ಮೃತಃ’** ಎಂದು ಪುರಾಣದಲ್ಲಿದೆ.

(ಬ್ರಹ್ಮನಿಂದ ಮೊದಲುಗೊಂಡು ಜಡವಸ್ತುಗಳವರೆಗಿನ ಎಲ್ಲ ಜೀವರಾಶಿಯೂ ಪಶುಗಳೇ. ಅವುಗಳಿಗೆ ಒಡೆಯನಾಗಿ ರುದ್ರನು ಪಶುಪತಿಯೆನಿಸಿದ್ದಾನೆ.)

**ಸರ್ವದಾ ಯತ್ಪಶೂನ್ಪಾತಿ ತೈಶ್ಚ ಯದ್ರಮತೇ ಪುನಃ ।**
**ತೇಷಾಮಧಿಪತಿತ್ವಾಚ್ಚ ತಸ್ಮಾತ್ಪಶುಪತಿಃ ಸ್ಮೃತಃ ॥** [ಮಹಾಭಾರತ 7.173.82]

ಪಶುಗಳನ್ನು ಯಾವಾಗಲೂ ರಕ್ಷಿಸುವುದರಿಂದಲೂ, ಅವುಗಳೊಡನೆಯೇ ಇದ್ದು, ಅವುಗಳ ಒಡೆಯನಾದುದರಿಂದಲೂ ರುದ್ರನು ಪಶುಪತಿ. ಅಂತಹ ಪಶುಪತಿಗೆ ನಮಸ್ಕಾರ.

# ನಮೋ ರುದ್ರಾಯಾऽऽತತಾವಿನೇ ಕ್ಷೇತ್ರಾಣಾಂ ಪತಯೇ ನಮೋ ನಮಃ ಸೂತಾಯಾಹನ್ತ್ಯಾಯ ವನಾನಾಂ ಪತಯೇ ನಮೋ

ನಮಃ । ರುದ್ರಾಯ । ಆತತಾವಿನ ಇತ್ಯಾ-ತತಾವಿನೇ । ಕ್ಷೇತ್ರಾಣಾಮ್ । ಪತಯೇ । ನಮಃ । ನಮಃ । ಸೂತಾಯ । ಅಹನ್ತ್ಯಾಯ । ವನಾನಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮೋ...ಕ್ಷೇತ್ರಾಣಾಂ..ನಮಃ ।** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮಃ ಸೂತಾಯ...ವನಾನಾಂ..ನಮಃ ।** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಆತತಾವಿನೇ**=ದುಷ್ಟರ ನಿಗ್ರಹಕ್ಕಾಗಿ ಹೂಡಿರುವ ಬಿಲ್ಲಿನಿಂದ ಭಕ್ತರನ್ನು ಕಾಯುವ; **ರುದ್ರಾಯ**=ರುದ್ರನಿಗೆ; **ನಮಃ**=ನಮಸ್ಕಾರ; **ಕ್ಷೇತ್ರಾಣಾಮ್**=ಶರೀರಗಳ/ದೇವ-ಬ್ರಾಹ್ಮಣಕ್ಷೇತ್ರಗಳ; **ಪತಯೇ**=ರಕ್ಷಕನಾದ [ರುದ್ರನಿಗೆ] **ನಮಃ**=ನಮಸ್ಕಾರ. ▲ **ಸೂತಾಯ**=ಸಾರಥಿರೂಪನಾದ; **ಅಹನ್ತ್ಯಾಯ**=ವೈರಿಗಳಿಂದ ವಧಿಸಲು ಅಶಕ್ಯನಾದ; [ರುದ್ರನಿಗೆ] **ನಮಃ**=ನಮಸ್ಕಾರವು; **ವನಾನಾಮ್**=ಅರಣ್ಯಗಳ; **ಪತಯೇ**=ಪಾಲಕನಾದ [ರುದ್ರನಿಗೆ] **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಆತತಾವಿನೇ**=ಸಜ್ಜುಗೊಳಿಸಿರುವ ಬಿಲ್ಲಿನಿಂದ ಜಗತ್ತುಗಳನ್ನು ರಕ್ಷಿಸುವ/ಹೂಡಿರುವ ಬಿಲ್ಲನ್ನು ಧರಿಸಿರುವ; **ರುದ್ರಾಯ**=ರುದ್ರದೇವನಿಗೆ; **ನಮಃ**=ನಮಸ್ಕಾರ. **ಕ್ಷೇತ್ರಾಣಾಮ್**=[ಸರ್ವಪ್ರಾಣಿಗಳ] ಶರೀರಗಳ/ ಸಸ್ಯಾದಿಕ್ಷೇತ್ರಗಳ/ಕಾಶೀ ಮುಂತಾದ ಕ್ಷೇತ್ರಗಳ; **ಪತಯೇ**=ಒಡೆಯನಾದ/ರಕ್ಷಕನಾದ [ರುದ್ರನಿಗೆ]; **ನಮಃ**=ನಮಸ್ಕಾರ. ▲ **ಸೂತಾಯ**=ಸಾರಥಿಯಾದ/ಜಗನ್ನಿಯಾಮಕನಾದ/ಪುರಾಣಪ್ರವಾಚಕಸ್ವರೂಪನಾದ/ಯುಗರೂಪನಾದ /ಅಭಿಷವವನ್ನು ಮಾಡಿರುವ ಸೋಮಲತಾರೂಪದೇವನಾದ; **ಅಹನ್ತ್ಯಾಯ**=ಕೊಲ್ಲಲಾಗದ ಆತ್ಮಜ್ಯೋತಿಃಸ್ವರೂಪನಾದ/ಆತ್ಮಸ್ವರೂಪವೇ ತಾನೆಂಬ ಅರಿವಿನಲ್ಲಿ ಇರುವ/ದೇವನಾದ ವಿಶ್ವವನ್ನು ಸಂಹರಿಸುವ [ರುದ್ರದೇವನಿಗೆ] **ನಮಃ**=ನಮಸ್ಕಾರ; **ವನಾನಾಮ್**=ಶ್ಮಶಾನಾದಿ ಜನಶೂನ್ಯವಾದ ಸ್ಥಳಗಳಿಗೆ /ಜನಶೂನ್ಯವಾದ ಅರಣ್ಯಗಳಿಗೆ/ಪುಣ್ಯಾರಣ್ಯಗಳಿಗೆ **ಪತಯೇ**=ಒಡೆಯನಾದ ರುದ್ರನಿಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ರುದ್ರನು ಎಳೆಯ ಹುಲ್ಲಿನ ಬಣ್ಣವುಳ್ಳವನು/ಯಜ್ಞದ್ವೇಷಿಗಳಾದ ರಾಕ್ಷಸರ ನಾಶಕನು. ಯಜ್ಞವಿಘ್ನಕಾರಿಗಳಾದ ಕಾಮಾದಿನಾಶಕನಾಗಿದ್ದಾನೆ. ಅತಿಶಯವಾದ ತೇಜಸ್ಸುಳ್ಳವನು. ಧೂಮ-ಅರ್ಚಿರಾದಿ ಮಾರ್ಗಗಳ ಪ್ರವರ್ತಕನು. ಬ್ರಹ್ಮಾದಿಗಳಿಗೂ ನಿಯಾಮಕನು. ಇಂತಹ ರುದ್ರನಿಗೆ ನಮಸ್ಕಾರ.

## ನಮೋ [ನಮಃ (೫)] ರೋಹಿತಾಯ ಸ್ಥಪತಯೇ ವೃಕ್ಷಾಣಾಂ ಪತಯೇ ನಮೋ ನಮೋ ಮಂತ್ರಿಣೇ ವಾಣಿಜಾಯ ಕಕ್ಷಾಣಾಂ ಪತಯೇ ನಮೋ

ನಮಃ । (೫) । ರೋಹಿತಾಯ । ಸ್ಥಪತಯೇ । ವೃಕ್ಷಾಣಾಮ್ । ಪತಯೇ । ನಮಃ । ನಮಃ । ಮಂತ್ರಿಣೇ । ವಾಣಿಜಾಯ । ಕಕ್ಷಾಣಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| ನಮೋ ರೋಹಿತಾಯ...ವೃಕ್ಷಾಣಾಂ..ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮೋ ಮಂತ್ರಿಣೇ....ಕಕ್ಷಾಣಾಂ..ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

### ಸಾಯಣಭಾಷ್ಯ

▲ **ರೋಹಿತಾಯ**=ಕೆಂಪು ಬಣ್ಣದವನಾದ; **ಸ್ಥಪತಯೇ**=ಜಗತ್ತಿನ ಒಡೆಯನಾದ;/ಬೃಹಸ್ಪತಿಸವಯಾಗ ಕರ್ತನಾದ; [ರುದ್ರದೇವನಿಗೆ] **ನಮಃ**=ನಮಸ್ಕಾರ; **ವೃಕ್ಷಾಣಾಮ್**=ವೃಕ್ಷಗಳ; **ಪತಯೇ**=ಪಾಲಕನಾದ [ರುದ್ರನಿಗೆ] **ನಮಃ**=ನಮಸ್ಕಾರ. ▲ **ಮಂತ್ರಿಣೇ**=ಮಂತ್ರಾಲೋಚನೆಯಲ್ಲಿ ನಿಪುಣನಾದ ಮಂತ್ರಿರೂಪ ನಾದ; **ವಾಣಿಜಾಯ**=ವರ್ತಕರ ಸ್ವಾಮಿಯೂ/ಪಾಲಕನೂ ಆದ ರುದ್ರನಿಗೆ; **ನಮಃ**=ನಮಸ್ಕಾರವು; **ಕಕ್ಷಾಣಾಮ್**=ಕಾಡಿನಲ್ಲಿ ಬೆಳೆದಿರುವ ಪೊದೆಗಳಿಗೆ; **ಪತಯೇ**=ಪಾಲಕನಾದ [ರುದ್ರದೇವನಿಗೆ] **ನಮಃ**= ನಮಸ್ಕಾರ.

### ಭಟ್ಟಭಾಸ್ಕರಭಾಷ್ಯ

▲ **ರೋಹಿತಾಯ**=ರಕ್ತವರ್ಣದವನಾದ;/ವಾಚ್ಯಸ್ವರೂಪನಾದ/ಎಲ್ಲ ಶಬ್ದಗಳಿಗೂ ವಾಚ್ಯನಾದ; **ಸ್ಥಪತಯೇ** =ಗೃಹಾದಿಗಳನ್ನು ನಿರ್ಮಿಸುವ ಶಿಲ್ಪಿರೂಪನಾಗಿರುವ/ಜಗತ್ತಿನ ಶಿಲ್ಪಿಯಾದ/ಎಲ್ಲೆಲ್ಲಿಯೂ ಇದ್ದು ಎಲ್ಲೆಡೆಯೂ ರಕ್ಷಿಸುವ/ [ಶಿವನಿಗೆ] **ನಮಃ**=ನಮಸ್ಕಾರ; **ವೃಕ್ಷಾಣಾಮ್**=ಮರಗಳಿಗೆ; **ಪತಯೇ**= ಒಡೆಯನಾದ [ರುದ್ರನಿಗೆ] **ನಮಃ**=ನಮಸ್ಕಾರ. ▲ **ಮಂತ್ರಿಣೇ**=ಪಂಚಬ್ರಹ್ಮಮಂತ್ರಗಳಿಂದ ಪ್ರತಿಪಾದ್ಯ ನಾಗಿರುವ/ಉಪನಿಷತ್ತುಗಳಿಂದ ಪ್ರತಿಪಾದ್ಯನಾಗಿರುವ/ಸಪ್ತಕೋಟಿಮಂತ್ರಗಳಿಂದ ಪ್ರತಿಪಾದ್ಯನಾಗಿರುವ; **ವಾಣಿಜಾಯ**=ವಣಿಗ್ರೂಪವನ್ನು ಧರಿಸಿರುವ/ಎಲ್ಲ ಜೀವಿಗಳ ಕರ್ಮಸಾಕ್ಷಿಯಾದ/ಪದಾರ್ಥಗಳ ವಿಷಯ ಗಳನ್ನು ತಿಳಿದಿರುವ/ವರ್ತಕರಲ್ಲಿ ಇರುವವನಾದ/ವಾಚಕವಾದ ವಾಣಿಯಲ್ಲಿ ವಾಚ್ಯರೂಪನಾಗಿ ಇರುವ ರುದ್ರನಿಗೆ; **ನಮಃ**=ನಮಸ್ಕಾರವು; **ಕಕ್ಷಾಣಾಮ್**=ಬಳ್ಳಿ, ಪೊದೆ ಮೊದಲಾದವುಗಳ/ಅವುಗಳಲ್ಲಿ ವಾಸಿಸುವ ಜಂತುಗಳ [ಪಾಲಕನಾದ]/ಗಹನವಾದ ದೇಶಗಳ ವಿಷಯದಲ್ಲಿ/ಗಹನವಾದ ಭಾಷೆಗಳಲ್ಲಿ [ಪ್ರೌಢನಾದ]/ಗಹನವಾದ ಧರ್ಮಾಧರ್ಮಾದಿಗಳನ್ನು [ಚೆನ್ನಾಗಿ ಅರಿತಿರುವ] **ಪತಯೇ**=ಕಕ್ಷಪತಿಯಾದ [ರುದ್ರದೇವನಿಗೆ] **ನಮಃ**=ನಮಸ್ಕಾರ.

# ನಮೋ ಭುವಂತಯೇ ವಾರಿವಸ್ಕೃತಾಯೌಷಧೀನಾಂ ಪತಯೇ ನಮೋ

ನಮಃ । ಭುವಂತಯೇ । ವಾರಿವಸ್ಕೃತಾಯೇತಿ ವಾರಿವಃ-ಕೃತಾಯ । ಓಷಧೀನಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
| --- | --- |
| ನಮೋ ಭುವಂತಯೇ...ಓಷಧೀನಾಂ..ನಮಃ । | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

ಪದಶಃ ಅರ್ಥ- ಸಾ. ಭಾ.

**ಭುವಂತಯೇ**=ವಿಶ್ವವನ್ನು ವಿಸ್ತರಿಸುವ ಭುವಂತಿಯಾಗಿರುವ; **ವಾರಿವಸ್ಕೃತಾಯ**=ಬೇಡಿದವರಿಗೆ ಧನವನ್ನು ಕರುಣಿಸುವ [ರುದ್ರನಿಗೆ] **ನಮಃ**=ನಮಸ್ಕಾರ; **ಓಷಧೀನಾಮ್**=[ಗ್ರಾಮ್ಯ ಹಾಗೂ ಆರಣ್ಯಗಳಾದ] ಓಷಧಿಗಳೆಲ್ಲಕ್ಕೂ; **ಪತಯೇ**=ಒಡೆಯನಾದ [ರುದ್ರನಿಗೆ] **ನಮಃ**=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

**ಭುವಂತಯೇ**=ವಿಶ್ವವು ಸತ್ತಾಪ್ರಧಾನವಾಗಿರುವುದರಿಂದ **ಭುವಂತಿ** ಎನಿಸಿಕೊಂಡಿರುವ/ಎಲ್ಲ ಕಾಲದಲ್ಲಿಯೂ ಎಲ್ಲೆಡೆಯೂ ಇರುವುದರಿಂದ **ಭುವಂತಿ** ಎನಿಸಿರುವ/ವಿಶ್ವವೆನ್ನು ತೃಣ-ಗುಲ್ಮ-ಲತಾ-ವೃಕ್ಷಾದಿಗಳಿಂದ ಭೂಮಿಗೆ ಆಧಾರವಾಗಿ ವಿಸ್ತರಿಸುವವನಾಗಿ **ಭುವಂತಿ** ಎನ್ನಿಸಿರುವ; **ವಾರಿವಸ್ಕೃತಾಯ**=**ವರಿವವನ್ನು** ಅಂದರೆ **ಧನವನ್ನು** ಕೊಡುವವನಾದ ಅಥವಾ ಧನವನ್ನು ಗಳಿಸುವವರಿಗೆ ಸಹಾಯವನ್ನು ಮಾಡುವವನಾದ/**ವರಿವವನ್ನು** ಅಂದರೆ **ಪರಿಚರ್ಯೆ**ಯನ್ನು ಮಾಡುವ ಭಕ್ತರನ್ನು ಪ್ರೀತಿಸುವ ಭಕ್ತವತ್ಸಲನಾದ/ನೀರಿನಲ್ಲಿ ವಾಸಿಸುವ ವಿಷ್ಣುರೂಪನಾದ/ಜಲಾಧಿಪತಿಯಾದ ವರುಣರೂಪನಾದ-**ವಾರಿವಸ್ಕೃತ**ನಾದ ಶಿವನಿಗೆ; **ನಮಃ**=ನಮಸ್ಕಾರ. **ಓಷಧೀನಾಮ್**=ಗ್ರಾಮ್ಯ-ಆರಣ್ಯ ಓಷಧಿಗಳ/ಸೋಮಾತ್ಮಕವಾದ ಓಷಧಿಗಳ; **ಪತಯೇ**=ಪತಿಯಾದ ಸೋಮರೂಪನಾದ [ರುದ್ರನಿಗೆ] **ನಮಃ**=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

**ನೆರೆತು ಹೋಗದ ನೀಲವರ್ಣದ ಕೂದಲುಳ್ಳವನಾದ, ಮಂಗಲಾಚಾರಕ್ಕಾಗಿ ಯಜ್ಞೋಪವೀತವನ್ನು ಧರಿಸಿರುವ, ಗುಣಶಾಲಿಗಳನ್ನು ರಕ್ಷಿಸುವ ರುದ್ರನಿಗೆ ನಮಸ್ಕಾರ.**

**ಸಂಸಾರಕ್ಕೆ ಭೇದಕವಾದ ಆಯುಧದಂತೆ ಇರುವ, ಭಕ್ತರಿಗೆ ಒದಗುವ ಪುನರ್ಜನ್ಮವನ್ನು ದೂರ ಮಾಡುವ, ಜಗತ್ತುಗಳ ಪಾಲಕನಾದ ರುದ್ರನಿಗೆ ನಮಸ್ಕಾರ.**

**ಹೆದೆಯೇರಿಸಿದ ಬಿಲ್ಲನ್ನು ಧರಿಸಿ, ದುಷ್ಟರನ್ನು ಸಂಹರಿಸಿ, ಶಿಷ್ಟರನ್ನು ಪರಿಪಾಲಿಸುವ ರುದ್ರನಿಗೆ ನಮಸ್ಕಾರ. ದೇವ-ಬ್ರಾಹ್ಮಣಕ್ಷೇತ್ರವನ್ನೂ ಶರೀರವನ್ನೂ ಪಾಲಿಸುವವನೂ ಆದ ರುದ್ರನಿಗೆ ನಮಸ್ಕಾರ.**

: ತಾತ್ಪರ್ಯ- ಭ. ಭಾ. ಭಾ. :

**ಪಿಂಗಲವರ್ಣದವನಾದ ರುದ್ರನು ವಿದ್ವೇಷಿಗಳನ್ನು ಹಸಿವು ಮುಂತಾದವುಗಳಿಂದ ಪೀಡಿಸತಕ್ಕವನು. ವೃಷ್ಟಿಯನ್ನು ಅನುಗ್ರಹಿಸಿ, ಲೋಕಕ್ಕೆ ಅನ್ನವನ್ನು ನೀಡಿ ಸಲಹುವವನು. ಇಂತಹ ರುದ್ರನಿಗೆ ನಮಸ್ಕಾರವು.**

**ನೀಲವರ್ಣದ ಕೂದಲಿನಿಂದ ಕೂಡಿ ನಿತ್ಯಯುವಕನಾದ, ಮಂಗಲವೇಷಕ್ಕಾಗಿ ಯಜ್ಞೋಪವೀತವನ್ನು ಧರಿಸಿರುವ, ಗುಣಶಾಲಿಗಳಾದ ಮನುಷ್ಯರನ್ನು ರಕ್ಷಿಸುವ, ಹತ್ತು ವಿಧವಾದ ಪುಷ್ಟಿಯುಳ್ಳವರನ್ನು ಕಾಯುವ ನಿನಗೆ ನಮಸ್ಕಾರ.**

# ನಮ ಉಚ್ಚೈರ್ಘೋಷಾಯಾಽಕ್ರಂದಯತೇ ಪತ್ತೀನಾಂ ಪತಯೇ ನಮೋ

ನಮಃ । ಉಚ್ಚೈರ್ಘೋಷಾಯೇತ್ಯುಚ್ಚೈಃ-ಘೋಷಾಯ । ಆಕ್ರಂದಯತ ಇತ್ಯಾ-ಕ್ರಂದಯತೇ । ಪತ್ತೀನಾಮ್ ।
ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮ ಉಚ್ಚೈಃ...ಪತ್ತೀನಾಂ...ನಮಃ।** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಸಾಯಣಭಾಷ್ಯ

▲ **ಉಚ್ಚೈರ್ಘೋಷಾಯ**=ಯುದ್ಧಕಾಲದಲ್ಲಿ ಗಟ್ಟಿಯಾಗಿ ಗರ್ಜಿಸುವ; **ಆಕ್ರಂದಯತೇ**=ಶತ್ರುಗಳನ್ನು ಅಳುವಂತೆ ಮಾಡುವ; [ರುದ್ರನಿಗೆ] **ನಮಃ**=ನಮಸ್ಕಾರ. **ಪತ್ತೀನಾಮ್**=ಕಾಲಾಳುಗಳ; **ಪತಯೇ**=ಪಾಲಕನಾದ [ರುದ್ರನಿಗೆ] **ನಮಃ**=ನಮಸ್ಕಾರ.

ಭಟ್ಟಭಾಸ್ಕರಭಾಷ್ಯ

▲ **ಉಚ್ಚೈರ್ಘೋಷಾಯ**=ಗಟ್ಟಿಯಾದ ಘೋಷವುಳ್ಳ/ಗಟ್ಟಿಯಾಗಿ ಸ್ತುತಿಸಲ್ಪಡುವ/ಗಟ್ಟಿಯಾದ ಧ್ವನಿಯುಳ್ಳ ಮೇಘರೂಪನಾದ; **ಆಕ್ರಂದಯತೇ**=ಯುದ್ಧಕಾಲದಲ್ಲಿ ದ್ವೇಷಿಗಳನ್ನು ಯುದ್ಧಕ್ಕೆ ಆಹ್ವಾನಿಸುವ/ಯುದ್ಧದಲ್ಲಿ ವೈರಿಗಳು ರೋದಿಸುವಂತೆ ಮಾಡುವ/ಜಯಶೀಲನಾದ [ರುದ್ರನಿಗೆ]; **ನಮಃ**=ನಮಸ್ಕಾರ. **ಪತ್ತೀನಾಮ್**=ಪದಾತಿಸೈನ್ಯಗಳ/*ಪತ್ತಿಗಳ; **ಪತಯೇ**=ಒಡೆಯನಾದ [ರುದ್ರನಿಗೆ]/ಪದಾತಿರೂಪದಿಂದಲೇ ಮೂರು ಲೋಕಗಳನ್ನು ಜಯಿಸಬಲ್ಲ [ರುದ್ರನಿಗೆ] **ನಮಃ**=ನಮಸ್ಕಾರ.

ಭ.ಭಾ. ತಾತ್ಪರ್ಯ

ಸಂಸಾರದಲ್ಲಿ ದುಃಖವನ್ನು ಭಕ್ತರಲ್ಲದವರಿಗೆ ಕೊಡುವ, ಭಕ್ತರಿಗೆ ಆ ದುಃಖವನ್ನು ಹೋಗಲಾಡಿಸುವ, ಪೃಥಿವ್ಯಾದಿ ಲೋಕಗಳನ್ನು ರಕ್ಷಿಸುವ ರುದ್ರನಿಗೆ ನಮಸ್ಕಾರಗಳು.

**'ನಮೋ ಹಿರಣ್ಯಬಾಹವೇ'** ಎಂದು ಪ್ರಾರಂಭಗೊಂಡಿರುವ ಹಿಂದಿನ ಐದು ಮಂತ್ರಗಳಿಂದ ಬೇರೆ ಬೇರೆಯ ಬಣ್ಣಗಳಿಂದ ಕೂಡಿದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ-ಈ ಪಂಚಬ್ರಹ್ಮಮೂರ್ತಿಗಳನ್ನು ಪ್ರತಿಪಾದಿಸಿ, ಈ ಆರನೆಯ **'ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮಃ'** ಎಂಬ ಮಂತ್ರದಿಂದ ಸಂಸಾರವನ್ನು ನಿರ್ಮೂಲ ಮಾಡುವ ಪಂಚಮುಖಿಗಳಿಂದ ಕೂಡಿದ ದೇವನನ್ನು ಸ್ತುತಿಸಲಾಗಿದೆ ಎಂದು ಕೆಲವರು ಹೇಳುತ್ತಾರೆ.

ಹೆದೆಯೇರಿಸಿದ ಬಿಲ್ಲನ್ನು ಧರಿಸಿ, ಅದರಿಂದ ಲೋಕಗಳನ್ನು ಕಾಯುವ ರುದ್ರನಿಗೆ ನಮಸ್ಕಾರ.

**'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥'**

---

* **ಏಕೋ ರಥೋ ಗಜಶ್ಚೈಕೋ ನರಾಃ ಪಂಚ ಪದಾತಯಃ ।**
**ತ್ರಯಶ್ಚ ತುರಗಾಸ್ತಜ್ಞೈಃ ಪತ್ತಿರಿತ್ಯಭಿಧೀಯತೇ ॥**
ಒಂದು ರಥ, ಒಂದು ಆನೆ, ಮೂರು ಕುದುರೆ, ಐದು ಕಾಲಾಳುಗಳುಳ್ಳ ಸೈನ್ಯದ ಸಣ್ಣ ತುಕಡಿ.

## ನಮಃ ಕೃತ್ಸ್ನವೀತಾಯ ಧಾವತೇ ಸತ್ವನಾಂ ಪತಯೇ ನಮಃ ॥ ೬-2 ॥

[ವನಾನಾಂ ಪತಯೇ ನಮೋ ನಮ ಏಕಾನ್ನತ್ರಿಗ್ಂಶಚ್ಚ ॥]

---

ನಮಃ । ಕೃತ್ಸ್ನವೀತಾಯೇತಿ ಕೃತ್ಸ್ನ-ವೀತಾಯ । ಧಾವತೇ । ಸತ್ವನಾಮ್ । ಪತಯೇ । ನಮಃ ॥ (೬)

---

| ಮಂತ್ರ | ವಿನಿಯೋಗ |
|---|---|
| **ನಮಃ ಕೃತ್ಸ್ನವೀತಾಯ....ಸತ್ವನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ- ಸಾ. ಭಾ.** ————

▲ **ಕೃತ್ಸ್ನವೀತಾಯ**=ಶತ್ರುಸೈನ್ಯವೆಲ್ಲವನ್ನೂ ವ್ಯಾಪಿಸಿಬಿಡುವ; **ಧಾವತೇ**=ಪಲಾಯನ ಮಾಡುವ ಶತ್ರುಸೈನ್ಯವನ್ನು ಹಿಂಬಾಲಿಸಿ ಓಡುವ; **ನಮಃ**=[ರುದ್ರನಿಗೆ] ನಮಸ್ಕಾರ. **ಸತ್ವನಾಮ್**=ಸಾತ್ತ್ವಿಕರಾದ ಶರಣಾಗತರಾದ ಭಕ್ತರಿಗೆ; **ಪತಯೇ**=ರಕ್ಷಕನಾದ [ರುದ್ರನಿಗೆ] **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.** ————

▲ **ಕೃತ್ಸ್ನವೀತಾಯ**=ಕಂಚುಕಾದಿಗಳಿಂದ ಸಂಪೂರ್ಣವಾಗಿ ಮುಚ್ಚಿರುವಂತಹ ದೇಹವುಳ್ಳ/ಸಂಪೂರ್ಣ ಜಗತ್ತನ್ನು ಪ್ರಳಯಕಾಲದಲ್ಲಿ ಭಕ್ಷಿಸುವ/ಸರ್ವಸ್ವರೂಪನಾಗಿ ತಾನೊಬ್ಬನೇ ಇರುವ; **ಧಾವತೇ**=ವೇಗದಿಂದ ಓಡುವ/ಶೀಘ್ರವಾಗಿ ಅನುಗ್ರಹಿಸುವ [ರುದ್ರನಿಗೆ] **ನಮಃ**=ನಮಸ್ಕಾರವು; **ಸತ್ವನಾಮ್**=ಸಾತ್ವಿಕರಾದ ಭಕ್ತರ, ಭೃತ್ಯರ/ಪ್ರಮಥಗಣಗಳ; **ಪತಯೇ**=ಒಡೆಯನಾದ [ರುದ್ರನಿಗೆ] **ನಮಃ**=ನಮಸ್ಕಾರ.

———: **ತಾತ್ಪರ್ಯ- ಸಾ. ಭಾ.** :———

**ಸಾರಥಿರೂಪದಿಂದ ಇರುವವನೂ, ಯಾವ ಶತ್ರುಗಳಿಂದಲೂ ಹಿಂಸಿಸಲು ಸಾಧ್ಯವಾಗದವನೂ ಆಗಿರುವ ಅರಣ್ಯಗಳ ರಕ್ಷಕನಾದ ರುದ್ರದೇವನಿಗೆ ನಮಸ್ಕಾರ.**

**ರಕ್ತವರ್ಣದವನಾದ, ಪ್ರಭುವಾದ ಈಶ್ವರನಿಗೆ ನಮಸ್ಕಾರವು. ವೃಕ್ಷಗಳ ಪಾಲಕನಾದ ಶಿವನಿಗೆ ನಮಸ್ಕಾರ.**

**ಮಂತ್ರಾಲೋಚನೆಯಲ್ಲಿ ನಿಪುಣನಾದ ಮಂತ್ರಿರೂಪನಾಗಿರುವ, ದೇವಸಭೆಯ ಮಂತ್ರಿಯಾದ ಬೃಹಸ್ಪತಿಯಂತೆಯೂ, ದೈತ್ಯಗುರುವಾದ ಶುಕ್ರಾಚಾರ್ಯರಂತೆಯೂ ಇರುವ, ವರ್ತಕರ ಒಡೆಯನಿಗೆ ನಮಸ್ಕಾರವು. ವಣಿಜರಿಗೆ ಹೆಚ್ಚಳವನ್ನು ಅನುಗ್ರಹಿಸುವ, ಕಾಡಿನಲ್ಲಿ ಬೆಳೆದಿರುವ ಪೊದೆಗಳ ಒಡೆಯನಿಗೆ ನಮಸ್ಕಾರ.**

———: **ತಾತ್ಪರ್ಯ- ಭ. ಭಾ. ಭಾ.** :———

**ಎಂಬ ಗೀತಾವಚನದಂತೆ ಸರ್ವಪ್ರಾಣಿಗಳ ಹೃದಯದಲ್ಲಿ ಇದ್ದುಕೊಂಡು ಪ್ರೇರಕನಾಗಿಯೂ, ರಕ್ಷಕನಾಗಿಯೂ ಇರುವ ಪರಮೇಶ್ವರನಿಗೆ ನಮಸ್ಕಾರ. *ಅವಿಮುಕ್ತವೇ ಮುಂತಾದ ಪುಣ್ಯಕ್ಷೇತ್ರಗಳ ಪಾಲಕನಾದ ಸ್ವಾಮಿಗೆ ನಮಸ್ಕಾರ.**

---

* **ಕಾಶೀಕ್ಷೇತ್ರ. 'ನ ವಿಮುಕ್ತಂ ಶಿವಾಭ್ಯಾಂ ಯದವಿಮುಕ್ತಂ ತತೋ ವಿದುಃ ।'** ಶಿವ-ಪಾರ್ವತಿಯರ ನಿತ್ಯಸಾನ್ನಿಧ್ಯವಿರುವ ಕ್ಷೇತ್ರ. ಅಸೀ-ವರಣ ನದಿಗಳ ನಡುವಿನ ಗಂಗೆಯ ಪಶ್ಚಿಮ ದಡದಲ್ಲಿರುವ ಐದು ಕ್ರೋಶಗಳ ವ್ಯಾಪ್ತಿಯ ಪ್ರದೇಶ. **-ವಾಚಸ್ಪತ್ಯ [ಬೃಹದಭಿಧಾನ]**

——————— ಸಾಯಣತಾತ್ಪರ್ಯ ———

ವಿಶ್ವದ ವಿಸ್ತಾರಕನಾಗಿ ಭುವಂತಿ ಎನಿಸಿಕೊಂಡಿರುವ ರುದ್ರನಿಗೆ ನಮಸ್ಕಾರ. ಯಾಚಕರಿಗೆ ಧನವನ್ನು ಕರುಣಿಸುವ ವಾರಿವಸ್ಕೃತನಾಗಿರುವ ರುದ್ರನಿಗೆ ನಮಸ್ಕಾರ. ಗ್ರಾಮ್ಯ-ಆರಣ್ಯ ಓಷಧಿಗಳೆಲ್ಲಕ್ಕೂ ಪಾಲಕನಾದ ರುದ್ರನಿಗೆ ನಮಸ್ಕಾರ.

ಯುದ್ಧಕಾಲದಲ್ಲಿ ಗಟ್ಟಿಯಾಗಿ ಗರ್ಜಿಸುವ, ತನ್ನ ಸಿಂಹಗರ್ಜನೆಯಿಂದಲೇ ಶತ್ರುಗಳು ರೋದಿಸುವಂತೆ ಮಾಡುವ ರುದ್ರನಿಗೆ ನಮಸ್ಕಾರ. ಕಾಲಾಳುಗಳ ಒಡೆಯನಾದ ರುದ್ರನಿಗೆ ನಮಸ್ಕಾರ.

ಶತ್ರುಸೈನ್ಯವನ್ನು ವ್ಯಾಪಿಸುವ, ಓಡುತ್ತಿರುವ ಶತ್ರುಸೈನ್ಯವನ್ನು ಬೆನ್ನಟ್ಟಿ ಓಡುವ ರುದ್ರನಿಗೆ ನಮಸ್ಕಾರ. ಶರಣಾಗತರಾದ, ಸಾತ್ವಿಕರಾದ ಭಕ್ತರನ್ನು ಪಾಲಿಸತಕ್ಕ ದೇವನಿಗೆ ನಮಸ್ಕಾರ.

——————— ಭ.ಭಾ. ತಾತ್ಪರ್ಯ ———

ಜಗತ್ತೆಂಬ ರಥವನ್ನು ನಡೆಸುವ ಸಾರಥಿಯಂತಿರುವ, ಪುರಾಣಪ್ರವಕ್ತೃವಾದ ಸೂತಮಹಾಮುನಿಯ ರೂಪನಾದ, ಸೋಮಲತಾರೂಪನಾದ, ಕೊಲ್ಲಲಾಗದ ಆತ್ಮಜ್ಯೋತಿಃಸ್ವರೂಪನಾಗಿರುವ, ಶ್ಮಶಾನಾದಿ ಜನರಹಿತಕ್ಷೇತ್ರಗಳಿಗೆ, ಕಾಶಿಯೇ ಮುಂತಾದ ಪುಣ್ಯಕ್ಷೇತ್ರಗಳಿಗೆ ಒಡೆಯನಾದ ರುದ್ರನಿಗೆ ನಮಸ್ಕಾರ. ವನಾಧಿಪತಿಯಾದ ರುದ್ರನಿಗೆ ನಮಸ್ಕಾರ.

ಆದಿತ್ಯಾತ್ಮಕರುದ್ರನು ಉದಯದಲ್ಲಿ ಕೆಂಪುಬಣ್ಣದವನಾಗಿರುತ್ತಾನೆ. ಹೀಗೆ ಕೆಂಪುಬಣ್ಣದವನಾದ, ವಾಚ್ಯಸ್ವರೂಪದವನಾದ ಗೃಹನಿರ್ಮಾತೃವಾಗಿ ಸ್ಥಪತಿರೂಪನಾಗಿ ಇರುವ, ವೃಕ್ಷಾಧಿಪತಿಯಾದ ರುದ್ರನಿಗೆ ನಮಸ್ಕಾರ.

ಪಂಚಬ್ರಹ್ಮಮಂತ್ರಗಳಿಂದ ಪ್ರತಿಪಾದ್ಯನಾಗಿರುವ, ರಹಸ್ಯವಾದ ಉಪನಿಷತ್ತುಗಳ ಪ್ರತಿಪಾದಕನಾಗಿರುವ, ವಣಿಗ್ರೂಪಧಾರಿಯಾದ, ಸರ್ವಕರ್ಮಸಾಕ್ಷಿಯಾಗಿರುವ, ಗಹನವಾದ ದೇಶ-ಭಾಷೆಗಳ ಒಡೆಯನಾಗಿರುವ ರುದ್ರನಿಗೆ ನಮಸ್ಕಾರವು. ಗಹನವಾದ ಧರ್ಮಾಧರ್ಮಾದಿಗಳನ್ನು ಚೆನ್ನಾಗಿ ತಿಳಿದವನು. ಇಂತಹ ಕಕ್ಷಪತಿಯಾದ ರುದ್ರನಿಗೆ ನಮಸ್ಕಾರವು.

ವಿಶ್ವವು ರುದ್ರನಲ್ಲಿ ಇರುವುದರಿಂದ ಅವನು **'ಭುವಂತಿ'** ಎನಿಸಿದ್ದಾನೆ. ಧನವನ್ನು ಅನುಗ್ರಹಿಸುವ, ಭಕ್ತರನ್ನು ಪ್ರೀತಿಸುವ ವಿಷ್ಣು-ವರುಣಸ್ವರೂಪನಾದ ಶಿವನಿಗೆ ನಮಸ್ಕಾರ. ಅವನು ಓಷಧಿಗಳಿಗೆ ಒಡೆಯನೂ ಹೌದು. ಅವನಿಗೂ ನಮಸ್ಕಾರ.

ಗಟ್ಟಿಯಾದ ಘೋಷವನ್ನು ಹೊಂದಿರುವ ಮತ್ತು ಉಚ್ಚಕಂಠದಿಂದ ಸ್ತುತಿಸಲ್ಪಡುವ, ಯುದ್ಧದಲ್ಲಿ ದ್ವೇಷಿಗಳನ್ನು ಆಹ್ವಾನಿಸುವ ಮತ್ತು ಅವರನ್ನು ರೋದಿಸುವಂತೆ ಮಾಡುವ ರುದ್ರನಿಗೆ ನಮಸ್ಕಾರ.

ಕಂಚುಕಾದಿಗಳಿಂದ ಸಂಪೂರ್ಣವಾಗಿ ಮುಚ್ಚಿರುವ ದೇಹವುಳ್ಳ ಅಥರ್ವಶಿರಸ್ಸಿನಲ್ಲಿ ಹೇಳಿರುವಂತೆ **'ತಸ್ಮೈ ಉಪಸಂಹರ್ತ್ರೇ ಮಹಾಗ್ರಾಸಾಯ ವೈ ನಮೋ ನಮಃ'** [ಜಗತ್ತನ್ನೇ ಅಡಗಿಸಿಬಿಡುವ, ಜಗತ್ತೆಂಬ ಅತಿ ದೊಡ್ಡ ಗ್ರಾಸವನ್ನು ಹೊಂದಿರುವ ಶಿವನಿಗೆ ನಮಸ್ಕಾರ]

ಸಂಪೂರ್ಣಜಗತ್ತನ್ನೂ ಪ್ರಲಯಕಾಲದಲ್ಲಿ ಭಕ್ಷಿಸುವ ರುದ್ರನಿಗೆ ನಮಸ್ಕಾರ. ಶ್ರುತಿಯಲ್ಲಿ **'ವೀತ'** ಎಂಬ ಶಬ್ದವಿರುವುದರಿಂದ **'ವೀ'** ಧಾತುವಿನ ಅರ್ಥಗಳೆಲ್ಲವನ್ನೂ ಜೋಡಿಸಿದಾಗ, ಸಮಸ್ತ ಜಗತ್ತನ್ನೂ ಅನುಸರಿಸಿರುವ, ವ್ಯಾಪಿಸಿರುವ, ಉತ್ಪತ್ತಿ ಮಾಡುವ, ಬೆಳಗಿಸುವ, ಜಗತ್ತಿನ ಹೃದಯದಲ್ಲಿ ಇರುವ, ಅಂತಕಾಲದಲ್ಲಿ ಭಕ್ಷಿಸುವ ರುದ್ರನಿಗೆ ನಮಸ್ಕಾರ.

ಶ್ವೇತಾಶ್ವತರೋಪನಿಷತ್ತಿನಲ್ಲಿ **'ನ ಸನ್ನ ಚಾಸತ್ ಶಿವ ಏವ ಕೇವಲಃ'** ಎಂದು ಹೇಳಿದೆ. ಸಮಸ್ತ ಜಗತ್ತೂ ನಷ್ಟವಾಗಿರುವಾಗ ಸರ್ವಸ್ವರೂಪನಾಗಿ ತಾನೊಬ್ಬನೇ ಇರುವ, ವೇಗದಿಂದ ಓಡುವ, ಶೀಘ್ರವಾಗಿ ಅನುಗ್ರಹಿಸುವ ಸಾತ್ತ್ವಿಕರಾದ ಭಕ್ತರ, ಭೃತ್ಯ-ಪ್ರಮಥಗಣಗಳ ಒಡೆಯನಾದ ರುದ್ರನಿಗೆ ನಮಸ್ಕಾರ.



## ॥ ತೃತೀಯೋಽನುವಾಕಃ ॥

**ನಮಃ ಸಹಮಾನಾಯ ನಿವ್ಯಾಧಿನ ಆವ್ಯಾಧಿನೀನಾಂ ಪತಯೇ ನಮೋ**

---

ನಮಃ । ಸಹಮಾನಾಯ । ನಿವ್ಯಾಧಿನ ಇತಿ ನಿ–ವ್ಯಾಧಿನೇ । ಆವ್ಯಾಧಿನೀನಾಮಿತ್ಯಾ–ವ್ಯಾಧಿನೀನಾಮ್ । ಪತಯೇ । ನಮಃ ।

---

| ಮಂತ್ರ | ವಿನಿಯೋಗ |
| --- | --- |
| **ನಮಃ ಸಹಮಾನಾಯ..ಪತಯೇ ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.** ———

ಎರಡನೆಯ ಅನುವಾಕದಲ್ಲಿ ಉಭಯತೋನಮಸ್ಕಾರರೂಪವಾದ ಕೆಲವು ಯಜುರ್ಮಂತ್ರಗಳು ಹೇಳಲ್ಪಟ್ಟಿವೆ. ಈ ಮೂರನೆಯ ಅನುವಾಕದಲ್ಲಿ ಅಂತಹ ಹದಿನೇಳು ಯಜುಸ್ಸುಗಳು ಇವೆ.

▲ **ಸಹಮಾನಾಯ**=ಶತ್ರುಗಳೆಲ್ಲರನ್ನೂ ಸೋಲಿಸಬಲ್ಲ; **ನಿವ್ಯಾಧಿನೇ**=ವಿರೋಧಿಗಳನ್ನು ಚೆನ್ನಾಗಿ ಪ್ರಹರಿಸುವ [ರುದ್ರನಿಗೆ]; **ನಮಃ**=ನಮಸ್ಕಾರ. **ಆವ್ಯಾಧಿನೀನಾಮ್**=ಹಗೆಗಳನ್ನು ಎಲ್ಲ ಕಡೆಯಿಂದಲೂ ಪ್ರಹರಿಸಬಲ್ಲ ಶೂರಸೇನೆಗಳ; **ಪತಯೇ**=ಪಾಲಕನಾದ [ರುದ್ರನಿಗೆ] **ನಮಃ**=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ———

ಹಿಂದಿನ ಅನುವಾಕದಲ್ಲಿ ದ್ರವ್ಯವಿಷಯದಲ್ಲಿ ರುದ್ರನ ಆಧಿಪತ್ಯವನ್ನು ಹೇಳಲಾಗಿದೆ. ಈ ಅನುವಾಕದಲ್ಲಿ ಕ್ರಿಯಾವಿಷಯವಾದ ಆಧಿಪತ್ಯವನ್ನು ಹೇಳಲಾಗುತ್ತದೆ.

▲ **ಸಹಮಾನಾಯ**=ತನ್ನ ಹೊರತು ಬೇರೆಯವರೆಲ್ಲರನ್ನೂ ಸೋಲಿಸಬಲ್ಲ;/ಭಕ್ತರ ಅಪರಾಧಗಳನ್ನು ಕ್ಷಮಿಸುವ; **ನಿವ್ಯಾಧಿನೇ**=ತಪ್ಪನ್ನು ಮಾಡದಿದ್ದರೂ ಧರ್ಮವಿರೋಧಿಗಳನ್ನು ವಿಶೇಷವಾಗಿ ಹೊಡೆದು ಬಿಡುವ; [ರುದ್ರನಿಗೆ] **ನಮಃ**=ನಮಸ್ಕಾರವು. **ಆವ್ಯಾಧಿನೀನಾಮ್**=ಎದುರಾದ ಅಥವಾ ಎಲ್ಲ ಕಡೆಗಳಿಂದಲೂ ಮುತ್ತಿ ಹೊಡೆಯುವ ಶೂರಸೇನೆಗಳ; **ಪತಯೇ**=ಒಡೆಯನಾಗಿರುವ [ರುದ್ರನಿಗೆ] **ನಮಃ**=ನಮಸ್ಕಾರ.

———: **ತಾತ್ಪರ್ಯ– ಸಾ. ಭಾ.** :———

ವಿರೋಧಿಗಳನ್ನು ಪರಾಜಯಗೊಳಿಸುವ, ಧರ್ಮವಿರೋಧಿಗಳನ್ನು ಸದೆಬಡೆಯುವ ರುದ್ರನಿಗೆ ನಮಸ್ಕಾರ. ಎಲ್ಲ ಕಡೆಗಳಿಂದಲೂ ಶತ್ರುದಮನವನ್ನು ಮಾಡುವ ಸೇನೆಯ ಪಾಲಕನಿಗೆ ನಮಸ್ಕಾರ.

———: **ತಾತ್ಪರ್ಯ– ಭ. ಭಾ. ಭಾ.** :———

ಎಲ್ಲರನ್ನೂ ಸೋಲಿಸಬಲ್ಲವನಾದ, ಭಕ್ತರಾದವರ ಅಪರಾಧಗಳನ್ನು ಮನ್ನಿಸುವ, ಧರ್ಮವಿರೋಧಿಗಳನ್ನು ಪ್ರಹರಿಸುವ, ಎಲ್ಲೆಡೆ ಮುತ್ತಬಲ್ಲ ಶೂರಸೇನೆಯ ಪಾಲಕನಿಗೆ ನಮಸ್ಕಾರ.

## ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮೋ ನಮೋ ನಿಷಂಗಿಣ ಇಷುಧಿಮತೇ ತಸ್ಕರಾಣಾಂ ಪತಯೇ ನಮೋ

ನಮಃ । ಕಕುಭಾಯ । ನಿಷಂಗಿಣ ಇತಿ ನಿ–ಸಂಗಿನೇ । ಸ್ತೇನಾನಾಮ್ । ಪತಯೇ । ನಮಃ । ನಮಃ । ನಿಷಂಗಿಣ ಇತಿ ನಿ–ಸಂಗಿನೇ । ಇಷುಧಿಮತ ಇತೀಷುಧಿ–ಮತೇ । ತಸ್ಕರಾಣಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮಃ ಕಕುಭಾಯ...ಸ್ತೇನಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮಸ್ಕಾರಕ್ಕಾಗಿ. |
| **ನಮೋ ನಿಷಂಗಿಣ..ತಸ್ಕರಾಣಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಕಕುಭಾಯ=**ಎತ್ತಿನ ಹಿಣಿಲಿನಂತೆ ಉನ್ನತವಾಗಿರುವ/ಮುಖ್ಯನಾಗಿರುವ; **ನಿಷಂಗಿಣೇ=**ಖಡ್ಗಹಸ್ತನಾಗಿರುವ [ರುದ್ರನಿಗೆ] **ನಮಃ=**ನಮಸ್ಕಾರ. **ಸ್ತೇನಾನಾಮ್=**ತಿಳಿಯದಂತೆ ಕಳ್ಳತನ ಮಾಡುವ ಸ್ತೇನರ; **ಪತಯೇ=**ಪತಿಯಾದ ಮಹಾದೇವನಿಗೆ; **ನಮಃ=**ನಮಸ್ಕಾರ. ▲ **ನಿಷಂಗಿಣೇ=**ಬಿಲ್ಲಿನಲ್ಲಿ ಹೂಡಲು ಸಿದ್ಧವಾದ ಬಾಣವನ್ನು ಕೈಯಲ್ಲಿ ಹಿಡಿದಿರುವ; **ಇಷುಧಿಮತೇ=**ಬಾಣಗಳಿಂದ ತುಂಬಿರುವ ಬತ್ತಳಿಕೆಯನ್ನು ಬೆನ್ನಿನಲ್ಲಿ ಕಟ್ಟಿಕೊಂಡಿರುವ; [ರುದ್ರನಿಗೆ] **ನಮಃ=**ನಮಸ್ಕಾರವು. **ತಸ್ಕರಾಣಾಮ್=**ನೋಡುವಂತೆಯೇ ಕಳ್ಳತನವನ್ನು ಮಾಡುವ ತಸ್ಕರರ; **ಪತಯೇ=**ಒಡೆಯನಾದ [ರುದ್ರನಿಗೆ] **ನಮಃ=**ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಕಕುಭಾಯ=**ಪ್ರಧಾನನಾದ/ಎತ್ತಿನ/ನಂದಿಯ ಹಿಣಿಲಿನ ಭಾಗದಲ್ಲಿ ಕುಳಿತಿರುವ; **ನಿಷಂಗಿಣೇ=**ಖಡ್ಗಪ್ರಹಾರದಲ್ಲಿ ಕುಶಲನಾಗಿರುವ; [ರುದ್ರನಿಗೆ] **ನಮಃ=**ನಮಸ್ಕಾರ; **ಸ್ತೇನಾನಾಮ್=**ವೇಷ ಬದಲಾಯಿಸಿಕೊಂಡು ಗುಟ್ಟಾಗಿ ಕಳ್ಳತನ ಮಾಡುವ ಸ್ತೇನರ; **ಪತಯೇ=**ಒಡೆಯನಿಗೆ; **ನಮಃ=**ನಮಸ್ಕಾರವು. ▲ **ನಿಷಂಗಿಣೇ=**ಭಕ್ತರಲ್ಲಿ ಹೆಚ್ಚಾದ ಪ್ರೀತಿಯುಳ್ಳ/ಖಡ್ಗವನ್ನು ಧರಿಸಿರುವ; **ಇಷುಧಿಮತೇ=**ಬತ್ತಳಿಕೆಯನ್ನು ಧರಿಸಿರುವ [ರುದ್ರನಿಗೆ]; **ನಮಃ=**ನಮಸ್ಕಾರ. **ತಸ್ಕರಾಣಾಮ್=**ಕಾಡಿನಲ್ಲಿ ಇದ್ದವರಾಗಿ ಪ್ರತ್ಯಕ್ಷವಾಗಿ ಕಾಣುವಂತೆಯೇ ದರೋಡೆ ಮಾಡುವವರ; **ಪತಯೇ=**ಒಡೆಯನಾದ[ಆ ರೂಪದಲ್ಲಿರುವ] [ರುದ್ರನಿಗೆ] **ನಮಃ=**ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**ಎತ್ತಿನ ಹಿಣಿಲಿನಂತೆ ಮುಖ್ಯನೂ, ಉನ್ನತನೂ ಆಗಿರುವ ರುದ್ರನಿಗೆ ನಮಸ್ಕಾರ. ತಿಳಿಯದಂತೆ ಕಳ್ಳತನ ಮಾಡುವವರನ್ನು ಸ್ತೇನರೆನ್ನುತ್ತಾರೆ. ಅಂತಹ ಸ್ತೇನರ ಒಡೆಯನಾದ ರುದ್ರನಿಗೆ ನಮಸ್ಕಾರ.**

## ನಮೋ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ ನಮೋ

ನಮಃ। ವಂಚತೇ। ಪರಿವಂಚತ ಇತಿ ಪರಿ-ವಂಚತೇ। ಸ್ತಾಯೂನಾಮ್। ಪತಯೇ। ನಮಃ।

| ಮಂತ್ರ | ವಿನಿಯೋಗ |
| --- | --- |
| **ನಮೋ ವಂಚತೇ...ಸ್ತಾಯೂನಾಂ..ನಮಃ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ವಂಚತೇ**=ಯಜಮಾನನಿಗೆ ಆಪ್ತನಂತೆ ತೋರುತ್ತಾ ಕ್ರಯ-ವಿಕ್ರಯವ್ಯವಹಾರದಲ್ಲಿ ತಿಳಿಯದಂತೆ ಅಪಹರಿಸುವ; **ಪರಿವಂಚತೇ**=ಎಲ್ಲ ಕಡೆಯಲ್ಲಿಯೂ ಓಡಾಡುತ್ತಾ ಧನಾದಿವ್ಯವಹಾರಗಳಲ್ಲಿ ಸಾಧ್ಯವಾದೆಡೆ ವಂಚನೆ ಮಾಡುವ [ರೂಪದಲ್ಲಿರುವ][ರುದ್ರನಿಗೆ] **ನಮಃ**=ನಮಸ್ಕಾರ. **ಸ್ತಾಯೂನಾಮ್**=ಸ್ವಕೀಯರಂತೆ ನಟಿಸುತ್ತಾ ಯಾರಿಗೂ ತಿಳಿಯದಂತೆ ಪೆಟ್ಟಿಗೆ ಮುಂತಾದವುಗಳನ್ನು ತೆಗೆದು ಹಗಲು ಅಥವಾ ರಾತ್ರಿಯಲ್ಲಿ ಕಳ್ಳತನವನ್ನು ಮಾಡುವವರಾದ ಸ್ತಾಯುಗಳ; **ಪತಯೇ**=ಒಡೆಯನ ರೂಪದಲ್ಲಿರುವ [ರುದ್ರನಿಗೆ] **ನಮಃ** =ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ವಂಚತೇ**=ಮೋಸಗಾರನಾದ; **ಪರಿವಂಚತೇ**=ಎಲ್ಲೆಡೆ ಹೋಗುತ್ತಾ ಎಲ್ಲಿಯೂ ತಿಳಿಯದಂತೆ ಮೋಸಗೊಳಿಸುವ [ರುದ್ರನಿಗೆ] **ನಮಃ**=ನಮಸ್ಕಾರವು; **ಸ್ತಾಯೂನಾಮ್**=ಕಪಟವೇಷಧಾರಿಗಳಾಗಿ ವಸ್ತ್ರಾದಿಗಳನ್ನು ಅಪಹರಿಸುವವರಾದ ಸ್ತಾಯುಗಳ; **ಪತಯೇ**=ಒಡೆಯನ ರೂಪದಲ್ಲಿರುವ [ರುದ್ರನಿಗೆ] **ನಮಃ**= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ರುದ್ರನು ನಟರಂತೆ ಆಯಾ ವೇಷವನ್ನು ಧರಿಸುತ್ತಾನೆ. ಅಥವಾ ಪರಮೇಶ್ವರನು ಸರ್ವಾತ್ಮಕನು. ಎಲ್ಲರಲ್ಲಿಯೂ ಇರುತ್ತಾನೆ. **'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ'** ಎಂಬ ಭಗವಂತನ ವಚನದಂತೆ ಎಲ್ಲರ ಹೃದಯದಲ್ಲಿಯೂ ಇರುತ್ತಾನೆ. ವಿಶ್ವವೆಲ್ಲವೂ ಈಶ್ವರಸ್ವರೂಪವೇ ಎಂದು ಸರ್ವಾತ್ಮಕತ್ವವನ್ನು ತಿಳಿಸುವುದಕ್ಕಾಗಿ ಶ್ರುತಿಯ ಸ್ತೇನಶಬ್ದದಿಂದ ತಿಳಿಸುತ್ತದೆ.

ಶಿವನ ಲೀಲಾವಿನೋದಗಳಲ್ಲಿ ಇದೂ ಒಂದು. *ಅವನ ಲೀಲೆಯು ತಿಳಿಯಲು ಅಶಕ್ಯವಾದುದು. ಅವನು ಜಗದ್ರೂಪನಾಗಿರುವುದರಿಂದ ಯಾರು ಎಲ್ಲಿ ಹೇಗೆ ಇರುವರೋ ಆ ರೂಪದಿಂದಲೇ ರುದ್ರನಿರುವನೆಂಬುದನ್ನು

**: ತಾತ್ಪರ್ಯ- ಭ. ಭಾ. ಭಾ. :**

ನಂದಿಯ ಹಿಣಿಲಿನಲ್ಲಿ ಕುಳಿತಿರುವವನು, ಖಡ್ಗಧಾರಿಯಾಗಿ ಶರಣರನ್ನು ರಕ್ಷಿಸುವವನು. ಸ್ತೇನಾದಿಗಳೂ ಭಕ್ತರಾಗಿ ಅವನನ್ನು ಆಶ್ರಯಿಸಿದರೆ ಅವರ ಪಾಪಗಳನ್ನು ಪರಿಹರಿಸಿ ರಕ್ಷಿಸುವನು. ಇಂತಹ ಪರಮಾತ್ಮನಿಗೆ ನಮಸ್ಕಾರ.

ಭಕ್ತರಲ್ಲಿ ಹೆಚ್ಚಾಗಿ ಪ್ರೀತಿಯುಳ್ಳ. ನಿಷಂಗ-ಇಷುಧಿಗಳಿಂದ ಕೂಡಿರುವ ರುದ್ರನಿಗೆ ನಮಸ್ಕಾರವು. ನಿಷಂಗಿಣೇ ಎಂಬ ಪದವು ಎರಡನೆಯ ಬಾರಿ ಶ್ರುತಿಯಲ್ಲಿ ಬಂದಿದೆ. ಹಿಂದಿನ ಮಂತ್ರದಲ್ಲಿಯೂ ಇದೆ. ನಿಷಂಗ-ಇಷುಧಿಗಳೆರಡನ್ನೂ ಉಳ್ಳವನು ಎಂಬುದನ್ನು ತಿಳಿಸಲು ಎರಡನೆಯ ಬಾರಿ 'ನಿಷಂಗಿಣೇ' ಎಂದು ಇದೆ.

---

*** ನ ಸಂತಿ ಯಾಥಾರ್ಥ್ಯವಿದಃ ಪಿನಾಕಿನಃ।** ಈಶ್ವರನ ನೈಜಸ್ವರೂಪವನ್ನು ಅರಿತವರಿಲ್ಲ. ಮಹಾಕವಿ ಕಾಳಿದಾಸನ ಕುಮಾರಸಂಭವ.

# ನಮೋ ನಿಚೇರವೇ ಪರಿಚರಾಯಾರಣ್ಯಾನಾಂ ಪತಯೇ ನಮೋ

ನಮಃ। ನಿಚೇರವ ಇತಿ ನಿ–ಚೇರವೇ। ಪರಿಚರಾಯೇತಿ ಪರಿ–ಚರಾಯ। ಅರಣ್ಯಾನಾಮ್। ಪತಯೇ। ನಮಃ।

| ಮಂತ್ರ | ವಿನಿಯೋಗ |
|---|---|
| **ನಮೋ ನಿಚೇರವೇ...ಅರಣ್ಯಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ– ಸಾ. ಭಾ.

▲ **ನಿಚೇರವೇ**=ಯಜಮಾನನ ಮನೆಯಲ್ಲಿ ಕದಿಯಬೇಕೆಂದು ಗುಟ್ಟಾಗಿ ಅಥವಾ ಸಾವಧಾನವಾಗಿ ಯಾವಾಗಲೂ ಸಂಚರಿಸುವ ನಿಚೇರುರೂಪನಾದ; **ಪರಿಚರಾಯ**=ಅಂಗಡಿಬೀದಿ ಮುಂತಾದ ಕಡೆಗಳಲ್ಲಿ ಕಳ್ಳತನವನ್ನು ಮಾಡುವುದಕ್ಕಾಗಿ ಸಂಚರಿಸುವ ಪರಿಚರರೂಪನಾದ [ರುದ್ರನಿಗೆ] **ನಮಃ**=ನಮಸ್ಕಾರ. **ಅರಣ್ಯಾನಾಮ್**=ಕಾಡಿನಲ್ಲಿ ದಾರಿಯಲ್ಲಿ ಹೋಗುವವರನ್ನು ಅಡ್ಡಗಟ್ಟಿ ದ್ರವ್ಯವನ್ನು ಕಸಿದುಕೊಳ್ಳುವ ಕಾಡಿನ ಕಳ್ಳರಿಗೆ; **ಪತಯೇ**=ಒಡೆಯರೂಪನಾದ [ರುದ್ರನಿಗೆ] **ನಮಃ**=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

▲ **ನಿಚೇರವೇ**=ಅಪಹರಣ ಮಾಡುವ ಸಲುವಾಗಿ ಹೆಚ್ಚು ಸಂಚರಿಸುವ; **ಪರಿಚರಾಯ**=ಕಳ್ಳತನಕ್ಕಾಗಿ ಎಲ್ಲೆಡೆಯಲ್ಲಿಯೂ ಸಂಚರಿಸುವ/ಪ್ರಕಟವಾಗಿಯೇ ಸಂಚರಿಸುವ ಕಳ್ಳರ ರೂಪದ [ರುದ್ರನಿಗೆ] **ನಮಃ**= ನಮಸ್ಕಾರ. **ಅರಣ್ಯಾನಾಮ್**=ಅರಣ್ಯದಲ್ಲಿಯೇ ಇರುವುದರಿಂದ ಅರಣ್ಯರೆಂದೇ ಕರೆಯಲ್ಪಡುವ/ಅರಣ್ಯ ವಾಸಿಗಳಾದ ದಸ್ಯುಗಳ/ಅರಣ್ಯಭೂಮಿಯ; **ಪತಯೇ**=ಒಡೆಯನಿಗೆ; **ನಮಃ**=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ಅನುಸಂಧಾನ ಮಾಡುವ ಶಿವೋಪಾಸಕರ ದೃಷ್ಟಿಯಿಂದ ಶ್ರುತಿಯು ಹೀಗೆ ಹೇಳುತ್ತದೆ. *ಸ್ತೇನರೇ ಮುಂತಾದವರಲ್ಲಿ ಎರಡು ರೂಪಗಳಿವೆ. ರುದ್ರನು ಎರಡು ರೂಪದಲ್ಲಿರುತ್ತಾನೆ. ಜೀವರೂಪವೊಂದು, ಈಶ್ವರರೂಪವೊಂದು. ಅಲ್ಲಿರುವ ಜೀವರೂಪವು ಸ್ತೇನಾದಿಶಬ್ದಗಳಿಂದ ವಾಚ್ಯವಾದಾಗ ಅದು ನಿಂದ್ಯವಾಗುತ್ತದೆ. ಸ್ತೇನಾದಿಗಳಲ್ಲಿ ಈಶ್ವರನಿದ್ದಾನೆ ಎಂದು ಭಾವಿಸಿ ಅನುಸಂಧಾನ ಮಾಡುವುದರಿಂದ ಪಾಪಪರಿಹಾರವಾಗುತ್ತದೆ. ಇದು ಪರಮ ಪುರುಷಾರ್ಥಸಾಧನೆಗೆ ನೆರವಾಗುತ್ತದೆ. ಇಲ್ಲಿ ಸ್ತೇನ ಶಬ್ದಕ್ಕೆ ಈಶ್ವರ ಎಂಬ ಅರ್ಥವು ಉಪಲಕ್ಷಿತವಾದುದು. ಹೀಗೆ ಶ್ರುತಿಯಲ್ಲಿ ಲಕ್ಷ್ಯಾರ್ಥವನ್ನು ತಿಳಿಸುವ ಉದ್ದೇಶದಿಂದ ಲೋಕಪ್ರಸಿದ್ಧವಾದ ಶಬ್ದಗಳು ತಿಳಿಸಲ್ಪಟ್ಟಿರುತ್ತವೆ. ಲಕ್ಷ್ಯಾರ್ಥವನ್ನು ಸುಲಭವಾಗಿ ಗ್ರಹಿಸಲು ಸಾಮಾನ್ಯರಿಗೂ ಇದರಿಂದ ಅನುಕೂಲವಾಗುವುದು. 'ಶಾಖಾಗ್ರೇ ಚಂದ್ರಃ' [ಕೊಂಬೆಯ ತುದಿಯಲ್ಲಿ ಚಂದ್ರನಿರುವನು] ಎಂಬ ವಾಕ್ಯದಲ್ಲಿ ವಾಸ್ತವವಾಗಿ ಆಕಾಶದಲ್ಲಿ ಇರುವ ಚಂದ್ರನಿಗೆ ಕೊಂಬೆಯ ತುದಿಯು ಹೇಗೆ ಲಕ್ಷಕವೋ ಇಲ್ಲಿಯೂ ಸ್ತೇನಶಬ್ದಕ್ಕೆ ಈಶ್ವರನೇ ಲಕ್ಷ್ಯನು. ಸ್ತೇನಶಬ್ದವೇ ಲಕ್ಷಕವು. ಹೀಗೆ ಸ್ತೇನಾದಿ ಶಬ್ದಗಳಿಂದಲೂ ಪರಮೇಶ್ವರನ ಸ್ತುತಿಯನ್ನೇ ಶ್ರುತಿಯು ಮಾಡುತ್ತದೆ ಎಂದು ತಿಳಿಯಬೇಕು.

* ಶಿವನು/ರುದ್ರನು ಕಳ್ಳರ ಒಡೆಯನು ಎಂಬ ಶ್ರುತಿಯ ತಾತ್ಪರ್ಯವನ್ನು ಶ್ರೀ ಸಾಯಣರು ವಿವರಿಸಿದ್ದಾರೆ.

# ನಮಃ ಸೃಕಾವಿಭ್ಯೋ ಜಿಘಾಗ್ಂಸದ್ಭ್ಯೋ ಮುಷ್ಣತಾಂ ಪತಯೇ ನಮೋ

ನಮಃ । ಸೃಕಾವಿಭ್ಯ ಇತಿ ಸೃಕಾವಿ-ಭ್ಯಃ । ಜಿಘಾಗ್ಂಸದ್ಭ್ಯ ಇತಿ ಜಿಘಾಗ್ಂಸತ್-ಭ್ಯಃ । ಮುಷ್ಣತಾಮ್ । ಪತಯೇ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮಸ್ಸೃಕಾವಿಭ್ಯೋ..ಮುಷ್ಣತಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ- ಸಾ. ಭಾ.

**ಸೃಕಾವಿಭ್ಯಃ**=ವಜ್ರಾಯುಧದಿಂದ ತಮ್ಮ ಶರೀರವನ್ನು ರಕ್ಷಿಸುವ ರುದ್ರನ ಅನುಚರರಿಗೆ; **ಜಿಘಾಗ್ಂಸದ್ಭ್ಯಃ**=ಪ್ರಾಣಿಗಳನ್ನು ಕೊಲ್ಲಲು ಇಚ್ಛಿಸುವ ಚೋರರೂಪದಲ್ಲಿರುವ [ರುದ್ರನ ಅನುಚರರಿಗೆ] **ನಮಃ**= ನಮಸ್ಕಾರ; **ಮುಷ್ಣತಾಮ್**=ರೈತರಾಗಿ ಒಡೆಯನ ಧಾನ್ಯವನ್ನು ಅಪಹರಿಸುವವರ; **ಪತಯೇ**= ಒಡೆಯನ ರೂಪದಲ್ಲಿರುವ [ರುದ್ರನಿಗೆ]**ನಮಃ**=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

**ಸೃಕಾವಿಭ್ಯಃ**=ವಜ್ರವೇ ಮೊದಲಾದ ಆಯುಧಗಳನ್ನು ಹೊಂದಿರುವ ರುದ್ರರಿಗೆ/ರುದ್ರನ ಅನುಚರರಿಗೆ/ ಆಯುಧಗಳನ್ನು ರಕ್ಷಿಸುವವರಿಗೆ/ಅಸ್ತ್ರಜೀವಿಗಳಾದ ಮಾನವರಿಗೆ [ಆ ರೂಪದ ರುದ್ರನಿಗೆ]; **ಜಿಘಾಗ್ಂಸದ್ಭ್ಯಃ**=ಕೊಲ್ಲಲು ಬಯಸುವ ಕಟುಕರಾದ ಮನುಷ್ಯರಿಗೆ [ರುದ್ರರಿಗೆ] **ನಮಃ**=ನಮಸ್ಕಾರ. **ಮುಷ್ಣತಾಮ್** =ಧನಾದಿಗಳನ್ನು ಅಪಹರಿಸುವ [ಕಳ್ಳರ] **ಪತಯೇ**=ನಾಯಕನ ರೂಪದ [ರುದ್ರನಿಗೆ]; **ನಮಃ**=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

**ಈ ಮಂತ್ರದಿಂದ (ನಮಃ ಕಕುಭಾಯ) ಪ್ರಾರಂಭ ಮಾಡಿ 'ನಮ ಉಷ್ಣೀಷಿಣೇ...ಕುಲುಂಚಾನಾಂ ಪತಯೇ ನಮಃ' ಎಂಬ ಮಂತ್ರದ ಪೂರ್ಣಪಾಠದವರಿಗೆ ಮಂತ್ರದ ಉತ್ತರಾರ್ಧಗಳಿಂದ ಲೋಕದಲ್ಲಿರುವ ಸಕಲವಿಧವಾದ ಕಳ್ಳರನ್ನೂ ಶ್ರುತಿಯು ತಿಳಿಸುತ್ತಿದೆ.**

: ತಾತ್ಪರ್ಯ- ಭ. ಭಾ. ಭಾ. :

**ಕಾಡಿನಲ್ಲಿರುವ ಕಳ್ಳತನ ಮಾಡುವ ತಸ್ಕರರ ಒಡೆಯನ ರೂಪದಲ್ಲಿರುವ ರುದ್ರನಿಗೆ ನಮಸ್ಕಾರವು. ಸಂಚರಿಸುತ್ತಾ ಮೋಸವನ್ನು ಮಾಡುವ, ಎಲ್ಲೆಡೆ ಓಡಾಡುತ್ತಾ ಮೋಸವನ್ನು ಮಾಡಿದರೂ ಎಲ್ಲಿಯೂ ಸಿಕ್ಕಿ ಬೀಳದ ವಂಚಕ ರೂಪದ ರುದ್ರನಿಗೆ ನಮಸ್ಕಾರ. ಕಪಟವೇಷಧಾರಿಗಳಾಗಿ ಬಟ್ಟೆ ಮುಂತಾದವುಗಳನ್ನು ಕದಿಯುವವರು *ಸ್ತಾಯುಗಳು. ಅವರ ಒಡೆಯನಾದ ಮಹಾದೇವನಿಗೆ ನಮಸ್ಕಾರವು.**

* ನಿಘಂಟುವಿನಲ್ಲಿ **'ತಾಯು'** ಎಂಬ ಪಾಠವಿದೆ. ಋಗ್ವೇದದಲ್ಲಿ **'ಉತ ಸ್ಮೈನಂ ವಸ್ತ್ರಮಥಿಂ ನ ತಾಯುಮ್'** ಎಂದು ಪಠಿತವಾಗಿದೆ. [ಋ. 4.38.5] ಭಟ್ಟಭಾಸ್ಕರರು ಶ್ರುತಿಯಲ್ಲಿ ಇಲ್ಲಿ **ಸ್ತಾಯು** ಎಂಬ ಪಾಠವಿರುವುದರಿಂದ ಇದಕ್ಕೆ ಅನುಗುಣವಾಗಿ ಋಗ್ವೇದದಲ್ಲಿ ಸಕಾರಲೋಪವೆಂಬುದಾಗಿಯಾಗಲೀ, ಋಗ್ವೇದದಲ್ಲಿ **ತಾಯು**ವೆಂಬ ಪಾಠಕ್ಕನುಗುಣವಾಗಿ ಇಲ್ಲಿ ಸಕಾರವು ಛಾಂದಸವಾಗಿ ಸೇರಿದೆ ಎಂದೂ ತಿಳಿಸಿರುತ್ತಾರೆ.

# ನಮೋಽಸಿಮದ್ಭ್ಯೋ ನಕ್ತಂ ಚರದ್ಭ್ಯಃ ಪ್ರಕೃಂತಾನಾಂ ಪತಯೇ ನಮೋ

# ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ ನಮೋ

---

ನಮಃ । ಅಸಿಮದ್ಭ್ಯ ಇತ್ಯಸಿಮತ್–ಭ್ಯಃ । ನಕ್ತಮ್ । ಚರದ್ಭ್ಯ ಇತಿ ಚರತ್–ಭ್ಯಃ । ಪ್ರಕೃಂತಾನಾಮಿತಿ ಪ್ರ–ಕೃಂತಾನಾಮ್ । ಪತಯೇ । ನಮಃ । ನಮಃ । ಉಷ್ಣೀಷಿಣೇ । ಗಿರಿಚರಾಯೇತಿ ಗಿರಿ–ಚರಾಯ । ಕುಲುಂಚಾನಾಮ್ । ಪತಯೇ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ನಮೋಽಸಿಮದ್ಭ್ಯಃ...ಪ್ರಕೃಂತಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮ ಉಷ್ಣೀಷಿಣೇ...ಕುಲುಂಚಾನಾಂ..ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

**ಪದಶಃ ಅರ್ಥ– ಸಾ. ಭಾ.** ——————

▲ **ಅಸಿಮದ್ಭ್ಯಃ**=ಖಡ್ಗಧಾರಿಗಳಾದ ಚೋರರಿಗೆ; **ನಕ್ತಮ್ ಚರದ್ಭ್ಯಃ**=ರಾತ್ರಿಯಲ್ಲಿ ಸಂಚರಿಸುವ ಚೋರರೂಪನಾದ [ರುದ್ರನಿಗೆ]**ನಮಃ**=ನಮಸ್ಕಾರವು; **ಪ್ರಕೃಂತಾನಾಮ್**=ಕೊಂದೇ ಧನಾದಿಗಳನ್ನು ಅಪಹರಿಸುವ ಪ್ರಕೃಂತರೂಪರಾದ ಚೋರರ; **ಪತಯೇ**=ಒಡೆಯನ ರೂಪದ [ರುದ್ರನಿಗೆ]**ನಮಃ**= ನಮಸ್ಕಾರ. ▲ **ಉಷ್ಣೀಷಿಣೇ**=ಗ್ರಾಮವಾಸಿಪ್ರಮುಖರಂತೆ ಪೇಟವನ್ನು ಧರಿಸಿ ಜನರ ನಡುವೆ ಓಡಾಡುತ್ತಾ ಸಿಕ್ಕಿದುದನ್ನು ಅಪಹರಿಸುವವರ ಸ್ವರೂಪದ; **ಗಿರಿಚರಾಯ**=ಬೆಟ್ಟಗುಡ್ಡಗಳಲ್ಲಿ ಅಲ್ಲಿಗೆ ಸೌದೆಗಾಗಿ ಬರುವವರ ಬಟ್ಟೆ ಮುಂತಾದವುಗಳನ್ನು ಕದಿಯುವ/ಪ್ರಣವಚರನಾದ/ಕೈಲಾಸದಲ್ಲಿ ಯಾವಾಗಲೂ ಇರುವ; [ರುದ್ರನಿಗೆ] **ನಮಃ**=ನಮಸ್ಕಾರ; **ಕುಲುಂಚಾನಾಮ್**=ಮನೆ–ಜಮೀನು ಮುಂತಾದ ಭೂಮಿಯನ್ನು ಅಪಹರಿಸುವರ/ ಒತ್ತುವರಿ ಮಾಡುವವರ; **ಪತಯೇ**=ನಾಯಕನ ರೂಪದ; [ರುದ್ರನಿಗೆ] **ನಮಃ**= ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.** ——————

▲ **ಅಸಿಮದ್ಭ್ಯಃ**=ಖಡ್ಗವನ್ನು ಧರಿಸಿರುವ ರುದ್ರನ ಅನುಚರರಿಗೆ; **ನಕ್ತಮ್**=ರಾತ್ರಿಯಲ್ಲಿ; **ಚರದ್ಭ್ಯಃ**= ಸಂಚರಿಸುವ ರುದ್ರಾನುಚರರಿಗೆ; **ನಮಃ**=ನಮಸ್ಕಾರವು; **ಪ್ರಕೃಂತಾನಾಮ್**=ತೀವ್ರವಾಗಿ ಹಿಂಸಿಸುವ/ ಕೊಲ್ಲುವ/ರಾತ್ರಿಯಲ್ಲಿ ಕೊಂದೇ ಜನರ ಧನಾದಿಗಳನ್ನು ಅಪಹರಿಸುವವರ; **ಪತಯೇ**=ಒಡೆಯನ ರೂಪನಾದ [ರುದ್ರನಿಗೆ] **ನಮಃ**=ನಮಸ್ಕಾರ. ▲ **ಉಷ್ಣೀಷಿಣೇ**=ಸಭೆಯಲ್ಲಿ ಸಂಭಾವಿತನಂತೆ ವೇಷವನ್ನು ಧರಿಸಿ ಕದಿಯುವ; **ಗಿರಿಚರಾಯ**=ಬೆಟ್ಟ–ಗುಡ್ಡಗಳಲ್ಲಿ ಓಡಾಡುತ್ತಾ ಅಲ್ಲಿಗೆ ಬರುವವರ ವಸ್ತುಗಳನ್ನು ದೋಚುವ ರೂಪದಲ್ಲಿರುವ [ರುದ್ರನಿಗೆ]; **ನಮಃ**=ನಮಸ್ಕಾರ. **ಕುಲುಂಚಾನಾಮ್**=ಸರ್ಕಾರದ ಭೂಮಿಯನ್ನು ಅಪಹರಿಸುವ/ಅಫೀಮು ಮುಂತಾದ ಅಮಲಿನ ವಸ್ತುಗಳನ್ನು ನೀಡಿ ಅಪಹರಿಸುವ ಕಳ್ಳರ; **ಪತಯೇ**= ಒಡೆಯನಾದ [ರುದ್ರನಿಗೆ] **ನಮಃ**=ನಮಸ್ಕಾರವು.

# ನಮ[ನಮಃ(೭)]ಇಷುಮದ್ಭ್ಯೋ ಧನ್ವಾವಿಭ್ಯಶ್ಚ ವೋ ನಮೋ

ನಮಃ। (೭)। ಇಷುಮದ್ಭ್ಯ ಇತೀಷುಮತ್-ಭ್ಯಃ। ಧನ್ವಾವಿಭ್ಯ ಇತಿ ಧನ್ವಾವಿ-ಭ್ಯಃ। ಚ। ವಃ। ನಮಃ।

ಮಂತ್ರ — ವಿನಿಯೋಗ

ನಮ ಇಷುಮದ್ಭ್ಯಃ...ವೋ..ನಮಃ॥ ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು.

ಪದಶಃ ಅರ್ಥ- ಸಾ. ಭಾ.

[ಹೇ! ರುದ್ರರೇ!]* ಇಷುಮದ್ಭ್ಯಃ=[ಭಕ್ತರಲ್ಲದವರನ್ನು ಹೆದರಿಸಲು] ಬಾಣವನ್ನು ಧರಿಸಿರುವ ವಃ=ನಿಮಗೆ; ನಮಃ=ನಮಸ್ಕಾರ. ಚ=ಮತ್ತು; ಧನ್ವಾವಿಭ್ಯಃ=ಕೈಯಲ್ಲಿ ಬಿಲ್ಲನ್ನು ಧರಿಸಿರುವ ವಃ= ನಿಮಗೆ; ನಮಃ=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

ಇಷುಮದ್ಭ್ಯಃ=ಬಾಣವನ್ನು ಕೈಯಲ್ಲಿ ಧರಿಸಿರುವ; ವಃ=ನಿಮಗೆ; ನಮಃ=ನಮಸ್ಕಾರ. ಚ=ಮತ್ತು; ಧನ್ವಾವಿಭ್ಯಃ=ಕೈಯಲ್ಲಿ ಬಿಲ್ಲನ್ನು ಎತ್ತಿಕೊಂಡಿರುವ ವಃ=ನಿಮಗೆ; ನಮಃ=ನಮಸ್ಕಾರವು.

: ತಾತ್ಪರ್ಯ- ಸಾ. ಭಾ. :

ಬಿಲ್ಲಿನಲ್ಲಿ ಹೂಡಲು ಸಿದ್ಧವಾಗಿರುವ ಬಾಣವು ನಿಷಂಗ. ಅದರೊಡನೆ ಬೆನ್ನಿನ ಮೇಲೆ ಕಟ್ಟಿರುವ ಬಾಣಗಳಿಂದ ತುಂಬಿರುವ ಬತ್ತಳಿಕೆಯುಳ್ಳ ರುದ್ರನಿಗೆ ನಮಸ್ಕಾರ. ಸ್ತೇನರ ಒಡೆಯನ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ.

ಯಜಮಾನನನ್ನು ಆಪ್ತನಂತೆ ನಟಿಸಿ, ವಂಚಿಸುವ, ಎಲ್ಲಾ ಕಡೆಯೂ ಓಡಾಡುತ್ತಾ ತಿಳಿಯದಂತೆ ಮೋಸಗೊಳಿಸುವ ಪರಿವಂಚಕನಿಗೆ ನಮಸ್ಕಾರವು. ರಾತ್ರಿಯಲ್ಲಿ ಕಳ್ಳತನ ಮಾಡುವ ಸ್ತಾಯುಗಳ ಒಡೆಯನ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ.

ಯಜಮಾನನ ಮನೆಯಲ್ಲಿ ಕದಿಯಬೇಕೆಂದು ಸಾವಧಾನವಾಗಿ ಸಂಚರಿಸುವ ನಿಚೇರುವೆನಿಸುವ ರುದ್ರನಿಗೆ ನಮಸ್ಕಾರವು. ಅಂಗಡಿಬೀದಿ ಮಂತಾದೆಡೆಗಳಲ್ಲಿ ಕಳ್ಳತನಕ್ಕಾಗಿ ಸಂಚರಿಸುವ ಪರಿಚರರೂಪನಾದ ರುದ್ರನಿಗೆ ನಮಸ್ಕಾರ. ದಾರಿಹೋಕರನ್ನು ಅಡ್ಡಗಟ್ಟಿ ಕಳ್ಳತನ ಮಾಡುವವರ ರೂಪನಾದವನಿಗೂ, ವಜ್ರವೇ ಮುಂತಾದ

: ತಾತ್ಪರ್ಯ- ಭ. ಭಾ. ಭಾ. :

ಚೆನ್ನಾಗಿ ಓಡಾಡುತ್ತಾ, ಎಲ್ಲರ ಕಣ್ಣಿಗೆ ಬೀಳುವವನಾಗಿಯೂ ಕದಿಯುವ, ಕಾಡಿನಲ್ಲಿ ಜನರನ್ನು ಅಡ್ಡಗಟ್ಟಿ ದ್ರವ್ಯವನ್ನು ಅಪಹರಿಸುವ ಕಳ್ಳರ ರೂಪದ ರುದ್ರನಿಗೆ ನಮಸ್ಕಾರ.

ಆಯುಧಧಾರಿಗಳಾದವರ ರೂಪದಲ್ಲಿರುವ ರುದ್ರನಿಗೆ ಅಥವಾ ಆಯುಧಗಳಿಂದ ಕೂಡಿರುವ ರುದ್ರಾನುಚರರಿಗೆ ನಮಸ್ಕಾರ. ಆಯುಧಗಳನ್ನು ರಕ್ಷಿಸುವವರಿಗೆ, ಅಸ್ತ್ರಜೀವಿಗಳಾದ ಮಾನವರಿಗೆ ನಮಸ್ಕಾರ. ಕಟುಕರೂಪದಲ್ಲಿರುವ ರುದ್ರನಿಗೆ ನಮಸ್ಕಾರ. ಕಳ್ಳರ ಸಾಮಾನ್ಯ ಒಡೆಯನ ರೂಪದ ರುದ್ರನಿಗೆ ನಮಸ್ಕಾರ.

ಖಡ್ಗವನ್ನು ಧರಿಸಿರುವ ರುದ್ರಾನುಚರರಿಗೆ ನಮಸ್ಕಾರ. ರಾತ್ರಿಯಲ್ಲಿ ಸಂಚರಿಸುವ ರುದ್ರನ ಅನುಚರರಿಗೆ ನಮಸ್ಕಾರ. ರಾತ್ರಿಯಲ್ಲಿ ಓಡಾಡುತ್ತಾ ಕೊಲೆಯನ್ನು ಮಾಡಿಯೇ ಧನವನ್ನು ಅಪಹರಿಸುವವರ ರೂಪದಲ್ಲಿರುವ ರುದ್ರಾನುಚರರಿಗೆ ನಮಸ್ಕಾರ.

* ಈ ಸಂಬೋಧನೆಯು ಇಲ್ಲಿಂದ ಮುಂದೆ ಅನುವಾಕದ ಎಲ್ಲ ಮಂತ್ರಗಳಲ್ಲಿಯೂ ಅನ್ವಯಿಸುತ್ತದೆ.

## ನಮ ಆತನ್ವಾನೇಭ್ಯಃ ಪ್ರತಿದಧಾನೇಭ್ಯಶ್ಚ ವೋ ನಮೋ ನಮ ಆಯಚ್ಛದ್ಭ್ಯೋ ವಿಸೃಜದ್ಭ್ಯಶ್ಚ ವೋ ನಮೋ

ನಮಃ । ಆತನ್ವಾನೇಭ್ಯ ಇತ್ಯಾ-ತನ್ವಾನೇಭ್ಯಃ । ಪ್ರತಿದಧಾನೇಭ್ಯ ಇತಿ ಪ್ರತಿ-ದಧಾನೇಭ್ಯಃ । ಚ । ವಃ । ನಮಃ ।

ನಮಃ । ಆಯಚ್ಛದ್ಭ್ಯ ಇತ್ಯಾಯಚ್ಛತ್-ಭ್ಯಃ । ವಿಸೃಜದ್ಭ್ಯ ಇತಿ ವಿಸೃಜತ್-ಭ್ಯಃ । ಚ । ವಃ । ನಮಃ ।

| ಮಂತ್ರ | ವಿನಿಯೋಗ |
|---|---|
| ನಮ ಆತನ್ವಾನೇಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮ ಆಯಚ್ಛದ್ಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಆತನ್ವಾನೇಭ್ಯಃ**=ಬಿಲ್ಲಿನಲ್ಲಿ ಬಾಣವನ್ನು ಹೂಡಲು ಹೆದೆಯೇರಿಸುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ಪ್ರತಿದಧಾನೇಭ್ಯಃ**=ಬಾಣವನ್ನು ಹೂಡುವ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಆಯಚ್ಛದ್ಭ್ಯಃ**=[ಬಾಣವನ್ನು ಬಿಡಲು] ಬಿಲ್ಲಿನ ಹಗ್ಗವನ್ನು ಎಳೆಯುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ವಿಸೃಜದ್ಭ್ಯಃ**=[ಗುರಿಯ ಕಡೆಗೆ] ಬಾಣವನ್ನು ಪ್ರಯೋಗಿಸುವ; ವಃ=ನಿಮಗೆ; **ನಮಃ**=ನಮಸ್ಕಾರವು.

**ಪದಶಃ ಅರ್ಥ- ಭ. ಭಾ. ಭಾ.**

▲ **ಆತನ್ವಾನೇಭ್ಯಃ**=ಬಿಲ್ಲುಗಳನ್ನು ಬಾಣವನ್ನು ಹೂಡುವುದಕ್ಕಾಗಿ ಹೆದೆಯೇರಿಸುವ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಪ್ರತಿದಧಾನೇಭ್ಯಃ**=ಬಿಲ್ಲುಗಳಲ್ಲಿ ಬಾಣಗಳನ್ನು ಹೂಡುವ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಆಯಚ್ಛದ್ಭ್ಯಃ**=[ಬಿಲ್ಲಿನಲ್ಲಿ ಬಾಣಗಳನ್ನು ಹೂಡಿ] ಸೆಳೆಯುತ್ತಿರುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ವಿಸೃಜದ್ಭ್ಯಃ**=[ಶತ್ರುಗಳನ್ನು ಕುರಿತು] ಬಾಣಗಳನ್ನು ಬಿಡುತ್ತಿರುವ; ವಃ=ನಿಮಗೆ; **ನಮಃ**=ನಮಸ್ಕಾರವು.

**: ತಾತ್ಪರ್ಯ- ಸಾ. ಭಾ. :**

ಆಯುಧಗಳಿಂದ ರಕ್ಷಿಸಿಕೊಳ್ಳುವ ರುದ್ರಾನುಚರರಿಗೂ, ಅಸ್ತ್ರಜೀವಿಗಳಾದ ಮಾನವರಿಗೂ, ಕಟುಕರಾದವರ ರೂಪಿಯಾದವನಿಗೂ, ಖಡ್ಗಧಾರಿಗಳಾದ ಚೋರರೂಪದವನಿಗೂ, ರಾತ್ರಿಯಲ್ಲಿ ಸಂಚರಿಸುವ ಚೋರರ ರೂಪದವರಿಗೂ, ಸಂಭಾವಿತರಂತೆ ನಟಿಸುವ ಚೋರರೂಪದವನಿಗೂ, ರಾಜಭೂಮಿಯನ್ನು ಅಪಹರಿಸುವವರ ನಾಯಕರೂಪದವನಿಗೂ ನಮಸ್ಕಾರವು.

**: ತಾತ್ಪರ್ಯ- ಭ. ಭಾ. ಭಾ. :**

ಸಂಭಾವಿತನಂತೆ ವೇಷ ಧರಿಸುವ, ಮಾದಕವಸ್ತುಗಳನ್ನು ಪ್ರಯೋಗಿಸಿ ಕಳ್ಳತನ ಮಾಡುವ, ಸರ್ಕಾರದ ಭೂಮಿಯನ್ನು ಅಪಹರಿಸುವವರ ಒಡೆಯರ ರೂಪದ ರುದ್ರನಿಗೆ ನಮಸ್ಕಾರ.

# ನಮೋಽಸ್ಯದ್ಭ್ಯೋ ವಿಧ್ಯದ್ಭ್ಯಶ್ಚ ವೋ ನಮೋ ನಮ ಆಸೀನೇಭ್ಯಃ ಶಯಾನೇಭ್ಯಶ್ಚ ವೋ ನಮೋ

---

ನಮಃ । ಅಸ್ಯದ್ಭ್ಯ ಇತ್ಯಸ್ಯತ್-ಭ್ಯಃ । ವಿಧ್ಯದ್ಭ್ಯ ಇತಿ ವಿಧ್ಯತ್-ಭ್ಯಃ । ಚ । ವಃ । ನಮಃ । ನಮಃ । ಆಸೀನೇಭ್ಯಃ । ಶಯಾನೇಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
|---|---|
| ನಮೋಽಸ್ಯದ್ಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮ ಆಸೀನೇಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

ಪದಶಃ ಅರ್ಥ- ಸಾ. ಭಾ.

▲ **ಅಸ್ಯದ್ಭ್ಯಃ**=ಗುರಿ ಮುಟ್ಟುವಂತೆ ಬಾಣವನ್ನು ಪ್ರಯೋಗಿಸುವ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ವಿಧ್ಯದ್ಭ್ಯಃ**=[ಗುರಿಯಾದ ಶತ್ರುದೇಹವನ್ನು] ಬಾಣದಿಂದ ಭೇದಿಸುವ; **ವಃ**=ನಿಮಗೆ; **ನಮಃ**= ನಮಸ್ಕಾರವು. ▲ **ಆಸೀನೇಭ್ಯಃ**=[ಶತ್ರುಗಳನ್ನು ಜಯಿಸಿ] ಕುಳಿತಿರುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ಶಯಾನೇಭ್ಯಃ**=ಮಲಗಿರುವ; **ವಃ**=ನಿಮಗೆ; **ನಮಃ**=ನಮಸ್ಕಾರವು.

ಪದಶಃ ಅರ್ಥ- ಭ. ಭಾ. ಭಾ.

▲ **ಅಸ್ಯದ್ಭ್ಯಃ**=[ಬಾಣಗಳನ್ನು ಸೆಳೆದು] ಶತ್ರುದೇಹಗಳತ್ತ ಎಸೆಯುವ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ವಿಧ್ಯದ್ಭ್ಯಃ**=ಶತ್ರುಗಳ ಶರೀರಗಳನ್ನು ಹೊಡೆಯುವ; **ವಃ**=ನಿಮಗೆ; **ನಮಃ**=ನಮಸ್ಕಾರವು. ▲**ನಮಃ ಆಸೀನೇಭ್ಯಃ ಶಯಾನೇಭ್ಯಃ ಚ ವಃ ನಮಃ**= ಶತ್ರುಗಳನ್ನು ಜಯಿಸಿ ಕುಳಿತಿರುವ ನಿಮಗೆ ಮತ್ತು ಮಲಗಿರುವ ರುದ್ರರೂಪರಾದ ನಿಮಗೆ ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

**'ಅಸಿಮದ್ಭ್ಯಃ...'**ಎಂಬ ಮಂತ್ರದಲ್ಲಿ ಖಡ್ಗವನ್ನು ಧರಿಸಿ ರಾತ್ರಿಯಲ್ಲಿ ಸಂಚರಿಸುವವರಿಗೂ ಎಂದೂ ಅನ್ವಯಿಸಬಹುದು.

**'ಇಷುಮದ್ಭ್ಯಃ'** ಎಂಬ ಮಂತ್ರದಿಂದ ಮಂದಕ್ಕೆ **'ವಃ'** ಎಂಬ ವಿಶೇಷಣವಿದೆ. ಇವು ಎರಡು ವಾಕ್ಯಗಳು ಎಂಬುದನ್ನು ತಿಳಿಸುವುದಕ್ಕಾಗಿ ಎರಡು ನಮಃ ಶಬ್ದವಿದೆ.

ಈ ಮಂತ್ರದಿಂದ ಮುಂದಕ್ಕೆ **'ವಃ'** ಎಂಬ ಶಬ್ದವು ಇರುವುದರಿಂದ ಮಂತ್ರೋಕ್ತವಾದ ವಿಶೇಷಣಗಳಿಂದ ಕೂಡಿರುವ ರುದ್ರನ ಅನುಚರರಾದ ನಿಮಗೆ ನಮಸ್ಕಾರ ಎಂಬುದಾಗಿಯೂ ವಿವರಿಸಬಹುದು.

ಭಕ್ತರಲ್ಲದವರನ್ನು ಹೆದರಿಸುವುದಕ್ಕಾಗಿ ಕೈಯಲ್ಲಿ ಬಾಣವನ್ನೂ, ಬಿಲ್ಲನ್ನೂ ಧರಿಸಿರುವ ನಿಮಗೆ ನಮಸ್ಕಾರ.

ಬಿಲ್ಲಿಗೆ ಹೆದೆಯೇರಿಸಿ, ಸಜ್ಜುಗೊಳಿಸಿರುವ, ಬಿಲ್ಲಿನಲ್ಲಿ ಬಾಣಗಳನ್ನು ಹೂಡಿರುವ, ಬಿಲ್ಲಿನ ಹೆದೆಯನ್ನು ಸೆಳೆಯುತ್ತಿರುವ, ಗುರಿಯೆಡೆಗೆ ಬಾಣವನ್ನು ಪ್ರಯೋಗಿಸುತ್ತಿರುವ, ಗುರಿಯನ್ನು ತಲುಪುವಂತೆ ಬಾಣವನ್ನು ಪ್ರಯೋಗಿಸುವ

# ನಮಃ ಸ್ವಪದ್ಭ್ಯೋ ಜಾಗ್ರದ್ಭ್ಯಶ್ಚ ವೋ ನಮೋ ನಮಸ್ತಿಷ್ಠದ್ಭ್ಯೋ ಧಾವದ್ಭ್ಯಶ್ಚ ವೋ ನಮೋ

ನಮಃ । ಸ್ವಪದ್ಭ್ಯ ಇತಿ ಸ್ವಪತ್–ಭ್ಯಃ । ಜಾಗ್ರದ್ಭ್ಯ ಇತಿ ಜಾಗ್ರತ್–ಭ್ಯಃ । ಚ । ವಃ । ನಮಃ । ನಮಃ । ತಿಷ್ಠದ್ಭ್ಯ ಇತಿ ತಿಷ್ಠತ್–ಭ್ಯಃ । ಧಾವದ್ಭ್ಯ ಇತಿ ಧಾವತ್–ಭ್ಯಃ । ಚ । ವಃ । ನಮಃ ।

| ಮಂತ್ರ | ವಿನಿಯೋಗ |
| --- | --- |
| ನಮಃ ಸ್ವಪದ್ಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮಸ್ತಿಷ್ಠದ್ಭ್ಯಃ...ವೋ ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಸ್ವಪದ್ಭ್ಯಃ**=ನಿದ್ರೆಯನ್ನು ಮಾಡುತ್ತಿರುವ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಜಾಗ್ರದ್ಭ್ಯಃ**=ಎಚ್ಚರಗೊಳ್ಳುವ; **ವಃ**=ನಿಮಗೆ; **ನಮಃ**=ನಮಸ್ಕಾರವು; ▲ **ತಿಷ್ಠದ್ಭ್ಯಃ**=ಎಚ್ಚರಗೊಂಡ ಮೇಲೆ ಎದ್ದು ನಿಲ್ಲುವ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಧಾವದ್ಭ್ಯಃ**=ಎದ್ದು ಓಡಾಡುವ; **ವಃ**=ನಿಮಗೆ; **ನಮಃ**=ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.**

▲ **ನಮಃ ಸ್ವಪದ್ಭ್ಯಃ ಜಾಗ್ರದ್ಭ್ಯಃ ಚ ವಃ ನಮಃ**=ಮಲಗಿ ನಿದ್ರಿಸುತ್ತಿರುವ ರುದ್ರರೂಪರಾದ ನಿಮಗೆ ಮತ್ತು ಎಚ್ಚರಗೊಂಡಿರುವ ರುದ್ರರೂಪರಾದ ನಿಮಗೆ ನಮಸ್ಕಾರ. ▲ **ತಿಷ್ಠದ್ಭ್ಯಃ ವಃ ನಮಃ ಧಾವದ್ಭ್ಯಃ ಚ ವಃ ನಮಃ**=ನಿಂತಿರುವ ರುದ್ರರೂಪಿಗಳಾದ ನಿಮಗೂ ಎದ್ದು ಓಡಾಡುತ್ತಿರುವ ರುದ್ರರೂಪಿಗಳಾದ ನಿಮಗೂ ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಗುರಿಯಾದ ಶತ್ರುದೇಹವನ್ನು ಬಾಣದಿಂದ ಭೇದಿಸುವ ರುದ್ರರೂಪಿಗಳಾದ ನಿಮಗೆ ನಮಸ್ಕಾರವು.

**: ತಾತ್ಪರ್ಯ– ಭ. ಭಾ. ಭಾ. :**

ಈ 'ಇಷುಮದ್ಭ್ಯಃ' ಎಂಬ ಮಂತ್ರದಿಂದ ಮುಂದಕ್ಕೆ ಈ ಅನುವಾಕವು ಮುಗಿಯುವವರೆಗೂ ವಃ [ನಿಮಗೆ] ಎಂಬ ಯುಷ್ಮದ್ ಶಬ್ದದ ಪ್ರಯೋಗವಿರುವುದರಿಂದ ಈ ಮಂತ್ರಗಳು ಪ್ರತ್ಯಕ್ಷಕೃತಗಳು. ಹಿಂದಿನ ಮಂತ್ರಗಳಲ್ಲಿ ಒಡೆಯನಿಗೇ ನಮಸ್ಕಾರವು ಇದೆ. ಈ ಮುಂದೆ ಗುಂಪಿಗೇ ನಮಸ್ಕಾರವಿರುತ್ತದೆ.

ಹೇ! ರುದ್ರರೇ! ಬಿಲ್ಲುಗಳಿಗೆ ಹೆದೆಯೇರಿಸುತ್ತಿರುವ, ಬಾಣಗಳನ್ನು ಹೂಡುತ್ತಿರುವ, ಬಾಣಗಳನ್ನು ಹೂಡಿ ಸೆಳೆಯುತ್ತಿರುವ, ಬಾಣಗಳನ್ನು ಪ್ರಯೋಗಿಸುತ್ತಿರುವ, ಶತ್ರುಗಳತ್ತ ಬಾಣಗಳನ್ನು ಎಸೆಯುತ್ತಿರುವ, ಶತ್ರುಗಳನ್ನು ಧ್ವಂಸ ಮಾಡುತ್ತಿರುವ ರುದ್ರರಾದ ನಿಮಗೆ ನಮಸ್ಕಾರಗಳು. ಕುಳಿತಿರುವ, ಮಲಗಿರುವ, ನಿದ್ರಿಸುತ್ತಿರುವ, ಎಚ್ಚರ

## ನಮಃ ಸಭಾಭ್ಯಸ್ಸಭಾಪತಿಭ್ಯಶ್ಚ ವೋ ನಮೋ ನಮೋ

## ಅಶ್ವೇಭ್ಯೋಽಶ್ವಪತಿಭ್ಯಶ್ಚ ವೋ ನಮಃ ॥ ೯-3 ॥

[ಕುಲುಂಚಾನಾಂ ಪತಯೇ ನಮೋ ನಮೋಽಶ್ವಪತಿಭ್ಯಸ್ತ್ರೀಣಿ ಚ ॥]

---

ನಮಃ । ಸಭಾಭ್ಯಃ । ಸಭಾಪತಿಭ್ಯ ಇತಿ ಸಭಾಪತಿ-ಭ್ಯಃ । ಚ । ವಃ । ನಮಃ । ನಮಃ । ಅಶ್ವೇಭ್ಯಃ । ಅಶ್ವಪತಿಭ್ಯ ಇತ್ಯಶ್ವಪತಿ-ಭ್ಯಃ । ಚ । ವಃ । ನಮಃ ॥ (೯)

---

ನಮಸ್ಸಭಾಭ್ಯಃ...ವೋ ನಮಃ ॥ — ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು.

ನಮೋ ಅಶ್ವೇಭ್ಯಃ... ವೋ ನಮಃ ॥ — ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು.

**ಪದಶಃ ಅರ್ಥ- ಸಾ. ಭಾ.**

▲ **ಸಭಾಭ್ಯಃ**=ಒಟ್ಟಾಗಿ ಸೇರಿ ಸಭೆಯಾಗಿ ಕುಳಿತಿರುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ಸಭಾಪತಿಭ್ಯಃ**=ಸಭೆಯ ಅಧಿಪತಿಗಳಾಗಿ ಕುಳಿತು ಕಾರ್ಯವನ್ನು ನಿರ್ವಹಿಸುವ; ವಃ=ನಿಮಗೆ; **ನಮಃ**= ನಮಸ್ಕಾರ. ▲ **ಅಶ್ವೇಭ್ಯಃ**=ಕುದುರೆಗಳ ಸ್ವರೂಪರಾದ; **ವಃ**=ರುದ್ರರಾದ ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಅಶ್ವಪತಿಭ್ಯಃ**=ಕುದುರೆಗಳ ಒಡೆಯರಾದ ಮಹಾಧನಿಗಳ ಸ್ವರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಸಭಾಭ್ಯಃ ವಃ ನಮಃ ಸಭಾಪತಿಭ್ಯಃ ಚ** ವಃ **ನಮಃ**=ಗುಂಪಾಗಿ ಕುಳಿತಿರುವ ರುದ್ರರೂಪಿಗಳಾದ ನಿಮಗೂ ಗುಂಪಿನ ನಾಯಕರಿಗೂ, ಸ್ಥಾನಾಧ್ಯಕ್ಷರಿಗೂ ನಮಸ್ಕಾರವು. ▲ **ಅಶ್ವೇಭ್ಯಃ**=ಅಶ್ವಶರೀರದಲ್ಲಿರುವ **ವಃ**=ನಿಮಗೆ; [ರುದ್ರರಿಗೆ] **ನಮಃ**=ನಮಸ್ಕಾರ. ನಾಳೆ ಏನು ಬೇಕೆಂದು ಚಿಂತಿಸದೆ ಪರಿಗ್ರಹವನ್ನು ಮಾಡದೆ ತೃಪ್ತರಾಗಿರುವ ನಿರ್ಧನಸ್ವರೂಪರಿಗೆ ನಮಸ್ಕಾರ; **ಚ**=ಮತ್ತು; **ಅಶ್ವಪತಿಭ್ಯಃ**=ಇಂತಹವರಲ್ಲಿ ಮುಖ್ಯ ರಾದವರ ಸ್ವರೂಪರಿಗೂ/ಕುದುರೆಗಳ ಒಡೆತನ ಉಳ್ಳವರಿಗೂ/ಮಹಾಶ್ರೀಮಂತರಾದವರಿಗೂ; **ನಮಃ**= ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

**ಗೊಂಡಿರುವ, ನಿಂತಿರುವ, ಓಡಾಡುತ್ತಿರುವ, ಗುಂಪಿನ ಸ್ವರೂಪದಲ್ಲಿರುವ, ಗುಂಪಿನ ಒಡೆಯರ ರೂಪದಲ್ಲಿರುವ ರುದ್ರರೇ! ನಿಮಗೆ ನಮಸ್ಕಾರವು.**

**ತಾವೇ ತೃಪ್ತರಾಗಿ ನಾಳೆ ಏನು ಬೇಕೆಂದು ಚಿಂತಿಸದೇ ಅಂಗೀಕೃತದಾರಿದ್ರ್ಯರಾದ ನಿರ್ಧನಿಗಳ ಸ್ವರೂಪರಾದವರ ರೂಪದಲ್ಲಿರುವ, ಇಂತಹವರಲ್ಲಿ ಮುಖ್ಯರಾದವರ ಸ್ವರೂಪದಲ್ಲಿರುವವರಿಗೂ, ಮಹಾಶ್ರೀಮಂತರ ಸ್ವರೂಪದ**

—————: ತಾತ್ಪರ್ಯ– ಸಾ. ಭಾ. : —————

ಶತ್ರುಗಳನ್ನು ಗೆದ್ದು ಕುಳಿತಿರುವ, ಮಲಗಿಕೊಂಡಿರುವ ರುದ್ರರಿಗೂ, ನಿದ್ರಿಸುತ್ತಿರುವ, ಎಚ್ಚರಗೊಂಡಿರುವ ರುದ್ರರಿಗೂ ನಮಸ್ಕಾರ.

ಎದ್ದು ನಿಂತಿರುವ, ಓಡಾಡುತ್ತಿರುವ, ಸಭಾರೂಪದಲ್ಲಿರುವ, ಸಭಾಧಿಪತಿಗಳ ರೂಪದಲ್ಲಿರುವ ರುದ್ರರಿಗೆ ನಮಸ್ಕಾರ.

ಕುದುರೆಗಳ ಸ್ವರೂಪದಲ್ಲಿರುವ, ಕುದುರೆಗಳ ಒಡೆಯರ ಸ್ವರೂಪದಲ್ಲಿರುವ ರುದ್ರರಿಗೆ ರುದ್ರಾನುಚರರಿಗೆ ನಮಸ್ಕಾರ.

—————: ತಾತ್ಪರ್ಯ– ಭ. ಭಾ. ಭಾ. :—————

ರುದ್ರರಿಗೆ, ರುದ್ರಾನುಚರರಿಗೆ ನಮಸ್ಕಾರ.

ಈ ಅನುವಾಕದ ಮಂತ್ರಗಳಲ್ಲಿ ಬಹುವಚನವು ಶ್ರುತಿಯಲ್ಲಿರುವುದರಿಂದ ಇವರು ದೇವಾನುಚರರೆಂದೂ ಅಥವಾ ಲೀಲಾವಿಗ್ರಹಗಳ ಸ್ವರೂಪರೆಂದೂ ತಿಳಿಯಬೇಕು.

## || ಚತುರ್ಥೋಽನುವಾಕಃ ||

**ನಮ ಆವ್ಯಾಧಿನೀಭ್ಯೋ ವಿವಿಧ್ಯಂತೀಭ್ಯಶ್ಚ ವೋ ನಮೋ**

---

ನಮಃ । ಆವ್ಯಾಧಿನೀಭ್ಯ ಇತ್ಯಾ–ವ್ಯಾಧಿನೀಭ್ಯಃ । ವಿವಿಧ್ಯಂತೀಭ್ಯ ಇತಿ ವಿ–ವಿಧ್ಯಂತೀಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
|---|---|
| ನಮ ಆವ್ಯಾಧಿನೀಭ್ಯೋ...ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

---

ಮೂರನೆಯ ಅನುವಾಕದಲ್ಲಿ ಉಭಯತೋನಮಸ್ಕಾರರೂಪವಾದ ಕೆಲವು ಯಜುಸ್ಸುಗಳು ಹೇಳಲ್ಪಟ್ಟವು. ಈ ನಾಲ್ಕನೆಯ ಅನುವಾಕದಲ್ಲಿ ಮತ್ತೆ ಕೆಲವು ಅಂತಹ ಯಜುಸ್ಸುಗಳು ಹೇಳಲ್ಪಟ್ಟಿವೆ.

**ಪದಶಃ ಅರ್ಥ– ಸಾ. ಭಾ.** ———

▲ [ರುದ್ರರೇ!] **ಆವ್ಯಾಧಿನೀಭ್ಯಃ**=ಸುತ್ತಲೂ ಇರುವ ಶತ್ರುಗಳನ್ನು ಪ್ರಹರಿಸಲು ಸಮರ್ಥವಾದ ಸ್ತ್ರೀ ಮೂರ್ತಿಯನ್ನು ಹೊಂದಿರುವ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ವಿವಿಧ್ಯಂತೀಭ್ಯಃ**= ವಿಶೇಷವಾಗಿ ಪ್ರಹರಿಸಬಲ್ಲ ಶಿವಸೇನೆಗಳಾದ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ———

▲ **ಆವ್ಯಾಧಿನೀಭ್ಯಃ**=ಸುತ್ತಲೂ ಪ್ರಹರಿಸಲು ಶಕ್ತರಾದ ರುದ್ರಸೇನೆಗಳಿಗೆ/ಜಾತಿವಿಶೇಷಗಳಾದ; **ವಃ**= ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ವಿವಿಧ್ಯಂತೀಭ್ಯಃ**=ಬಹುಪ್ರಕಾರಗಳಿಂದ ಹೊಡೆಯುವ ರುದ್ರ ಸೇನೆಗಳಾದ/ಸ್ತ್ರೀಶಕ್ತಿಗಳಾದ; ವಃ=ನಿಮಗೆ; **ನಮಃ**=ನಮಸ್ಕಾರ.

———: **ತಾತ್ಪರ್ಯ– ಸಾ. ಭಾ.** :———

**ಎಲ್ಲ ಕಡೆಯಿಂದಲೂ ಹೊಡೆಯಲು ಶಕ್ತರಾದ ಸ್ತ್ರೀಮೂರ್ತಿಗಳನ್ನು ಹೊಂದಿರುವ ರುದ್ರಮೂರ್ತಿಗಳಿಗೂ ವಿಶೇಷವಾಗಿ ಭೇದಿಸಬಲ್ಲ ಸ್ತ್ರೀಮೂರ್ತಿಗಳಾದ ನಿಮಗೆ ನಮಸ್ಕಾರ.**

———: **ತಾತ್ಪರ್ಯ– ಭ. ಭಾ. ಭಾ.** :———

**ಇನ್ನು ಮುಂದೆ ಕ್ರಿಯಾ–ಗುಣ–ದ್ರವ್ಯವಿಷಯವಾದ ಆಧಿಪತ್ಯವು ಹೇಳಲ್ಪಟ್ಟಿದೆ. ಈ ಅನುವಾಕದ ಮಂತ್ರಗಳೆಲ್ಲವೂ 'ಯುಷ್ಮದ್' ಶಬ್ದದ ಪ್ರಯೋಗವಿರುವುದರಿಂದ ಪ್ರತ್ಯಕ್ಷಕೃತಗಳು. ಸಮೂಹಗಳು ನಮಸ್ಕರಿಸಲ್ಪಟ್ಟಿವೆ. ಬೇರೆ ಬೇರೆ ವೃತ್ತಿಯವರು ತಮ್ಮ ತಮ್ಮ ಕಾರ್ಯಗಳನ್ನು ದೇವಾರಾಧನೆಯೆಂದು ಭಾವಿಸಿ, ದೇವನನ್ನು ಸ್ತುತಿಸುವುದು ಮೇಲೆಂದು ಈ ಅನುವಾಕದಿಂದ ತಿಳಿಯುತ್ತದೆ.**

## ನಮ ಉಗಣಾಭ್ಯಸ್ತೃಗ್ಂಹತೀಭ್ಯಶ್ಚ ವೋ ನಮೋ ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚ ವೋ ನಮೋ

---

ನಮಃ । ಉಗಣಾಭ್ಯಃ । ತೃಗ್ಂಹತೀಭ್ಯಃ । ಚ । ವಃ । ನಮಃ । ನಮಃ । ಗೃತ್ಸೇಭ್ಯಃ । ಗೃತ್ಸಪತಿಭ್ಯ ಇತಿ ಗೃತ್ಸಪತಿ–ಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
| --- | --- |
| **ನಮ ಉಗಣಾಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮೋ ಗೃತ್ಸೇಭ್ಯೋ...ನಮಃ ॥** | ಶತರುದ್ರೀಯಹವನ/ರುದ್ರನಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಉಗಣಾಭ್ಯಃ**=ಉತ್ಕೃಷ್ಟರಾದ ಸಪ್ತಮಾತೃಕಾರೂಪರಾದ ಸ್ತ್ರೀಶಕ್ತಿಗಳಾದ; **ವಃ**=ನಿಮಗೆ; **ನಮಃ**=ನಮಸ್ಕಾರವು. **ಚ**=ಮತ್ತು; **ತೃಗ್ಂಹತೀಭ್ಯಃ**=ಹಿಂಸಿಸಲು ಶಕ್ತರಾದ ದುರ್ಗೆಯೇ ಮುಂತಾದ ಉಗ್ರದೇವತಾ ರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರವು; ▲ **ಗೃತ್ಸೇಭ್ಯಃ**=ವಿಷಯಲಂಪಟಸ್ವರೂಪರಾದ ರುದ್ರರಾದ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ಗೃತ್ಸಪತಿಭ್ಯಃ**=ಅಂತಹವರನ್ನು ಪಾಲಿಸುವವರಾದ; ವಃ=ನಿಮಗೆ; **ನಮಃ**=ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.**

▲ **ಉಗಣಾಭ್ಯಃ**=ಉತ್ಕೃಷ್ಟರಾದ ಸಪ್ತಮಾತೃಕಾರೂಪರಾದ ಸ್ತ್ರೀಶಕ್ತಿಗಳಾದ/ಗಣರೂಪದಲ್ಲಿ ಕಾಣಿಸುವ; **ವಃ**=ನಿಮಗೆ/ರುದ್ರರಿಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ತೃಗ್ಂಹತೀಭ್ಯಃ**=ವಿಶೇಷವಾದ ಪ್ರಹಾರವನ್ನು ಮಾಡುವ ಸ್ತ್ರೀಶಕ್ತಿಗಳಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಗೃತ್ಸೇಭ್ಯಃ**=ಮೇಧಾವಿಗಳಾದ/ಮೇಧೋಪಜೀವಿಗಳ ಸ್ವರೂಪದಲ್ಲಿರುವ ರುದ್ರರಾದ; **ವಃ**=ನಿಮಗೆ; **ನಮಃ**=ನಮಸ್ಕಾರವು; **ಚ**=ಮತ್ತು; **ಗೃತ್ಸಪತಿಭ್ಯಃ**=ಬುದ್ಧಿಜೀವಿಗಳ ಸ್ವಾಮಿರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**ಸಪ್ತಮಾತೃಕಾರೂಪರಾದ ಉತ್ಕೃಷ್ಟಗಣರೂಪರಾದವರೂ, ವಿಶೇಷವಾದ ಪ್ರಹರಣಸಾಮರ್ಥ್ಯವನ್ನು ಹೊಂದಿರುವ**

**: ತಾತ್ಪರ್ಯ– ಭ. ಭಾ. ಭಾ. :**

ಉತ್ಕೃಷ್ಟರಾದ ಸಪ್ತಮಾತೃಕಾರೂಪರಾದ ನಿಮಗೂ, *ಗಣರೂಪದಲ್ಲಿರುವ ನಿಮಗೂ ನಮಸ್ಕಾರ. ಈ ಮಂತ್ರಗಳಲ್ಲಿ ಕೆಲವೆಡೆ ನೇರವಾಗಿ ರುದ್ರರಿಗೂ, ಕೆಲವು ಕಡೆ ರುದ್ರನ ಅನುಚರರಿಗೂ ನಮಸ್ಕಾರವು ಮಾಡಲ್ಪಟ್ಟಿದೆ.

---

* ಒಂದು ರಥ, ಒಂದು ಆನೆ, ಮೂರು ಕುದುರೆ, ಐದು ಪದಾತಿಗಳುಳ್ಳ ಒಂದು ಸಮೂಹಕ್ಕೆ 'ಪತ್ತಿ' ಎನ್ನುವರು. ಇದರಲ್ಲಿರುವ ಒಂದೊಂದೂ ಮೂರು ಪಟ್ಟು ಹಿಗ್ಗಿದಾಗ ಮೊದಲು ಸೇನಾಮುಖವೆಂದೂ, ಸೇನಾಮುಖದ ಮೂರರಷ್ಟಕ್ಕೆ ಗುಲ್ಮವೆಂದೂ, ಗುಲ್ಮದ ಮೂರರಷ್ಟಕ್ಕೆ ಗಣವೆಂದೂ ಹೆಸರು.

## ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮೋ

---

ನಮಃ । ವ್ರಾತೇಭ್ಯಃ । ವ್ರಾತಪತಿಭ್ಯ ಇತಿ ವ್ರಾತಪತಿ-ಭ್ಯಃ । ಚ । ವಃ । ನಮಃ । ನಮಃ । ಗಣೇಭ್ಯಃ । ಗಣಪತಿಭ್ಯ ಇತಿ ಗಣಪತಿ-ಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ನಮೋ ವ್ರಾತೇಭ್ಯೋ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |
| **ನಮೋ ಗಣೇಭ್ಯೋ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ವ್ರಾತೇಭ್ಯಃ** ವಃ=ಅನಿಯತವಾದ ವೃತ್ತಿಯುಳ್ಳ ಜನರ ಸಮೂಹರೂಪರಾದ ರುದ್ರರಾದ ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ವ್ರಾತಪತಿಭ್ಯಃ** ವಃ=ಅಂತಹ ಗುಂಪುಗಳ ಪಾಲಕರಾದ ರುದ್ರರೂಪರಾದ ನಿಮಗೆ; **ನಮಃ**=ನಮಸ್ಕಾರವು. ▲ **ಗಣೇಭ್ಯಃ ವಃ**=ದೇವನ ಅನುಚರರಾದ ಭೂತವಿಶೇಷ/ *ಪ್ರಮಥಗಣ ಸ್ವರೂಪರಾದ ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಗಣಪತಿಭ್ಯಃ** ವಃ=ಅಂತಹ ಪ್ರಮಥಗಣಗಳ ಪಾಲಕರಾದ ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ವ್ರಾತೇಭ್ಯಃ**=ನಾನಾಜಾತಿಯವರಾದ ಅನಿಯತವೃತ್ತಿಯವರಾದವರು/ಎತ್ತರವಾಗಿ/ಶ್ರೇಷ್ಠವಾಗಿ ಜೀವಿಸುವ ಗುಂಪುಗಳ ಸ್ವರೂಪರಾದ ರುದ್ರರಿಗೆ; **ನಮಃ**=ನಮಸ್ಕಾರ; **ಚ**=ಮತ್ತು; **ವ್ರಾತಪತಿಭ್ಯಃ**= ಅಂತಹ ಗುಂಪುಗಳ ಒಡೆಯರಾದ; **ವಃ**=ನಿಮಗೆ; **ನಮಃ**=ನಮಸ್ಕಾರ. ▲ **ಗಣೇಭ್ಯಃ**= ದೇವನ ಅನುಚರರಾದ ಪ್ರಮಥಗಳಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಗಣಪತಿಭ್ಯಃ**=ಅಂತಹ ಪ್ರಮಥ ಗಣಗಳ ಪಾಲಕಸ್ವರೂಪರಾದ; ವಃ=ನಿಮಗೆ **ನಮಃ**=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ದುರ್ಗೆಯೇ ಮುಂತಾದ ಉಗ್ರದೇವತಾರೂಪರಾದ ನಿಮಗೆ ನಮಸ್ಕಾರ.**

**ವಿಷಯಗಳಲ್ಲಿಯೇ ಲಂಪಟರಾದವರ ಸ್ವರೂಪದಲ್ಲಿರುವ ರುದ್ರರಿಗೆ ನಮಸ್ಕಾರ. ಅಂತಹವರ ಪಾಲಕರಾದವರ ಸ್ವರೂಪದ ರುದ್ರರಿಗೂ ನಮಸ್ಕಾರ.**

---

* ಗಣಪತ್ಯಥರ್ವಶೀರ್ಷದಲ್ಲಿ ಗಣಪತಿಯನ್ನೂ ವ್ರಾತಪತಿ, ಗಣಪತಿ, ಪ್ರಮಥಪತಿ ಎಂದು ಸ್ತುತಿಸಿದೆ. ಸ್ತುತಿಯ ಕ್ರಮಸಾಮ್ಯವನ್ನು ಲಕ್ಷಿಸಬಹುದು.

# ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮೋ ನಮೋ ಮಹದ್ಭ್ಯಃ, ಕ್ಷುಲ್ಲಕೇಭ್ಯಶ್ಚ ವೋ ನಮೋ

---

ನಮಃ । ವಿರೂಪೇಭ್ಯ ಇತಿ ವಿ-ರೂಪೇಭ್ಯಃ । ವಿಶ್ವರೂಪೇಭ್ಯ ಇತಿ ವಿಶ್ವ-ರೂಪೇಭ್ಯಃ । ಚ । ವಃ । ನಮಃ । ನಮಃ । ಮಹದ್ಭ್ಯ ಇತಿ ಮಹತ್-ಭ್ಯಃ । ಕ್ಷುಲ್ಲಕೇಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ನಮೋ ವಿರೂಪೇಭ್ಯೋ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ಮಹದ್ಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ವಿರೂಪೇಭ್ಯಃ**=ವಿಕೃತವಾದ ನಗ್ನ-ಮುಂಡಾದಿರೂಪರಾದ ರುದ್ರಾನುಚರರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ವಿಶ್ವರೂಪೇಭ್ಯಃ**=ವಿವಿಧವಾದ ಆನೆ-ಕುದುರೆ ಮುಂತಾದ ಮುಖಗಳಿಂದ ಕೂಡಿರುವ ರುದ್ರರಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ ***ಮಹದ್ಭ್ಯಃ**=ಅಣಿಮಾದಿ ಅಷ್ಟಸಿದ್ಧಿಯನ್ನು ಪಡೆದಿರುವ/ಭೂಮಿಯಲ್ಲಿ ಕಾರಣಿಕಪುರುಷರಾಗಿ ಹುಟ್ಟಿದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಕ್ಷುಲ್ಲಕೇಭ್ಯಃ**=ಆ ರೀತಿಯ ಸಿದ್ಧಿಯನ್ನು ಪಡೆಯದಿರುವ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ವಿರೂಪೇಭ್ಯಃ**=ವಿಕಾರವೇಷಗಳುಳ್ಳ/ಹೆಚ್ಚಾದ ಅಂಗಗಳು ಅಥವಾ ಕಡಿಮೆಯಾಗಿರುವ ಅಂಗಗಳನ್ನು ಹೊಂದಿರುವ ರೂಪದ ರುದ್ರಗಣಗಳಾದ; **ವಃ**=ನಿಮಗೆ; **ನಮಃ**=ನಮಸ್ಕಾರವು. **ಚ**=ಮತ್ತು; **ವಿಶ್ವರೂಪೇಭ್ಯಃ**=ಸ್ವೇಚ್ಛೆಯಂತೆ ಆನೆ-ಸಿಂಹ-ಹುಲಿ-ಹಂದಿ ಮುಂತಾದ ಮುಖಗಳುಳ್ಳ; ವಃ=ನಿಮಗೆ; **ನಮಃ**=ನಮಸ್ಕಾರವು. ▲ **ಮಹದ್ಭ್ಯಃ**=ಜ್ಞಾನ-ಆಕಾರ-ಪ್ರಭಾವಗಳಿಂದ ದೊಡ್ಡವರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಕ್ಷುಲ್ಲಕೇಭ್ಯಃ**=ಅಲ್ಪವಾದ ಜ್ಞಾನ-ಆಕಾರ-ಪ್ರಭಾವವುಳ್ಳ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಮೇಧಾವಿರೂಪರಾದ ರುದ್ರರಿಗೂ, ಅವರನ್ನು ಪಾಲಿಸುವವರ ರೂಪದ ರುದ್ರರಿಗೂ ನಮಸ್ಕಾರ. ಮೇಧೋಪಜೀವಿಗಳನ್ನು ಪಾಲಿಸುವ ರೂಪದ ರುದ್ರರಿಗೂ ನಮಸ್ಕಾರ.

---

* ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟ ಸಿದ್ಧಯಃ ॥

## ನಮೋ ರಥಿಭ್ಯೋಽರಥೇಭ್ಯಶ್ಚ ವೋ ನಮೋ

ನಮಃ। ರಥಿಭ್ಯ ಇತಿ ರಥಿ-ಭ್ಯಃ। ಅರಥೇಭ್ಯಃ। ಚ। ವಃ। ನಮಃ।

| ಮಂತ್ರ | ವಿನಿಯೋಗ |
|---|---|
| **ನಮೋ ರಥಿಭ್ಯೋ...ನಮಃ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

**ರಥಿಭ್ಯಃ**=ರಥವನ್ನು ಏರಿದವರ [ಸ್ವರೂಪವುಳ್ಳ] **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಅರಥೇಭ್ಯಃ**=ರಥವಿಲ್ಲದವರ ಸ್ವರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

**ರಥಿಭ್ಯಃ**=ರಥವನ್ನು ಹೊಂದಿದವರಾದ/ರಥಾರೂಢರಾದವರ ಸ್ವರೂಪದ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ಅರಥೇಭ್ಯಃ**=ರಥವಿಲ್ಲದ ಪದಾತಿಗಳ ಸ್ವರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಅನಿಯತವಾದ ವೃತ್ತಿಯ ಜನರ ಮತ್ತು ಅಂತಹವರ ಪಾಲಕರಾದ ರುದ್ರರೂಪರಾದ ನಿಮಗೂ, ದೇವಾನುಚರರಾದ ಭೂತವಿಶೇಷರೂಪರಿಗೂ, ಅವರ ಗಣಪಾಲಕರಿಗೂ ನಮಸ್ಕಾರ.

ವಿಕೃತವಾದ ನಗ್ನ-ಮುಂಡಾದಿರೂಪವನ್ನು ಹೊಂದಿರುವ ರುದ್ರನ ಅನುಚರರಿಗೂ, ಬಗೆಬಗೆಯ ಪ್ರಾಣಿಗಳ ಮುಖದಿಂದ ಕೂಡಿರುವ ರುದ್ರರಾದ ನಿಮಗೆ ನಮಸ್ಕಾರ.

ಅಣಿಮಾ ಮುಂತಾದ ಎಂಟು ಸಿದ್ಧಿಯನ್ನು ಹೊಂದಿದವರಾಗಿ ರುದ್ರಾನುಚರರಾದ ಮಹಾಂತರಾದ ನಿಮಗೆ ನಮಸ್ಕಾರ. ಈ ರೀತಿಯ ಸಿದ್ಧಿಯನ್ನು ಪಡೆಯದಿರುವ ಅಲ್ಪರ ರೂಪದವರಾದ ನಿಮಗೂ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಮೇಲ್ಮಟ್ಟದಲ್ಲಿ ಜೀವಿಸುವ ಗುಂಪುಗಳ ಸ್ವರೂಪರಾದ ರುದ್ರರಿಗೂ ಅಂತಹ ಗುಂಪುಗಳ ನಾಯಕರಾದ ರುದ್ರಸ್ವರೂಪರಿಗೂ ನಮಸ್ಕಾರ.

ದೇವಾನುಚರರಾದ ಪ್ರಮಥಗಣಗಳಿಗೂ, ಅಂತಹ ಗಣಪಾಲಕರಿಗೂ, ಶರೀರದಲ್ಲಿ ಕೆಲವು ಅಂಗಗಳು ಹೆಚ್ಚಾಗಿರುವವರ ರೂಪದ, ಕೆಲವು ಅಂಗಗಳು ಇಲ್ಲದವರ ರೂಪದ ರುದ್ರರೂಪರಿಗೂ, ಸ್ವೇಚ್ಛೆಯಿಂದ ಬಗೆ ಬಗೆಯ ರೂಪವನ್ನು ಧರಿಸುವ ರುದ್ರರೂಪರಿಗೂ ನಮಸ್ಕಾರ.

ಜ್ಞಾನ-ಆಕಾರ-ಪ್ರಭಾವಗಳಿಂದ ಮಹತ್ತ್ವವನ್ನು ಹೊಂದಿರುವ ನಿಮಗೆ ನಮಸ್ಕಾರ. ಅಂಥವರು ಭೂಮಿಯಲ್ಲಿ ಹುಟ್ಟಿ ಮಹಾತ್ಮರೆನಿಸಿರುತ್ತಾರೆ. **'ಭಕ್ತಿ ವಿಜಯ'** ಮುಂತಾದ ಗ್ರಂಥಗಳಲ್ಲಿ ಶಿವಭಕ್ತರಾದ ಮಹಾತ್ಮರ ಚರಿತ್ರೆಯನ್ನು ನೋಡಬಹುದು.

ಮಹಾತ್ಮರಾದ ಶಿವಭಕ್ತರು ಎಲ್ಲ ಬಗೆಯ ಸಿದ್ಧಿಯನ್ನೂ ಶಿವಾನುಗ್ರಹದಿಂದ ಪಡೆದಿರುತ್ತಾರೆ.

# ನಮೋ ರಥೇಭ್ಯೋ [ರಥೇಭ್ಯಃ (೯)] ರಥಪತಿಭ್ಯಶ್ಚ ವೋ ನಮೋ ನಮಃ ಸೇನಾಭ್ಯಃ ಸೇನಾನಿಭ್ಯಶ್ಚ ವೋ ನಮೋ

ನಮಃ । ರಥೇಭ್ಯಃ । (೯) । ರಥಪತಿಭ್ಯ ಇತಿ ರಥಪತಿ–ಭ್ಯಃ । ಚ । ವಃ । ನಮಃ । ನಮಃ । ಸೇನಾಭ್ಯಃ । ಸೇನಾನಿಭ್ಯ ಇತಿ ಸೇನಾನಿ–ಭ್ಯಃ । ಚ । ವಃ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮೋ ರಥೇಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮಃ ಸೇನಾಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ರಥೇಭ್ಯಃ***=ರಥದೇವತಾರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ರಥಪತಿಭ್ಯಃ**= ರಥಗಳ ಒಡೆಯರಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಸೇನಾಭ್ಯಃ**=ಸೇನಾರೂಪರಾದ; **ವಃ**= ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಸೇನಾನಿಭ್ಯಃ**=ಸೇನಾನಾಯಕರಾದ; ವಃ=ನಿಮಗೆ; **ನಮಃ**= ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.**

▲ **ರಥೇಭ್ಯಃ**=ರಥರೂಪರಾದ/ರಥದ ಅವಯವರೂಪರಾದ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**= ಮತ್ತು; **ರಥಪತಿಭ್ಯಃ**=ರಥಗಳ ಪಾಲಕರಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಸೇನಾಭ್ಯಃ**=ಸೇನಾ ರೂಪರಾಗಿ ವಿಹರಿಸುವ ರುದ್ರಗಣಗಳಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಸೇನಾನಿಭ್ಯಃ**= ಸೇನೆಯನ್ನು ಮುನ್ನಡೆಸುವ ಸೇನಾನಾಯಕರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

**ಸಾರ್ಕೇಂದುಗ್ರಹನಕ್ಷತ್ರಾಂ ದ್ಯಾಂ ಕುರ್ಯುರ್ಯೇ ಮಹೀತಲೇ ।**
**ಪ್ರಾಪ್ಯಾಷ್ಟಗುಣಮೈಶ್ವರ್ಯಂ ಯೇ ನ ಯಾಂತಿ ಸುವಿಸ್ಮಯಮ್ ।**
**ಯೇಷಾಂ ವಿಸ್ಮಯತೇ ನಿತ್ಯಂ ಕರ್ಮಭಿರ್ಭಗವಾನ್ ಶಿವಃ ॥**

[ಯಾರು ಅಣಿಮಾ ಮುಂತಾದ ಅಷ್ಟಗುಣಗಳಿಂದೊಡಗೂಡಿದ ಈಶ್ವರತ್ವವನ್ನು ಸಿದ್ಧಿಸಿಕೊಂಡು ಭೂಮಿಯಲ್ಲಿಯೇ ಸೂರ್ಯ, ಚಂದ್ರ, ನಕ್ಷತ್ರಗಳಿಂದ ಕೂಡಿದ ಆಕಾಶವನ್ನು ಸೃಷ್ಟಿಸಬಲ್ಲರೋ, ತಮ್ಮ ಈ ಸಿದ್ಧಿಗಳಿಂದ ಯಾರು ಬೀಗುವುದಿಲ್ಲವೋ, ಯಾರ ಈ ಅದ್ಭುತಕೃತ್ಯಗಳಿಂದ ಭಗವಂತನಾದ ಈಶ್ವರನೇ ಮೆಚ್ಚಿದವನಾಗಿ ಅಚ್ಚರಿಗೊಳ್ಳು ವನೋ ಅಂತಹ ಮಹಾತ್ಮರು ಶಿವಾನುಗ್ರಹಕ್ಕೆ ಪಾತ್ರರಾಗಿರುವರು.]

* ಈ ಮಂತ್ರದಿಂದ ಪ್ರಾರಂಭಿಸಿ ಅನುವಾಕವು ಮುಗಿಯುವವರೆಗೆ ಕೆಲವು ಮಂತ್ರಾರ್ಥಗಳು ಸ್ಪಷ್ಟಾರ್ಥಗಳೆಂದು ಸಾಯಣಾಚಾರ್ಯರು ಹೇಳಿದ್ದಾರೆ.

## ನಮಃ, ಕ್ಷತ್ತೃಭ್ಯಃ ಸಂಗ್ರಹೀತೃಭ್ಯಶ್ಚ ವೋ ನಮೋ ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮೋ

---

ನಮಃ। ಕ್ಷತ್ತೃಭ್ಯ ಇತಿ ಕ್ಷತ್ತೃ-ಭ್ಯಃ। ಸಂಗ್ರಹೀತೃಭ್ಯ ಇತಿ ಸಂಗೃಹೀತೃ-ಭ್ಯಃ। ಚ। ವಃ। ನಮಃ। ನಮಃ। ತಕ್ಷಭ್ಯ ಇತಿ ತಕ್ಷ-ಭ್ಯಃ। ರಥಕಾರೇಭ್ಯ ಇತಿ ರಥ-ಕಾರೇಭ್ಯಃ। ಚ। ವಃ। ನಮಃ।

---

| ಮಂತ್ರ | ವಿನಿಯೋಗ |
|---|---|
| ನಮಃ ಕ್ಷತ್ತೃಭ್ಯಃ...ನಮಃ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| ನಮಸ್ತಕ್ಷಭ್ಯಃ...ನಮಃ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

ಪದಶಃ ಅರ್ಥ- ಸಾ. ಭಾ. ————

▲ **ಕ್ಷತ್ತೃಭ್ಯಃ**=ರಥಗಳನ್ನು ನಡೆಸುವವರ ರೂಪದ/ಬಾಗಿಲಿನಲ್ಲಿ ಇರುವವರಾದ;* **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಸಂಗ್ರಹೀತೃಭ್ಯಃ**=ರಥಸಾರಥಿಗಳಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ತಕ್ಷಭ್ಯಃ**=ಬಡಗಿಗಳ ಸ್ವರೂಪರಾದ; **ವಃ**=ನಿಮಗೆ; **ನಮಃ**=ನಮಸ್ಕಾರ. **ಚ**=ಮತ್ತು; **ರಥಕಾರೇಭ್ಯಃ**=ರಥಗಳನ್ನು ಮಾಡುವ; ವಃ=ನಿಮಗೆ; **ನಮಃ**=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ. ————

▲ **ಕ್ಷತ್ತೃಭ್ಯಃ**=ರಥವನ್ನು ನಡೆಸುವ ವಿದ್ಯೆಯನ್ನು ಕಲಿಸಿಕೊಡುವವರಾದ; **ವಃ**=ನಿಮಗೆ; [ರುದ್ರರೂಪದವರಿಗೆ] **ನಮಃ**=ನಮಸ್ಕಾರ; **ಚ**=ಮತ್ತು; **ಸಂಗ್ರಹೀತೃಭ್ಯಃ**=ಕುದುರೆಗಳ ಹಗ್ಗವನ್ನು ಹಿಡಿದು ರಥಗಳನ್ನು ನಿಯಂತ್ರಿಸುವ ಮಹಾಸಾರಥಿಗಳಾದ; ವಃ=ನಿಮಗೆ; **ನಮಃ**=ನಮಸ್ಕಾರವು. ▲ **ತಕ್ಷಭ್ಯಃ**=ಬಡಗಿಗಳ ರೂಪರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ರಥಕಾರೇಭ್ಯಃ**=ಒಳ್ಳೆಯ ರಥವನ್ನು ಮಾಡುವ ಉತ್ತಮ ಶಿಲ್ಪಿಗಳಾದ; ವಃ=ನಿಮಗೆ; **ನಮಃ**=ನಮಸ್ಕಾರ.

———: ಸಾ. ಭಾ. ತಾತ್ಪರ್ಯ :———

ರಥವನ್ನು ಏರಿದವರ ಸ್ವರೂಪದಲ್ಲಿರುವ ರುದ್ರರಿಗೆ ನಮಸ್ಕಾರ. ಹಾಗೆಯೇ ರಥವಿಲ್ಲದವರ ಸ್ವರೂಪದ ರುದ್ರರಾದ ನಿಮಗೂ ನಮಸ್ಕಾರ.

ರಥದೇವತಾರೂಪರಾದ ನಿಮಗೂ, ರಥಗಳ ಒಡೆಯರಾದ ನಿಮಗೂ ನಮಸ್ಕಾರ. ಸೇನಾರೂಪರೂ, ಸೇನಾನಾಯಕರೂಪರೂ ಆಗಿರುವ ನಿಮಗೆ [ರುದ್ರರಿಗೆ] ನಮಸ್ಕಾರ.

———: ಭ. ಭಾ. ಭಾ. ತಾತ್ಪರ್ಯ :———

ರುದ್ರನ ರಥರೂಪರಾದ ನಿಮಗೆ ನಮಸ್ಕಾರ. ರಥದ ಅವಯವರೂಪರಾದ ನಿಮಗೆ ನಮಸ್ಕಾರ.

---

* ಕ್ಷತ್ತಾ ಸ್ಯಾತ್ಸಾರಥೌ ದ್ವಾಃಸ್ಥೇ ಕ್ಷತ್ರಿಯಾಯಾಂ ಚ ಶೂದ್ರಜೇ। ಅಮರಕೋಶ (ನಾನಾರ್ಥವರ್ಗ)

## ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚ ವೋ ನಮೋ ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚ ವೋ ನಮೋ

ನಮಃ । ಕುಲಾಲೇಭ್ಯಃ । ಕರ್ಮಾರೇಭ್ಯಃ । ಚ । ವಃ । ನಮಃ । ನಮಃ । ಪುಂಜಿಷ್ಟೇಭ್ಯಃ । ನಿಷಾದೇಭ್ಯಃ । ಚ । ವಃ । ನಮಃ ।

| ಮಂತ್ರ | ವಿನಿಯೋಗ |
|---|---|
| **ನಮಃ ಕುಲಾಲೇಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮಃ ಪುಂಜಿಷ್ಟೇಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

**ಪದಶಃ ಅರ್ಥ– ಸಾ. ಭಾ.**

▲ **ಕುಲಾಲೇಭ್ಯಃ**=ಕುಂಬಾರರ ಸ್ವರೂಪರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಕರ್ಮಾರೇಭ್ಯಃ**=ಕಮ್ಮಾರರ ಸ್ವರೂಪರಾದ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಪುಂಜಿಷ್ಟೇಭ್ಯಃ**=ಹಕ್ಕಿಗಳ ಗುಂಪನ್ನು ಘಾತಿಸುವವರ ಸ್ವರೂಪದಲ್ಲಿರುವ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ನಿಷಾದೇಭ್ಯಃ**=ಮೀನುಗಳನ್ನು ಸಂಹರಿಸುವವರಾದ ನಿಷಾದರೂಪದ; ವಃ=ನಿಮಗೆ; **ನಮಃ**=ನಮಸ್ಕಾರವು.

**ಪದಶಃ ಅರ್ಥ– ಭ. ಭಾ. ಭಾ.**

▲ **ಕುಲಾಲೇಭ್ಯಃ**=ಕುಂಬಾರರ ರೂಪರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಕರ್ಮಾರೇಭ್ಯಃ**=ಕಮ್ಮಾರರ ರೂಪದಲ್ಲಿರುವ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಪುಂಜಿಷ್ಟೇಭ್ಯಃ**= ಹಕ್ಕಿಗಳನ್ನು ಗುಂಪು ಗುಂಪಾಗಿ ಹಿಡಿಯುವ ರೂಪದಲ್ಲಿರುವ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**= ಮತ್ತು; **ನಿಷಾದೇಭ್ಯಃ**=ಮೀನುಗಳನ್ನು ಗುಂಪು ಗುಂಪಾಗಿ ಹಿಡಿದು ಕೊಲ್ಲುವ ಬೆಸ್ತರ ರೂಪದಲ್ಲಿರುವ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ದ್ವಾರಪಾಲಕರೂಪರಾದ ನಿಮಗೆ ನಮಸ್ಕಾರವು. ರಥಗಳನ್ನು ಮುನ್ನಡೆಸುವ ಸಾರಥಿರೂಪರಾದ ನಿಮಗೆ ನಮಸ್ಕಾರವು.

ಬಡಗಿಗಳ ಸ್ವರೂಪದಲ್ಲಿರುವ ರುದ್ರರಿಗೂ, ರಥಗಳನ್ನು ನಿರ್ಮಿಸುವವರ, ಕಂಬಾರರ ಹಾಗೂ ಕಮ್ಮಾರರ ಸ್ವರೂಪರಾದ ರುದ್ರರಿಗೆ ನಮಸ್ಕಾರ. ರುದ್ರನು ಎಲ್ಲರಲ್ಲಿಯೂ ಇರುತ್ತಾನೆಂದು ಈ ರೀತಿ ಶ್ರುತಿಯಲ್ಲಿ ಸ್ತುತಿಯು ಇದೆ.

**: ತಾತ್ಪರ್ಯ– ಭ. ಭಾ. ಭಾ. :**

ರುದ್ರನ ರಥವು ಮಹಾಭಾರತದಲ್ಲಿ ಹೀಗೆ ಹೇಳಲ್ಪಟ್ಟಿದೆ. [ 7.173.56 ]

**ಹಯಾಂಶ್ಚ ಚತುರೋ ವೇದಾನ್ ಸರ್ವವೇದ/ದೇವಮಯಂ ರಥಮ್ ।**

[ನಾಲ್ಕು ವೇದಗಳನ್ನು ಕುದುರೆಗಳನ್ನಾಗಿಯೂ, ಎಲ್ಲ ದೇವತೆಗಳಿಂದ/ಎಲ್ಲ ವೇದಗಳಿಂದ ಕೂಡಿದ ರಥವನ್ನು..]ಹಾಗೆಯೇ,

# ನಮ ಇಷುಕೃದ್ಭ್ಯೋ ಧನ್ವಕೃದ್ಭ್ಯಶ್ಚ ವೋ ನಮೋ ನಮೋ ಮೃಗಯುಭ್ಯಃ ಶ್ವನಿಭ್ಯಶ್ಚ ವೋ ನಮೋ

---

ನಮಃ । ಇಷುಕೃದ್ಭ್ಯ ಇತೀಷುಕೃತ್-ಭ್ಯಃ । ಧನ್ವಕೃದ್ಭ್ಯ ಇತಿ ಧನ್ವಕೃತ್-ಭ್ಯಃ । ಚ । ವಃ । ನಮಃ । ನಮಃ । ಮೃಗಯುಭ್ಯ ಇತಿ ಮೃಗಯು-ಭ್ಯಃ । ಶ್ವನಿಭ್ಯ ಇತಿ ಶ್ವನಿ-ಭ್ಯಃ । ಚ । ವಃ । ನಮಃ ।

---

| ಮಂತ್ರ | ವಿನಿಯೋಗ |
|---|---|
| **ನಮ ಇಷುಕೃದ್ಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |
| **ನಮೋ ಮೃಗಯುಭ್ಯಃ...ನಮಃ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

**ಪದಶಃ ಅರ್ಥ- ಸಾ. ಭಾ.**

▲ **ಇಷುಕೃದ್ಭ್ಯಃ**=ಬಾಣಗಳನ್ನು ಮಾಡುವವರ ಸ್ವರೂಪದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಧನ್ವಕೃದ್ಭ್ಯಃ**=ಒಳ್ಳೆಯ ಬಿಲ್ಲುಗಳನ್ನು ನಿರ್ಮಿಸುವವರ ರೂಪದಲ್ಲಿರುವ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಮೃಗಯುಭ್ಯಃ**=ಪ್ರಾಣಿಗಳನ್ನು ಬೇಟೆಯಾಡುವ ಬೇಡರ ರೂಪದಲ್ಲಿರುವ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಶ್ವನಿಭ್ಯಃ**=ನಾಯಿಗಳ ಹಗ್ಗವನ್ನು ಹಿಡಿದು ಬೇಟೆಗಾಗಿ ನಾಯಿಗಳನ್ನು ಒಯ್ಯುವವರ ರೂಪದಲ್ಲಿರುವ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಇಷುಕೃದ್ಭ್ಯಃ**=ಒಳ್ಳೆಯ ಬಾಣಗಳನ್ನು ಮಾಡುವವರ ಸ್ವರೂಪದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಧನ್ವಕೃದ್ಭ್ಯಃ**=ಒಳ್ಳೆಯ ಬಿಲ್ಲುಗಳನ್ನು ನಿರ್ಮಿಸುವವರ ರೂಪದಲ್ಲಿರುವ; ವಃ=ನಿಮಗೆ; **ನಮಃ**=ನಮಸ್ಕಾರ. ▲ **ಮೃಗಯುಭ್ಯಃ**=ಮೃಗಗಳನ್ನು ಕೊಲ್ಲುವುದಕ್ಕಾಗಿ ಅವುಗಳನ್ನು ಬೆನ್ನಟ್ಟುವ ಬೇಡರಾದ/ಮೃಗಗಳನ್ನು ಹಿಡಿಯಲು ಬಯಸುವ ರೂಪದಲ್ಲಿರುವ; **ವಃ**=ರುದ್ರರಾದ ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಶ್ವನಿಭ್ಯಃ**=ನಾಯಿಗಳನ್ನು ಕೊಂಡೊಯ್ಯುತ್ತಿರುವವರ ರೂಪದಲ್ಲಿರುವ; ವಃ=ನಿಮಗೆ; **ನಮಃ**= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ಪಕ್ಷಿಗಳ ಗುಂಪನ್ನು ಘಾತಿಸುವವರ, ಮತ್ತು ಮೀನುಗಳನ್ನು ಹಿಡಿದು ಕೊಲ್ಲುವವರ ರೂಪದಲ್ಲಿರುವ, ಬಾಣಗಳನ್ನು ತಯಾರಿಸುವವರ, ಬಿಲ್ಲುಗಳನ್ನು ನಿರ್ಮಿಸುವವರ ರೂಪದ ನಿಮಗೆ ನಮಸ್ಕಾರ.**

**ಪ್ರಾಣಿಗಳನ್ನು ಬೇಟೆಯಾಡುವ ಬೇಡರ ರೂಪದ ರುದ್ರರಿಗೆ ನಮಸ್ಕಾರ. ನಾಯಿಗಳ ಕುತ್ತಿಗೆಯಲ್ಲಿ ಕಟ್ಟಿರುವ ಹಗ್ಗವನ್ನು ಹಿಡಿದಿರುವವರ ರೂಪದ ರುದ್ರರಿಗೆ ನಮಸ್ಕಾರ.**

**ನಾಯಿಗಳ ರೂಪದಲ್ಲಿರುವ ರುದ್ರರಿಗೂ, ನಾಯಿಗಳ ಪಾಲಕರ ರೂಪದಲ್ಲಿರುವ ರುದ್ರರಿಗೂ ನಮಸ್ಕಾರ.**

## ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ ॥ ೧೦–4 ॥

### [ರಥೇಭ್ಯಃ ಶ್ವಪತಿಭ್ಯಶ್ಚ ದ್ವೇ ಚ ॥]

---

ನಮಃ । ಶ್ವಭ್ಯ ಇತಿ ಶ್ವ–ಭ್ಯಃ । ಶ್ವಪತಿಭ್ಯ ಇತಿ ಶ್ವಪತಿ–ಭ್ಯಃ । ಚ । ವಃ । ನಮಃ ॥ (೧೦)

---

| ಮಂತ್ರ | ವಿನಿಯೋಗ |
|---|---|
| ನಮಃ ಶ್ವಭ್ಯಃ...ನಮಃ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

**ಪದಶಃ ಅರ್ಥ– ಸಾ. ಭಾ.**

▲ **ಶ್ವಭ್ಯಃ**=ನಾಯಿಗಳ ಸ್ವರೂಪದವರಾದ **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಶ್ವಪತಿಭ್ಯಃ**=ನಾಯಿಗಳ ಪಾಲಕರ ರೂಪದಲ್ಲಿರುವ ರುದ್ರರೂಪದವರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಶ್ವಭ್ಯಃ**=ನಾಯಿಗಳ ರೂಪದಲ್ಲಿರುವ ರುದ್ರರಾದ; **ವಃ**=ನಿಮಗೆ; **ನಮಃ**=ನಮಸ್ಕಾರ; **ಚ**=ಮತ್ತು; **ಶ್ವಪತಿಭ್ಯಃ**=ನಾಯಿಗಳನ್ನು ಸಾಕುವವರ ರೂಪದಲ್ಲಿರುವ ರುದ್ರರಾದ; ವಃ=ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಈ ಹಿಂದಿನ ಎರಡನೆಯ ಅನುವಾಕದಲ್ಲಿ ರುದ್ರನ ಲೀಲಾರ್ಥವಾದ ದೇವತಾಮೂರ್ತಿಗಳನ್ನು ಸ್ತುತಿಸಲಾಗಿದೆ. ಮೂರನೆಯ ಅನುವಾಕದಲ್ಲಿ ಚೋರಮೂರ್ತಿಪ್ರಾಧಾನ್ಯವಾಗಿ ಸ್ತುತಿಯು ಇದೆ. ಈ ನಾಲ್ಕನೆಯ ಅನುವಾಕದಲ್ಲಿ ನಾನಾಜಾತಿಮೂರ್ತಿಗಳ ಪ್ರಾಧಾನ್ಯದಿಂದ ಸ್ತುತಿಯು ಇದೆ.

ರುದ್ರನ ಲೀಲಾಮೂರ್ತಿಗಳ ಸ್ತುತಿಯ ಸಂದರ್ಭದಲ್ಲಿ ಪಾಶುಪತಾಸ್ತ್ರಪ್ರದಾನ ಮಾಡುವಾಗ ರುದ್ರನ ಕಿರಾತ ವೇಷವನ್ನು ಗಮನಿಸಬಹುದು.

ಹಾಗೆಯೇ ಮಹಾಭಾರತದ ಸಂಜಯ, ವಿದುರ, ಧರ್ಮವ್ಯಾಧರನ್ನೂ ಜನ್ಮದಿಂದ ಯಾರಾದರೂ ತತ್ತ್ವವಿದರಾಗಿರುವುದನ್ನೂ, ಶಾಕುಂತಲನಾಟಕದಲ್ಲಿ **'ಸಹಜಂ ಕಿಲ ತದ್ವಿನಿಂದಿತಂ ನ ಖಲು ತತ್ಕರ್ಮ ವಿವರ್ಜನೀಯಮ್'** [ಲೋಕದ ದೃಷ್ಟಿಯಿಂದ ನಿಂದ್ಯವೆನಿಸಿದರೂ, ಜನ್ಮಸಹಜವಾದ ಕರ್ಮವನ್ನು ಮಾಡಲೇಬೇಕು] ಎಂಬ ಕಾಳಿದಾಸನ ಮಾತನ್ನು ಗಮನಿಸಬಹುದು.

**: ತಾತ್ಪರ್ಯ– ಭ. ಭಾ. ಭಾ. :**

**ಅರ್ಕಾಬ್ಜನೇಮಿರ್ವೇದಾಶ್ವ ತ್ರಯಸ್ತ್ರಿಂಶನ್ಮರುನ್ಮಯಃ ।**
**ಪುರಾರೇಃ ಕಲ್ಪಿತೋ ದೇವೈಃ ಸ ರಥೋ ಬ್ರಹ್ಮಸಾರಥಿಃ ॥ – ಭವಿಷ್ಯತ್ಪುರಾಣ.**

[ಕಮಲದಂತಿರುವ ಸೂರ್ಯನೇ ಹಳಿಯಾಗಿರುವ, ವೇದಗಳೇ ಕುದುರೆಗಳಾಗಿರುವ, ಮೂವತ್ತಮೂರು ಮರುತರಿಂದ ಕೂಡಿರುವ, ಬ್ರಹ್ಮನೇ ಸಾರಥಿಯಾಗಿರುವ ರಥವು ದೇವತೆಗಳಿಂದ ಈಶ್ವರನಿಗಾಗಿ ನಿರ್ಮಿಸಲ್ಪಟ್ಟಿತು.] ಎಂದು ಹೇಳಲ್ಪಟ್ಟಿರುವ ರಥಕ್ಕೂ, ರಥಾಂಗಗಳಿಗೂ, ರಥದ ಪಾಲಕರಿಗೂ ನಮಸ್ಕಾರ.

: ತಾತ್ಪರ್ಯ- ಧ. ಭಾ. ಭಾ. :

ಬಲೆಯನ್ನು ಬೀಸಿ ಹಕ್ಕಿಗಳನ್ನು ಹಿಡಿಯುವವರ ರೂಪದಲ್ಲಿರುವ, ಮೀನುಗಳನ್ನು ಗುಂಪಾಗಿ ಹಿಡಿದು ಕೊಲ್ಲುವವರಾದ ಬೆಸ್ತರ ರೂಪದಲ್ಲಿರುವ, ಉತ್ತಮವಾದ ಬಿಲ್ಲು-ಬಾಣಗಳನ್ನು ನಿರ್ಮಿಸುವವರ ಸ್ವರೂಪದಲ್ಲಿರುವ ನಿಮಗೆ ನಮಸ್ಕಾರ.

ಮೃಗಗಳನ್ನು ಕೊಲ್ಲಲು, ಹಿಡಿಯಲು ಬಯಸುವ ಬೇಡರ ರೂಪದಲ್ಲಿರುವ, ನಾಯಿಗಳನ್ನು ಬೇಟೆಗಾಗಿ ಕೊಂಡೊಯ್ಯುತ್ತಿರುವವರ ರೂಪದಲ್ಲಿರುವ, ನಾಯಿಗಳ ರೂಪದಲ್ಲಿ ಮತ್ತು ನಾಯಿಗಳನ್ನು ಸಾಕುತ್ತಿರುವವರ ರೂಪದಲ್ಲಿರುವ ರುದ್ರರಿಗೆ ನಮಸ್ಕಾರ.

ಈ ರೀತಿ ಎಲ್ಲ ಜಾತಿಯವರನ್ನೂ ನಿರ್ದೇಶಿಸಿರುವ ತಾತ್ಪರ್ಯವು ಹೀಗಿದೆ; ತಮ್ಮ ತಮ್ಮ ಜನ್ಮಕ್ಕೆ ಒದಗಿಬಂದ ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ನಿರ್ವಹಿಸಿ, ಅವನ ಅನುಗ್ರಹಕ್ಕೆ ಪಾತ್ರರಾದ ಜಾತಿವಿಶೇಷಗಳಿಗೆ ಈ ನಮಸ್ಕಾರವು ಸಲ್ಲುತ್ತದೆ.

ಎಲ್ಲಾ ವೃತ್ತಿಗಳೂ ದೇವರನ್ನು ಸ್ತುತಿಸುವ ಪ್ರಕಾರಗಳು. ಒಟ್ಟಿನಲ್ಲಿ ಪರಮೇಶ್ವರನು ಸರ್ವಾತ್ಮಕನೆಂದು ತಾತ್ಪರ್ಯ.

# ॥ ಪಂಚಮೋಽನುವಾಕಃ ॥

## ನಮೋ ಭವಾಯ ಚ ರುದ್ರಾಯ ಚ

---

ನಮಃ । ಭವಾಯ । ಚ । ರುದ್ರಾಯ । ಚ ।

---

ನಾಲ್ಕನೆಯ ಅನುವಾಕದಲ್ಲಿ ಉಭಯತೋನಮಸ್ಕಾರರೂಪವಾದ ಯಜುಸ್ಸುಗಳು ಮುಗಿದವು. ಈ ಐದನೆಯ ಅನುವಾಕದಿಂದ ಪ್ರಾರಂಭಿಸಿ, ಒಂಭತ್ತನೆಯ ಅನುವಾಕವು ಮುಗಿಯುವವರೆಗೂ ನಮಃಶಬ್ದವು ಮೊದಲಿನಲ್ಲಿರುವ ಅಂದರೆ ನಮಸ್ಕಾರೋಪಕ್ರಮರೂಪವಾದ ಯಜುಸ್ಸುಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| **ನಮೋ ಭವಾಯ ಚ*...ಚ* ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ–ಸಾ. ಭಾ.** ————

▲ **ಭವಾಯ ಚ**=ಸರ್ವಪ್ರಾಣಿಗಳ ಉತ್ಪತ್ತಿಗೆ ಕಾರಣನಾದ ಭವನಿಗೂ; **ನಮಃ**=ನಮಸ್ಕಾರ. **ರುದ್ರಾಯ ಚ**=ಆಳುವಿಕೆಗೆ ಕಾರಣವಾದ ದುಃಖವನ್ನು ಹೋಗಲಾಡಿಸುವ ರುದ್ರನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ–ಭ. ಭಾ. ಭಾ.** ————

▲ **ಭವಾಯ ಚ**=ಸರ್ವಕಾಲಗಳಲ್ಲಿಯೂ, ಸರ್ವದೇಶಗಳಲ್ಲಿಯೂ ಇರುವ/ಯಾವಾಗಲೂ ಎಲ್ಲವನ್ನೂ ಉಂಟು ಮಾಡುವ/ಎಲ್ಲರಿಂದಲೂ ಇರುವವನಾಗಿ ಹೇಳಲ್ಪಡುವ/ಎಲ್ಲಕ್ಕೂ ಅಧಿಷ್ಠಾನರೂಪನಾಗಿ ಇರುವ ರುದ್ರನಿಗೂ, ಅಷ್ಟಮೂರ್ತಿಗಳಲ್ಲಿ ಜಲತತ್ತ್ವದ ಅಧಿಷ್ಠಾತೃಸ್ವರೂಪನಾದ ರುದ್ರನಿಗೆ; **ನಮಃ**= ನಮಸ್ಕಾರ. **ರುದ್ರಾಯ ಚ**=ಅಂತಕಾಲದಲ್ಲಿ ಎಲ್ಲವನ್ನೂ ಸಂಹರಿಸುವ/ಅಷ್ಟಮೂರ್ತಿಗಳಲ್ಲಿ ಸೂರ್ಯಾಧಿಷ್ಠಾತೃರೂಪನಾದ ರುದ್ರನಿಗೆ; ನಮಃ=ನಮಸ್ಕಾರ.

———: **ತಾತ್ಪರ್ಯ– ಸಾ. ಭಾ.** :———

**ಸರ್ವಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ಪರವಸ್ತುವಿನ ರೂಪನಾದ ರುದ್ರನಿಗೆ ನಮಸ್ಕಾರ. ಆಳುವಿಕೆಗೆ ಕಾರಣವಾದ ದುಃಖವನ್ನು ದೂರಗೊಳಿಸುವ ರುದ್ರನಿಗೆ ನಮಸ್ಕಾರವು.**

---

*** * ಈ ಅನುವಾಕದಲ್ಲಿ ಒಂದೊಂದು ಯಜುಸ್ಸಿನಲ್ಲಿಯೂ ಚತುರ್ಥೀವಿಭಕ್ತಿಯಿಂದ ಕೂಡಿರುವ ಪದಗಳಿಗೆ 'ನಮಃ' ಎಂಬುದನ್ನು ಪ್ರತ್ಯೇಕವಾಗಿ ಸೇರಿಸಿ ಅರ್ಥ ಮಾಡುವುದಕ್ಕಾಗಿ ಸಮುಚ್ಚಯ ಎಂಬ ಅರ್ಥವನ್ನು ಕೊಡುವ ಎರಡು 'ಚ' ಕಾರಗಳಿವೆ. ಭವಾಯ ಚ ನಮಃ–ರುದ್ರಾಯ ಚ ನಮಃ**

# ನಮಶ್ಶರ್ವಾಯ ಚ ಪಶುಪತಯೇ ಚ ನಮೋ ನೀಲಗ್ರೀವಾಯ ಚ ಶಿತಿಕಂಠಾಯ ಚ

---

ನಮಃ । ಶರ್ವಾಯ । ಚ । ಪಶುಪತಯ ಇತಿ ಪಶು-ಪತಯೇ । ಚ । ನಮಃ । ನೀಲಗ್ರೀವಾಯೇತಿ ನೀಲ-ಗ್ರೀವಾಯ । ಚ । ಶಿತಿಕಂಠಾಯೇತಿ ಶಿತಿ-ಕಂಠಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮಶ್ಶರ್ವಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ನೀಲಗ್ರೀವಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶರ್ವಾಯ ಚ**=ಪಾಪವನ್ನು ಹೋಗಲಾಡಿಸುವ ರುದ್ರನಿಗೂ; **ನಮಃ**=ನಮಸ್ಕಾರ. **ಪಶುಪತಯೇ ಚ**=ಪಶುಸಮಾನರಾದ ಅಜ್ಞಾನಿಗಳಾದ ಪುರುಷರನ್ನು ಜ್ಞಾನಪ್ರದಾನ ಮಾಡಿ ರಕ್ಷಿಸುವ ಪಶುಪತಿಗೂ; ನಮಃ=ನಮಸ್ಕಾರ. ▲ **ನೀಲಗ್ರೀವಾಯ ಚ**=ಕಂಠದ ಒಂದು ಭಾಗದಲ್ಲಿ ಕಪ್ಪಾಗಿರುವ ನೀಲಕಂಠನಿಗೂ; **ನಮಃ**=ನಮಸ್ಕಾರ. **ಶಿತಿಕಂಠಾಯ ಚ**=ಕುತ್ತಿಗೆಯ ಉಳಿದ ಭಾಗದಲ್ಲಿ ಬಿಳಿಯ ಬಣ್ಣದವನಾಗಿರುವ ಶಿತಿಕಂಠನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶರ್ವಾಯ ಚ**=ಅಂತಕಾಲದಲ್ಲಿ ಎಲ್ಲರನ್ನೂ ಹಿಂಸಿಸುವ/ಅಗ್ನಿಗೆ ಅಧಿಷ್ಠಾತೃವಾದ ಶರ್ವನಿಗೆ; **ನಮಃ**=ನಮಸ್ಕಾರ. **ಪಶುಪತಯೇ ಚ**=ಪಶುಗಳಿಗೆ ಪಾಲಕನಾದ/ಭೂಮಿಯ ಅಧಿಷ್ಠಾತೃವಾದ ಪಶುಪತಿಗೆ; ನಮಃ=ನಮಸ್ಕಾರ. ▲ **ನೀಲಗ್ರೀವಾಯ ಚ**=ಕಾಲಕೂಟವಿಷದ ಕಪ್ಪುಬಣ್ಣದಿಂದ ಅಲಂಕರಿಸಲ್ಪಟ್ಟ ಕಂಠದವನಾದವನಿಗೂ; **ನಮಃ**=ನಮಸ್ಕಾರ. **ಶಿತಿಕಂಠಾಯ ಚ**=ಕುತ್ತಿಗೆಯ/ದೇಹದ ಉಳಿದ ಭಾಗದಲ್ಲಿ ಬಿಳುಪಾಗಿರುವವನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಹಿಂದಿನ ಮೂರು ಅನುವಾಕಗಳಲ್ಲಿನ ಮಂತ್ರಗಳಿಂದ ವಿಶೇಷವಾಗಿ ದೇವನು ವಿಶ್ವದ ಅಧಿಪತಿಯೆಂದು ಪ್ರತಿಪಾದಿಸಲ್ಪಟ್ಟಿದೆ. ಈ ಅನುವಾಕದಿಂದ ಮುಂದೆ ಆ ಪರತತ್ತ್ವದ ಅಧಿಷ್ಠಾನಭೇದದಿಂದ ಸ್ತುತಿಯು ಇದೆ.

ಪರಮಾತ್ಮನು ಅಷ್ಟಮೂರ್ತಿ ಎನಿಸಿದ್ದಾನೆ. ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಮತ್ತು ಯಜ್ಞಶೀಲನಾದವನ ರೂಪದಲ್ಲಿ ಪರಮಾತ್ಮನಿರುವನು.* ಅವುಗಳಲ್ಲಿ ನೀರು, ಸೂರ್ಯ, ಅಗ್ನಿ ಹಾಗೂ ಭೂಮಿಯ ಅಧಿಷ್ಠಾತೃವಾದ ದೇವನನ್ನಾಗಿ ಶ್ರುತಿಯು ರುದ್ರನನ್ನು ಸ್ತುತಿಸಿದೆ.

---

* ಭೂರಂಭಾಂಸ್ಯನಲೋಽನಿಲೋಽಂಬರಮಹರ್ನಾಥೋ ಹಿಮಾಂಶುಃ ಪುಮಾನ್
ಇತ್ಯಾಭಾತಿ ಚರಾಚರಾತ್ಮಕಮಿದಂ ಯಸ್ಯೈವ ಮೂರ್ತ್ಯಷ್ಟಕಮ್ । ಶ್ರೀ ದಕ್ಷಿಣಾಮೂರ್ತಿ ಸ್ತೋತ್ರ. (ಶ್ರೀ ಶಂಕರಾಚಾರ್ಯರು.)

## ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ ನಮಸ್ಸಹಸ್ರಾಕ್ಷಾಯ ಚ ಶತಧನ್ವನೇ ಚ

ನಮಃ । ಕಪರ್ದಿನೇ । ಚ । ವ್ಯುಪ್ತಕೇಶಾಯೇತಿ ವ್ಯುಪ್ತ–ಕೇಶಾಯ । ಚ । ನಮಃ । ಸಹಸ್ರಾಕ್ಷಾಯೇತಿ ಸಹಸ್ರ–ಅಕ್ಷಾಯ । ಚ । ಶತಧನ್ವನ ಇತಿ ಶತ–ಧನ್ವನೇ । ಚ ।

| ಮಂತ್ರ | ವಿನಿಯೋಗ |
|---|---|
| **ನಮಃ ಕಪರ್ದಿನೇ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮಸ್ಸಹಸ್ರಾಕ್ಷಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ– ಸಾ. ಭಾ.

▲ **ಕಪರ್ದಿನೇ ಚ**=ಪಾಶುಪತಾದಿವೇಷದಿಂದ ಜಟಾಜೂಟಧರನಾದ ಶಿವನಿಗೂ; **ನಮಃ**=ನಮಸ್ಕಾರ. **ವ್ಯುಪ್ತಕೇಶಾಯ ಚ**=ಸನ್ಯಾಸಿಯ ವೇಷದಿಂದ ಬೋಳಿಸಲ್ಪಟ್ಟ ಕೂದಲುಗಳುಳ್ಳವನಿಗೆ; ನಮಃ=ನಮಸ್ಕಾರ. ▲ **ಸಹಸ್ರಾಕ್ಷಾಯ ಚ**=ಸಹಸ್ರಮುಖವಾದ ಅವತಾರದಿಂದ/ಇಂದ್ರರೂಪದಿಂದ ಸಾವಿರಾರು ಕಣ್ಣುಳ್ಳವನಿಗೂ; **ನಮಃ**=ನಮಸ್ಕಾರ. **ಶತಧನ್ವನೇ ಚ**=ಸಹಸ್ರಭುಜಾವತಾರಿಯಾದುದರಿಂದ ನೂರಾರು ಬಿಲ್ಲುಗಳನ್ನು ಧರಿಸಿರುವವನಿಗೂ; ನಮಃ=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

▲ **ಕಪರ್ದಿನೇ ಚ**=ಜಟಾಜೂಟಧಾರಿಯಾದ ಕಪರ್ದಿಗೂ; **ನಮಃ**=ನಮಸ್ಕಾರ. **ವ್ಯುಪ್ತಕೇಶಾಯ ಚ**=ಮುಂಡಿತಕೇಶನಾಗಿ ಯಜಮಾನಮೂರ್ತಿಯಾದ ಶಿವನಿಗೆ/ಅರ್ಧಮುಂಡಿತಕೇಶನಾಗಿರುವ ಶಿವನಿಗೆ; ನಮಃ=ನಮಸ್ಕಾರ. ▲**ಸಹಸ್ರಾಕ್ಷಾಯ ಚ**=ಸಾವಿರಾರು ಕಣ್ಣುಳ್ಳವನಾದವನಿಗೂ;/ಇಂದ್ರರೂಪಿಯಾದವನಿಗೂ; **ನಮಃ**=ನಮಸ್ಕಾರ. **ಶತಧನ್ವನೇ ಚ**=ಹಲವು ಬಿಲ್ಲುಗಳನ್ನು ಧರಿಸಿರುವವನಿಗೆ ಅಥವಾ ಹಲವು ಆಯುಧಗಳುಳ್ಳವನಿಗೆ; ನಮಃ=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ತನ್ನ ಅನುಗ್ರಹದಿಂದ ಪಾಪವನ್ನು ದೂರಗೊಳಿಸುವ ಶರ್ವನಿಗೂ, ಪಶುಗಳಂತೆ ಅಜ್ಞಾನಿಗಳಾದವರಿಗೆ ಜ್ಞಾನವನ್ನು ನೀಡಿ ರಕ್ಷಿಸುವ ಪಶುಪತಿಗೂ ನಮಸ್ಕಾರ.

ಕಾಲಕೂಟವಿಷವನ್ನು ಧರಿಸಿದುದರಿಂದ ಕಂಠದ ಒಂದು ಭಾಗವು ಕಪ್ಪಾಗಿರುವ ನೀಲಗ್ರೀವನಿಗೂ, ಉಳಿದ ಕಂಠಪ್ರದೇಶವು ಬಿಳುಪಾಗಿರುವ ಶಿತಿಕಂಠನಿಗೂ ನಮಸ್ಕಾರ.

: ತಾತ್ಪರ್ಯ– ಭ. ಭಾ. ಭಾ. :

ರುದ್ರನು ಅಂತಕಾಲದಲ್ಲಿ ನಾಶಪಡಿಸುವವನು. ಜ್ಞಾನದಾತನು. ಮೋಕ್ಷದಾತನು. ಆದಿತ್ಯಸ್ವರೂಪನು. ಅವನಿಗೆ ನಮಸ್ಕಾರ.

ರುದ್ರನ ವಿಶ್ವರೂಪತೆಯನ್ನು ಹೇಳುವಾಗಲೂ ಕೆಲವು ಶಬ್ದಗಳು ಬಂದಿವೆ. ರುದ್ರನ ಮಹಿಮೆಯನ್ನು ವರ್ಣಿಸಲು, ಅವನು ಅಷ್ಟಮೂರ್ತಿಯೆಂದು ಪ್ರತಿಪಾದಿಸಲು ಪುನರುಕ್ತವಾಗಿವೆ.

# ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚ ನಮೋ ಮೀಢುಷ್ಟಮಾಯ ಚೇಷುಮತೇ ಚ

---

ನಮಃ । ಗಿರಿಶಾಯ । ಚ । ಶಿಪಿವಿಷ್ಟಾಯೇತಿ ಶಿಪಿ-ವಿಷ್ಟಾಯ । ಚ । ನಮಃ । ಮೀಢುಷ್ಟಮಾಯೇತಿ ಮೀಢುಃ-ತಮಾಯ । ಚ । ಇಷುಮತ ಇತೀಷು-ಮತೇ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮೋ ಗಿರಿಶಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ಮೀಢುಷ್ಟಮಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಗಿರಿಶಾಯ ಚ**=ಕೈಲಾಸದಲ್ಲಿ ಮಲಗಿರುವ ಗಿರಿಶನಿಗೂ; **ನಮಃ**=ನಮಸ್ಕಾರ. **ಶಿಪಿವಿಷ್ಟಾಯ ಚ**= ವಿಷ್ಣುರೂಪಧಾರಿಯಾದ ಶಿಪಿವಿಷ್ಟನಿಗೆ; ನಮಃ=ನಮಸ್ಕಾರ. ▲ **ಮೀಢುಷ್ಟಮಾಯ ಚ**=ಮೇಘರೂಪ ದಿಂದ ಹೆಚ್ಚಾಗಿ ಮಳೆಯನ್ನು ಸುರಿಸುವವನಾದ ಶಿವನಿಗೂ; **ನಮಃ**=ನಮಸ್ಕಾರ. **ಇಷುಮತೇ ಚ**= ಬಾಣಧಾರಿಯಾದ ಶಿವನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಗಿರಿಶಾಯ ಚ**=ಕೈಲಾಸನಿವಾಸಿಯಾದ ಗಿರಿಶನಿಗೂ; **ನಮಃ**=ನಮಸ್ಕಾರ. **ಶಿಪಿವಿಷ್ಟಾಯ ಚ**=ಆದಿತ್ಯಾತ್ಮಕನಾದ ರುದ್ರನಿಗೆ;/ಸರ್ವಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ರುದ್ರನಿಗೆ; ನಮಃ =ನಮಸ್ಕಾರ. ▲ **ಮೀಢುಷ್ಟಮಾಯ ಚ**=ಹೆಚ್ಚಾಗಿ ಮಳೆಯನ್ನು ಸುರಿಸುವ ಮೇಘರೂಪನಾದ ಶಿವನಿಗೂ; **ನಮಃ**=ನಮಸ್ಕಾರ. **ಇಷುಮತೇ ಚ**=ಹೆಚ್ಚಾದ ಬಾಣಗಳನ್ನು ಕೈಯಲ್ಲಿ ಧರಿಸಿರುವವನಾದ ಶಿವನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಪಾಶುಪತವೇಷವನ್ನು ಧರಿಸಿರುವ ಶಿವನು ಕಪರ್ದಿಯಾಗಿರುವನು. ಯತಿವೇಷವನ್ನು ಧರಿಸಿದವನಾಗಿ ವ್ಯುಪ್ತಕೇಶನಾಗಿರುವನು. ಅಂತಹ ರುದ್ರನಿಗೆ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಅಂತಕಾಲದಲ್ಲಿ ಎಲ್ಲರನ್ನೂ ಹಿಂಸಿಸುವ, ಅಗ್ನಿಗೆ ಅಧಿಷ್ಠಾತೃವಾದ ಶರ್ವನಿಗೆ ನಮಸ್ಕಾರ. ಪಶುಗಳಿಗೆ ಪಾಲಕನಾದ, ಭೂಮಿಗೆ ಅಧಿಷ್ಠಾತೃವಾದ ಪಶುಪತಿಗೆ ನಮಸ್ಕಾರ.

ಕಾಲಕೂಟವಿಷದ ಕಪ್ಪುಬಣ್ಣದಿಂದ ಅಲಂಕರಿಸಲ್ಪಟ್ಟ ಕಂಠವುಳ್ಳ ನೀಲಗ್ರೀವನಿಗೆ ನಮಸ್ಕಾರ.

ಭಗವಂತನಾದ ಶಿವನ ಕಂಠದ ಸಾವಿರದ ಒಂದನೆಯ ಭಾಗವು ಕಾಲಕೂಟವಿಷದ ಜ್ವಾಲೆಯಿಂದ ಕಪ್ಪುಬಣ್ಣಕ್ಕೆ ತಿರುಗಿತು.

# ನಮೋ ಹ್ರಸ್ವಾಯ ಚ ವಾಮನಾಯ ಚ ನಮೋ ಬೃಹತೇ ಚ ವರ್ಷೀಯಸೇ ಚ

ನಮಃ। ಹ್ರಸ್ವಾಯ। ಚ। ವಾಮನಾಯ। ಚ। ನಮಃ। ಬೃಹತೇ। ಚ। ವರ್ಷೀಯಸೇ। ಚ।

| ಮಂತ್ರ | ವಿನಿಯೋಗ |
|---|---|
| **ನಮೋ ಹ್ರಸ್ವಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ಬೃಹತೇ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಹ್ರಸ್ವಾಯ ಚ**=ಶರೀರದಲ್ಲಿ ಅಲ್ಪಪ್ರಮಾಣವುಳ್ಳವನಾದ ಹ್ರಸ್ವರೂಪಧಾರಿಯಾದ ಶಿವನಿಗೆ; **ನಮಃ**=ನಮಸ್ಕಾರ. **ವಾಮನಾಯ ಚ**=ಬೆರಳು ಮುಂತಾದ ಅವಯವಗಳಲ್ಲಿ ಸಂಕೋಚವುಳ್ಳ ವಾಮನ ರೂಪಿಯಾದ ಶಿವನಿಗೆ; ನಮಃ=ನಮಸ್ಕಾರ. ▲ **ಬೃಹತೇ ಚ**=ಆಕಾರದಿಂದ ಎಲ್ಲಕ್ಕಿಂತ ದೊಡ್ಡವನಾದ ರುದ್ರನಿಗೂ; **ನಮಃ**=ನಮಸ್ಕಾರ. **ವರ್ಷೀಯಸೇ ಚ**=ಗುಣಸಂಪತ್ತಿಯಿಂದ ದೊಡ್ಡವನಾದ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಹ್ರಸ್ವಾಯ ಚ**=ಅಲ್ಪಪ್ರಮಾಣದ ಶರೀರಧಾರಿಯಾಗಿ ಹ್ರಸ್ವನಾಗಿರುವ ರೂಪದ ರುದ್ರನಿಗೆ; **ನಮಃ**= ನಮಸ್ಕಾರ. **ವಾಮನಾಯ ಚ**=ಅವಯವಗಳು ಗಿಡ್ಡವಾಗಿರುವ ಸ್ವರೂಪದವನಾದ ರುದ್ರನಿಗೆ/ಕುಳ್ಳ–ಗುಜ್ಜಸ್ವರೂಪದವನಿಗೆ; ನಮಃ=ನಮಸ್ಕಾರ. ▲ **ಬೃಹತೇ ಚ**=ದೊಡ್ಡದಾದ ಆಕಾರವನ್ನು ಹೊಂದಿರುವ ಶಿವನಿಗೂ; **ನಮಃ**=ನಮಸ್ಕಾರ. **ವರ್ಷೀಯಸೇ ಚ**=ಆಕಾರದಿಂದಲೂ, ಜ್ಞಾನದಿಂದಲೂ ಅತ್ಯಂತ ಹಿರಿಯವನಾದ ಶಿವನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಇಂದ್ರರೂಪದಿಂದ ಇರುವ ರುದ್ರನು ಸಾವಿರ ನೇತ್ರವುಳ್ಳವನು. ಅಂತಹ ರುದ್ರನಿಗೆ ನಮಸ್ಕಾರ. ಸಹಸ್ರಭುಜಾವತಾರ ವನ್ನು ಎತ್ತಿದ ರುದ್ರನು ನೂರಾರು ಬಿಲ್ಲುಗಳನ್ನು ಧರಿಸಿದವನು. ಅಂತಹ ರುದ್ರನಿಗೂ ನಮಸ್ಕಾರ.

ಕೈಲಾಸದಲ್ಲಿ ಇರುವವನಾದ ಅಥವಾ ಕೈಲಾಸದಲ್ಲಿ ಮಲಗಿರುವವನಾದ ಗಿರಿಶನಿಗೆ ನಮಸ್ಕಾರ. **'ವಿಷ್ಣುಃ ಶಿಪಿವಿಷ್ಟಃ'** ಎಂಬ ಶ್ರುತಿಯಂತೆ ವಿಷ್ಣುಮೂರ್ತಿಧಾರಿಯಾದ ರುದ್ರನು ಶಿಪಿವಿಷ್ಟನು. ಅವನಿಗೆ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಶಿತಿಕಂಠ ಎಂಬ ಪದಕ್ಕೆ ಬಿಳಿಯ ಕಂಠವುಳ್ಳವನು ಎಂದರ್ಥ. **'ಶಿತೀ ಧವಲಮೇಚಕೌ'**. ಎಂಬ ಕೋಶವಾಕ್ಯವಿದೆ. ಅಥವಾ ನೀಲಗ್ರೀವನೆಂಬ ಪದವೂ ಶಿತಿಕಂಠನೆಂಬ ಪದವೂ ಸಮಾನಾರ್ಥಕಗಳು. ಆದರಾರ್ಥಕ್ಕಾಗಿ ಪುನರುಕ್ತ ವಾಗಿವೆ. ಶ್ರುತಿಯಲ್ಲಿ ಇನ್ನೊಂದೆಡೆ **'ಅಂಬಿಕಾಪತಯ ಉಮಾಪತಯೇ'** ಎಂದು ಇದೇ ರೀತಿ ಪಠಿತವಾಗಿದೆ.

ಜಟಾಜೂಟಧರನಾದ ಕಪರ್ದಿಗೂ, ಯಜಮಾನಮೂರ್ತಿಯಾಗಿ ಮುಂಡಿತಕೇಶನಾದ ಅಥವಾ ಅರ್ಧಮುಂಡಿತ ಕೇಶನಾದ ರುದ್ರಮೂರ್ತಿಗೆ ನಮಸ್ಕಾರ.

# ನಮೋ ವೃದ್ಧಾಯ ಚ ಸಂವೃಧ್ವನೇ ಚ [ಚ (೧೧)] ನಮೋ ಅಗ್ರಿಯಾಯ ಚ ಪ್ರಥಮಾಯ ಚ

ನಮಃ । ವೃದ್ಧಾಯ । ಚ । ಸಂವೃಧ್ವನ ಇತಿ ಸಮ್-ವೃಧ್ವನೇ । ಚ । (೧೧) । ನಮಃ । ಅಗ್ರಿಯಾಯ । ಚ । ಪ್ರಥಮಾಯ । ಚ ।

| ಮಂತ್ರ | ವಿನಿಯೋಗ |
|---|---|
| ನಮೋ ವೃದ್ಧಾಯ ಚ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| ನಮೋ ಅಗ್ರಿಯಾಯ ಚ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ವೃದ್ಧಾಯ ಚ**=ಜಗದುತ್ಪತ್ತಿಗೆ ಮೊದಲೇ ಇರುವವನಾದುದರಿಂದ ವಯಸ್ಸಿನಿಂದ ಅಧಿಕನಾಗಿರುವ ಶಿವನಿಗೂ; **ನಮಃ**=ನಮಸ್ಕಾರ. **ಸಂವೃಧ್ವನೇ ಚ**=ಸ್ತೋತ್ರಗಳಿಂದ ವೃದ್ಧಿಗೊಳಿಸಲ್ಪಟ್ಟಿರುವ/ಪ್ರಕಾಶಿತ ವಾಗಿರುವ ಹಿರಿಮೆಯುಳ್ಳ ರುದ್ರನಿಗೂ; ನಮಃ=ನಮಸ್ಕಾರ. ▲ **ಅಗ್ರಿಯಾಯ ಚ**=ಜಗತ್ತಿನ ಉತ್ಪತ್ತಿಗೆ ಮೊದಲೇ ಇರುವ ಆದಿಪುರುಷನಿಗೆ; **ನಮಃ**=ನಮಸ್ಕಾರ. **ಪ್ರಥಮಾಯ ಚ**=ಸಭೆಯಲ್ಲಿ ಪ್ರಥಮನೂ, ಪ್ರಧಾನನೂ ಆಗಿರುವ ಪರಮೇಶ್ವರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ವೃದ್ಧಾಯ ಚ**=ಹಿರಿಯ ವಯಸ್ಸಿನವನ ರೂಪದಲ್ಲಿರುವವನಿಗೂ; **ನಮಃ**=ನಮಸ್ಕಾರ. **ಸಂವೃಧ್ವನೇ ಚ**=ಪ್ರಶಸ್ತವಾಗಿರುವಂತೆ ದೊಡ್ಡತನದಿಂದ ಕೂಡಿರುವ/ಶ್ರುತಿಯ ಸ್ತುತಿಗಳಿಂದ ಹೊಗಳಲ್ಪಡುವ/ ಭಕ್ತರನ್ನು ಮೇಲಕ್ಕೆ ತರುವವನಾದ ಶಿವನಿಗೆ; ನಮಃ=ನಮಸ್ಕಾರ.▲ **ಅಗ್ರಿಯಾಯ ಚ**=ಮೊದಲೇ ಇರುವ ಆದಿಪುರುಷನಿಗೂ; **ನಮಃ**=ನಮಸ್ಕಾರ. **ಪ್ರಥಮಾಯ ಚ**=ಪ್ರಧಾನನಾದವನಿಗೂ; ನಮಃ= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಮೇಘದ ರೂಪವನ್ನು ಧರಿಸಿದವನಾಗಿ ಹೆಚ್ಚಾದ ಮಳೆಯನ್ನು ಸುರಿಸುವವನಾದ ಶಿವನಿಗೂ, ಬಾಣಗಳನ್ನು ಧರಿಸಿರುವ ಶಿವನಿಗೂ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಸಾವಿರಾರು ಕಣ್ಣುಗಳನ್ನು ಹೊಂದಿರುವವನಾದ, ಇಂದ್ರರೂಪನಾದ ರುದ್ರನಿಗೆ ನಮಸ್ಕಾರ. ಹಲವು ಬಿಲ್ಲುಗಳು ಅಥವಾ ಹಲವು ಆಯುಧಗಳನ್ನು ಧರಿಸಿದವನಾದ ರುದ್ರನಿಗೆ ನಮಸ್ಕಾರ.

ಗಿರಿಶನೆಂದರೆ ಕೈಲಾಸನಿವಾಸಿ. ಪ್ರಶಸ್ತಪರ್ವತಗಳ ಒಡೆಯನು. ಕೈಲಾಸದ ಒಡೆಯನು. ವಾಕ್ಕುಗಳಿಗೆ ಒಡೆಯನು.

# ನಮ ಆಶವೇ ಚಾऽಜಿರಾಯ ಚ

ನಮಃ। ಆಶವೇ। ಚ। ಅಜಿರಾಯ। ಚ।

| ಮಂತ್ರ | ವಿನಿಯೋಗ |
|---|---|
| **ನಮ ಆಶವೇ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

🔔 **ಆಶವೇ ಚ**=ಶೀಘ್ರವಾಗಿ ಎಲ್ಲೆಡೆ ವ್ಯಾಪಿಸಬಲ್ಲ ಶಿವನಿಗೂ; **ನಮಃ**=ನಮಸ್ಕಾರ. **ಅಜಿರಾಯ ಚ**=ಗಮನಕುಶಲನಾಗಿ ಅಜಿರನೆನಿಸಿದ ಶಿವನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

🔔**ಆಶವೇ ಚ**=ಬೇಗನೆ ಎಲ್ಲೆಡೆ ವ್ಯಾಪಿಸುವ ರೂಪದವನಿಗೂ; **ನಮಃ**=ನಮಸ್ಕಾರ. **ಅಜಿರಾಯ ಚ**=ನಡೆಯಲ್ಲಿ ಕುಶಲನಾದ ಶಿವನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಅಲ್ಪಪ್ರಮಾಣದ ಶರೀರವುಳ್ಳವನಾದ ರುದ್ರನಿಗೂ, ಅಂಗಗಳು ಸಂಕುಚಿತವಾದಂತಿರುವ ಸ್ವರೂಪದವನಾದ ರುದ್ರನಿಗೂ ನಮಸ್ಕಾರ.

ದೊಡ್ಡದಾದ ಆಕಾರವನ್ನು ಹೊಂದಿರುವ, ಗುಣಸಮೃದ್ಧಿಯನ್ನು ಹೊಂದಿರುವ ಸ್ವರೂಪನಾದ ರುದ್ರನಿಗೂ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ವೇದಗಳ ಮೂಲವಾದ ಪ್ರಣವಕ್ಕೆ ವಾಚ್ಯನು. ಇಂತಹವನಿಗೆ ನಮಸ್ಕಾರ. ಆದಿತ್ಯರೂಪನಾದ ಶಿಪಿವಿಷ್ಟನಿಗೆ ನಮಸ್ಕಾರ.

ಸ್ಕಾಂದಪುರಾಣದಲ್ಲಿ ಶಿಪಿವಿಷ್ಟನೆಂಬ ಹೆಸರು ಆದಿತ್ಯನಿಗೆ ಹೇಗೆ ಬಂದಿತೆಂದು ತಿಳಿಸಲ್ಪಟ್ಟಿದೆ.

**ಶೈತ್ಯಾಚ್ಛಯನಯೋಗಾದ್ವಾ ಶೀತಿ ವಾರಿ ಪ್ರಚಕ್ಷತೇ।**
**ತತ್ಪಾನಾದ್ರಕ್ಷಣಾದ್ವಾಪಿ ಶಿಪಯೋ ರಶ್ಮಯೋ ಮತಾಃ॥**
**ತೇಷು ಪ್ರವಿಷ್ಟಃ ಸವಿತಾ ಶಿಪಿವಿಷ್ಟಸ್ತದೋಚ್ಯತೇ।**

ತಂಪಾಗಿರುವುದರಿಂದಲೂ, ಹರಡುವ ಗುಣವುಳ್ಳದ್ದರಿಂದಲೂ ನೀರನ್ನು **'ಶೀತಿ'** ಎನ್ನುತ್ತಾರೆ. ಆ ನೀರನ್ನು ಹೀರುವುದರಿಂದಲೂ, ಸಮುದ್ರದಲ್ಲಿ ತಮ್ಮ ಉಷ್ಣತೆಯಿಂದ ನೀರನ್ನು ಸೃಷ್ಟಿಸಿ, ಕಾಪಾಡುವುದರಿಂದಲೂ **'ಶಿಪಿ'** ಎಂದರೆ ರಶ್ಮಿ ಎಂದು ಅರ್ಥ **[ಶೀತಿಮ್ ಪಿಬಂತಿ, ಶೀತಿಮ್ ಪಾಂತಿ ಇತಿ ವಾ] [ಪೃಷೋದರಾದಿ]**

**ಶಿಪಿಷು ವಿಷ್ಟಃ=ಶಿಪಿವಿಷ್ಟಃ=ಆದಿತ್ಯ.** ನೀರನ್ನು ಸೃಷ್ಟಿಸುವ ರಶ್ಮಿಮಯನಾದವನು=ಸೂರ್ಯನು.

**'ಯಜ್ಞೋ ವೈ ವಿಷ್ಣುಃ। ಪಶವಃ ಶಿಪಿಃ'** ಎಂಬ ಶ್ರುತಿವಾಕ್ಯದಂತೆ ಶಿಪಿ ಎಂದರೆ ಪಶುಗಳು. ಎಲ್ಲ ಪಶುಗಳಲ್ಲಿಯೂ ಅಂತರ್ಯಾಮಿಯಾದ ರುದ್ರನಿಗೆ ನಮಸ್ಕಾರ. ಅಲ್ಪಪ್ರಮಾಣದ ಶರೀರವನ್ನು ಧರಿಸಿರುವ ಹ್ರಸ್ವನಾಗಿರುವ ರುದ್ರನಿಗೂ, ಕುಬ್ಜವಾದ ಅವಯವಗಳನ್ನು ಧರಿಸಿರುವ ಕುಳ್ಳರ ಸ್ವರೂಪದಲ್ಲಿರುವ ರುದ್ರನಿಗೂ ನಮಸ್ಕಾರ.

# ನಮಶ್ಶೀಘ್ರಿಯಾಯ ಚ ಶೀಭ್ಯಾಯ ಚ ನಮ ಊರ್ಮ್ಯಾಯ ಚಾವಸ್ವನ್ಯಾಯ ಚ

ನಮಃ । ಶೀಘ್ರಿಯಾಯ । ಚ । ಶೀಭ್ಯಾಯ । ಚ । ನಮಃ । ಊರ್ಮ್ಯಾಯ । ಚ । ಅವಸ್ವನ್ಯಾಯೇತ್ಯವ-ಸ್ವನ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮಶ್ಶೀಘ್ರಿಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮ ಊರ್ಮ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

**ಶೀಘ್ರಿಯಾಯ ಚ**=ಶೀಘ್ರವಾಗಿ ಹೋಗುವ ಶಿವನಿಗೂ; **ನಮಃ**=ನಮಸ್ಕಾರ. **ಶೀಭ್ಯಾಯ ಚ**=ಪ್ರವಾಹ ರೂಪದಲ್ಲಿ ಶೀಘ್ರವಾಗಿ ಹರಿಯುವ ನೀರಿನಲ್ಲಿರುವ ಶಿವನಿಗೂ; ನಮಃ=ನಮಸ್ಕಾರ. **ಊರ್ಮ್ಯಾಯ ಚ** =ಅಲೆಗಳಿಂದ ಕೂಡಿರುವ ಸ್ವರೂಪದವನಿಗೆ; **ನಮಃ**=ನಮಸ್ಕಾರ. **ಅವಸ್ವನ್ಯಾಯ ಚ**=ಶಬ್ದವಿಲ್ಲದ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

**ಶೀಘ್ರಿಯಾಯ ಚ**=ಶೀಘ್ರವಾಗಿ ಹರಿಯುತ್ತಿರುವ ನೀರಿನಲ್ಲಿರುವ ಶಿವನಿಗೂ; **ನಮಃ**=ನಮಸ್ಕಾರ. **ಶೀಭ್ಯಾಯ ಚ**=ಶೀಘ್ರತೆಯಲ್ಲಿ ಕೊಂಚ ಭೇದದಿಂದ ವೇಗವಾಗಿ ಹರಿಯುತ್ತಿರುವ ನೀರಿನಲ್ಲಿರುವ ಸ್ವರೂಪದವನಾದವನಿಗೂ; ನಮಃ=ನಮಸ್ಕಾರ. **ಊರ್ಮ್ಯಾಯ ಚ**=ಅಲೆಗಳಲ್ಲಿರುವ ಶಿವನಿಗೂ; **ನಮಃ**=ನಮಸ್ಕಾರ. **ಅವಸ್ವನ್ಯಾಯ ಚ**=ಶಬ್ದವಿಲ್ಲದ ನೀರಿ [ಅವಸ್ವನ]ನಲ್ಲಿರುವ ರುದ್ರನಿಗೂ; ನಮಃ= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಶ್ರುತಿಯಲ್ಲಿಯೇ **'ಮಹತೋ ಮಹೀಯಾನ್'** ಎಂದು ಪರವಸ್ತುವನ್ನು ಎಲ್ಲಕ್ಕಿಂತ ದೊಡ್ಡದೆಂದು ಹೇಳಿದೆ.

ಜಗತ್ತಿನ ಉತ್ಪತ್ತಿಗೆ ಮೊದಲೇ ಇರುವವನಾದುದರಿಂದ ಶಿವನು ವಯಸ್ಸಿನಲ್ಲಿ ಅಧಿಕನು. ಅವನ ಮಹಿಮೆಯು ಶ್ರುತಿಗಳಿಂದ ಹೊಗಳಲ್ಪಟ್ಟಿದೆ.

**: ತಾತ್ಪರ್ಯ- ಭ. ಭಾ. ಭಾ. :**

ದೊಡ್ಡದಾದ ಆಕಾರವನ್ನು ಹೊಂದಿ, ಆಕಾರ-ಜ್ಞಾನಗಳಿಂದ ಹಿರಿಯನಾದ ರುದ್ರನಿಗೆ ನಮಸ್ಕಾರ.

ಜಗತ್ತಿನ ಉತ್ಪತ್ತಿಗೂ ಮೊದಲಿನವನು ಶಿವನು. ಅವನು ಶ್ರುತಿಗಳಿಂದ ಸ್ತುತಿಸಲ್ಪಟ್ಟಿರುವವನು. **'ವರ್ಧಂತು ತ್ವಾ ಸುಷ್ಟುತಯಃ'** [ತೈ. ಸಂ. 2.2.12] ಎಂಬುದಾಗಿ ಶ್ರುತಿಯು ಪ್ರಶಸ್ತವಾದ ಸ್ತುತಿಗಳು ನಿನ್ನನ್ನು ಹಾಡಿ ಹೊಗಳಲಿ ಎಂದು ಹೇಳುತ್ತಿದೆ. ಶಿವನು ಮೊದಲೇ ಇದ್ದವನು. ಪ್ರಧಾನನಾದವನು. ಅವನಿಗೆ ನಮಸ್ಕಾರ.

ಶೀಘ್ರವಾಗಿ ಎಲ್ಲಕಡೆಯಲ್ಲಿಯೂ ವ್ಯಾಪಿಸಬಲ್ಲ ಶಿವನಿಗೂ, ನಡಿಗೆಯಲ್ಲಿ ಕುಶಲನಾದ ರುದ್ರನಿಗೂ ನಮಸ್ಕಾರ.

ವೇಗವಾಗಿ ಹರಿಯುತ್ತಿರುವ ನೀರಿನಲ್ಲಿರುವ, ಕೊಂಚ ಬೇರೆ ರೀತಿಯ ಶೀಘ್ರತೆಯುಳ್ಳ ನೀರಿನಲ್ಲಿರುವ ರುದ್ರನಿಗೆ ನಮಸ್ಕಾರ.

ಶೀಘ್ರ-ಶೀಭ ಶಬ್ದಗಳು ಸಮಾನವಾದ ಅರ್ಥವುಳ್ಳವುಗಳು. ನೀರಿನ ಹರಿವಿನ ಭೇದವನ್ನು ಗಮನಿಸಿ ಶ್ರುತಿಯು ಈ ರೀತಿ ಹೇಳಿದೆ. ಕೆಲವೆಡೆ ಆದರಾರ್ಥವಾಗಿ ಪುನರುಕ್ತಿಯೂ ಇರುವುದರಿಂದ **'ಅಂಬಿಕಾಪತಯೇ-ಉಮಾಪತಯೇ'**

# ನಮಃ ಸ್ರೋತಸ್ಯಾಯ ಚ ದ್ವೀಪ್ಯಾಯ ಚ ॥ ೧೨–5 ॥

[ಸಂವೃಧ್ವನೇ ಚ ಪಂಚವಿಗ್ಂಶತಿಶ್ಚ ॥]

ನಮಃ । ಸ್ರೋತಸ್ಯಾಯ । ಚ । ದ್ವೀಪ್ಯಾಯ । ಚ ॥ (೧೨) ॥

| ಮಂತ್ರ | ವಿನಿಯೋಗ |
|---|---|
| **ನಮಸ್ಸ್ರೋತಸ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ– ಸಾ. ಭಾ.

**ಸ್ರೋತಸ್ಯಾಯ ಚ**=ಜಲಪ್ರವಾಹದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ದ್ವೀಪ್ಯಾಯ ಚ**= ನೀರಿನಿಂದ ಆವೃತವಾದ ದ್ವೀಪಗಳಲ್ಲಿ ಇರುವ ರುದ್ರನಿಗೂ; ನಮಃ=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

**ಸ್ರೋತಸ್ಯಾಯ ಚ**=ನೀರಿನ ಪ್ರವಾಹದ ರೂಪದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ದ್ವೀಪ್ಯಾಯ ಚ**=ದ್ವೀಪಗಳ ಒಡೆಯನಾದ ಶಿವನಿಗೆ; ನಮಃ=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ಅವನು ಜಗತ್ತಿನ ಉತ್ಪತ್ತಿಗೂ ಮೊದಲೇ ಇರುವವನಾದುದರಿಂದ ಅಗ್ರಿಯನೆನಿಸಿರುವವನು. ಸಭೆಗಳಲ್ಲಿ ಮುಖ್ಯನಾದವನ ಸ್ವರೂಪದವನು. ಶೀಘ್ರವಾಗಿ ವ್ಯಾಪಿಸಬಲ್ಲನು. ಗಮನಸಮರ್ಥನು. ಅಂತಹ ಶಿವನಿಗೆ ನಮಸ್ಕಾರ.

ಶೀಘ್ರವಾಗಿ ಹೋಗುತ್ತಿರುವ ಶಿವನಿಗೂ, ವೇಗವಾದ ನೀರಿನ ಪ್ರವಾಹದಲ್ಲಿರುವ ಶಿವನಿಗೂ ನಮಸ್ಕಾರ.

ಅಲೆಗಳಿಂದ ಕೂಡಿರುವವನ ರೂಪದಲ್ಲಿರುವ ರುದ್ರನಿಗೂ, ಧ್ವನಿರಹಿತವಾದ ನೀರಿನಲ್ಲಿರುವ ರುದ್ರನಿಗೂ ನಮಸ್ಕಾರ.

ಜಲಪ್ರವಾಹದಲ್ಲಿದ್ದು ಸ್ರೋತಸ್ಯನೆನಿಸುವ ರುದ್ರನಿಗೂ, ನಡುಗಡ್ಡೆಯಲ್ಲಿದ್ದು ದ್ವೀಪ್ಯನೆನಿಸುವ ಶಿವನಿಗೂ ನಮಸ್ಕಾರ.

: ತಾತ್ಪರ್ಯ– ಭ. ಭಾ. ಭಾ. :

ಎಂಬಂತೆ ಪುನರುಕ್ತವಾಗಿದೆಯೆಂದೂ ತಿಳಿಯಬಹುದು.

ಅಲೆಗಳಲ್ಲಿ ಉಂಟಾಗಿರುವವನ ರೂಪದಲ್ಲಿರುವ ರುದ್ರನಿಗೂ, ಶಬ್ದರಹಿತವಾದ, ಅಥವಾ ಅಡಗಿರುವ ಶಬ್ದವುಳ್ಳ ನೀರಿನಲ್ಲಿರುವ ರುದ್ರನಿಗೆ ನಮಸ್ಕಾರ.

ಅವಸ್ವನ=ಸ್ಥಿರವಾದ ನೀರು. '**ಅಹ**' ಎಂಬ ಉಪಸರ್ಗದ ಅರ್ಥವನ್ನು ತಿಳಿಸುವ '**ಅವ**' ಎಂಬ ಉಪಸರ್ಗದೊಡನೆ ಸೇರಿ ಈ ಶಬ್ದವು ಇದೆ. ಸ್ತಿಮಿತ ಎಂದರ್ಥ ಎಂದು ಮಿಶ್ರರು ವಿವರಿಸಿದ್ದಾರೆ.

ಜಲಪ್ರವಾಹದಲ್ಲಿರುವ ರುದ್ರನಿಗೂ ಉಭಯಪಾರ್ಶ್ವಗಳಲ್ಲಿಯೂ ನೀರಿರುವ ದ್ವೀಪಸ್ವರೂಪದ ಭೂಮಿಯಲ್ಲಿರುವ ರುದ್ರನಿಗೂ ಸಹ ನಮಸ್ಕಾರ.

## ॥ ಷಷ್ಠೋಽನುವಾಕಃ ॥

### ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ

ನಮಃ। ಜ್ಯೇಷ್ಠಾಯ। ಚ। ಕನಿಷ್ಠಾಯ। ಚ।

ಹಿಂದಿನ ಐದನೆಯ ಅನುವಾಕದಲ್ಲಿ ಪ್ರಾರಂಭದಲ್ಲಿ 'ನಮಃ' ಶಬ್ದದಿಂದ ಅನ್ಯತರತೋನಮಸ್ಕಾರ ರೂಪವಾದ ಯಜುಸ್ಸುಗಳು ಹೇಳಲ್ಪಟ್ಟಿವೆ. ಈ ಆರನೆಯ ಅನುವಾಕದಲ್ಲಿಯೂ ಮತ್ತೆ ಕೆಲವು ಆ ರೀತಿಯ ಯಜುಸ್ಸುಗಳೇ ಹೇಳಲ್ಪಡುತ್ತವೆ. ಇಲ್ಲಿಯೂ ರುದ್ರನ ಸರ್ವಾತ್ಮಕತ್ವವು ವರ್ಣಿತವಾಗಿದೆ.

| ಮಂತ್ರ | ವಿನಿಯೋಗ |
|---|---|
| **ನಮೋ ಜ್ಯೇಷ್ಠಾಯ ಚ...ಚ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಜ್ಯೇಷ್ಠಾಯ ಚ**=ವಿದ್ಯೆ–ಐಶ್ವರ್ಯ ಮುಂತಾದವುಗಳಿಂದ ಅಧಿಕನಾದ ಜ್ಯೇಷ್ಠಸ್ವರೂಪನಾದ ರುದ್ರನಿಗೆ; **ನಮಃ**=ನಮಸ್ಕಾರ. **ಕನಿಷ್ಠಾಯ ಚ**=ಇವುಗಳಿಲ್ಲದೆ ಅಲ್ಪನಾದವನಿಗೂ; ನಮಃ= ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಜ್ಯೇಷ್ಠಾಯ ಚ**=ಅತಿ ಹಿರಿಯನಾದ ಸ್ವರೂಪನಿಗೂ, ಅತಿಪ್ರಶಸ್ತನಾದ ಸ್ವರೂಪದವನಿಗೂ; **ನಮಃ**= ನಮಸ್ಕಾರ. **ಕನಿಷ್ಠಾಯ ಚ**=ಅತ್ಯಂತ ಯುವಕನ ಸ್ವರೂಪದವನಿಗೂ, ಅತಿ ಬಾಲಕನ ಸ್ವರೂಪದವನಿಗೂ, ಅತಿ ಸಣ್ಣವನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ವಿದ್ಯೆ–ಐಶ್ವರ್ಯಗಳಿಂದ ಮೇಲಿನವನಾದವನ ಸ್ವರೂಪದ ರುದ್ರನಿಗೂ, ಅಲ್ಪನಾಗಿರುವವನ ಸ್ವರೂಪದ ರುದ್ರನಿಗೂ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಅತ್ಯಂತ ಹಿರಿಯನಾದವನ, ಅತಿಪ್ರಶಸ್ತನಾದವನ, ಅತ್ಯಂತ ಯುವಕನ, ಬಾಲಕನ, ಸಣ್ಣವನ ಸ್ವರೂಪದ ಶಿವನಿಗೆ ನಮಸ್ಕಾರ. ಈಶ್ವರನು ಸರ್ವಸ್ವರೂಪನಷ್ಟೇ.

# ನಮಃ ಪೂರ್ವಜಾಯ ಚಾಪರಜಾಯ ಚ ನಮೋ ಮಧ್ಯಮಾಯ ಚಾಪಗಲ್ಭಾಯ ಚ

ನಮಃ । ಪೂರ್ವಜಾಯೇತಿ ಪೂರ್ವ-ಜಾಯ । ಚ । ಅಪರಜಾಯೇತ್ಯಪರ-ಜಾಯ । ಚ । ನಮಃ । ಮಧ್ಯಮಾಯ । ಚ । ಅಪಗಲ್ಭಾಯೇತ್ಯಪ-ಗಲ್ಭಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮಃ ಪೂರ್ವಜಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮೋ ಮಧ್ಯಮಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಪೂರ್ವಜಾಯ ಚ**=ಜಗದಾದಿಯಲ್ಲಿ ಹಿರಣ್ಯಗರ್ಭರೂಪದಿಂದ ಉತ್ಪನ್ನನಾಗಿ ಪೂರ್ವಜನಾಗಿರುವ ರುದ್ರನಿಗೂ; **ನಮಃ**=ನಮಸ್ಕಾರ. **ಅಪರಜಾಯ ಚ**=ಬಳಿಕ ಜಗತ್ತಿನ ಪ್ರಳಯಕಾಲದಲ್ಲಿ ಕಾಲಾಗ್ನಿ ಮುಂತಾದ ರೂಪದವನಾಗಿರುವವನಿಗೂ; ನಮಃ=ನಮಸ್ಕಾರ. ▲ **ಮಧ್ಯಮಾಯ ಚ**=ಉತ್ಪತ್ತಿ-ಪ್ರಳಯಗಳ ಮಧ್ಯದಲ್ಲಿ ದೇವ-ಮನುಷ್ಯ-ತಿರ್ಯಕ್ ಪ್ರಾಣಿಗಳ ರೂಪದಿಂದ ಉತ್ಪನ್ನನಾದ ರುದ್ರನಿಗೆ/ ಮಧ್ಯಮನಿಗೆ; **ನಮಃ**=ನಮಸ್ಕಾರ. **ಅಪಗಲ್ಭಾಯ ಚ**=ಸರಿಯಾಗಿ ಇಂದ್ರಿಯಜ್ಞಾನವನ್ನು ಪಡೆಯದ ಬಾಲಬುದ್ಧಿಯ ರೂಪದವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಪೂರ್ವಜಾಯ ಚ**=ಆದಿಯಲ್ಲಿ ಜನಿಸಿದವನಾದ/ಜನ್ಮರಹಿತನಾದ/ರುದ್ರನಿಗೆ **ನಮಃ**=ನಮಸ್ಕಾರ. **ಅಪರಜಾಯ ಚ**=ಅನಂತರ ಜನಿಸಿದವನಾದ/ಪ್ರಾಣಿಗಳ ಜನನದ ಬಳಿಕವೂ ಇರುವವನಾದ ರುದ್ರನಿಗೆ; ನಮಃ=ನಮಸ್ಕಾರ. ▲ **ಮಧ್ಯಮಾಯ ಚ**=ಮಧ್ಯಕಾಲದಲ್ಲಿ ಇರುವವನಾದ ರುದ್ರನಿಗೆ; **ನಮಃ**= ನಮಸ್ಕಾರ. **ಅಪಗಲ್ಭಾಯ ಚ**=ಚೆನ್ನಾಗಿ ಬೆಳೆಯದಿರುವ ಅವಯವವುಳ್ಳ ಬಾಲರೂಪನಾದ ಶಿವನಿಗೆ; ನಮಃ= ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಜಗತ್ತಿನ ಆದಿಯಲ್ಲಿ–**'ಹಿರಣ್ಯಗರ್ಭಃ ಸಮವರ್ತತಾಗ್ರೇ'** ಎಂಬ ಶ್ರುತಿಯಂತೆ–ಜನಿಸಿದವನಾದ, ಪ್ರಳಯದಲ್ಲಿಯೂ ಸಂಹಾರಕನಾಗಿ ಇರುವ ರುದ್ರನಿಗೆ ನಮಸ್ಕಾರ.

ಮಧ್ಯಕಾಲದಲ್ಲಿ ದೇವ–ಮನುಷ್ಯ–ಹರಿದಾಡುವ ಪ್ರಾಣಿಗಳ ರೂಪದಲ್ಲಿರುವವನಿಗೂ, ಬಾಲಬುದ್ಧಿಯ ರೂಪದವನಿಗೂ ಸಹ ನಮಸ್ಕಾರ.

# ನಮೋ ಜಘನ್ಯಾಯ ಚ ಬುಧ್ನಿಯಾಯ ಚ ನಮಸ್ಸೋಭ್ಯಾಯ ಚ ಪ್ರತಿಸರ್ಯಾಯ ಚ

---

ನಮಃ । ಜಘನ್ಯಾಯ । ಚ । ಬುಧ್ನಿಯಾಯ । ಚ । ನಮಃ । ಸೋಭ್ಯಾಯ । ಚ । ಪ್ರತಿಸರ್ಯಾಯೇತಿ ಪ್ರತಿ-ಸರ್ಯಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮೋ ಜಘನ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮಸ್ಸೋಭ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಜಘನ್ಯಾಯ ಚ=**ಹಸುವೇ ಮುಂತಾದ ಪ್ರಾಣಿಗಳ ಹಿಂಭಾಗದಿಂದ ಜನಿಸುವ ಕರುವೇ ಮೊದಲಾದ ರೂಪದ ಶಿವನಿಗೆ; **ನಮಃ=**ನಮಸ್ಕಾರ. **ಬುಧ್ನಿಯಾಯ ಚ=**ವೃಕ್ಷಗಳ ಬುಡದಿಂದ ಶಾಖಾರೂಪದಿಂದ ಜನಿಸುವ ರೂಪದವನಾದ ರುದ್ರನಿಗೆ; ನಮಃ=ನಮಸ್ಕಾರ. ▲ **ಸೋಭ್ಯಾಯ ಚ=**ಮನುಷ್ಯರ ಲೋಕದಲ್ಲಿ ಹುಟ್ಟಿದ ರೂಪದಲ್ಲಿರುವವನಿಗೆ; **ನಮಃ=**ನಮಸ್ಕಾರ. **ಪ್ರತಿಸರ್ಯಾಯ ಚ=**ಪ್ರತಿಸರಸೂತ್ರಕ್ಕೆ ಅರ್ಹನಾಗಿರುವ ಸ್ವರೂಪದಲ್ಲಿರುವವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಜಘನ್ಯಾಯ ಚ=**ಪ್ರಾಣಿಗಳ ಹಿಂಭಾಗದಿಂದ ಜನಿಸುವ ರೂಪದವನಾದ ರುದ್ರನಿಗೆ; **ನಮಃ=**ನಮಸ್ಕಾರ. **ಬುಧ್ನಿಯಾಯ ಚ=**ಗಿಡಗಳ ಬುಡದಿಂದ ಹುಟ್ಟುವ ನೆಲಗಡಲೆ ಮುಂತಾದ ರೂಪನಾಗಿರುವ ಬುಧ್ನಿಯನಿಗೆ; ನಮಃ=ನಮಸ್ಕಾರ. ▲ **ಸೋಭ್ಯಾಯ ಚ=**ಸೋಭನಗರದಲ್ಲಿರುವ ಸ್ವರೂಪದವನಾದ ರುದ್ರನಿಗೆ/ಮಾನವನ ದೇಹದಲ್ಲಿ ಅಂತರ್ಯಾಮಿಯಾಗಿರುವವನಿಗೆ; **ನಮಃ=**ನಮಸ್ಕಾರ. **ಪ್ರತಿಸರ್ಯಾಯ ಚ=**ಎದುರಾಗಿ ನುಗ್ಗಿ ಬರುವ ಪ್ರಾಣಿಗಳ ರೂಪದಲ್ಲಿರುವವನಿಗೆ; ನಮಃ= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ಕರು ಮುಂತಾದ ಪ್ರಾಣಿಗಳು ಹಸು ಮುಂತಾದ ಪ್ರಾಣಿಗಳ ಹಿಂಭಾಗದಿಂದ ಜನಿಸುತ್ತವೆ. ಆ ಸ್ವರೂಪದಲ್ಲಿರುವ ರುದ್ರನಿಗೂ, ಮರದ ಬುಡದ ಕೊಂಬೆಯ ರೂಪದ ಶಿವನಿಗೂ ನಮಸ್ಕಾರ.**

**: ತಾತ್ಪರ್ಯ- ಭ. ಭಾ. ಭಾ. :**

**ಪರಮಾತ್ಮನು ಆದ್ಯಂತರಹಿತನು. ಆದರೂ ಸಾಮಾನ್ಯರು ಎಲ್ಲ ಪ್ರಾಣಿಗಳಿಗಿಂತಲೂ ಮೊದಲಿನ ಕಾಲದಲ್ಲಿರುವ ಆತನ ಇರುವಿಕೆಯನ್ನೇ ಆತನ ಹುಟ್ಟು ಎನ್ನುವರು. 'ಅಜಾತ ಇತ್ಯೇವಂ ಕಶ್ಚಿದ್ಭೀರುಃ ಪ್ರಪದ್ಯತೇ' ಎಂಬ ಶ್ರುತಿಯು ಇದನ್ನೇ ಹೇಳುತ್ತಿದೆ. [ಶ್ವೇತಾಶ್ವತರೋಪನಿಷತ್.4.21] ಎಲ್ಲ ಪ್ರಾಣಿಗಳು ವಿನಾಶವಾದ ಮೇಲೂ ಇರುವವನು. ಇಂತಹ ರುದ್ರನಿಗೆ ನಮಸ್ಕಾರ.**

## ನಮೋ ಯಾಮ್ಯಾಯ ಚ ಕ್ಷೇಮ್ಯಾಯ ಚ ನಮ ಉರ್ವರ್ಯಾಯ ಚ ಖಲ್ಯಾಯ ಚ

ನಮಃ । ಯಾಮ್ಯಾಯ । ಚ । ಕ್ಷೇಮ್ಯಾಯ । ಚ । ನಮಃ । ಉರ್ವರ್ಯಾಯ । ಚ । ಖಲ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮೋ ಯಾಮ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮ ಉರ್ವರ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಯಾಮ್ಯಾಯ ಚ**=ಯಮಲೋಕದಲ್ಲಿ ಪಾಪಿಗಳನ್ನು ಶಿಕ್ಷಿಸುವ ರೂಪದಲ್ಲಿರುವ ಯಾಮ್ಯನಿಗೆ; **ನಮಃ**=ನಮಸ್ಕಾರ. **ಕ್ಷೇಮ್ಯಾಯ ಚ**=ಮೋಕ್ಷವನ್ನು ಕರುಣಿಸುವವನಿಗೆ; ನಮಃ=ನಮಸ್ಕಾರ. ▲ **ಉರ್ವರ್ಯಾಯ ಚ**=ಸರ್ವಸಸ್ಯಗಳೂ ಬೆಳೆಯುವ ಫಲವತ್ತಾದ ಭೂಮಿಯಲ್ಲಿ ಧಾನ್ಯವಿಶೇಷರೂಪದಲ್ಲಿರುವವನಿಗೆ; **ನಮಃ**=ನಮಸ್ಕಾರ. **ಖಲ್ಯಾಯ ಚ**=ಒಕ್ಕಣೆ ಮಾಡುವ ಕಣದಲ್ಲಿ ಮೇಟಿಯಾಗಿರುವವನಿಗೆ; ನಮಃ= ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಯಾಮ್ಯಾಯ ಚ**=ಪ್ರಾಣಾವಸಾನಸಮಯದಲ್ಲಿ ತಾರಕನಾದ ಶಿವನಿಗೂ; **ನಮಃ**=ನಮಸ್ಕಾರ. **ಕ್ಷೇಮ್ಯಾಯ ಚ**=ಸ್ವರ್ಗದಲ್ಲಿ ಸುಖವನ್ನು ಕರುಣಿಸುವ/ಪ್ರಾಣಿಗಳ ಗುಪ್ತಿಸ್ಥಾನವಾದ/ರಕ್ಷಾಸ್ಥಾನವಾದ ಸಾಂಬನಿಗೆ; ನಮಃ=ನಮಸ್ಕಾರ. ▲ **ಉರ್ವರ್ಯಾಯ ಚ**=ಎಲ್ಲ ಸಸ್ಯಗಳೂ ಬೆಳೆಯುವ ಭೂಮಿಯಾದ ಉರ್ವರದಲ್ಲಿ ಇರುವ ಧಾನ್ಯಸ್ವರೂಪದವನಾದ ರುದ್ರನಿಗೆ; **ನಮಃ**=ನಮಸ್ಕಾರ. **ಖಲ್ಯಾಯ ಚ**= ಧಾನ್ಯಗಳನ್ನು ಒಕ್ಕಣೆ ಮಾಡುವ ಖಲದಲ್ಲಿರುವವನಾದ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**'ಪುಣ್ಯೇನ ಪುಣ್ಯಂ ಲೋಕಂ ಜಯತಿ ಪಾಪೇನ ಪಾಪಮುಭಾಭ್ಯಾಂ ಮನುಷ್ಯಲೋಕಂ'** [ಪ್ರಶ್ನೋಪನಿಷತ್. 3.7] ಎಂದು ಹೇಳಿರುವಂತೆ ಪುಣ್ಯ–ಪಾಪಗಳೆರಡರಿಂದಲೂ ಕೂಡಿದ ಮನುಷ್ಯರ ಲೋಕದಲ್ಲಿ ಹುಟ್ಟಿದ ***ಸೋಭ್ಯನಿಗೂ**, ವಿವಾಹಾದಿಶುಭಕರ್ಮಗಳಲ್ಲಿ ರಕ್ಷಣೆಗಾಗಿ ಕಟ್ಟಿಕೊಂಡಿರುವ ಪ್ರತಿಸರ=ರಕ್ಷಾಬಂಧನಕ್ಕೆ ಅರ್ಹನಾಗಿರುವ ಸ್ವರೂಪದಲ್ಲಿರುವವನಿಗೂ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಉತ್ಪತ್ತಿ–ಪ್ರಳಯಕಾಲದ ಮಧ್ಯಕಾಲದಲ್ಲಿ ಇರುವವನಿಗೂ, ಅತ್ಯಂತ ಶಿಶುವಾಗಿ ಇನ್ನೂ ಚೆನ್ನಾಗಿ ಬೆಳೆಯದ ಅವಯವವುಳ್ಳವನಿಗೂ ಅಂದರೆ ಬಾಲರೂಪಶಿವನಿಗೂ ನಮಸ್ಕಾರ.

* ಉಭಾಭ್ಯಾಂ=ಪುಣ್ಯಪಾಪಾಭ್ಯಾಂ ಸಹ ವರ್ತತೇ ಇತಿ ಸೋಭಃ=ಮನುಷ್ಯಲೋಕಃ

**ನಮಶ್ಶ್ಲೋಕ್ಯಾಯ ಚಾವಸಾನ್ಯಾಯ ಚ ನಮೋ ವನ್ಯಾಯ ಚ ಕಕ್ಷ್ಯಾಯ ಚ**

---

ನಮಃ । ಶ್ಲೋಕ್ಯಾಯ । ಚ । ಅವಸಾನ್ಯಾಯೇತ್ಯವ-ಸಾನ್ಯಾಯ । ಚ । ನಮಃ । ವನ್ಯಾಯ । ಚ । ಕಕ್ಷ್ಯಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮಶ್ಶ್ಲೋಕ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ವನ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶ್ಲೋಕ್ಯಾಯ ಚ**=ವೇದಮಂತ್ರರೂಪಶ್ಲೋಕಪ್ರತಿಪಾದ್ಯನಾಗಿ ಅಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಅವಸಾನ್ಯಾಯ ಚ**=ಉಪನಿಷತ್ತುಗಳಿಂದ ಪ್ರತಿಪಾದ್ಯನಾದ ಈಶ್ವರನಿಗೆ; ನಮಃ=ನಮಸ್ಕಾರ. ▲ **ವನ್ಯಾಯ ಚ**=ಕಾಡಿನಲ್ಲಿ ಮರಗಳೇ ಮುಂತಾದ ರೂಪದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಕಕ್ಷ್ಯಾಯ ಚ**= ಲತೆ-ಗುಲ್ಮ ಮುಂತಾದವುಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶ್ಲೋಕ್ಯಾಯ ಚ**=ಪಾದಬದ್ಧವಾದ ಶ್ಲೋಕಗಳಲ್ಲಿರುವ/ವೇದಗಳಲ್ಲಿರುವ; ರುದ್ರನಿಗೆ **ನಮಃ**= ನಮಸ್ಕಾರ. **ಅವಸಾನ್ಯಾಯ ಚ**=ಅವಸಾನಕಾಲದಲ್ಲಿ ತಾರಕನಾಗಿರುವ/ಉಪನಿಷತ್ತುಗಳಲ್ಲಿ ಪ್ರತಿಪಾದ್ಯ ನಾಗಿ ಇರುವವನಿಗೆ; ನಮಃ=ನಮಸ್ಕಾರ. ▲ **ವನ್ಯಾಯ ಚ**=ಮರಗಳೇ ಮುಂತಾದ ರೂಪದಲ್ಲಿರುವವನಿಗೆ; **ನಮಃ**=ನಮಸ್ಕಾರ. **ಕಕ್ಷ್ಯಾಯ ಚ**=ಬಳ್ಳಿ-ಪೊದೆಗಳ ರೂಪದಲ್ಲಿರುವವನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಪಾಪವನ್ನೆಸಗಿದ ಪಾಪಿಗಳನ್ನು ಯಮಲೋಕದಲ್ಲಿ ಶಿಕ್ಷಿಸುವವನು ಯಾಮ್ಯನು. ಅವನಿಗೂ, ಮೋಕ್ಷವನ್ನು ಕರುಣಿಸುವವನಾದ ಶಿವನಿಗೂ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಜಘನವೆಂದರೆ ಸೊಂಟದ ಹಿಂಭಾಗ. ಅಲ್ಲಿ ಜನಿಸುವ ಪ್ರಾಣಿಗಳು ಜಘನ್ಯಗಳು. ಆ ರೂಪದ ರುದ್ರನಿಗೂ, ಗಿಡಗಳ ಬುಡವಾದ ಬುಧ್ನದಲ್ಲಿ ಜನಿಸುವ ಕಡಲೆ ಮುಂತಾದ ರೂಪದ ರುದ್ರನಿಗೂ ನಮಸ್ಕಾರ.

ಸಾಲ್ವನು ನಿರ್ಮಿಸಿಕೊಂಡಿರುವ ಸೋಭವೆಂಬ ಗಂಧರ್ವನಗರದಂತಿರುವ ಪುರಗಳಲ್ಲಿ ಇರುವವನಾದುದರಿಂದ ರುದ್ರನು ಸೋಭ್ಯನೆನಿಸಿರುವನು. ಅಂತಹವನಿಗೂ, *ಸುಖದುಃಖಾದಿದ್ವಂದ್ವಗಳಿಂದ ಮಾನವದೇಹದಲ್ಲಿ ಅಂತರ್ಯಾಮಿಯಾಗಿರುವ, ಎದುರಾಗಿ ಬರುವ ಪ್ರಾಣಿಗಳ ಸ್ವರೂಪದವನಾದವನಿಗೂ ನಮಸ್ಕಾರ.

ಶಿವನು ಪ್ರಾಣಾವಸಾನಸಮಯದಲ್ಲಿ ರಕ್ಷಿಸುವವನು. ಅಂತ್ಯಕಾಲದಲ್ಲಿ ಉದ್ಧರಿಸುವವನು. ಯಮನಗರದಲ್ಲಿದ್ದು ಶಿಕ್ಷಿಸುವವನು. ಅವನು ಸುಖಪ್ರದನು. ಗುಪ್ತಿಸ್ಥಾನನು. ರಕ್ಷಿಸುವವನು. ಇಂತಹ ಶಿವನಿಗೆ ನಮಸ್ಕಾರ.

---

* ಉಭಾಭ್ಯಾಮ್-ಶೀತೋಷ್ಣಾಭ್ಯಾಂ=ಸುಖದುಃಖಾಭ್ಯಾಂ ಸಹಿತಂ ಸೋಭಂ=ಮಾನವಶರೀರಮ್ । ತತ್ರ ಭವಃ ಸೋಭ್ಯಃ ।

## ನಮಃ ಶ್ರವಾಯ ಚ ಪ್ರತಿಶ್ರವಾಯ ಚ [ಚ (೧೩)] ನಮ ಆಶುಷೇಣಾಯ ಚಾಽಽಶುರಥಾಯ ಚ

ನಮಃ । ಶ್ರವಾಯ । ಚ । ಪ್ರತಿಶ್ರವಾಯೇತಿ ಪ್ರತಿ-ಶ್ರವಾಯ । ಚ । (೧೩) । ನಮಃ । ಆಶುಷೇಣಾಯೇತ್ಯಾಶು-ಸೇನಾಯ । ಚ । ಆಶುರಥಾಯೇತ್ಯಾಶು-ರಥಾಯ । ಚ ।

| ಮಂತ್ರ | ವಿನಿಯೋಗ |
|---|---|
| ನಮಶ್ರವಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| ನಮ ಆಶುಷೇಣಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶ್ರವಾಯ ಚ**=ಕೇಳುವ ಶಬ್ದಸ್ವರೂಪನಾಗಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಪ್ರತಿಶ್ರವಾಯ ಚ**= ಪ್ರತಿಧ್ವನಿರೂಪನಾಗಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಆಶುಷೇಣಾಯ ಚ**=ಬೇಗನೆ ಸಂಚರಿಸುವ ಸೇನೆಯುಳ್ಳ ರುದ್ರನಿಗೆ; **ನಮಃ**=ನಮಸ್ಕಾರ. **ಆಶುರಥಾಯ ಚ**=ಶೀಘ್ರಗಾಮಿಯಾದ ರಥವುಳ್ಳ ರುದ್ರನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶ್ರವಾಯ ಚ**=ಎಲ್ಲೆಡೆಯೂ ಕೇಳುವ ಶಬ್ದಸ್ವರೂಪನಾಗಿರುವ/ಸುಪ್ರಸಿದ್ಧನಾಗಿರುವ ರುದ್ರನಿಗೆ; **ನಮಃ** =ನಮಸ್ಕಾರ. **ಪ್ರತಿಶ್ರವಾಯ ಚ**=ಪ್ರತಿವಚನರೂಪನಾಗಿರುವವನಿಗೆ; ನಮಃ=ನಮಸ್ಕಾರ. ▲ **ಆಶುಷೇಣಾಯ ಚ**=ಬೇಗನೆ ವ್ಯಾಪಿಸುವ ಸೇನೆಯುಳ್ಳ ರುದ್ರನಿಗೆ; **ನಮಃ**=ನಮಸ್ಕಾರ. **ಆಶುರಥಾಯ ಚ**=ವೇಗದಿಂದ ಚಲಿಸುವ ರಥವುಳ್ಳ ರುದ್ರನಿಗೂ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಎಲ್ಲ ಸಸ್ಯಗಳೂ ಸಮೃದ್ಧವಾಗಿ ಬೆಳೆಯುವ ಭೂಮಿಯ ಧಾನ್ಯರೂಪದವನಿಗೂ, ಧಾನ್ಯದ ಕಣದ ಮೇಟಿಯ ರೂಪನಿಗೂ, ವೇದಪ್ರತಿಪಾದ್ಯನಿಗೂ, ಉಪನಿಷತ್ತುಗಳಿಂದ ತಿಳಿಯಲ್ಪಡುವವನಿಗೂ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಉರ್ವರವೆನಿಸುವ ಪ್ರಶಸ್ತಭೂಮಿಯಲ್ಲಿರುವವನಿಗೂ, ಧಾನ್ಯಗಳನ್ನು ಬೇರ್ಪಡಿಸುವ ಸ್ಥಾನವಾದ ಕಣದಲ್ಲಿರುವ ಮೇಟಿಯ ರೂಪದವನಿಗೂ, ಪಾದಬದ್ಧವಾದ ಶ್ಲೋಕಗಳಲ್ಲಿ ಪ್ರತಿಪಾದ್ಯನಾಗಿರುವವನಿಗೂ, ಅಂತ್ಯದಲ್ಲಿ ತಾರಕನಾಗಿರುವವನಿಗೂ ನಮಸ್ಕಾರ.

ಅರಣ್ಯದಲ್ಲಿ ಮರಗಳು ಮುಂತಾದ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ.

**ನಮಶ್ಶೂರಾಯ ಚಾವಭಿಂದತೇ ಚ ನಮೋ ವರ್ಮಿಣೇ ಚ ವರೂಥಿನೇ ಚ**

**ನಮೋ ಬಿಲ್ಮಿನೇ ಚ ಕವಚಿನೇ ಚ**

---

ನಮಃ । ಶೂರಾಯ । ಚ । ಅವಭಿಂದತ ಇತ್ಯವ-ಭಿಂದತೇ । ಚ । ನಮಃ । ವರ್ಮಿಣೇ । ಚ । ವರೂಥಿನೇ । ಚ ।

ನಮಃ । ಬಿಲ್ಮಿನೇ । ಚ । ಕವಚಿನೇ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮಶ್ಶೂರಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ವರ್ಮಿಣೇ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ಬಿಲ್ಮಿನೇ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶೂರಾಯ ಚ**=ಯುದ್ಧದಲ್ಲಿ ಧೈರ್ಯಶಾಲಿಯಾದ ರುದ್ರನಿಗೆ; **ನಮಃ**=ನಮಸ್ಕಾರ. **ಅವಭಿಂದತೇ ಚ**=ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುವ ರುದ್ರನಿಗೆ; ನಮಃ=ನಮಸ್ಕಾರ. ▲ **ವರ್ಮಿಣೇ ಚ**=ಕಂಚುಕ ಧಾರಿಯಾಗಿ ಮಹಾಯೋಧನಾಗಿರುವ ಶಿವನಿಗೆ; **ನಮಃ**=ನಮಸ್ಕಾರ. **ವರೂಥಿನೇ ಚ**=ಸುರಕ್ಷಿತವಾದ ಮನೆಯನ್ನು ಹೊಂದಿರುವ ರೂಪದ ರುದ್ರನಿಗೆ; ನಮಃ=ನಮಸ್ಕಾರ. ▲ **ಬಿಲ್ಮಿನೇ ಚ**=ಶಿರಸ್ತ್ರಾಣವನ್ನು ಧರಿಸಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಕವಚಿನೇ ಚ**=ಶರೀರರಕ್ಷಕವಾದ ಕವಚವನ್ನು ಧರಿಸಿರುವ ರುದ್ರನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶೂರಾಯ ಚ**=ಮಹಾವೀರನೂ, ಧೈರ್ಯಶಾಲಿಯೂ ಆದ ರುದ್ರನಿಗೆ; **ನಮಃ**=ನಮಸ್ಕಾರ. **ಅವಭಿಂದತೇ ಚ**=ತನ್ನ ಭಕ್ತರ ದ್ವೇಷಿಗಳನ್ನು ಅನಾಯಾಸವಾಗಿ ಹೊಡೆದು ಹಾಕುವ ರುದ್ರನಿಗೆ/ ಧರ್ಮದ ದ್ವೇಷಿಗಳನ್ನು ತೊಡೆದು ಹಾಕುವ/ಧರ್ಮರಕ್ಷಕನಿಗೆ; ನಮಃ=ನಮಸ್ಕಾರ. ▲ **ವರ್ಮಿಣೇ ಚ**=ಕಂಚುಕ ಧಾರಿಯಾದ ರುದ್ರನಿಗೆ; **ನಮಃ**=ನಮಸ್ಕಾರ. **ವರೂಥಿನೇ ಚ**=ಸಾರಥಿಯ ರಕ್ಷಣಾಸ್ಥಾನವನ್ನು ಹೊಂದಿ ರುವ ಶಿವನಿಗೆ; ನಮಃ=ನಮಸ್ಕಾರ. ▲ **ಬಿಲ್ಮಿನೇ ಚ**=ಶಿರಸ್ತ್ರಾಣವನ್ನು/ಭಸ್ಮಪಾತ್ರವನ್ನು ಧರಿಸಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಕವಚಿನೇ ಚ**=ದೇಹರಕ್ಷಕವಾದ ನಿಲುವಂಗಿಯಂತಹ ಕವಚವನ್ನು ಧರಿಸಿರುವ ಕವಚಿಯಾದ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಕಾಡಿನ ಮರಗಳೇ ಮುಂತಾದ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ. ಹಾಗೆಯೇ ಲತೆ-ಪೊದೆ ಮುಂತಾದ **ಕಕ್ಷ(ಗುಂಪು)ದಿಂದ ಉಂಟಾಗುವ ಕಕ್ಷ್ಯರೂಪನಾದ ರುದ್ರನಿಗೂ, ಕೇಳಲ್ಪಡುವ ಶಬ್ದಸ್ವರೂಪನಾದವನಿಗೂ,**

## ನಮಃ ಶ್ರುತಾಯ ಚ ಶ್ರುತಸೇನಾಯ ಚ ॥ ೧೪-6 ॥

[ಪ್ರತಿಶ್ರವಾಯ ಚ ಪಂಚವಿಗ್‌ಂಶತಿಶ್ಚ ॥]

---

ನಮಃ । ಶ್ರುತಾಯ । ಚ । ಶ್ರುತಸೇನಾಯೇತಿ ಶ್ರುತ-ಸೇನಾಯ । ಚ ॥ (೧೪) ॥

---

| ಮಂತ್ರ | ವಿನಿಯೋಗ |
|---|---|
| ನಮಶ್ಶ್ರುತಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ- ಸಾ. ಭಾ.

▲ **ಶ್ರುತಾಯ ಚ**=ವೇದಪ್ರಸಿದ್ಧನಾಗಿರುವ ರುದ್ರನಿಗೂ; **ನಮಃ**=ನಮಸ್ಕಾರ. **ಶ್ರುತಸೇನಾಯ ಚ**=ಶ್ರುತಿ ಪ್ರಸಿದ್ಧವಾದ ಸೇನೆಯುಳ್ಳವನಿಗೆ/ವಂದಿ-ಮಾಗಧರಲ್ಲಿ ಪ್ರಸಿದ್ಧವಾದ ಸೇನೆಯುಳ್ಳವನಿಗೂ; **ನಮಃ**= ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

▲ **ಶ್ರುತಾಯ ಚ**=ವೇದಪ್ರಸಿದ್ಧನಾದ ರುದ್ರನಿಗೆ; **ನಮಃ**=ನಮಸ್ಕಾರ. **ಶ್ರುತಸೇನಾಯ ಚ**=ಶ್ರುತಿಯಲ್ಲಿ ಪ್ರಸಿದ್ಧವಾಗಿರುವ ಸೇನೆಯುಳ್ಳವನಿಗೆ; **ನಮಃ**=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

ಪ್ರತಿಧ್ವನಿಯ ರೂಪನಾದವನಿಗೂ, ಶೀಘ್ರಗಾಮಿಯಾದ ದೇವಸೇನಾಪತಿಯಾದ ರುದ್ರನಿಗೂ, ಶೀಘ್ರವಾಗಿ-ಸಂಚರಿಸುವ ರಥವುಳ್ಳ ಶಿವನಿಗೂ ನಮಸ್ಕಾರ.

ಯುದ್ಧದಲ್ಲಿ ಧೀರನಾದವನೂ, ಶತ್ರುಗಳನ್ನು ಸಂಹರಿಸುವವನೂ, ಕವಚಧಾರಿಯಾದವನೂ, ಸುರಕ್ಷಿತ ಮನೆಯನ್ನು ಹೊಂದಿರುವವನ ಸ್ವರೂಪದ ರುದ್ರನಿಗೆ ನಮಸ್ಕಾರ.

ಶಿರಸ್ತ್ರಾಣವನ್ನೂ, ಶರೀರರಕ್ಷಕವಾದ ಕವಚವನ್ನೂ ಧರಿಸಿರುವ ರುದ್ರನಿಗೆ ನಮಸ್ಕಾರ.

ಶ್ರುತಿಪ್ರಸಿದ್ಧನಾದವನಿಗೂ, ವಂದಿ ಮಾಗಧರಲ್ಲಿ ಪ್ರಸಿದ್ಧವಾದ ಸೇನೆಯುಳ್ಳವನಿಗೂ ನಮಸ್ಕಾರ.

ಲತೆ ಮುಂತಾದ ರೂಪದಲ್ಲಿರುವ ಕಕ್ಷ್ಯನಿಗೂ ನಮಸ್ಕಾರವು. ವನ್ಯ-ಕಕ್ಷ್ಯ ಎಂಬುವು ರುದ್ರನ* ಭೂಮಿ ಮೂರ್ತಿಯ ಅಧಿಷ್ಠಾತೃಗಳಲ್ಲಿ ಒಂದು ಬಗೆಯವು. ಶಬ್ದಾತ್ಮಕನಾದ ಶಿವನಿಗೂ, ಎಲ್ಲೆಡೆಯೂ ಕೀರ್ತಿಯು ಇರುವುದರಿಂದ ಕೇಳಲ್ಪಡುವವನಾದ ಶಿವನಿಗೂ, ಪ್ರತ್ಯುತ್ತರಸ್ವರೂಪನಾದ ರುದ್ರನಿಗೂ ನಮಸ್ಕಾರ.

ಬೇಗನೆ ವ್ಯಾಪಿಸುವ ಸೇನೆಯ ಅಧಿಪತಿಯಾದ ರುದ್ರನಿಗೂ ಶೀಘ್ರವಾಗಿ ಚಲಿಸುವ ರಥವುಳ್ಳ ರುದ್ರನಿಗೂ ನಮಸ್ಕಾರ.

ತನ್ನ ಭಕ್ತರ/ಧರ್ಮದ ದ್ವೇಷಿಗಳನ್ನು ಹೊಡೆದು ಹಾಕುವ, ಧರ್ಮರಕ್ಷಕನಿಗೆ ನಮಸ್ಕಾರ.

---

* ಇದೇ ಪ್ರಪಾಠಕದ ಐದನೆಯ ಅನುವಾಕದಲ್ಲಿ ಅಧಿಷ್ಠಾತೃವಿಷಯವು ಬಂದಿದೆ, ಪುಟ...೭೫

: ತಾತ್ಪರ್ಯ- ಭ. ಭಾ. ಭಾ. :

ಕಂಚುಕವನ್ನು ಧರಿಸಿರುವ ಮಹಾಯೋಧನಾದ ಶಿವನಿಗೂ, ಸಾರಥಿಯು ಸುರಕ್ಷಿತವಾಗಿ ಕುಳಿತುಕೊಳ್ಳುವ ರಥದ ಭಾಗವನ್ನು ಹೊಂದಿರುವ ವರೂಥಿಗೆ ನಮಸ್ಕಾರವು.

ಬಿಲ್ಮಂ=ಬಿಲವುಳ್ಳ ಭಸ್ಮಪಾತ್ರ. ಅದನ್ನು ಧರಿಸಿರುವ ಶಿವನಿಗೆ ನಮಸ್ಕಾರ. ನಿಲುವಂಗಿಯಂತಹ ಕವಚಧಾರಿಗೂ ನಮಸ್ಕಾರ.

**'ವಿಶ್ವಸ್ಯಾಧಿಪತಿಃ, ವಿಶ್ವಸ್ಯ ಅಧಿಷ್ಠಾತಾ, ವಿಶ್ವಾಕಾರಸ್ತ್ವಮ್'** ಎಂಬಂತೆ ಶ್ರುತಿಪ್ರಸಿದ್ಧನಾದವನೂ, ಶ್ರುತಿಯೇ ಪ್ರಮಾಣವಾಗಿರುವವನೂ ಆದ ರುದ್ರನಿಗೆ ನಮಸ್ಕಾರ. ಹಾಗೆಯೇ ಶಿವನ ಬಾಣವೇ ಮುಂತಾದ ಆಯುಧಗಳೂ ಪ್ರಸಿದ್ಧವಾಗಿರುವುದರಿಂದ ಶ್ರುತಿಪ್ರಸಿದ್ಧವಾದ ಸೇನೆಯುಳ್ಳವನಾಗಿ ಶ್ರುತಸೇನನಾಗಿರುವ ಶಿವನಿಗೂ ನಮಸ್ಕಾರ.

## ॥ ಸಪ್ತಮೋಽನುವಾಕಃ ॥

**ನಮೋ ದುಂದುಭ್ಯಾಯ ಚಾಽಽಹನನ್ಯಾಯ ಚ**

---

ನಮಃ । ದುಂದುಭ್ಯಾಯ । ಚ । ಆಹನನ್ಯಾಯೇತ್ಯಾ–ಹನನ್ಯಾಯ । ಚ ।

---

ಆರನೆಯ ಅನುವಾಕದಲ್ಲಿ ಅನ್ಯತೋನಮಸ್ಕಾರರೂಪವಾದ ಕೆಲವು ಯಜುಸ್ಸುಗಳು ಉಕ್ತವಾದವು. ಏಳನೆಯ ಅನುವಾಕದಲ್ಲಿಯೂ ಕೂಡ ಅದೇ ರೀತಿಯ ಯಜುರ್ಮಂತ್ರಗಳಿವೆ.

---

| ಮಂತ್ರ | ವಿನಿಯೋಗ |
| --- | --- |
| **ನಮೋ ದುಂದುಭ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.** ———

▲ **ದುಂದುಭ್ಯಾಯ ಚ**=ನಗಾರಿಯಲ್ಲಿ ಉಂಟಾಗುವ ಶಬ್ದರೂಪನಾದ ಶಿವನಿಗೂ; **ನಮಃ**=ನಮಸ್ಕಾರ. **ಆಹನನ್ಯಾಯ ಚ**=ನಗಾರಿಯನ್ನು ಬಾರಿಸುವ ಕೋಲಿನಿಂದ ಹುಟ್ಟುವ ಶಬ್ದರೂಪನಾದ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ———

ಹಿಂದೆ ಪರಮೇಶ್ವರನ ವಿಶ್ವಾಧಿಪತ್ಯವನ್ನು ಹೇಳಲಾಯಿತು. ಈಗ ಅದನ್ನೇ ಘೋಷಿಸಲಾಗುತ್ತದೆ.

▲ **ದುಂದುಭ್ಯಾಯ ಚ**=ದುಂದುಭಿಯಲ್ಲಿ ಜನಿಸುವ ಶಬ್ದರೂಪನಿಗೆ/ಪ್ರಸಿದ್ಧವಾದ ಈಶ್ವರತ್ವವನ್ನು ಹೊಂದಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಆಹನನ್ಯಾಯ ಚ**=ದುಂದುಭಿಯನ್ನು ಬಾರಿಸುವ ಬಿದಿರಿನ ಕೋಲಿನ ಶಬ್ದರೂಪನಾದ ರುದ್ರನಿಗೆ; ನಮಃ=ನಮಸ್ಕಾರ.

——— **: ತಾತ್ಪರ್ಯ– ಸಾ. ಭಾ. :** ———

ಭೇರಿಯಲ್ಲಿ ಉಂಟಾಗುವ ಶಬ್ದರೂಪನಾದ ಶಿವನಿಗೂ, ನಗಾರಿಯ ಕೋಲಿನಿಂದ ಉಂಟಾಗುವ ಶಬ್ದರೂಪನಿಗೂ ನಮಸ್ಕಾರ.

——— **: ತಾತ್ಪರ್ಯ– ಭ. ಭಾ. ಭಾ. :** ———

ದುಂದುಭಿಯಿಂದ ಉಂಟಾಗುವ ಶಬ್ದರೂಪದವನಾದ, ಎದುರಿಸಲಾಗದ, ಎಲ್ಲರನ್ನೂ ಎದುರಿಸಬಲ್ಲ, ಜಗತ್ತಿನ ರಕ್ಷಣೆಯಲ್ಲಿ ಕುಶಲನಾದವನಿಗೂ, ಪಂಡಿತನೂ, ಪರಾಮರ್ಶಕುಶಲನೂ, ತನ್ನನ್ನು ಭಜಿಸುವ ಭಕ್ತರನ್ನು ತನ್ನವರೆಂದು ರಕ್ಷಿಸುವ ಶ್ರೇಷ್ಠಸ್ವಭಾವವುಳ್ಳ ರುದ್ರನಿಗೆ ನಮಸ್ಕಾರ.

## ನಮೋ ಧೃಷ್ಣವೇ ಚ ಪ್ರಮೃಶಾಯ ಚ ನಮೋ

## ದೂತಾಯ ಚ ಪ್ರಹಿತಾಯ ಚ

---

ನಮಃ । ಧೃಷ್ಣವೇ । ಚ । ಪ್ರಮೃಶಾಯೇತಿ ಪ್ರ-ಮೃಶಾಯ । ಚ । ನಮಃ । ದೂತಾಯ । ಚ । ಪ್ರಹಿತಾಯೇತಿ ಪ್ರ-ಹಿತಾಯ । ಚ ।

---

| ಮಂತ್ರ | ವಿನಿಯೋಗ |
|---|---|
| ನಮೋ ಧೃಷ್ಣವೇ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮೋ ದೂತಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಧೃಷ್ಣವೇ ಚ**=ಯುದ್ಧದಲ್ಲಿ ಪಲಾಯನರಹಿತನಾದ ಶಿವನಿಗೂ; **ನಮಃ**=ನಮಸ್ಕಾರ. **ಪ್ರಮೃಶಾಯ ಚ**=ಪರಸೈನ್ಯವೃತ್ತಾಂತಗಳನ್ನು ಪರಿಶೀಲಿಸುವ ರೂಪನಾದ ರುದ್ರನಿಗೆ; ನಮಃ=ನಮಸ್ಕಾರ. ▲ **ದೂತಾಯ ಚ**=ವೃತ್ತಾಂತಗಳನ್ನು ತಿಳಿಸುವುದರಲ್ಲಿ ನಿಪುಣನಾದ ದೂತರೂಪಶಿವನಿಗೆ; **ನಮಃ**=ನಮಸ್ಕಾರ. **ಪ್ರಹಿತಾಯ ಚ**=ಒಡೆಯನಿಂದ ಕಳುಹಿಸಲ್ಪಟ್ಟವನಂತೆ ಭಕ್ತರಿಗಾಗಿ ಕೆಲಸ ಮಾಡುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಧೃಷ್ಣವೇ ಚ**=ಮುನ್ನುಗ್ಗಬಲ್ಲವನಾದ/ಜಗದ್ರಕ್ಷಕನಾದ ಧೀರನಿಗೆ; **ನಮಃ**=ನಮಸ್ಕಾರ. **ಪ್ರಮೃಶಾಯ ಚ**=ಎಲ್ಲವನ್ನೂ ಚೆನ್ನಾಗಿ ಪರಾಮರ್ಶಿಸಬಲ್ಲ/ಭಕ್ತರನ್ನು ತನ್ನವರೆಂದು ರಕ್ಷಿಸುವವನಾದ ರುದ್ರನಿಗೆ; ನಮಃ=ನಮಸ್ಕಾರ. ▲ **ದೂತಾಯ ಚ**=ಅಗ್ನಿರೂಪದಿಂದ ದೇವತೆಗಳ ದೂತನಾಗಿರುವವನಿಗೆ/ಭಕ್ತವತ್ಸಲನಾಗಿ ದೂತರೂಪದಲ್ಲಿರುವವನಿಗೆ; **ನಮಃ**=ನಮಸ್ಕಾರ. **ಪ್ರಹಿತಾಯ ಚ**=ಯಜಮಾನನಿಂದ ಪ್ರಾರ್ಥಿತನಾಗಿ ದೇವತೆಗಳ ಬಳಿ ಕಳಿಸಿರುವ ದೂತನಾಗಿರುವ ಅಗ್ನಿರೂಪನಿಗೆ/ಅತ್ಯಂತ ಹಿತಕಾರಿಯಾಗಿರುವವನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಯುದ್ಧಗಳಲ್ಲಿ ಹಿನ್ನಡೆ ಇಲ್ಲದಿರುವ, ಶತ್ರುಸೈನ್ಯವೃತ್ತಾಂತವನ್ನು ಪರಾಮರ್ಶಿಸುವವನಾದ ರುದ್ರನಿಗೆ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

**'ಅಗ್ನಿಂ ದೂತಂ ವೃಣೀಮಹೇ' 'ಅಗ್ನಿರ್ದೇವಾನಾಂ ದೂತ ಆಸೀತ್' 'ತ್ವಂ ದೂತಃ ಕವಿರಸಿ ಪ್ರಚೇತಾಃ'** ಎಂಬ ಶ್ರುತಿವಚನದಂತೆ ಅಗ್ನಿಯು ದೇವತೆಗಳ ದೂತನು. ಆ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ. ದೇವತೆಗಳಿಗೆ ಹವ್ಯಗಳನ್ನು ಒಯ್ಯಲು ಯಜಮಾನನಿಂದ ಪ್ರಾರ್ಥಿಸಲ್ಪಟ್ಟು ಅಗ್ನಿಯೆಂಬ ಪ್ರಹಿತರೂಪನಾಗಿರುವವನಿಗೂ ನಮಸ್ಕಾರ.

# ನಮೋ ನಿಷಂಗಿಣೇ ಚೇಷುಧಿಮತೇ ಚ ನಮಸ್ತೀಕ್ಷ್ಣೇಷವೇ ಚಾಽಽಯುಧಿನೇ ಚ ನಮಃ ಸ್ವಾಯುಧಾಯ ಚ ಸುಧನ್ವನೇ ಚ

---

ನಮಃ । ನಿಷಂಗಿಣ ಇತಿ ನಿ–ಸಂಗಿನೇ । ಚ । ಇಷುಧಿಮತ ಇತೀಷುಧಿ–ಮತೇ । ಚ । ನಮಃ । ತೀಕ್ಷ್ಣೇಷವ ಇತಿ ತೀಕ್ಷ್ಣ–ಇಷವೇ । ಚ । ಆಯುಧಿನೇ । ಚ । ನಮಃ । ಸ್ವಾಯುಧಾಯೇತಿ ಸು–ಆಯುಧಾಯ । ಚ । ಸುಧನ್ವನ ಇತಿ ಸು–ಧನ್ವನೇ । ಚ ।

---

| ಮಂತ್ರ | ವಿನಿಯೋಗ |
| --- | --- |
| **ನಮೋ ನಿಷಂಗಿಣೇ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮಸ್ತೀಕ್ಷ್ಣೇಷವೇ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |
| **ನಮಸ್ಸ್ವಾಯುಧಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನ. |

**ಪದಶಃ ಅರ್ಥ– ಸಾ. ಭಾ.**

▲ **ನಿಷಂಗಿಣೇ ಚ**=ಖಡ್ಗಹಸ್ತನಾದ ಶಿವನಿಗೆ; **ನಮಃ**=ನಮಸ್ಕಾರ. **ಇಷುಧಿಮತೇ ಚ**=ಬಾಣಗಳುಳ್ಳ ಬತ್ತಳಿಕೆಯನ್ನು ಹೊಂದಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ತೀಕ್ಷ್ಣೇಷವೇ ಚ**=ಹರಿತವಾದ ಬಾಣಗಳುಳ್ಳವನಿಗೆ; **ನಮಃ**=ನಮಸ್ಕಾರ. **ಆಯುಧಿನೇ ಚ**=ಅನೇಕ ಆಯುಧಗಳನ್ನು ಧರಿಸಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಸ್ವಾಯುಧಾಯ ಚ**=ತ್ರಿಶೂಲರೂಪವಾದ ಒಳ್ಳೆಯ ಆಯುಧವುಳ್ಳ ಶಿವನಿಗೆ; **ನಮಃ**=ನಮಸ್ಕಾರ. **ಸುಧನ್ವನೇ ಚ**=ಪಿನಾಕರೂಪವಾದ ಒಳ್ಳೆಯ ಬಿಲ್ಲುಳ್ಳವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ನಿಷಂಗಿಣೇ ಚ**=ಖಡ್ಗಧಾರಿಯಾಗಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಇಷುಧಿಮತೇ ಚ**=ಬಾಣಗಳಿಂದೊಡಗೂಡಿದ ಬತ್ತಳಿಕೆಯುಳ್ಳ ರುದ್ರನಿಗೆ; ನಮಃ=ನಮಸ್ಕಾರ. ▲ **ತೀಕ್ಷ್ಣೇಷವೇ ಚ**=ಹರಿತವಾದ ಬಾಣಗಳನ್ನು ಹೊಂದಿರುವವನಾದ ರುದ್ರನಿಗೆ; **ನಮಃ**=ನಮಸ್ಕಾರ. **ಆಯುಧಿನೇ ಚ**=ಅನೇಕ ಆಯುಧಗಳಿಂದ ಅಥವಾ ಪ್ರಶಸ್ತವಾದ ಆಯುಧಗಳಿಂದ ಕೂಡಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಸ್ವಾಯುಧಾಯ ಚ**=ಒಳ್ಳೆಯ ಆಯುಧವನ್ನು/ವ್ಯರ್ಥವಾಗದ ಆಯುಧವನ್ನು ಧರಿಸಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಸುಧನ್ವನೇ ಚ**=ಒಳ್ಳೆಯ ಬಿಲ್ಲನ್ನು ಧರಿಸಿರುವವನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**ದೂರದಿಂದಲೇ ವೃತ್ತಾಂತಗಳನ್ನು ತಿಳಿಯುವುದರಲ್ಲಿ ಕುಶಲನೂ, ತಿಳಿಸುವುದರಲ್ಲಿ ಕುಶಲನೂ ಆಗಿರುವ ದೂತರೂಪನಾದ ರುದ್ರನಿಗೆ, ಯಜಮಾನನಿಂದ ಕಳಿಸಲ್ಪಟ್ಟು ಭಕ್ತರಿಗಾಗಿ ಕಾರ್ಯ ಮಾಡುವವನಿಗೂ ನಮಸ್ಕಾರ.**

# ನಮಃ ಸ್ರುತ್ಯಾಯ ಚ ಪಥ್ಯಾಯ ಚ ನಮಃ ಕಾಟ್ಯಾಯ ಚ ನೀಪ್ಯಾಯ ಚ

ನಮಃ। ಸ್ರುತ್ಯಾಯ। ಚ। ಪಥ್ಯಾಯ। ಚ। ನಮಃ। ಕಾಟ್ಯಾಯ। ಚ। ನೀಪ್ಯಾಯ। ಚ।

| ಮಂತ್ರ | ವಿನಿಯೋಗ |
| --- | --- |
| **ನಮಸ್ಸ್ರುತ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮಃ ಕಾಟ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಸ್ರುತ್ಯಾಯ ಚ**=ಕಾಲುದಾರಿಗಳಲ್ಲಿ ಸಂಚರಿಸುವ ಸ್ವರೂಪದ ರುದ್ರನಿಗೆ; **ನಮಃ**=ನಮಸ್ಕಾರ. **ಪಥ್ಯಾಯ ಚ**=ರಾಜಮಾರ್ಗಗಳಲ್ಲಿ ಸಂಚರಿಸುವ ಸದಾಶಿವನಿಗೆ; ನಮಃ=ನಮಸ್ಕಾರ. ▲ **ಕಾಟ್ಯಾಯ ಚ**=ಸ್ವಲ್ಪಮಾತ್ರ ನೀರು ಹರಿಯುವ ಸಣ್ಣ ಕಾಲುವೆಯಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ನೀಪ್ಯಾಯ ಚ**=ಜಲಪಾತಗಳಲ್ಲಿರುವ ನೀರಿನಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಸ್ರುತ್ಯಾಯ ಚ**=ಭೃತ್ಯರಕ್ಷಣೆಗಾಗಿ ಕಾಲುದಾರಿಗಳಲ್ಲಿಯೂ ಸಂಚರಿಸುವ ರುದ್ರನಿಗೆ; **ನಮಃ**=ನಮಸ್ಕಾರ. **ಪಥ್ಯಾಯ ಚ**=ರಾಜಮಾರ್ಗಗಳಲ್ಲಿ ಸಂಚರಿಸುವ ಶಿವನಿಗೆ; ನಮಃ=ನಮಸ್ಕಾರ. ▲ **ಕಾಟ್ಯಾಯ ಚ**= ಕೂಪದ ನೀರಿನಲ್ಲಿರುವ ಅಥವಾ ಲಿಂಗರೂಪಿಯಾದ ಶಿವನಿಗೆ; **ನಮಃ**=ನಮಸ್ಕಾರ. **ನೀಪ್ಯಾಯ ಚ**= ನೀರು ಹರಿದು ಹೋಗಿರುವ ಪ್ರದೇಶದಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಖಡ್ಗವನ್ನು ಕೈಯಲ್ಲಿ ಹಿಡಿದಿರುವ ರುದ್ರನಿಗೂ ಮತ್ತು ಬಾಣಗಳ ಬತ್ತಳಿಕೆಯನ್ನು ಧರಿಸಿರುವವನಿಗೂ ನಮಸ್ಕಾರ. ಹರಿತವಾದ ಬಾಣಗಳು, ಅನೇಕ ಆಯುಧಗಳು, ತ್ರಿಶೂಲ, ಪಿನಾಕಧನುಸ್ಸನ್ನು ಧರಿಸಿರುವ ರುದ್ರನಿಗೆ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ರುದ್ರನು ಭಕ್ತವಾತ್ಸಲ್ಯದಿಂದ ಶ್ರೀ ಕೃಷ್ಣನಂತೆ ದೂತನೂ, ಆಂಜನೇಯನಂತೆ ಪ್ರಹಿತನೂ ಆಗುವನು.

ಇಲ್ಲಿ ಭಗವಾನ್ ಶ್ರೀಕೃಷ್ಣನು ಭಕ್ತವಾತ್ಸಲ್ಯದಿಂದ ಪಾಂಡವರ ದೂತನಾಗಿ ಹೋಗಿದ್ದನ್ನೂ, ಆಂಜನೇಯನು ರಾಮದೂತನಾಗಿ ಕಾರ್ಯವನ್ನು ಸಾಧಿಸಿದ್ದನ್ನೂ ಗಮನಿಸಬಹುದು. ಶ್ರೀಮದ್ರಾಮಾಯಣದಲ್ಲಿ ಆಂಜನೇಯನು ಹೇಳಿರುವ ದೂತನ ಲಕ್ಷಣವೂ ಮನನೀಯ.

**ಈ** ಹಿಂದೆ **ನಿಷಂಗಿ, ಇಷುಧಿಮಾನ್** ಎಂಬುದಾಗಿ ರುದ್ರನಿಗೆ ವಿಶೇಷಣಗಳು ಹೇಳಲ್ಪಟ್ಟಿವೆ. ಆ ಆಯುಧಗಳು ಅಲ್ಲಿ ಚೌರ್ಯಸಾಧನವಾಗಿ ಹೇಳಲ್ಪಟ್ಟು ಚೋರನಿಗೆ ವಿಶೇಷಣಗಳಾಗಿವೆ. ಈಗ ಭಕ್ತರ ರಕ್ಷಣೆಗಾಗಿ ದೇವನು ಆಯುಧಗಳನ್ನು ಧರಿಸುತ್ತಾನಾದುದರಿಂದ ನಿಷಂಗಿ, ಇಷುಧಿಮಾನ್ ಎಂಬ ಪದಗಳು ಭಕ್ತರಕ್ಷಕನಾದ ಶಿವನಿಗೆ ವಿಶೇಷಣಗಳು.

## ನಮಸ್ಸೂದ್ಯಾಯ ಚ ಸರಸ್ಯಾಯ ಚ ನಮೋ ನಾದ್ಯಾಯ ಚ ವೈಶಂತಾಯ ಚ

## [ಚ (೧೫)] ನಮಃ ಕೂಪ್ಯಾಯ ಚಾವಟ್ಯಾಯ ಚ

ನಮಃ । ಸೂದ್ಯಾಯ । ಚ । ಸರಸ್ಯಾಯ । ಚ । ನಮಃ । ನಾದ್ಯಾಯ । ಚ । ವೈಶಂತಾಯ । ಚ ।(೧೫)। ನಮಃ । ಕೂಪ್ಯಾಯ । ಚ । ಅವಟ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| ನಮಸ್ಸೂದ್ಯಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| ನಮೋ ನಾದ್ಯಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| ನಮಃ ಕೂಪ್ಯಾಯ...ಚ ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

ಪದಶಃ ಅರ್ಥ– ಸಾ. ಭಾ.

▲ **ಸೂದ್ಯಾಯ ಚ**=ಕೆಸರುಮಣ್ಣಿನ ಪ್ರದೇಶದ ನೀರಿನಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. **ಸರಸ್ಯಾಯ ಚ**=ಸರೋವರದ ನೀರಿನಲ್ಲಿರುವ ಶಿವನಿಗೆ; ನಮಃ=ನಮಸ್ಕಾರ. ▲ **ನಾದ್ಯಾಯ ಚ**=ನದಿಗಳ ನೀರಿನಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. ***ವೈಶಂತಾಯ ಚ**=ಸಣ್ಣ ಸರೋವರದ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಕೂಪ್ಯಾಯ ಚ**=*ಕೂಪದ [ಆಳವಾದ ಬಾವಿಯ] ನೀರಿನಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅವಟ್ಯಾಯ ಚ**=ಹಳ್ಳದ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

▲ **ಸೂದ್ಯಾಯ ಚ**=ಜೌಗುನೆಲದ ನೀರಿನಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಸರಸ್ಯಾಯ ಚ**= ಕೃತ್ರಿಮಜಲಾಶಯದ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ನಾದ್ಯಾಯ ಚ**=ನದಿಗಳ ನೀರಿನಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ವೈಶಂತಾಯ ಚ**=ಅಲ್ಪಸರಸ್ಸಿನಲ್ಲಿರುವ ನೀರಿನ ರೂಪದಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಕೂಪ್ಯಾಯ ಚ**=ಬಾವಿಯ ನೀರಿನಲ್ಲಿರುವ ಜಲರೂಪಿಯಾದ ರುದ್ರನಿಗೆ; ನಮಃ=ನಮಸ್ಕಾರ. **ಅವಟ್ಯಾಯ ಚ**=ಗುಂಡಿಯಲ್ಲಿರುವ ಜಲರೂಪಿಯಾದ ಶಿವನಿಗೆ; ನಮಃ=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

**ಕಾಲುದಾರಿಗಳಲ್ಲಿ ಸಂಚರಿಸುವ, ರಾಜಮಾರ್ಗಗಳಲ್ಲಿಯೂ ಸಂಚರಿಸುವ ಸ್ವರೂಪಿಯಾದ ರುದ್ರನಿಗೂ, ಸಣ್ಣ ಕಾಲುವೆಯಲ್ಲಿರುವ ಜಲಸ್ವರೂಪಿಗೂ, ಜಲಪಾತಗಳಲ್ಲಿರುವ ಜಲಸ್ವರೂಪಿಯಾದ ರುದ್ರನಿಗೂ ನಮಸ್ಕಾರ.**

* ವೇಶಂತಃ ಪಲ್ವಲಂ ಚಾಲ್ಪಸರಃ –ಅಮರಕೋಶ.

* ಭೂಮಿಯ ಮಟ್ಟದಲ್ಲಿಯೇ ನೀರಿರುವ ಪ್ರದೇಶವು ವಾಪಿ. ಸೇದಿ ತೆಗೆಯಬೇಕಾದ ಆಳವುಳ್ಳ ಪ್ರದೇಶವು ಕೂಪ.

# ನಮೋ ವರ್ಷ್ಯಾ᳚ಯ ಚಾವರ್ಷ್ಯಾಯ ಚ ನಮೋ ಮೇಘ್ಯಾ᳚ಯ ಚ

# ವಿದ್ಯುತ್ಯಾ᳚ಯ ಚ ನಮ ಈಧ್ರಿಯಾ᳚ಯ ಚಾಽಽತಪ್ಯಾ᳚ಯ ಚ

---

ನಮಃ । ವರ್ಷ್ಯಾ᳚ಯ । ಚ । ಅವರ್ಷ್ಯಾ᳚ಯ । ಚ । ನಮಃ । ಮೇಘ್ಯಾ᳚ಯ । ಚ । ವಿದ್ಯುತ್ಯಾ᳚ಯೇತಿ ವಿ-ದ್ಯುತ್ಯಾ᳚ಯ । ಚ ।

ನಮಃ । ಈಧ್ರಿಯಾ᳚ಯ । ಚ । ಆತಪ್ಯಾ᳚ಯೇತ್ಯಾ-ತಪ್ಯಾ᳚ಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮೋ ವರ್ಷ್ಯಾ᳚ಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |
| **ನಮೋ ಮೇಘ್ಯಾ᳚ಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಿಸಲು. |
| **ನಮ ಈಧ್ರಿಯಾ᳚ಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ವರ್ಷ್ಯಾ᳚ಯ ಚ**=ಮಳೆಯ ನೀರಿನಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅವರ್ಷ್ಯಾ᳚ಯ ಚ**= ಮಳೆಯ ನೀರನ್ನು ಅಪೇಕ್ಷಿಸದ ಸಮುದ್ರಾದಿ ನೀರಿನಲ್ಲಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಮೇಘ್ಯಾಯ ಚ**=ಮೇಘದಲ್ಲಿರುವ ನೀರಿನ ರೂಪದಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ವಿದ್ಯುತ್ಯಾಯ ಚ**=ಮಿಂಚಿನೊಡನೆ ಸಂಚರಿಸುತ್ತಿರುವ ಸ್ವಪ್ರಕಾಶನಿಗೆ; ನಮಃ=ನಮಸ್ಕಾರ. ▲ **ಈಧ್ರಿಯಾಯ ಚ**=ನಿರ್ಮಲವಾಗಿರುವ ಶರತ್ಕಾಲದ ಮೋಡದಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರವು. **ಆತಪ್ಯಾಯ ಚ**=ಬಿಸಿಲಿನೊಡನೆ ಬೀಳುವ ಮಳೆಯಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ವರ್ಷ್ಯಾ᳚ಯ ಚ**=ಮಳೆಯ ನೀರಿನಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಅವರ್ಷ್ಯಾ᳚ಯ ಚ**= ಸಮುದ್ರದ ನೀರಿನಲ್ಲಿ/ಭೂಮಿಯಿಂದ ಮೇಲೆ ಉಕ್ಕುವ ನೀರಿನಲ್ಲಿ ಇರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಮೇಘ್ಯಾಯ ಚ**=ಮೋಡದಲ್ಲಿರುವ ನೀರಿನ ರೂಪದ ಪರಮಾತ್ಮನಿಗೆ; **ನಮಃ**=ನಮಸ್ಕಾರ. **ವಿದ್ಯುತ್ಯಾಯ ಚ**=ಮಿಂಚಿನೊಡಗೂಡಿರುವ ನೀರಿನಲ್ಲಿರುವ ಈಶ್ವರನಿಗೆ; ನಮಃ=ನಮಸ್ಕಾರ. ▲ **ಈಧ್ರಿಯಾಯ ಚ**=ನೀರಿಲ್ಲದೆ ಹೊಳೆಯುತ್ತಿರುವ ಶರತ್ಕಾಲದ ಮೋಡದಂತೆ ಇರುವ/ಬಿಸಿನೀರಿನಲ್ಲಿ ಇರುವ ಶಿವನಿಗೆ; **ನಮಃ**=ನಮಸ್ಕಾರ. **ಆತಪ್ಯಾಯ ಚ**=ಬಿಸಿಲು ಮಳೆಯಲ್ಲಿರುವ ಶಿವನಿಗೆ; ನಮಃ= ನಮಸ್ಕಾರ.

**: ತಾತ್ಪರ್ಯ– ಹಾ. ಭಾ. :**

**ಕೆಸರುಮಣ್ಣಿನ** ಪ್ರದೇಶದ ನೀರಿನಲ್ಲಿರುವ, ಸರಸ್ಸುಗಳಲ್ಲಿರುವ ಜಲದ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ. ನದಿಯ ನೀರಿನಲ್ಲಿರುವ ರುದ್ರನಿಗೂ, ಅಲ್ಪಸರೋವರದ ನೀರಿನಲ್ಲಿರುವ ರುದ್ರನಿಗೂ ನಮಸ್ಕಾರ.

# ನಮೋ ವಾತ್ಯಾಯ ಚ ರೇಷ್ಮಿಯಾಯ ಚ

ನಮಃ । ವಾತ್ಯಾಯ । ಚ । ರೇಷ್ಮಿಯಾಯ । ಚ ।

| ಮಂತ್ರ | ವಿನಿಯೋಗ |
| --- | --- |
| **ನಮೋ ವಾತ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

**ವಾತ್ಯಾಯ ಚ**=ಬಿರುಗಾಳಿಯಿಂದ ಕೂಡಿದ ಮಳೆಯಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ರೇಷ್ಮಿಯಾಯ ಚ**=ಪ್ರಳಯಕಾಲದಲ್ಲಿ ಸುರಿಯುವ ಮರಳು–ಕಲ್ಲುಗಳಿಂದ ಕೂಡಿದ ಮಳೆಯ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

**ವಾತ್ಯಾಯ ಚ**=ಬಿರುಗಾಳಿಯಿಂದ ಉಂಟಾದ ಮಳೆಯಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ರೇಷ್ಮಿಯಾಯ ಚ**=ಪ್ರಳಯಕಾಲದ ಸಂವರ್ತಕಾದಿ ವಾತಗಳ ರೂಪನಾದ/ಗ್ರೀಷ್ಮ ಋತುರೂಪನಾದ/ಗಾಳಿಗಳಿಂದ ಏಳುವ ಧೂಳುಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಬಾವಿಯ ನೀರಿನ ರೂಪದಲ್ಲಿರುವ ರುದ್ರನಿಗೆ, ಹಳ್ಳದ ನೀರಿನ ರೂಪದಲ್ಲಿರುವ ರುದ್ರನಿಗೂ ನಮಸ್ಕಾರ. ಮಳೆಯ ನೀರಿನ, ಸಮುದ್ರದ ನೀರಿನ ರೂಪದ ರುದ್ರನಿಗೆ ನಮಸ್ಕಾರ.

ಮೇಘಗಳಲ್ಲಿರುವ ನೀರಿನ ರೂಪದ ಪರಮೇಶ್ವರನಿಗೂ, ವಿದ್ಯುತ್ತಿನೊಡನೆ ಸಂಚರಿಸುವ ಸ್ವಪ್ರಕಾಶರೂಪನಾದ ಪರಮಾತ್ಮನಿಗೂ ನಮಸ್ಕಾರ.

ಶರತ್ಕಾಲದ ಮೇಘದಲ್ಲಿರುವ, ಬಿಸಿಲುಮಳೆಯಲ್ಲಿರುವ, ಬಿರುಗಾಳಿಯಿಂದ ಉಂಟಾದ ಮಳೆಯಲ್ಲಿರುವ, ಎಲ್ಲ ಪ್ರಾಣಿಗಳೂ ಅಳಿಸಿ ಹೋಗುವ ರೇಷ್ಮವೆಂಬುದಾಗಿ ಹೆಸರುಳ್ಳ ಪ್ರಳಯಕಾಲದಲ್ಲಿ ಸುರಿಯುವ ಮರಳು–ಕಲ್ಲುಗಳ ಸಹಿತವಾದ ಮಳೆಯಲ್ಲಿರುವ ರುದ್ರನಿಗೆ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಹರಿತವಾಗಿರುವ ಬಾಣಗಳನ್ನೂ, ಪ್ರಶಸ್ತ ಆಯುಧಗಳನ್ನೂ ಹೊಂದಿರುವ ರುದ್ರನಿಗೆ ನಮಸ್ಕಾರ. ರುದ್ರನ ಆಯುಧಗಳು ಶೋಭಿಸುತ್ತವೆ. ನಿಷ್ಫಲವಾಗುವುದಿಲ್ಲ. **'ಅರ್ಹನ್ಬಿಭರ್ಷಿ ಸಾಯಕಾನಿ ಧನ್ವ'** ಎಂಬ ಮಂತ್ರದಂತೆ ಅರ್ಹನಾದ ನೀನು ಧರಿಸಿರುವುದರಿಂದ ಆಯುಧವು ಸ್ವಾಯುಧವಾಗಿದೆ. ನೀನು ಒಳ್ಳೆಯ ಬಿಲ್ಲನ್ನು ಹಿಡಿದಿರುವವನು. ಬಿಲ್ಲು ಮುಖ್ಯವಾದುದರಿಂದ ಪ್ರತ್ಯೇಕವಾಗಿ ಶ್ರುತಿವಚನ. ಬಂಗಾರದ ಬಿಲ್ಲಾದುದರಿಂದ ಅತ್ಯಂತ ಶೋಭನ.

ಶಿವನು ತನ್ನ ಭೃತ್ಯರನ್ನು ಕಾಪಾಡಲು ಕಾಲುದಾರಿಗಳಲ್ಲಿಯೂ ಸಂಚರಿಸುವನು. ಕೂಪದ ನೀರಿನಲ್ಲಿರುವ, ಲಿಂಗರೂಪಿಯಾದ ರುದ್ರನಿಗೆ ನಮಸ್ಕಾರ. ನೀರು ಹರಿದು ಹೋಗಿರುವ ಪ್ರದೇಶದಲ್ಲಿರುವ ರುದ್ರನಿಗೆ ನಮಸ್ಕಾರ.

ಬಾವಿಯ, ಗುಂಡಿಯ, ಮಳೆಯ ನೀರಿನ, ಸಮುದ್ರದ ನೀರಿನ ಮತ್ತು ಭೂಮಿಯ ಮೇಲೆ ಉಕ್ಕುವ ನೀರಿನ ರೂಪದ ರುದ್ರನಿಗೆ ನಮಸ್ಕಾರ.

# ನಮೋ ವಾಸ್ತ್ವ್ಯಾಯ ಚ ವಾಸ್ತುಪಾಯ ಚ ॥ ೧೬–7 ॥

[ವೈಶಂತಾಯ ಚ ತ್ರಿಗ್ಂಶಚ್ಚ ॥]

---

ನಮಃ। ವಾಸ್ತ್ವ್ಯಾಯ। ಚ। ವಾಸ್ತುಪಾಯೇತಿ ವಾಸ್ತು–ಪಾಯ। ಚ॥ (೧೬)॥

---

| ಮಂತ್ರ | ವಿನಿಯೋಗ |
|---|---|
| ನಮೋ ವಾಸ್ತ್ವ್ಯಾಯ...ಚ॥ | ಶತರುದ್ರೀಯಹವನ/ರುದ್ರನ ಲೀಲಾಮೂರ್ತಿಗಳ ನಮನಕ್ಕಾಗಿ. |

ಪದಶಃ ಅರ್ಥ– ಸಾ. ಭಾ. ——————

▲ **ವಾಸ್ತ್ವ್ಯಾಯ ಚ**=ಧನ, ಕನಕ, ಗೋವು, ಅಶ್ವ ಮುಂತಾದ ವಸ್ತುಗಳೆಂಬ ಕಾರ್ಯರೂಪದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ವಾಸ್ತುಪಾಯ ಚ**=ಗೃಹನಿರ್ಮಾಣಪ್ರದೇಶದ ಪಾಲಕನಾದ ರುದ್ರನಿಗೆ; ನಮಃ=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ. ——————

▲ **ವಾಸ್ತ್ವ್ಯಾಯ ಚ**=ಗೋ–ಅಶ್ವಾದಿಧನಗಳಿಗೆ ಸಂಬಂಧಿಸಿದ ಧನಪ್ರದನಾದ/ವಾಸ್ತುವಿನಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ವಾಸ್ತುಪಾಯ ಚ**=ಗೃಹನಿರ್ಮಾಣಪ್ರದೇಶವನ್ನು ಕಾಯುವ/ಆ ಪ್ರದೇಶದ ಒಡೆಯನಾದ ರುದ್ರನಿಗೆ; ನಮಃ=ನಮಸ್ಕಾರ.

——————: ಭಾವಾರ್ಥ– ಸಾ. ಭಾ. : ——————

ರುದ್ರನು ಗೋ–ಅಶ್ವ ಮುಂತಾದವುಗಳಲ್ಲಿ ಕಾರ್ಯರೂಪನಾಗಿ ಇರುವನು. ಅವನಿಗೆ ನಮಸ್ಕಾರ. ಮನೆಯನ್ನು ನಿರ್ಮಿಸುವ ಭೂಮಿಯು ವಾಸ್ತು. ಅದನ್ನು ಕಾಪಾಡುವ ರೂಪದಲ್ಲಿರುವ ರುದ್ರನಿಗೆ ನಮಸ್ಕಾರ.

ಗೋವು–ಅಶ್ವ ಮುಂತಾದವು ವಾಸ್ತುಗಳೆನಿಸಿಕೊಳ್ಳುತ್ತವೆ. ಅವುಗಳಲ್ಲಿ ಕಾರ್ಯರೂಪನಾಗಿರುವ ರುದ್ರನಿಗೂ, ಗೃಹನಿರ್ಮಾಣಪ್ರದೇಶದ ಪಾಲಕನಾದ ರುದ್ರನಿಗೂ ನಮಸ್ಕಾರ.

——————: ಭಾವಾರ್ಥ– ಭ. ಭಾ. ಭಾ. : ——————

ಮೋಡಗಳಲ್ಲಿರುವ ನೀರಿನ ರೂಪದ ರುದ್ರನಿಗೂ, ಮಿಂಚು ಹೊಳೆಯುವಾಗ ಅದರೊಡನೆ ಸಂಚರಿಸುವ '**ವಿದ್ಯುತ್ಯ**' ಎಂಬ ಹೆಸರಿನ ನೀರಿನಲ್ಲಿ ಇರುವ ಈಶ್ವರನಿಗೂ ನಮಸ್ಕಾರ.

ನೀರಿಲ್ಲದೆ ಹೊಳೆಯುವ ಶರದೃತುವಿನ ಮೋಡದಂತೆ ಇರುವ ಅಥವಾ ಬಿಸಿ ನೀರಿನಲ್ಲಿ ಇರುವ ಈಶ್ವರನಿಗೆ ನಮಸ್ಕಾರ.

ಬಿಸಿಲಿನಿಂದ ಕೂಡಿದ ಮಳೆಯಲ್ಲಿರುವ ರುದ್ರನಿಗೆ ನಮಸ್ಕಾರ. ಬಿರುಗಾಳಿಯ ಮಳೆಯಲ್ಲಿರುವ ರುದ್ರನಿಗೂ, ಪ್ರಳಯಕಾಲದ ರೇಷ್ಮವೆಂಬ ವಾಯುವಿನಲ್ಲಿರುವ, ಗಾಳಿಯು ಎಬ್ಬಿಸುವ ಧೂಳುಗಳಲ್ಲಿ ಇರುವ ರುದ್ರನಿಗೆ ನಮಸ್ಕಾರ.

ವಸ್ತುವೆಂದರೆ ಧನ, ಗೋವು, ಅಶ್ವ ಮುಂತಾದವು. ಅಲ್ಲಿ ಕಾರ್ಯರೂಪವಾಗಿ ಇರುವವನು ರುದ್ರನು. ಅವನಿಗೆ

ನಮಸ್ಕಾರ. ವಾಸ್ತುವಿನಲ್ಲಿ ಇದ್ದು ಕಾಯುವವನೂ, ವಾಸ್ತುವಿನ ಒಡೆಯನೂ ಆದ ರುದ್ರನಿಗೆ ನಮಸ್ಕಾರ. ರುದ್ರನು ವಾಸ್ತುಪತಿಯೆಂಬುದಾಗಿ **'ನಮೋ ರುದ್ರಾಯ ವಾಸ್ತೋಷ್ಪತಯೇ'** [ತೈ. ಬ್ರಾ. 3.7.9] **'ರುದ್ರಃ ಖಲು ವೈ ವಾಸ್ತೋಷ್ಪತಿಃ'** [ತೈ.ಸಂ.3.4.10] ಎಂಬ ಶ್ರುತಿವಚನಗಳು ತಿಳಿಸುತ್ತಿವೆ.

ಎಲ್ಲ ಆಕೃತಿಗಳಲ್ಲಿಯೂ ರುದ್ರನ ಎಂಟು ಮೂರ್ತಿಗಳಲ್ಲಿ ಸಂಭವಿಸುವ ಯಾವ ಮೂರ್ತಿಯು ಇರುವುದೋ ಅದನ್ನು ಪರಿಗಣಿಸಿ ಸ್ತುತಿಸಲಾಗಿದೆ.

# ॥ ಅಷ್ಟಮೋಽನುವಾಕಃ ॥

## ನಮಸ್ಸೋಮಾಯ ಚ ರುದ್ರಾಯ ಚ

ನಮಃ । ಸೋಮಾಯ । ಚ । ರುದ್ರಾಯ । ಚ ।

**ಪೀಠಿಕೆ–ಸಾ. ಭಾ:–** ಈ ಎಂಟನೆಯ ಅನುವಾಕದಲ್ಲಿ ಹಿಂದಿನ ಏಳನೆಯ ಅನುವಾಕದಂತೆಯೇ ಮತ್ತೆ ಕೆಲವು ಅನ್ಯತೋನಮಸ್ಕಾರರೂಪವಾದ ಮಂತ್ರಗಳು ಹೇಳಲ್ಪಟ್ಟಿವೆ.

**ಪೀಠಿಕೆ–ಭ. ಭಾ. ಭಾ:–** ಈ ಅನುವಾಕದ **'ನಮಃ ಸೋಮಾಯ ಚ'** ಎಂದು ಆರಂಭವಾಗಿ ಮುಂದಿನ ಅನುವಾಕದ **'ನಮೋ ವಃ ಕಿರಿಕೇಭ್ಯಃ'** ಎಂಬಲ್ಲಿಯವರೆಗೆ ಒಂದು ಮಂತ್ರ. ಈ ಮಂತ್ರಕ್ಕೆ ಭಗವಂತನೇ ಋಷಿ. ಛಂದಸ್ಸು ಮಹಾನುಷ್ಟುಪ್. ಇಲ್ಲಿ ರುದ್ರದೇವನ ಅನುಗ್ರಾಹಕರೂಪಗಳನ್ನು ಪ್ರದರ್ಶಿಸಲಾಗಿದೆ. ಇಲ್ಲಿ ಪುನರುಕ್ತವಾಗಿ ಬಂದಿರುವ ರುದ್ರ–ಪಶುಪತಿ ಮೊದಲಾದ ಶಬ್ದಗಳು ಪರಮಾತ್ಮನ ಅನುಗ್ರಾಹಕರೂಪವನ್ನು ಪ್ರಸಿದ್ಧಿಪಡಿಸುವುದಕ್ಕಾಗಿಯೇ. ಅನುಗ್ರಹಿಸುವ ಸಮಯದಲ್ಲಿ ರುದ್ರನು ಉಮಾಸಹಿತನಾಗಿರುತ್ತಾನೆ.

| ಮಂತ್ರ | ವಿನಿಯೋಗ |
|---|---|
| ನಮಸ್ಸೋಮಾಯ...ಚ ॥ | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

ಪದಶಃ ಅರ್ಥ– ಸಾ. ಭಾ.

🔔 **ಸೋಮಾಯ ಚ**=ಉಮಾಸಹಿತನಾದ ಶಿವನಿಗೆ; **ನಮಃ**=ನಮಸ್ಕಾರ. **ರುದ್ರಾಯ ಚ**=ಅಳುವಿಕೆಗೆ ಕಾರಣವಾದ ದುಃಖವನ್ನು ದೂರ ಮಾಡುವ ರುದ್ರನಿಗೆ; ನಮಃ=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

🔔 **ಸೋಮಾಯ ಚ**=ಉಮಾಸಹಿತನಾದ/ಚಂದ್ರರೂಪನಾದ/ಸೋಮಯಾಗಾತ್ಮಕನಾದ ರುದ್ರನಿಗೆ; **ನಮಃ**=ನಮಸ್ಕಾರ. **ರುದ್ರಾಯ ಚ**=ಪ್ರಾಣಿಗಳನ್ನು ರೋದಿಸುವಂತೆ ಮಾಡುವ/ಸಂಸಾರದುಃಖವನ್ನು ದೂರಮಾಡುವ ರುದ್ರನಿಗೆ; ನಮಃ=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ಉಮಾಸಹಿತನಾದ ರುದ್ರನಿಗೂ, ದುಃಖವನ್ನು ದೂರಮಾಡುವ ರುದ್ರನಿಗೂ, ಉದಯಕಾಲದಲ್ಲಿ ಅತ್ಯಂತ ಕೆಂಪಾಗಿ ತಾಮ್ರನೆನಿಸುವ, ಉದಿಸಿದ ಮೇಲೆ ಎಳೆಗೆಂಪು ಬಣ್ಣದಿಂದ ಕೂಡಿದ *ಸೂರ್ಯರೂಪನಾದ ರುದ್ರನಿಗೆ ನಮಸ್ಕಾರ.

* ಸೂರ್ಯನು ರುದ್ರರೂಪನೆಂದು ಈ ಪ್ರಪಾಠಕದ ಪ್ರಥಮಾನುವಾಕದಲ್ಲಿದೆ. ಅಸೌ ಯಸ್ತಾಮ್ರಃ....ಮೃಡಯಾತಿ ನಃ ।

**ನಮಸ್ತಾಮ್ರಾಯ ಚಾರುಣಾಯ ಚ ನಮಶ್ಶಂಗಾಯ ಚ ಪಶುಪತಯೇ ಚ ನಮ ಉಗ್ರಾಯ ಚ ಭೀಮಾಯ ಚ**

---

ನಮಃ । ತಾಮ್ರಾಯ । ಚ । ಅರುಣಾಯ । ಚ । ನಮಃ । ಶಂಗಾಯ । ಚ । ಪಶುಪತಯ ಇತಿ ಪಶು–ಪತಯೇ । ಚ ।

ನಮಃ । ಉಗ್ರಾಯ । ಚ । ಭೀಮಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮಸ್ತಾಮ್ರಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಶ್ಶಂಗಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮ ಉಗ್ರಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.** ——————

▲ **ತಾಮ್ರಾಯ ಚ**=ಆದಿತ್ಯರೂಪನಾಗಿ ಉದಯಕಾಲದಲ್ಲಿ ಕೆಂಪಾಗಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅರುಣಾಯ ಚ**=ಎಳೆಗೆಂಪಾಗಿರುವ ಆದಿತ್ಯರೂಪಿರುದ್ರನಿಗೆ; ನಮಃ=ನಮಸ್ಕಾರ. ▲ **ಶಂಗಾಯ ಚ**= ಸುಖವನ್ನು ಹೊಂದಿಸಿಕೊಡುವ ರುದ್ರನಿಗೆ; **ನಮಃ**=ನಮಸ್ಕಾರ. **ಪಶುಪತಯೇ ಚ**=ಪಶುಗಳ ಸ್ವಾಮಿ ಯಾದ ರುದ್ರನಿಗೆ; ನಮಃ=ನಮಸ್ಕಾರ. ▲ **ಉಗ್ರಾಯ ಚ**=ಧರ್ಮವಿರೋಧಿಗಳನ್ನು ನಾಶಪಡಿಸಲು ಕೋಪ ದಿಂದ ಕೂಡಿರುವ ಉಗ್ರನಾದ ರುದ್ರನಿಗೆ; **ನಮಃ**=ನಮಸ್ಕಾರ. **ಭೀಮಾಯ ಚ**=ದರ್ಶನಮಾತ್ರದಿಂದಲೇ ವಿರೋಧಿಗಳನ್ನು ಭಯಪಡಿಸುವ ಭೀಮನಾದ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ——————

▲ **ತಾಮ್ರಾಯ ಚ**=ಆದಿತ್ಯರೂಪನಾಗಿ ಕೆಂಪಾಗಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅರುಣಾಯ ಚ**=ಎಳೆಗೆಂಪು ಬಣ್ಣದ ಆದಿತ್ಯರೂಪನಾದ ರುದ್ರನಿಗೆ; ನಮಃ=ನಮಸ್ಕಾರ. ▲ **ಶಂಗಾಯ ಚ**=ಸುಖವನ್ನೇ ಉಂಟು ಮಾಡಿಕೊಡುವ ರುದ್ರನಿಗೆ; **ನಮಃ**=ನಮಸ್ಕಾರ. **ಪಶುಪತಯೇ ಚ**=ಪಶುಗಳ ಒಡೆಯನಾದ ವನಿಗೆ/ಪಾಪರೋಗಚೋರಾದಿಗಳಿಂದ ಜಗತ್ತನ್ನು ಕಾಪಾಡುವ/ಅಜ್ಞಾನಿಗಳಾದ [ಪಶುಗಳಾದ] ಮಾನವ ರನ್ನು ಜ್ಞಾನದಾನದಿಂದ ರಕ್ಷಿಸುವ ಶಿವನಿಗೆ; ನಮಃ=ನಮಸ್ಕಾರ. ▲ **ಉಗ್ರಾಯ ಚ**=ಪಾಪ–ರೋಗ– ನರಕಗಳಿಂದ ಆಕ್ರಮಿಸಲು ಅಶಕ್ಯನಾದ/ಅವುಗಳಿಂದ ಪಶುಗಳನ್ನು ಕಾಪಾಡುವ/ಅವುಗಳನ್ನು ಗೆಲ್ಲುವ ರುದ್ರನಿಗೆ; **ನಮಃ**=ನಮಸ್ಕಾರ. **ಭೀಮಾಯ ಚ**=ಪಾಪ–ರೋಗಾದಿಗಳಿಗೆ ಭಯವನ್ನುಂಟುಮಾಡುವ/ ಅವುಗಳಿಂದ ಭಕ್ತರನ್ನು ರಕ್ಷಿಸುವ ಭೀಮನಿಗೆ; ನಮಃ=ನಮಸ್ಕಾರ.

——————: **ತಾತ್ಪರ್ಯ– ಭ. ಭಾ. ಭಾ.** :——————

**ಉಮಾಸಹಿತನಾದ ಅಂತಹ ಸೋಮನಿಗೆ ನಮಸ್ಕಾರ. ಪಿತೃ–ದೇವ–ಮನುಷ್ಯರನ್ನು ತೃಪ್ತಿಪಡಿಸುವ ಚಂದ್ರರೂಪಧರ ನಾದ ಶಿವನಿಗೂ, ಮಾನವರನ್ನು ಅಭ್ಯುದಯದಲ್ಲಿ ಯೋಜಿಸುವ ಸೋಮಯಾಗಾತ್ಮಕನಾದ ರುದ್ರನಿಗೂ ನಮಸ್ಕಾರ.**

# ನಮೋ ಅಗ್ರೇವಧಾಯ ಚ ದೂರೇವಧಾಯ ಚ ನಮೋ ಹಂತ್ರೇ ಚ ಹನೀಯಸೇ ಚ

---

ನಮಃ । ಅಗ್ರೇವಧಾಯೇತ್ಯಗ್ರೇ-ವಧಾಯ । ಚ । ದೂರೇವಧಾಯೇತಿ ದೂರೇ-ವಧಾಯ । ಚ । ನಮಃ । ಹಂತ್ರೇ । ಚ । ಹನೀಯಸೇ । ಚ ।

---

| ಮಂತ್ರ | ವಿನಿಯೋಗ |
| --- | --- |
| **ನಮೋ ಅಗ್ರೇವಧಾಯ....ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮೋ ಹಂತ್ರೇ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

🔔 **ಅಗ್ರೇವಧಾಯ ಚ**=ಎದುರಿನಲ್ಲಿ ಇರುವ ಶತ್ರುಗಳನ್ನು ಸಂಹರಿಸುವ ರುದ್ರನಿಗೆ; **ನಮಃ**=ನಮಸ್ಕಾರ. **ದೂರೇವಧಾಯ ಚ**=ದೂರದೇಶದಲ್ಲಿಯೂ ಧರ್ಮವಿರೋಧಿಯನ್ನು ಕೊಲ್ಲಬಲ್ಲ ರುದ್ರನಿಗೆ; ನಮಃ= ನಮಸ್ಕಾರ. 🔔 **ಹಂತ್ರೇ ಚ**=ದೂರದಿಂದಲೇ ಅನಾಯಾಸವಾಗಿ ಶತ್ರುವನ್ನು ಸಂಹರಿಸುವ ಹಂತೃವಿಗೆ; **ನಮಃ**= ನಮಸ್ಕಾರ. **ಹನೀಯಸೇ ಚ**=ಪ್ರಳಯಕಾಲದಲ್ಲಿ ಎಲ್ಲರನ್ನೂ ಅತಿಶಯವಾಗಿ ಸಂಹರಿಸುವ ರುದ್ರನಿಗೆ; ನಮಃ= ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

🔔 **ಅಗ್ರೇವಧಾಯ ಚ**=ಎದುರಿಗೇ ಶತ್ರುಗಳನ್ನು ಸಂಹರಿಸುವ/ಮೊದಲೇ ಕೊಲ್ಲಬೇಕೆಂದಿರುವವರನ್ನು ಕೊಲ್ಲುವ ರುದ್ರನಿಗೆ; **ನಮಃ**=ನಮಸ್ಕಾರ. **ದೂರೇವಧಾಯ ಚ**=ದೂರಕಾಲದಲ್ಲಿಯೂ/ದೂರಕಾಲದಲ್ಲಿಯೂ ಧರ್ಮ ದ್ವೇಷಿಗಳನ್ನು ಸಂಹರಿಸುವ ರುದ್ರನಿಗೆ; ನಮಃ=ನಮಸ್ಕಾರ. 🔔 **ಹಂತ್ರೇ ಚ**=[ಕೊಲ್ಲುವವನು ರುದ್ರನ ಬಲದಿಂದಲೇ ಕೊಲ್ಲುವುದರಿಂದ ರುದ್ರನೇ ಹಂತೃ] ಇಂತಹ ಹಂತೃವಿಗೆ; **ನಮಃ**=ನಮಸ್ಕಾರ. **ಹನೀಯಸೇ ಚ**=ಅತಿಶಯವಾದ ಕೀರ್ತಿಯುಳ್ಳ ಸಂಹಾರಕನಾದ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಸುಖಪ್ರಾಪಕನಾದ ಶಿವನಿಗೆ ಮತ್ತು ಪಶುಗಳ ಒಡೆಯನಾದ ರುದ್ರನಿಗೆ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

ಸೋಮ ಎಂಬ ಪದಕ್ಕೆ ಹೀಗೆಯೇ ವ್ಯುತ್ಪತ್ತಿ [ಶಬ್ದದಿಂದ ಅರ್ಥವನ್ನು ನಿಶ್ಚಯಿಸುವ ಬಗೆ] ಎಂಬ ನಿಶ್ಚಯವಿಲ್ಲದಿರುವುದರಿಂದ **'ಸೋಮ'** ಎಂಬ ಪದಕ್ಕೆ ಅವಗ್ರಹವಿರುವುದಿಲ್ಲ. ಈ ವಿಷಯವನ್ನು **'ವ್ಯುತ್ಪತ್ತ್ಯನವಧಾರಣಾತ್ ನಾವಗೃಹ್ಯತೇ'** ಎಂಬ ವಚನದಿಂದ ತಿಳಿಸಿರುತ್ತಾರೆ. **'ಗಿರಿಶಂತೇತಿ ಗಿರಿ-ಶಂತ'** ಎಂಬುದು ಅವಗ್ರಹಕ್ಕೆ ಉದಾಹರಣೆ. ಇಲ್ಲಿ **'ಸೋಮ ಇತಿ ಸ-ಉಮಃ'** ಎಂಬುದಾಗಿ ಪದಪಾಠದಲ್ಲಿ ಅವಗ್ರಹವಿರುವುದಿಲ್ಲ. ಹೀಗೆಯೇ ಉಳಿದೆಡೆಯೂ ಅನ್ವಯಿಸಿಕೊಳ್ಳಬೇಕು.

# ನಮೋ ವೃಕ್ಷೇಭ್ಯೋ ಹರಿಕೇಶೇಭ್ಯೋ ನಮಸ್ತಾರಾಯ

ನಮಃ। ವೃಕ್ಷೇಭ್ಯಃ। ಹರಿಕೇಶೇಭ್ಯ ಇತಿ ಹರಿ–ಕೇಶೇಭ್ಯಃ। ನಮಃ। ತಾರಾಯ।

| ಮಂತ್ರ | ವಿನಿಯೋಗ |
|---|---|
| **ನಮೋ ವೃಕ್ಷೇಭ್ಯೋ...ಕೇಶೇಭ್ಯಃ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಸ್ತಾರಾಯ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಹರಿಕೇಶೇಭ್ಯಃ ವೃಕ್ಷೇಭ್ಯಃ**=ಕೇಶಗಳಂತಿರುವ ಹಸಿರಾದ ಎಲೆಗಳುಳ್ಳ ಕಲ್ಪವೃಕ್ಷರೂಪಿಯಾದ ರುದ್ರನಿಗೆ; **ನಮಃ**=ನಮಸ್ಕಾರ. ▲ **ತಾರಾಯ**=ಪ್ರಣವಪ್ರತಿಪಾದ್ಯನಾದ ರುದ್ರನಿಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಹರಿಕೇಶೇಭ್ಯಃ ವೃಕ್ಷೇಭ್ಯಃ**=ಹಸಿರು ಬಣ್ಣದಿಂದ ಕೂಡಿ ಕೇಶಗಳಿಂದ ಕೂಡಿದಂತಿರುವ ವೃಕ್ಷಗಳ ರೂಪನಾದ ರುದ್ರನಿಗೆ; **ನಮಃ**=ನಮಸ್ಕಾರ. ▲ **ತಾರಾಯ**=ಸಂಸಾರಸಾಗರದಿಂದ ಉದ್ಧಾರ ಮಾಡುವವನಾಗಿ ತಾರನೆನಿಸಿರುವ ರುದ್ರನಿಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಧರ್ಮವಿರೋಧಿಗಳನ್ನು ನಾಶಪಡಿಸಲು ಕ್ರೋಧದಿಂದ ಕೂಡಿರುವ ರುದ್ರನಿಗೆ ನಮಸ್ಕಾರ. ದರ್ಶನದಿಂದಲೇ ವಿರೋಧಿಗಳನ್ನು ಭಯಪಡಿಸುವ ಭೀಮನಿಗೆ ನಮಸ್ಕಾರ. ಎದುರಿನಲ್ಲಿ ಅಥವಾ ದೂರದಲ್ಲಿರುವ ಶತ್ರುಗಳನ್ನು ಅನಾಯಾಸದಿಂದ ಸಂಹರಿಸುವ ರುದ್ರನಿಗೆ ನಮಸ್ಕಾರ.

ನಿಜವಾಗಿಯೂ ಸಂಹರಿಸುವವನು ಪರಮೇಶ್ವರನೇ. ಇದನ್ನೇ ಭಗವದ್ಗೀತೆಯಲ್ಲಿ ಭಗವಂತನಾದ ಕೃಷ್ಣಪರಮಾತ್ಮನು **'ಮಯ್ಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್'** [ಭಗವದ್ಗೀತಾ 11.33] ಎಂದು ಅರ್ಜುನನಿಗೆ ಹೇಳುತ್ತಾನೆ. ಹೀಗಾಗಿ ಅನಾಯಾಸದಿಂದ ಸಂಹರಿಸುವ ಸಂಹಾರಕರೂಪನಾದ ಹಂತೃ–ಹನೀಯಸನಾದ ರುದ್ರನಿಗೆ ನಮಸ್ಕಾರವು.

**: ತಾತ್ಪರ್ಯ– ಭ. ಭಾ. ಭಾ. :**

ಮಹಾಸಂಹಾರಕಾಲದಲ್ಲಿ ಪ್ರಾಣಿಗಳನ್ನು ರೋದಿಸುವಂತೆ ಮಾಡುವ ರುದ್ರನು ಸಂಸಾರದುಃಖವನ್ನು ದೂರಮಾಡುವವನು. ಇಂತಹ ರುದ್ರನಿಗೆ ನಮಸ್ಕಾರ.

ರುದ್ರಶಬ್ದದ ಅನೇಕ ಅರ್ಥಗಳು ಮೊದಲನೆಯ ಅನುವಾಕದಲ್ಲಿ ಹೇಳಲ್ಪಟ್ಟಿವೆ.

ಆದಿತ್ಯರೂಪದಿಂದ ರುದ್ರನು ಜಗತ್ತನ್ನು ಎಚ್ಚರಗೊಳಿಸಿ, ಅನುಗ್ರಹಿಸುತ್ತಾನೆ. ಅವರ ಕರ್ಮಗಳನ್ನು ಸಾಕ್ಷಾತ್ಕರಿಸುತ್ತಾನೆ. ಅಂತಹ ರುದ್ರನಿಗೆ ನಮಸ್ಕಾರ.

ಸುಖವನ್ನೇ ಉಂಟು ಮಾಡಿಕೊಡುವ ರುದ್ರನಿಗೂ, ಪಶುಗಳಿಗೆ ಸ್ವಾಮಿಯಾದವನಿಗೂ, ಭಯಕ್ಕೆ ಕಾರಣವಾದ ಪಾಪ–ರೋಗ ಮುಂತಾದವುಗಳಿಂದ ಪ್ರಪಂಚವನ್ನು ರಕ್ಷಿಸುವ, ಮಾನವರು ಅಜ್ಞಾನದಿಂದ ಪಶುಗಳೆನಿಸಿರುವಾಗ

**ನಮಶ್ಶಂಭವೇ ಚ ಮಯೋಭವೇ ಚ ನಮಶ್ಶಂಕರಾಯ ಚ ಮಯಸ್ಕರಾಯ ಚ ನಮಃ ಶಿವಾಯ ಚ ಶಿವತರಾಯ ಚ [..ತರಾಯ ಚ(೧೭)]**

---

ನಮಃ । ಶಂಭವ ಇತಿ ಶಮ್-ಭವೇ । ಚ । ಮಯೋಭವ ಇತಿ ಮಯಃ-ಭವೇ । ಚ । ನಮಃ । ಶಂಕರಾಯೇತಿ ಶಮ್-ಕರಾಯ । ಚ । ಮಯಸ್ಕರಾಯೇತಿ ಮಯಃ-ಕರಾಯ । ಚ । ನಮಃ । ಶಿವಾಯ । ಚ । ಶಿವತರಾಯೇತಿ ಶಿವ-ತರಾಯ । ಚ । (೧೭) ।

---

| ಮಂತ್ರ | ವಿನಿಯೋಗ |
|---|---|
| **ನಮಶ್ಶಂಭವೇ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಶ್ಶಂಕರಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಶ್ಶಿವಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶಂಭವೇ ಚ=**ಐಹಿಕಸುಖವನ್ನುಂಟುಮಾಡುವ ಶಂಭುವಿಗೆ; **ನಮಃ=**ನಮಸ್ಕಾರ. **ಮಯೋಭವೇ ಚ=**ಆಮುಷ್ಮಿಕಸುಖವನ್ನುಂಟುಮಾಡುವ ಮಯೋಭುವೆಂಬುದಾಗಿ ಕರೆಯಲ್ಪಡುವ ರುದ್ರನಿಗೆ; ನಮಃ= ನಮಸ್ಕಾರ. ▲ **ಶಂಕರಾಯ ಚ=**ತಂದೆಯೇ ಮೊದಲಾದವರಂತೆ ವಿಷಯಸುಖಗಳಿಗೆ ಕಾರಣನಾಗುವ ಶಂಕರನಿಗೆ; **ನಮಃ=**ನಮಸ್ಕಾರ. **ಮಯಸ್ಕರಾಯ ಚ=**ಆಚಾರ್ಯ-ಶಾಸ್ತ್ರಾದಿರೂಪದಿಂದ ಮೋಕ್ಷ ಸುಖಕ್ಕೆ ಕಾರಣನಾದವನಿಗೆ; ನಮಃ=ನಮಸ್ಕಾರ. ▲ **ಶಿವಾಯ ಚ=**ಸ್ವಯಂ ನಿಷ್ಕಲ್ಮಷನಾಗಿ ಮಂಗಲ ಸ್ವರೂಪನಾಗಿರುವ ಶಿವನಿಗೆ; **ನಮಃ=**ನಮಸ್ಕಾರ. **ಶಿವತರಾಯ ಚ=**ಅತಿಶಯವಾಗಿ ಶಿವನಾಗಿ ಭಕ್ತರನ್ನೂ, ಭಕ್ತರಲ್ಲದವರನ್ನೂ ನಿಷ್ಕಲ್ಮಷರನ್ನಾಗಿ ಮಾಡುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶಂಭವೇ ಚ=**ಅಭ್ಯುದಯರೂಪವಾದ ಅಥವಾ ದುಃಖಶಮನರೂಪವಾದ ಸುಖವನ್ನುಂಟುಮಾಡುವ ಶಂಭುವಿಗೆ; **ನಮಃ=**ನಮಸ್ಕಾರ. **ಮಯೋಭವೇ ಚ=**ನಿಃಶ್ರೇಯಸರೂಪವಾದ ಅಥವಾ ಫಲಪ್ರಾಪ್ತಿಗಳಿಂದ ಉಂಟಾದ ಸುಖವನ್ನುಂಟುಮಾಡುವವನಿಗೆ; ನಮಃ=ನಮಸ್ಕಾರ. ▲ **ಶಂಕರಾಯ ಚ=**ಸರ್ವಪ್ರಾಣಿಗಳಿಗೂ ಸುಖವನ್ನೇ ಉಂಟುಮಾಡುವ ಸ್ವಭಾವವುಳ್ಳ ಶಂಕರನಿಗೆ/ಸುಖವನ್ನೇ ಉಂಟುಮಾಡುವವನಿಗೆ; **ನಮಃ=** ನಮಸ್ಕಾರ. **ಮಯಸ್ಕರಾಯ ಚ=**ಆಮುಷ್ಮಿಕಸುಖವನ್ನು/ದುಃಖಸಮ್ಮಿಶ್ರವಲ್ಲದ ಸುಖವನ್ನೀಯುವ ಶಿವ ನಿಗೆ; ನಮಃ=ನಮಸ್ಕಾರ. ▲ **ಶಿವಾಯ ಚ=**ಅಕಲ್ಮಷನಾಗಿ ನಿಸ್ತ್ರೈಗುಣ್ಯನಾಗಿರುವ ಶಿವನಿಗೆ; **ನಮಃ=**ನಮಸ್ಕಾರ. **ಶಿವತರಾಯ ಚ=**ವ್ಯತ್ಯಾಸವಿಲ್ಲದೆ ಎಲ್ಲರಿಗೂ ಮಂಗಲವನ್ನುಂಟುಮಾಡುವ ಶಿವತರನಿಗೆ; ನಮಃ=ನಮಸ್ಕಾರ.

## ನಮಸ್ತೀರ್ಥ್ಯಾಯ ಚ ಕೂಲ್ಯಾಯ ಚ ನಮಃ ಪಾರ್ಯಾಯ ಚಾವಾರ್ಯಾಯ ಚ

---

ನಮಃ । ತೀರ್ಥ್ಯಾಯ । ಚ । ಕೂಲ್ಯಾಯ । ಚ । ನಮಃ । ಪಾರ್ಯಾಯ । ಚ । ಅವಾರ್ಯಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮಸ್ತೀರ್ಥ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಃ ಪಾರ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.** ———

▲ **ತೀರ್ಥ್ಯಾಯ ಚ**=ಪ್ರಯಾಗ ಮುಂತಾದ ತೀರ್ಥಗಳಲ್ಲಿ ಸನ್ನಿಹಿತನಾಗಿರುವ ಶಿವನಿಗೆ; **ನಮಃ**= ನಮಸ್ಕಾರ. **ಕೂಲ್ಯಾಯ ಚ**=ಕಾವೇರಿ ಮುಂತಾದ ನದಿಗಳ ತೀರಗಳಲ್ಲಿ ಲಿಂಗರೂಪದಿಂದ ಪ್ರತಿಷ್ಠಿತನಾಗಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಪಾರ್ಯಾಯ ಚ**=ಸಂಸಾರದ ಪರತೀರದಲ್ಲಿ ಮೋಕ್ಷಾರ್ಥಿಗಳಿಂದ ಧ್ಯೇಯನಾದ ಪಾರ್ಯನಿಗೆ; **ನಮಃ**=ನಮಸ್ಕಾರ. **ಅವಾರ್ಯಾಯ ಚ**=ಈಚೆಯ ತೀರದಲ್ಲಿ ಐಹಿಕ ಸುಖಾಪೇಕ್ಷಿಗಳಿಗೆ ಕಾಮ್ಯಪ್ರದನಾಗಿರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ———

▲ **ತೀರ್ಥ್ಯಾಯ ಚ**=ಪ್ರಯಾಗಾದಿತೀರ್ಥಗಳಲ್ಲಿ ಸಾನ್ನಿಧ್ಯವನ್ನು ಹೊಂದಿರುವ/ಶಿವಶರಣರ ಪವಿತ್ರ ಸಮುದಾಯದಲ್ಲಿದ್ದುಕೊಂಡು ಜಗತ್ತನ್ನು ಅನುಗ್ರಹಿಸುವ ಶಿವನಿಗೆ; **ನಮಃ**=ನಮಸ್ಕಾರ. **ಕೂಲ್ಯಾಯ ಚ**=ಮಹಾನದಿಗಳ ತೀರದಲ್ಲಿ ಲಿಂಗರೂಪದಿಂದ ಪ್ರತಿಷ್ಠಿತನಾಗಿರುವ ಶಿವನಿಗೆ;/ಕಾಲಾದಿತೀರದಲ್ಲಿರುವ /ಅಂತಿಮವಾಗಿ ಇರುವ ಶಿವನಿಗೆ; ನಮಃ=ನಮಸ್ಕಾರ. ▲ **ಪಾರ್ಯಾಯ ಚ**=ನದಿಗಳ ಆಚೆಯ ತೀರದಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಅವಾರ್ಯಾಯ ಚ**=ನದಿಗಳ ಈ ಕಡೆಯ ತೀರದಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**ಕೇಶಗಳಂತೆ ಇರುವ ಹಸಿರಾದ ಎಲೆಗಳುಳ್ಳ ಕಲ್ಪವೃಕ್ಷ–ಅಶ್ವತ್ಥಾದಿವೃಕ್ಷರೂಪನಿಗೆ ನಮಸ್ಕಾರ.**

**ಓಂಕಾರದಿಂದ ಪ್ರತಿಪಾದ್ಯನಾಗಿರುವ ರುದ್ರನಿಗೆ ನಮಸ್ಕಾರ.**

**ಐಹಿಕಸುಖವನ್ನುಂಟುಮಾಡುವ ಶಂಭುವಿಗೂ, ಮೋಕ್ಷಸುಖವನ್ನು ಉಂಟುಮಾಡುವ ಮಯೋಭುವನಿಗೂ ನಮಸ್ಕಾರ.**

**: ತಾತ್ಪರ್ಯ– ಭ. ಭಾ. ಭಾ. :**

**ಜ್ಞಾನವನ್ನು ಅನುಗ್ರಹಿಸಿ, ರಕ್ಷಿಸುವ ಶಿವನಿಗೆ ನಮಸ್ಕಾರಗಳು.**

**ಪಾಪ–ರೋಗ–ನರಕಗಳಿಂದ ಆಕ್ರಮಿಸಲು ಅಶಕ್ಯನಾದ, ಅವುಗಳಿಗೇ ಭಯವನ್ನುಂಟುಮಾಡುವ, ಭಕ್ತರನ್ನು ರಕ್ಷಿಸುವ ಯಜಮಾನಮೂರ್ತಿಯ ಅಧಿಷ್ಠಾತೃವಾದ ರುದ್ರನಿಗೆ ನಮಸ್ಕಾರ.**

**ಕೊಲ್ಲಬೇಕೆಂದು ಬಯಸುವವರನ್ನು ಮೊದಲೇ ಸಂಹರಿಸುವ, ದೂರದೇಶ ಅಥವಾ ಕಾಲದಲ್ಲಿದ್ದರೂ ಸಂಹಾರಕನಾದ ರುದ್ರನಿಗೆ ನಮಸ್ಕಾರ.**

# ನಮಃ ಪ್ರತರಣಾಯ ಚೋತ್ತರಣಾಯ ಚ

ನಮಃ । ಪ್ರತರಣಾಯೇತಿ ಪ್ರ-ತರಣಾಯ । ಚ । ಉತ್ತರಣಾಯೇತ್ಯುತ್-ತರಣಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮಃ ಪ್ರತರಣಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

**ಪ್ರತರಣಾಯ ಚ**=ಪ್ರಶಸ್ತವಾದ ಮಂತ್ರಜಪಾದಿರೂಪದಿಂದ ಪಾಪಗಳಿಂದ ದಾಟಿಸುವ ನಾವೆಯಂತಿರುವ ಶಿವನಿಗೆ; **ನಮಃ**=ನಮಸ್ಕಾರ. **ಉತ್ತರಣಾಯ ಚ**=ತತ್ತ್ವಜ್ಞಾನದಿಂದ ಇಡೀ ಸಂಸಾರಸಮುದ್ರದಿಂದ ಮೇಲಕ್ಕೆ ಉದ್ಧರಿಸುವವನಾದ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

**ಪ್ರತರಣಾಯ ಚ**=ಸಂಸಾರದಲ್ಲಿ ನಾವೆಯಂತಿರುವ/ಉತ್ತಮಜನ್ಮವನ್ನು ಕರುಣಿಸುವ ಶಿವನಿಗೆ; **ನಮಃ**=ನಮಸ್ಕಾರ. **ಉತ್ತರಣಾಯ ಚ**=ಈ ಸಂಸಾರಸಮುದ್ರದಿಂದ ದೂರ ಹೋಗುವಂತೆ ಮಾಡಿ ಉದ್ಧರಿಸುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ವಿಷಯಸುಖಗಳನ್ನು ಹೊಂದಿಸಿಕೊಟ್ಟು ತಂದೆಯೇ ಮೊದಲಾದವರಂತೆ ಇರುವ, ಮೋಕ್ಷಸುಖವನ್ನು ಅನುಗ್ರಹಿಸುವ ಆಚಾರ್ಯರು, ಶಾಸ್ತ್ರಗಳಂತೆ ಇರುವ, ನಿಷ್ಕಲ್ಮಷಸ್ವರೂಪನಾಗಿ ಮಂಗಲನೂ, ವ್ಯತ್ಯಾಸವಿಲ್ಲದಂತೆ ಸರ್ವೋದ್ಧಾರಕನೂ ಆದ ಶಿವನಿಗೆ ನಮಸ್ಕಾರ. ಪುಣ್ಯತೀರ್ಥಗಳಲ್ಲಿಯೂ ನದೀತೀರದ ಪ್ರತಿಷ್ಠಿತ ಲಿಂಗಗಳಲ್ಲಿಯೂ ಇರುವ ಶಿವನಿಗೆ ನಮಸ್ಕಾರ.**

**ಸಂಸಾರವೆಂಬ ಸಮುದ್ರದ ಎರಡು ತೀರಗಳಲ್ಲಿ ಆಚೆಯ ತೀರವನ್ನು ಮುಮುಕ್ಷುಗಳು ಆಶ್ರಯಿಸುವರು. ಅವರು ಮೋಕ್ಷಪ್ರಾಪ್ತಿಗಾಗಿ ಶಿವನನ್ನು ಧ್ಯಾನಿಸುವರು. ಈಚೆಯ ತೀರದಲ್ಲಿ ಈ ಲೋಕದ ಸುಖಪ್ರಾಪ್ತಿಗಾಗಿಯೂ ಕೆಲವರು ಧ್ಯಾನಿಸುವರು. ಅವರಿಬ್ಬರನ್ನೂ ಅನುಗ್ರಹಿಸುವ ಶಿವನಿಗೆ ನಮಸ್ಕಾರ.**

**: ತಾತ್ಪರ್ಯ- ಭ. ಭಾ. ಭಾ. :**

**ಕೊಲ್ಲುವವನು ರುದ್ರನ ಬಲದಿಂದಲೇ ಸಂಹರಿಸುವನು. ಅವನು ಲೋಕದಲ್ಲಿ ಪ್ರತಾಪಶಾಲಿಯೆಂದು ಕೀರ್ತಿಯನ್ನು ಹೊಂದುತ್ತಾನೆ. ಹೀಗಾಗಿ ರುದ್ರನು ಸರ್ವಪಾಲಕನೂ, ಸರ್ವಸಂಹಾರಕನೂ ಆಗಿರುವನು. ಅವನಿಗೆ ನಮಸ್ಕಾರ.**

**ಭಕ್ತರ ಅನುಗ್ರಹಕ್ಕಾಗಿ ವೃಕ್ಷಾದಿರೂಪದಿಂದಲೂ ರುದ್ರನು ಆವಿರ್ಭವಿಸಿ ಜಗತ್ತನ್ನು ಅನುಗ್ರಹಿಸುತ್ತಾನೆ. ಅಂತಹ ರುದ್ರನಿಗೆ ನಮಸ್ಕಾರ. ಕಲ್ಪವೃಕ್ಷದಂತೆ ಸರ್ವಾನುಗ್ರಹವನ್ನು ಮಾಡುವವನು ರುದ್ರನು.**

**ಜಾಬಾಲೋಪನಿಷತ್ತಿನಲ್ಲಿ 'ಅತ್ರ ಹಿ ಜಂತೋಃ ಪ್ರಾಣೇಷು ಉತ್ಕ್ರಮಮಾಣಸ್ಯ ರುದ್ರಸ್ತಾರಕಂ ಬ್ರಹ್ಮ ವ್ಯಾಚಷ್ಟೇ' [ಜಾಬಾಲೋಪನಿಷತ್.1] ಪ್ರಾಣಗಳು ನಿರ್ಗಮಿಸುತ್ತಿರುವ ಜಂತುವನ್ನು ಸಂಸಾರಸಾಗರದಿಂದ ದಾಟಿಸುವವನು ತಾರ=ರುದ್ರ ಎಂದಿದೆ. ಇಂತಹ ತಾರನಿಗೆ ನಮಸ್ಕಾರ.**

**ಸುಖಕ್ಕೆ ಕಾರಣನಾಗಿ ಶಂಭು ಎಂಬ ಹೆಸರನ್ನು ಹೊಂದಿರುವ ರುದ್ರನಿಗೂ, ಸುಖಮಯನಾಗಿಯೇ ಇರುವ ರುದ್ರನಿಗೂ, ಸುಖವನ್ನೇ ಹೊಂದಿಸಿಕೊಡುವವನಿಗೂ, ಬಗೆಬಗೆಯ ಸುಖಗಳನ್ನು ಕಾಣುವವನಿಗೂ ನಮಸ್ಕಾರ.**

# ನಮ ಆತಾರ್ಯಾಯ ಚಾಽಽಲಾದ್ಯಾಯ ಚ

ನಮಃ। ಆತಾರ್ಯಾಯೇತ್ಯಾ–ತಾರ್ಯಾಯ। ಚ। ಆಲಾದ್ಯಾಯೇತ್ಯಾ–ಲಾದ್ಯಾಯ। ಚ।

| ಮಂತ್ರ | ವಿನಿಯೋಗ |
|---|---|
| **ನಮ ಆತಾರ್ಯಾಯ...ಚ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಆತಾರ್ಯಾಯ ಚ**=ತತ್ತ್ವಜ್ಞಾನವಿದ್ದರೂ ಅದನ್ನು ಉಪೇಕ್ಷಿಸಿ ಕಾಮ್ಯಕರ್ಮಾನುಷ್ಠಾತೃವಿಗೆ ಮತ್ತೆ ಜನ್ಮವನ್ನು ನೀಡುವವನಿಗೆ; **ನಮಃ**=ನಮಸ್ಕಾರ. **ಆಲಾದ್ಯಾಯ ಚ**=ಸಂಪೂರ್ಣಕರ್ಮಫಲವನ್ನು ಅನುಭವಿಸುವ ಜೀವನಿಗೆ ಪ್ರೇರಕನಾದ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಆತಾರ್ಯಾಯ ಚ**=ತತ್ತ್ವಜ್ಞಾನವಿದ್ದರೂ ಕರ್ಮಶೇಷದಿಂದ ಮತ್ತೆ ಹುಟ್ಟುವವರ ಅನುಗ್ರಾಹಕನಿಗೆ; **ನಮಃ**=ನಮಸ್ಕಾರ. **ಆಲಾದ್ಯಾಯ ಚ**=ಸಂಸಾರಸಾಗರದಲ್ಲಿ ಅಲೆಗಳಂತೆ ಮತ್ತೆ ಮತ್ತೆ ಸಂಭವಿಸುವವರನ್ನು ಅನುಗ್ರಹಿಸುವವನಿಗೆ/ಸ್ವರ್ಗದಲ್ಲಿರುವ ಇತರಸುಖಗಳನ್ನು ಧಿಕ್ಕರಿಸುವವನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಪ್ರಕೃಷ್ಟವಾದ ಮಂತ್ರಜಪಾದಿರೂಪದಿಂದಲೇ ಶಿವನು ರಕ್ಷಿಸುವನು. ಆ ಜಪದಿಂದ ಪಾಪನಿವೃತ್ತಿಯುಂಟಾಗುವುದು. ಅವನು ತತ್ತ್ವಜ್ಞಾನರೂಪದಿಂದ ಇದ್ದು ಸಂಸಾರಸಾಗರದಿಂದ ಪೂರ್ಣವಾಗಿ ಮೇಲೆತ್ತಿ ಕಾಪಾಡುವನು. ಅಂತಹ ಶಿವನಿಗೆ ನಮಸ್ಕಾರ.

ಸಂಸಾರವನ್ನು ದಾಟಿಸುವ ತತ್ತ್ವಜ್ಞಾನವಿದ್ದರೂ, ಅದನ್ನು ಉಪೇಕ್ಷಿಸಿ ಕಾಮ್ಯಕರ್ಮವನ್ನು ಅನುಷ್ಠಿಸುವವನಿಗೆ ಅದರ ಫಲವನ್ನು ನೀಡುವ ಶಿವನಿಗೂ. **'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ' [ಮುಂಡಕೋಪನಿಷತ್ 3.1.1 ಶ್ವೇತಾಶ್ವತರೋಪನಿಷತ್ 4.6]** ಎಂಬ ವಚನದಂತೆ ಕರ್ಮಫಲವನ್ನು ಸಂಪೂರ್ಣವಾಗಿ ಅನುಭವಿಸಲು ಜೀವನಿಗೆ ಪ್ರೇರಕನಾದ ಶಿವನಿಗೂ ನಮಸ್ಕಾರ. ಇಲ್ಲಿ ಜಡಭರತ, ಕಬಂಧ ಮೊದಲಾದವರ ಚರಿತ್ರೆಯನ್ನು ಗಮನಿಸಬಹುದು.

**: ತಾತ್ಪರ್ಯ– ಭ. ಭಾ. ಭಾ. :**

ಮೋಕ್ಷರೂಪವಾದ, ಅಥವಾ ಫಲಪ್ರಾಪ್ತಿಯ ಸುಖವನ್ನುಂಟುಮಾಡುವ ರುದ್ರನಿಗೆ ನಮಸ್ಕಾರ.

ಸರ್ವಪ್ರಾಣಿಗಳಿಗೂ ಸುಖವನ್ನೇ ಉಂಟುಮಾಡಿಕೊಡುವ, ಅದೇ ಸ್ವಭಾವವುಳ್ಳ, ಮೋಕ್ಷವೆಂಬ ದುಃಖಸಮ್ಮಿಶ್ರವಲ್ಲದ ಸುಖವನ್ನೀಯುವ ಶಿವನಿಗೂ, ನಿಸ್ತ್ರೈಗುಣ್ಯನಾಗಿ ಸಮಸ್ತರಿಗೂ ಮಂಗಲಪ್ರದನಾದ ಶಿವನಿಗೆ ನಮಸ್ಕಾರ.

ಅಥರ್ವಶಿಖೋಪನಿಷತ್ತಿನಲ್ಲಿ **'ಶಿವ ಏಕೋ ಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ...' [ಅಥರ್ವಶಿಖೋಪನಿಷತ್ .2]** ಎಲ್ಲವನ್ನೂ ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು.

# ನಮಶ್ಶಷ್ಪ್ಯಾಯ ಚ ಫೇನ್ಯಾಯ ಚ

ನಮಃ । ಶಷ್ಪ್ಯಾಯ । ಚ । ಫೇನ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮಶ್ಶಷ್ಪ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.** ———————

**ಶಷ್ಪ್ಯಾಯ ಚ**=ಗಂಗಾತೀರದಲ್ಲಿರುವ ಎಳೆಯ ಹುಲ್ಲು, ದರ್ಭೆ ಮುಂತಾದ ಪವಿತ್ರವಸ್ತುಗಳಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಫೇನ್ಯಾಯ ಚ**=ನದೀ–ಸಮುದ್ರಗಳ ನೊರೆಯಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.** ———————

**ಶಷ್ಪ್ಯಾಯ ಚ**=ಪವಿತ್ರವಾದ ಕುಶ, ದರ್ಭೆ ಮುಂತಾದ ವಸ್ತುಗಳಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಫೇನ್ಯಾಯ ಚ**=ನೊರೆಯ ರೂಪದಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

———————: **ತಾತ್ಪರ್ಯ– ಸಾ. ಭಾ.** : ———————

ಗಂಗಾತೀರದ ಬಾಲತೃಣ, ದರ್ಭೆಯ ಚಿಗುರು ಮುಂತಾದ ಪವಿತ್ರವಸ್ತುಗಳಲ್ಲಿ ಸನ್ನಿಹಿತನಾಗಿರುವ ಶಿವನಿಗೂ, ನೊರೆಯಲ್ಲಿರುವವನಿಗೂ, ಗಂಗಾದಿನದಿಗಳ ಮರಳಿನ ದಂಡೆಯಲ್ಲಿರುವವನಿಗೂ, ನದೀಪ್ರವಾಹದಲ್ಲಿರುವ ಶಿವನಿಗೂ ನಮಸ್ಕಾರ.

———————: **ತಾತ್ಪರ್ಯ– ಭ. ಭಾ. ಭಾ.** : ———————

ಮಹಾಭಾರತದಲ್ಲಿ–

**ಸಮೇಧಯತಿ ಯನ್ನಿತ್ಯಂ ಸರ್ವಾರ್ಥಾನ್ ಸರ್ವಕರ್ಮಸು ।**
**ಶಿವಮಿಚ್ಛನ್ ಮನುಷ್ಯಾಣಾಂ ತಸ್ಮಾದೇಷ ಶಿವಃ ಸ್ಮೃತಃ ॥**

ಎಲ್ಲ ಕಾರ್ಯಗಳಲ್ಲಿಯೂ ಎಲ್ಲ ಪ್ರಯೋಜನಗಳನ್ನೂ ಹೆಚ್ಚಾಗಿ ಮಾಡಿಕೊಡುತ್ತಾ ಮನುಷ್ಯರಿಗೆ ಮಂಗಲವನ್ನು ಬಯಸುವವನಾದುದರಿಂದ ಶಿವನೆನಿಸಿದ್ದಾನೆ–ಮಹಾಭಾರತ [7.173.90] ಎಂದು ಹೇಳಿದೆ.

ಇನ್ನು ಮುಂದೆ ಆಧಾರವಿಶೇಷವಶದಿಂದ ಅಂದರೆ ವಿಶಿಷ್ಟಸ್ಥಾನದಲ್ಲಿ ಸನ್ನಿಹಿತನಾಗಿದ್ದುಕೊಂಡು ಶಿವನು ಜಗತ್ತನ್ನುದ್ಧರಿಸುವನೆಂದು ಸ್ತುತಿಸಿ ನಮಸ್ಕರಿಸಲಾಗಿದೆ.

ಪ್ರಯಾಗ ಮುಂತಾದ ತೀರ್ಥಗಳಲ್ಲಿ ಸನ್ನಿಹಿತನಾಗಿರುವ, ಶಿವಭಕ್ತರ ಸಮುದಾಯದಲ್ಲಿದ್ದು ಅನುಗ್ರಹಿಸುವ, ನದೀತೀರಗಳ ಲಿಂಗಗಳಲ್ಲಿ ಸನ್ನಿಹಿತನಾಗಿರುವ, ಅಂತಿಮಕಾಲದಲ್ಲಿ ಇರುವ ಶಿವನಿಗೆ ನಮಸ್ಕಾರ.

ನದಿಯ ಆಚೆಯ ಮತ್ತು ಈಚೆಯ ತೀರದಲ್ಲಿರುವವರ ಸ್ವರೂಪದ ಶಿವನಿಗೆ ನಮಸ್ಕಾರ. ಪರತೀರವು ಶುದ್ಧವು. ಸಂಸಾರವನ್ನು ದಾಟಿದುದು. ಅವಾರತೀರವು ವಿಶುದ್ಧವಲ್ಲ. ಸಂಸಾರಗ್ರಸ್ತವಾದುದು. ಶಿವನು ಎರಡು ಕಡೆಯಲ್ಲಿಯೂ ಇರುವವನು. ಅವನಿಗೆ ನಮಸ್ಕಾರ.

# ನಮಸ್ಸಿಕತ್ಯಾಯ ಚ ಪ್ರವಾಹ್ಯಾಯ ಚ ॥ ೧೮-8 ॥

[ಶಿವತರಾಯ ಚ ತ್ರಿಗ್ಂಶಚ್ಚ ॥]

ನಮಃ । ಸಿಕತ್ಯಾಯ । ಚ । ಪ್ರವಾಹ್ಯಾಯೇತಿ ಪ್ರ-ವಾಹ್ಯಾಯ । ಚ ॥ (೧೮) ॥

| ಮಂತ್ರ | ವಿನಿಯೋಗ |
|---|---|
| ನಮಸ್ಸಿಕತ್ಯಾಯ...ಚ ॥ | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

ಪದಶಃ ಅರ್ಥ- ಸಾ. ಭಾ.

▲ **ಸಿಕತ್ಯಾಯ ಚ**=ಗಂಗಾದಿನದಿಗಳ ದಂಡೆಯ ಮರಳುದಿಣ್ಣೆಯಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಪ್ರವಾಹ್ಯಾಯ ಚ**=ನದಿಗಳ ಪ್ರವಾಹದಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

▲ **ಸಿಕತ್ಯಾಯ ಚ**=ಮರಳಿನಲ್ಲಿ ಇರುವ ಶಿವನಿಗೂ; **ನಮಃ**=ನಮಸ್ಕಾರ. **ಪ್ರವಾಹ್ಯಾಯ ಚ**=ನದ್ಯಾದಿಗಳ ಪ್ರವಾಹದಲ್ಲಿರುವ ಶಿವನಿಗೂ; ನಮಃ=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

ಇಲ್ಲಿ ಸಾಯಣಾಚಾರ್ಯರು **'ಪ್ರವಾಹಮ್ ಅರ್ಹತಿ'** ಎಂಬುದಾಗಿ ಅರ್ಹಾರ್ಥದಲ್ಲಿ ಪ್ರತ್ಯಯವನ್ನು ಹೇಳಿದಾಗ ನದಿಯಲ್ಲಿ ಶ್ರದ್ಧೆಯಿಂದ ಸ್ನಾನಾನುಷ್ಠಾನಪರನಾದ ಪುಣ್ಯಾತ್ಮನ ರೂಪದಲ್ಲಿರುವ ಶಿವನಿಗೆ ನಮಸ್ಕಾರ ಎಂಬ ಅರ್ಥವನ್ನು ಹೇಳಿ, **ಶಷ್ಪ್ಯ, ಫೇನ್ಯ, ಸಿಕತ್ಯ, ಪ್ರವಾಹ್ಯ** ಈ ನಾಲ್ಕು ಶಬ್ದಗಳ ತಾತ್ಪರ್ಯವನ್ನು ಹೇಳಿರುತ್ತಾರೆ.

: ತಾತ್ಪರ್ಯ- ಭ. ಭಾ. ಭಾ. :

ಉತ್ತಮವಾದ ಜನ್ಮವನ್ನು ಹೊಂದುವುದು ಹುಟ್ಟಿನ ಹೆಚ್ಚಳ.

ಸಂಸಾರವನ್ನು ದಾಟಲು ನೌಕೆಯಂತಿದ್ದು, ಉತ್ತಮಜನ್ಮವನ್ನು ಕರುಣಿಸಿ, ಸಂಸಾರದಿಂದ ದೂರ ಹೋಗುವಂತೆ ಮಾಡುವ ಶಿವನಿಗೂ, ತತ್ತ್ವಜ್ಞಾನವನ್ನು ಉಪೇಕ್ಷಿಸಿ ಕರ್ಮಗಳನ್ನು ಅನುಷ್ಠಿಸುವವರನ್ನೂ, ಸಂಸಾರದಲ್ಲಿ ಪುನಃ ಪುನಃ ಜನಿಸುವವರನ್ನೂ ಅನುಗ್ರಹಿಸುವ ಶಿವನಿಗೆ ನಮಸ್ಕಾರ.

ವಿಷಯಸುಖವನ್ನು ತಿರಸ್ಕರಿಸುವ ಸ್ವರ್ಗಸುಖರೂಪಿಯಾದ ಶಿವನಿಗೆ ನಮಸ್ಕಾರ.

ಪವಿತ್ರವಾದ ಕುಶ ಮುಂತಾದವುಗಳಲ್ಲಿರುವ, ನದಿಗಳ ನೊರೆಯಲ್ಲಿರುವ, ಮರಳಿನಲ್ಲಿರುವ, ಪ್ರವಾಹದಲ್ಲಿರುವ ಸರ್ವತ್ರ ಆಧಾರನಾಗಿ ಇರುವ ಶಿವನಿಗೆ ನಮಸ್ಕಾರ ಮಾಡಿ ಸ್ತುತಿಸಲಾಗಿದೆ.

**'ಶಷ್ಪ್ಯಾಯ ಚ'** ಮೊದಲಾದ ನಾಲ್ಕು ಶಬ್ದಗಳಿಂದ ಬಗೆ ಬಗೆಯ ಸಂಸಾರಿಗಳು ಗೌಣವೃತ್ತಿಯಿಂದ ಹೇಳಲ್ಪಟ್ಟಿರುತ್ತಾರೆ. ಅವರೆಲ್ಲರನ್ನೂ ಅನುಗ್ರಹಿಸುವ ಶಿವನಿಗೆ ನಮಸ್ಕಾರವೆಂಬ ಅರ್ಥವನ್ನು ಕೆಲವರು ವಿವರಿಸಿರುತ್ತಾರೆ.

## ॥ ನವಮೋಽನುವಾಕಃ ॥

### ನಮ ಇರಿಣ್ಯಾಯ ಚ ಪ್ರಪಥ್ಯಾಯ ಚ

---

ನಮಃ। ಇರಿಣ್ಯಾಯ। ಚ। ಪ್ರಪಥ್ಯಾಯೇತಿ ಪ್ರ-ಪಥ್ಯಾಯ। ಚ।

---

**ಎಂಟನೆಯ ಅನುವಾಕದಲ್ಲಿ ಅನ್ಯತೋನಮಸ್ಕಾರರೂಪವಾದ ಕೆಲವು ಯಜುಸ್ಸುಗಳು ಹೇಳಲ್ಪಟ್ಟವು. ಈ ಒಂಬತ್ತನೆಯ ಅನುವಾಕದಲ್ಲಿಯೂ ಅದೇ ರೀತಿಯ ಯಜುಸ್ಸುಗಳು ಹೇಳಲ್ಪಡುತ್ತವೆ.**

---

| ಮಂತ್ರ | ವಿನಿಯೋಗ |
|---|---|
| **ನಮ ಇರಿಣ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

**ಇರಿಣ್ಯಾಯ ಚ**=ಚೌಳುಮಣ್ಣಿನ ಪ್ರದೇಶದಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. **ಪ್ರಪಥ್ಯಾಯ ಚ**=ಹಲವರು ಸಂಚರಿಸುವ ಮಾರ್ಗದಲ್ಲಿರುವ ರುದ್ರನಿಗೂ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

**ಇರಿಣ್ಯಾಯ ಚ**=ಚೌಳುಮಣ್ಣಿನ/ಬಂಜರುಭೂಮಿಯಲ್ಲಿರುವ/ಪಾಳುಬಿದ್ದಿರುವ ನೆಲದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಪ್ರಪಥ್ಯಾಯ ಚ**=ಹಲವರು ತುಳಿದ ಭೂಮಿಯಲ್ಲಿರುವ ರುದ್ರನಿಗೂ; **ನಮಃ**= ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ಇರಿಣವೆಂದರೆ ಚೌಳು ಮಣ್ಣಿನ ಭೂಮಿ ಎಂದರ್ಥ. ಇರಿಣ್ಯವೆಂದರೆ ಅಂತಹ ಭೂಮಿಯಲ್ಲಿರುವವರು. ಅವರ ರೂಪದ, ಜನರು ಸಂಚರಿಸುವ ಮಾರ್ಗದಲ್ಲಿರುವ ರುದ್ರನಿಗೂ ನಮಸ್ಕಾರ. ರುದ್ರನು ಎಲ್ಲೆಡೆಯಲ್ಲಿಯೂ ಇರುವವನು ಎಂದು ತಾತ್ಪರ್ಯ.**

**: ತಾತ್ಪರ್ಯ- ಭ. ಭಾ. ಭಾ. :**

ಬಂಜರುಭೂಮಿಯಲ್ಲಿ, ಪಾಳುಬಿದ್ದಿರುವ ಭೂಮಿಯಲ್ಲಿರುವ, ಜನರು ತುಳಿದ ನೆಲದಲ್ಲಿರುವ ರುದ್ರನಿಗೆ ನಮಸ್ಕಾರ.

ನೊರಜುಗಲ್ಲಿನ ಪ್ರದೇಶದಲ್ಲಿ ವಸತಿಯೋಗ್ಯಪ್ರದೇಶದಲ್ಲಿಯೂ ಇರುವ ರುದ್ರನಿಗೆ ನಮಸ್ಕಾರ.

**ಇಲ್ಲಿ ಕೆಲವರ ಮತವು ಹೀಗಿದೆ- ಶಷ್ಪ್ಯ ಮುಂತಾದ ಶಬ್ದಗಳಿಗೆ ಅವರು ಈ ರೀತಿ ಅರ್ಥವನ್ನು ಹೇಳುತ್ತಾರೆ. ಶಷ್ಪ ಮುಂತಾದ ಶಬ್ದಗಳು ಅದರಂತೆ ಇರುವ ಜೀವಗಳು ಎಂಬ ಅರ್ಥದಲ್ಲಿವೆ. ಶಷ್ಪ್ಯವೆಂದರೆ ಹುಲ್ಲಿನಂತೆ ಸ್ವಲ್ಪ**

## ನಮಃ ಕಿಗ್‍ಂಶಿಲಾಯ ಚ ಕ್ಷಯಣಾಯ ಚ ನಮಃ ಕಪರ್ದಿನೇ ಚ ಪುಲಸ್ತಯೇ ಚ

ನಮಃ । ಕಿಗ್‍ಂಶಿಲಾಯ । ಚ । ಕ್ಷಯಣಾಯ । ಚ । ನಮಃ । ಕಪರ್ದಿನೇ । ಚ । ಪುಲಸ್ತಯೇ । ಚ ।

| ಮಂತ್ರ | ವಿನಿಯೋಗ |
|---|---|
| **ನಮಃ ಕಿಗ್‍ಂಶಿಲಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಃ ಕಪರ್ದಿನೇ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಕಿಗ್‍ಂಶಿಲಾಯ ಚ**=ಚಿಕ್ಕಕಲ್ಲುಗಳ/ನೊರಜುಗಲ್ಲಿನ ಪ್ರದೇಶದಲ್ಲಿ ಇರುವ ರುದ್ರನಿಗೆ; **ನಮಃ**= ನಮಸ್ಕಾರ. **ಕ್ಷಯಣಾಯ ಚ**=ವಾಸಯೋಗ್ಯವಾದ ಪ್ರದೇಶದಲ್ಲಿರುವ ಈಶ್ವರನಿಗೆ; ನಮಃ= ನಮಸ್ಕಾರ. ▲ **ಕಪರ್ದಿನೇ ಚ**=ಜಟಾಜೂಟಧಾರಿಯಾದ ಶಿವನಿಗೆ; **ನಮಃ**=ನಮಸ್ಕಾರ. **ಪುಲಸ್ತಯೇ ಚ**=ಭಕ್ತರ ಎದುರಿನಲ್ಲಿಯೇ ಇರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಕಿಗ್‍ಂಶಿಲಾಯ ಚ**=ಚಿಕ್ಕ ಕಲ್ಲುಗಳ ಪ್ರದೇಶದಲ್ಲಿ ಇರುವ/ಅವು ಸ್ಫಟಿಕಗಳೋ, ಕಲ್ಲುಗಳೋ ಎಂಬ ಸಂದೇಹವನ್ನು ತರುವಂತಿರುವ ಪ್ರದೇಶದಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಕ್ಷಯಣಾಯ ಚ**= ವಾಸಿಸಲು ಯೋಗ್ಯವಾಗಿರುವ ಪ್ರದೇಶದಲ್ಲಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಕಪರ್ದಿನೇ ಚ**= ಕಪರ್ದವೆಂಬ ಜಟೆಯನ್ನು ಧರಿಸಿರುವ ಶಿವನಿಗೆ; **ನಮಃ**=ನಮಸ್ಕಾರ. **ಪುಲಸ್ತಯೇ ಚ**=ಒಳ್ಳೆಯ ಕೂದಲುಳ್ಳವನಾದ ರುದ್ರನಿಗೆ/ಎಲ್ಲರ ಎದುರಿಗೆ ಸೂರ್ಯನ ರೂಪದಲ್ಲಿ ನಿಂತಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಸಣ್ಣ ಸಣ್ಣ ಕಲ್ಲುಗಳಿಗೆ ಕಿಂಶಿಲೆಗಳೆಂದು ಹೆಸರು. ಯಾವ ಪ್ರದೇಶದಲ್ಲಿ ಆ ರೀತಿಯ ಕಲ್ಲುಗಳಿರುತ್ತವೆಯೋ ಆ ಪ್ರದೇಶವು ಕಿಂಶಿಲಪ್ರದೇಶವೆನ್ನಿಸುತ್ತದೆ. ಅಲ್ಲಿಯೂ, ವಾಸಯೋಗ್ಯಸ್ಥಳದಲ್ಲಿಯೂ ಇರುವ ರುದ್ರನಿಗೂ ನಮಸ್ಕಾರ.

ಜಟಾಜೂಟಧಾರಿಯಾಗಿರುವ ಶಿವನಿಗೆ ಮತ್ತು ಭಕ್ತರ ಸಮ್ಮುಖದಲ್ಲಿಯೇ ಇರುವ ಶಿವನಿಗೆ ನಮಸ್ಕಾರ. ಹಸುಗಳ ಕೊಟ್ಟಿಗೆಯಲ್ಲಿರುವ **ಪಶುಪತಿ** ಎಂಬ ಹೆಸರಿನ ಶಿವನಿಗೂ, ಮನೆಗಳಲ್ಲಿಯೇ ಸಾನ್ನಿಧ್ಯವನ್ನು ನೀಡುವ ಶಿವನಿಗೂ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಪ್ರಾಣರು. ಫೇನ್ಯರೆಂದರೆ ನೊರೆಯಂತೆ ಅಲ್ಪಾಯುಗಳು. ಸಿಕತ್ಯರೆಂದರೆ ಮರಳಿನಂತೆ ಅತ್ಯಲ್ಪರು. ಪ್ರವಾಹ್ಯರೆಂದರೆ ಮಹಾವಿಭೂತಿಪುರುಷರು. ಇರಿಣ್ಯರೆಂದರೆ ಚೌಳುಭೂಮಿಯಂತೆ ಶೂನ್ಯಶಕ್ತಿಗಳು. ಪ್ರಪಥ್ಯರು ಶ್ರೇಷ್ಠಮಾರ್ಗದಲ್ಲಿರುವವರು. ಕಿಂಶಿಲರು ಕುತ್ಸಿತವಾದ ನಡವಳಿಕೆಯುಳ್ಳವರು, ಕ್ಷಯಣರು ಕ್ಷಯಶೀಲರು.

ಇವರೆಲ್ಲರಲ್ಲಿಯೂ ಇರುವ ಎಲ್ಲರನ್ನೂ ಅನುಗ್ರಹಿಸುವ ರುದ್ರನಿಗೆ ನಮಸ್ಕಾರವು.

ಕಪರ್ದವೆಂಬ ಹೆಸರಿನ ಜಟೆಯನ್ನು ಧರಿಸಿರುವವನಾದ ಶಿವನಿಗೆ ಮತ್ತು ಒಳ್ಳೆಯ ಕೂದಲನ್ನು ಹೊಂದಿರುವ ಶಿವನಿಗೆ ನಮಸ್ಕಾರ. ಎಲ್ಲರ ಎದುರಿಗೆ ಸೂರ್ಯನ ರೂಪದಲ್ಲಿ ನಿಂತಿರುವ ರುದ್ರನಿಗೆ ನಮಸ್ಕಾರ.

ನಮೋ ಗೋಷ್ಠ್ಯಾಯ ಚ ಗೃಹ್ಯಾಯ ಚ ನಮಸ್ತಲ್ಪ್ಯಾಯ ಚ ಗೇಹ್ಯಾಯ ಚ
ನಮಃ ಕಾಟ್ಯಾಯ ಚ ಗಹ್ವರೇಷ್ಠಾಯ ಚ

---

ನಮಃ । ಗೋಷ್ಠ್ಯಾಯೇತಿ ಗೋ-ಸ್ಥ್ಯಾಯ । ಚ । ಗೃಹ್ಯಾಯ । ಚ । ನಮಃ । ತಲ್ಪ್ಯಾಯ । ಚ । ಗೇಹ್ಯಾಯ । ಚ ।

ನಮಃ । ಕಾಟ್ಯಾಯ । ಚ । ಗಹ್ವರೇಷ್ಠಾಯೇತಿ ಗಹ್ವರೇ-ಸ್ಥಾಯ । ಚ ।

---

| ಮಂತ್ರ | ವಿನಿಯೋಗ |
|---|---|
| **ನಮೋ ಗೋಷ್ಠ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಸ್ತಲ್ಪ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಃ ಕಾಟ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಗೋಷ್ಠ್ಯಾಯ ಚ**=ಹಸುಗಳ ಕೊಟ್ಟಿಗೆಯಲ್ಲಿರುವ ಪಶುಪತಿಗೆ; **ನಮಃ**=ನಮಸ್ಕಾರ. **ಗೃಹ್ಯಾಯ ಚ**=ಮನೆಗಳಲ್ಲಿಯೇ ಇರುವವನಿಗೆ; ನಮಃ=ನಮಸ್ಕಾರ. ▲ **ತಲ್ಪ್ಯಾಯ ಚ**=ಮಂಚದಲ್ಲಿ ಮಲಗಿರುವ ಶಿವನಿಗೆ; **ನಮಃ**=ನಮಸ್ಕಾರ. **ಗೇಹ್ಯಾಯ ಚ**=ಉಪ್ಪರಿಗೆ ಮನೆಯಲ್ಲಿರುವ ಪರಮೇಶ್ವರನಿಗೆ; ನಮಃ= ನಮಸ್ಕಾರ. ▲ ***ಕಾಟ್ಯಾಯ ಚ**=ಪ್ರವೇಶಿಸಲು ಕಷ್ಟವಾದ ಪ್ರದೇಶದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಗಹ್ವರೇಷ್ಠಾಯ ಚ**=ಪರ್ವತದ ಗುಹೆ ಮುಂತಾದವುಗಳಲ್ಲಿರುವ ಶಿವನಿಗೆ; ನಮಃ= ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಗೋಷ್ಠ್ಯಾಯ ಚ**=ಗೋವುಗಳು ನಿಲ್ಲುವ ಕೊಟ್ಟಿಗೆಯಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಗೃಹ್ಯಾಯ ಚ**=ಮನೆಯಲ್ಲಿಯೇ ಇರುವ ಈಶ್ವರನಿಗೆ; ನಮಃ=ನಮಸ್ಕಾರ. ▲ **ತಲ್ಪ್ಯಾಯ ಚ**= ಮಂಚಸ್ಥನಾಗಿರುವ ಶಿವನಿಗೆ; **ನಮಃ**=ನಮಸ್ಕಾರ. **ಗೇಹ್ಯಾಯ ಚ**=ಮಹಡಿಮನೆಯಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಕಾಟ್ಯಾಯ ಚ**=ಬಾವಿಯ ನೀರಿನಲ್ಲಿ ಇರುವ ರುದ್ರನಿಗೆ/ಸಣ್ಣ ಕಾಲುವೆಗಳ ನೀರಿನ ರೂಪದಲ್ಲಿರುವ ರುದ್ರನಿಗೆ; **ನಮಃ**= ನಮಸ್ಕಾರ. [ಕಾಟ್ಯಾಯ=ಕಟಗಳಿಂದ=ಚಾಪೆಗಳಿಂದ-ಬಿದಿರಿನಿಂದ ನಿರ್ಮಿತವಾದ ಗುಡಿಸಿಲಿನಲ್ಲಿರುವ ರುದ್ರನಿಗೆ] **ಗಹ್ವರೇಷ್ಠಾಯ ಚ**=ಗಿರಿ-ಗುಹೆಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

---

* ಏಳನೆಯ ಅನುವಾಕದಲ್ಲಿ '**ನೀಪ್ಯಾಯ ಚ**' ಎಂಬುದರ ಸಾಹಚರ್ಯದಿಂದ ಕಾಟ್ಯಾಯ=ಸಣ್ಣಹಳ್ಳಗಳ ನೀರಿನಲ್ಲಿರುವವನು ಎಂಬ ಅರ್ಥವನ್ನು ತಿಳಿಸಿದೆ.

## ನಮೋ ಹ್ರದಯ್ಯಾಯ ಚ ನಿವೇಷ್ಪ್ಯಾಯ ಚ ನಮಃ ಪಾಗ್ಂಸವ್ಯಾಯ ಚ ರಜಸ್ಯಾಯ ಚ

ನಮಃ । ಹ್ರದಯ್ಯಾಯ । ಚ । ನಿವೇಷ್ಪ್ಯಾಯೇತಿ ನಿ–ವೇಷ್ಪ್ಯಾಯ । ಚ । ನಮಃ । ಪಾಗ್ಂಸವ್ಯಾಯ । ಚ । ರಜಸ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮೋ ಹ್ರದಯ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಃ ಪಾಗ್ಂಸವ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಹ್ರದಯ್ಯಾಯ ಚ**=ಆಳವಾದ ನೀರುಳ್ಳ ಮಡುಗಳಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ನಿವೇಷ್ಪ್ಯಾಯ ಚ**=ಇಬ್ಬನಿಯ/ಹಿಮದ ನೀರಿನಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲**ಪಾಗ್ಂಸವ್ಯಾಯ ಚ**=ಸಣ್ಣ ಧೂಳಿನಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. **ರಜಸ್ಯಾಯ ಚ**=ಸ್ಥೂಲವಾದ ರೇಣುಗಳಲ್ಲಿರುವ ಶಿವನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಹ್ರದಯ್ಯಾಯ ಚ**=ಆಳವಾದ ನೀರಿನ ಮಡುಗಳಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ನಿವೇಷ್ಪ್ಯಾಯ ಚ**=ಇಬ್ಬನಿಯ ನೀರಿನಲ್ಲಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಪಾಗ್ಂಸವ್ಯಾಯ ಚ**=ಸೂಕ್ಷ್ಮವಾದ ಧೂಳಿನಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. **ರಜಸ್ಯಾಯ ಚ**=ದಪ್ಪವಾದ ಧೂಳಿನಲ್ಲಿರುವ ರುದ್ರನಿಗೆ/ರಜೋಗುಣದಲ್ಲಿ/ಲೋಕವ್ಯಾಪಕನಾದ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

ಅತಿ ಸಮೀಪದಲ್ಲಿಯೇ ಪರಮಾತ್ಮನು ಸುಲಭನೆಂದು ಮುಖ್ಯ ತಾತ್ಪರ್ಯ. ಮಂಚದಲ್ಲಿ ಮಲಗಿರುವ ಸ್ವರೂಪದವನೂ, ಉಪ್ಪರಿಗೆ ಮನೆಯಲ್ಲಿರುವ ರುದ್ರನಿಗೂ ನಮಸ್ಕಾರ.

ಮುಳ್ಳಿನ ಬಳ್ಳಿ, ಪೊದೆ ಮುಂತಾದವುಗಳಿಂದ ತುಂಬಿ ಪ್ರವೇಶಿಸಲು ದುರ್ಗಮವಾದ ಪ್ರದೇಶದಲ್ಲಿರುವವನಿಗೂ, ಪರ್ವತದ ಗುಹೆಗಳಲ್ಲಿರುವ ರುದ್ರನಿಗೂ ನಮಸ್ಕಾರ.

**: ತಾತ್ಪರ್ಯ– ಭ. ಭಾ. ಭಾ. :**

ಗೋವುಗಳ ಕೊಟ್ಟಿಗೆಯಲ್ಲಿ ಇರುವ ರುದ್ರನಿಗೂ, ಮನೆಯಲ್ಲಿಯೇ ಅತಿ ಸಮೀಪದಲ್ಲಿಯೇ ಇರುವ ಶಿವನಿಗೂ, ಮನೆಯಲ್ಲಿ ಮಂಚದಲ್ಲಿಯೇ ಇರುವ ರುದ್ರನಿಗೂ, ಮಹಡಿ ಮನೆಯಲ್ಲಿರುವ ಈಶ್ವರನಿಗೂ–ಹೀಗೆ ಸರ್ವತ್ರ ಸುಲಭನಾಗಿರುವ ಪರಮಾತ್ಮನಿಗೆ ನಮಸ್ಕಾರ.

# ನಮಶ್ಶುಷ್ಕ್ಯಾಯ ಚ ಹರಿತ್ಯಾಯ ಚ ನಮೋ ಲೋಪ್ಯಾಯ ಚೋಲಪ್ಯಾಯ ಚ [ಚ (೧೯)]

ನಮಃ। ಶುಷ್ಕ್ಯಾಯ। ಚ। ಹರಿತ್ಯಾಯ। ಚ। ನಮಃ। ಲೋಪ್ಯಾಯ। ಚ। ಉಲಪ್ಯಾಯ। ಚ।(೧೯)।

| ಮಂತ್ರ | ವಿನಿಯೋಗ |
|---|---|
| **ನಮಃ ಶುಷ್ಕ್ಯಾಯ ಚ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮೋ ಲೋಪ್ಯಾಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ- ಸಾ. ಭಾ.**

▲ **ಶುಷ್ಕ್ಯಾಯ ಚ**=ಒಣಗಿದ/ನೀರಸವಾದ ಕಟ್ಟಿಗೆಗಳಲ್ಲಿ/ವಸ್ತುಗಳಲ್ಲಿ ಇರುವ ರುದ್ರನಿಗೆ; **ನಮಃ**= ನಮಸ್ಕಾರ. **ಹರಿತ್ಯಾಯ ಚ**=ಹಸಿರಾಗಿ/ಹಸಿಯದಾಗಿ/ಆರ್ದ್ರವಾಗಿ ಇರುವ ಕಟ್ಟಿಗೆಗಳಲ್ಲಿ ಇರುವ ರುದ್ರ ನಿಗೆ; ನಮಃ=ನಮಸ್ಕಾರ. ▲ **ಲೋಪ್ಯಾಯ ಚ**=ಹುಲ್ಲು ಮುಂತಾದವು ಬೆಳೆಯಲು ಸಾಧ್ಯವಿಲ್ಲದ ಕಠಿನ ಪ್ರದೇಶದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಉಲಪ್ಯಾಯ ಚ**=ಹುಲ್ಲು ಮುಂತಾದವು ಬೆಳೆಯು ವಂತಹ ಪ್ರದೇಶದಲ್ಲಿ/ಹುಲ್ಲುಗಳಲ್ಲಿಯೇ ಇರುವ/ಸೌತೆ ಮುಂತಾದ ಹಬ್ಬುವ ಬಳ್ಳಿಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **ಶುಷ್ಕ್ಯಾಯ ಚ**=ಒಣವಸ್ತುಗಳಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಹರಿತ್ಯಾಯ ಚ**=ಹಸಿಯ ವಸ್ತುಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ. ▲ **ಲೋಪ್ಯಾಯ ಚ**=ಹುಲ್ಲು ಮುಂತಾದವು ಕಾಣದ ಕಠಿನ ಭೂಪ್ರದೇಶದಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಉಲಪ್ಯಾಯ ಚ**=ಹುಲ್ಲುಗಳಲ್ಲಿ/ಅವು ಬೆಳೆಯುವ ಪ್ರದೇಶದಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

**ಆಳವಾದ ನೀರುಳ್ಳ ಮಡುವಿನಲ್ಲಿರುವ, ಇಬ್ಬನಿಯ ನೀರಿನಲ್ಲಿ ಇರುವ ರುದ್ರನಿಗೆ ನಮಸ್ಕಾರ. ಸಣ್ಣ ಧೂಳಿನಲ್ಲಿ ರುವ, ಹಾಗೂ ದಪ್ಪವಾಗಿ ಕಾಣುವಂತಿರುವ ಧೂಳಿನಲ್ಲಿರುವ ರುದ್ರನಿಗೂ ನಮಸ್ಕಾರ. ಕಟ್ಟಿಗೆ ಅಥವಾ ಯಾವುದೇ ವಸ್ತುಗಳು ಒಣಗಿರುವಾಗ ಅದರಲ್ಲಿಯೂ ಅವೇ ಹಸಿಯದಾಗಿ ಇರುವಾಗ ಅವುಗಳಲ್ಲಿಯೂ ಇರುವ ಶಿವನಿಗೆ ನಮಸ್ಕಾರ.**

**: ತಾತ್ಪರ್ಯ- ಭ. ಭಾ. ಭಾ. :**

**ಬಾವಿಯ ನೀರಿನಲ್ಲಿಯೂ, ಸಣ್ಣ ಕಾಲುವೆಗಳ ನೀರಿನ ರೂಪದಲ್ಲಿರುವ ರುದ್ರನಿಗೂ ನಮಸ್ಕಾರ. ಇಲ್ಲಿ ವಾಸಸ್ಥಳ ಪ್ರಕರಣವಿರುವುದರಿಂದ ಕಟವೆಂಬ ಶಬ್ದಕ್ಕೆ ಚಾಪೆಯೆಂಬ ಅರ್ಥವು ಇರುವುದರಿಂದ ಬಿದಿರಿನಿಂದ ನಿರ್ಮಿತವಾದ ಗುಡಿಸಲಿನಲ್ಲಿರುವ ರುದ್ರನೆಂದೂ ಅರ್ಥವನ್ನು ಹೇಳಬಹುದು.**

# ನಮ ಊರ್ವ್ಯಾ್ಯಯ ಚ ಸೂರ್ಮ್ಯಾ್ಯಯ ಚ ನಮಃ ಪರ್ಣ್ಯಾ್ಯಯ ಚ ಪರ್ಣಶದ್ಯಾಯ ಚ

ನಮಃ । ಊರ್ವ್ಯಾ್ಯಯ । ಚ । ಸೂರ್ಮ್ಯಾ್ಯಯ । ಚ । ನಮಃ । ಪರ್ಣ್ಯಾ್ಯಯ । ಚ । ಪರ್ಣಶದ್ಯಾಯೇತಿ ಪರ್ಣ–ಶದ್ಯಾಯ । ಚ ।

| ಮಂತ್ರ | ವಿನಿಯೋಗ |
|---|---|
| **ನಮ ಊರ್ವ್ಯಾ್ಯಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |
| **ನಮಃ ಪರ್ಣ್ಯಾ್ಯಯ...ಚ ॥** | ಶತರುದ್ರೀಯಹವನ/ರುದ್ರನ ಅನುಗ್ರಾಹಕರೂಪಗಳನ್ನು ನಮಸ್ಕರಿಸಲು. |

**ಪದಶಃ ಅರ್ಥ– ಸಾ. ಭಾ.**

▲ **ಊರ್ವ್ಯಾ್ಯಯ ಚ**=ಭೂಮಿಯಲ್ಲಿ ಇರುವ ರುದ್ರನಿಗೆ; **ನಮಃ**=ನಮಸ್ಕಾರ. **ಸೂರ್ಮ್ಯಾ್ಯಯ ಚ**= ಒಳ್ಳೆಯ ಅಲೆಗಳಿಂದ ಕೂಡಿರುವ ನದಿಗಳಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ/ಒಳ್ಳೆಯ ಅಲೆಗಳಲ್ಲಿ ಇರುವ ರುದ್ರನಿಗೆ ನಮಸ್ಕಾರ. ▲ **ಪರ್ಣ್ಯಾ್ಯಯ ಚ**=ಎಲೆಗಳಲ್ಲಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಪರ್ಣಶದ್ಯಾಯ ಚ**=ತರಗೆಲೆಗಳ ರಾಶಿಯಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**ಪದಶಃ ಅರ್ಥ– ಭ. ಭಾ. ಭಾ.**

▲ **ಊರ್ವ್ಯಾ್ಯಯ ಚ**=ಎಲ್ಲ ರೀತಿಯ ಭೂಮಿಯಲ್ಲಿರುವ ಶಿವನಿಗೆ; **ನಮಃ**=ನಮಸ್ಕಾರ. **ಸೂರ್ಮ್ಯಾ್ಯಯ ಚ**=ಒಳಗೆ ರಂಧ್ರವುಳ್ಳ ಪ್ರತಿಮೆಯಲ್ಲಿರುವ ಶಿವನಿಗೆ; ನಮಃ=ನಮಸ್ಕಾರ. ▲ **ಪರ್ಣ್ಯಾ್ಯಯ ಚ**=ಎಲೆಗಳಲ್ಲಿರುವ ಶಿವನಿಗೂ; **ನಮಃ**=ನಮಸ್ಕಾರ. **ಪರ್ಣಶದ್ಯಾಯ ಚ**=ಒಣಗಿದ ಎಲೆಗಳ ರಾಶಿಯಲ್ಲಿರುವ ರುದ್ರನಿಗೆ; ನಮಃ=ನಮಸ್ಕಾರ.

**: ತಾತ್ಪರ್ಯ– ಸಾ. ಭಾ. :**

**ಕಠಿನ ಭೂಪ್ರದೇಶದಲ್ಲಿ, ಸಸ್ಯಗಳು ಬೆಳೆಯುವ ಭೂಮಿಯಲ್ಲಿ, ಇಲ್ಲಿ ತಿಳಿಸದೇ ಇರುವ ಎಲ್ಲ ಭೂಭಾಗದಲ್ಲಿಯೂ, ಒಳ್ಳೆಯ ಅಲೆಗಳಲ್ಲಿಯೂ, ಒಳ್ಳೆಯ ಅಲೆಗಳಿಂದ ಕೂಡಿರುವ ನದಿಯಲ್ಲಿಯೂ ಇರುವ ಶಿವನಿಗೆ ನಮಸ್ಕಾರ.**

**: ತಾತ್ಪರ್ಯ– ಭ. ಭಾ. ಭಾ. :**

ಗಿರಿಗುಹೆಗಳಲ್ಲಿರುವ ರುದ್ರನಿಗೆ ನಮಸ್ಕಾರ.

ಆಳವಾದ ನೀರಿನಿಂದ ಕೂಡಿರುವ ಮಡುಗಳಲ್ಲಿಯೂ, ಹಿಮದ ನೀರಿನಲ್ಲಿಯೂ ಇರುವ ರುದ್ರನಿಗೆ ನಮಸ್ಕಾರ.

ಸಣ್ಣ ಹಾಗೂ ಕಾಣುವಷ್ಟು ದಪ್ಪವಿರುವ ಧೂಳಿನಲ್ಲಿರುವ ರುದ್ರನಿಗೆ ನಮಸ್ಕಾರ.

ರಜೋಗುಣದಲ್ಲಿರುವ ಶಿವನಿಗೂ, *ಲೋಕಗಳಲ್ಲಿ ವ್ಯಾಪಕನಾಗಿರುವ ಶಿವನಿಗೂ ನಮಸ್ಕಾರ.

* ಲೋಕಾ ರಜಾಂಸ್ಯುಚ್ಯಂತೇ ॥ –ನಿರುಕ್ತ, ನೈಗಮಕಾಂಡ

## ನಮೋಽಪಗುರಮಾಣಾಯ ಚಾಭಿಘ್ನತೇ ಚ ನಮ ಆಕ್ಖಿದತೇ ಚ ಪ್ರಕ್ಖಿದತೇ ಚ

---

ನಮಃ । ಅಪಗುರಮಾಣಾಯೇತ್ಯಪ-ಗುರಮಾಣಾಯ । ಚ । ಅಭಿಘ್ನತ ಇತ್ಯಭಿ-ಘ್ನತೇ । ಚ । ನಮಃ । ಆಕ್ಖಿದತ ಇತ್ಯಾ-ಖಿದತೇ । ಚ । ಪ್ರಕ್ಖಿದತ ಇತಿ ಪ್ರ-ಖಿದತೇ । ಚ ।

---

| ಮಂತ್ರ | ವಿನಿಯೋಗ |
|---|---|
| ನಮೋಽಪಗುರಮಾಣಾಯ ಚ...ಚ ॥ | ಶತರುದ್ರೀಯಹವನ/ರುದ್ರನ ನಿಗ್ರಾಹಕರೂಪಗಳನ್ನು ನಮಸ್ಕರಿಸಲು. |
| ನಮ ಆಕ್ಖಿದತೇ...ಚ ॥ | ಶತರುದ್ರೀಯಹವನ/ರುದ್ರನ ನಿಗ್ರಾಹಕರೂಪಗಳನ್ನು ನಮಸ್ಕರಿಸಲು. |

ಪದಶಃ ಅರ್ಥ- ಸಾ. ಭಾ.

🔔 **ಅಪಗುರಮಾಣಾಯ ಚ**=ದುಷ್ಟಶಿಕ್ಷಣಕ್ಕಾಗಿ ಆಯುಧಗಳನ್ನು ಎತ್ತಿಕೊಂಡಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅಭಿಘ್ನತೇ ಚ**=ಎದುರಾಗಿ ದುರಾತ್ಮರನ್ನು ಪ್ರಹರಿಸುವ ರುದ್ರನಿಗೆ; ನಮಃ=ನಮಸ್ಕಾರ. 🔔 **ಆಕ್ಖಿದತೇ ಚ**=ಅಪರಾಧಕ್ಕೆ ಅನುಗುಣವಾಗಿ ಅಪರಾಧಿಗಳನ್ನು ಸ್ವಲ್ಪವೇ ಹಿಂಸಿಸುವ ರುದ್ರನಿಗೆ; **ನಮಃ**=ನಮಸ್ಕಾರ. **ಪ್ರಕ್ಖಿದತೇ ಚ**=ಮಹಾಪರಾಧಿಗಳನ್ನು ಉಗ್ರವಾಗಿ ನೋಯಿಸುವ ರುದ್ರನಿಗೆ; ನಮಃ=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

🔔 **ಅಪಗುರಮಾಣಾಯ ಚ**=ದುಷ್ಟರನ್ನು ನಿಗ್ರಹಿಸಲು ಆಯುಧವನ್ನು ಕೈಗೆತ್ತಿಕೊಂಡಿರುವ ರುದ್ರನಿಗೆ; **ನಮಃ**=ನಮಸ್ಕಾರ. **ಅಭಿಘ್ನತೇ ಚ**=ಎತ್ತಿದ ಆಯುಧದಿಂದ ದುಷ್ಟರನ್ನು ಎದುರಿಗೆ ಸದೆ ಬಡೆಯುವ ರುದ್ರನಿಗೆ; ನಮಃ=ನಮಸ್ಕಾರ. 🔔 **ಆಕ್ಖಿದತೇ ಚ**=ಕೆಲವು ಅಪರಾಧಿಗಳಿಗೆ ಸ್ವಲ್ಪವೇ ಹಿಂಸೆಯನ್ನುಂಟು ಮಾಡುವ ರುದ್ರನಿಗೆ; **ನಮಃ**=ನಮಸ್ಕಾರ. **ಪ್ರಕ್ಖಿದತೇ ಚ**=ಅಪರಾಧವನ್ನು ಅನುಸರಿಸಿ ಕೆಲವರನ್ನು ಉಗ್ರವಾಗಿ ದಂಡಿಸಿ ಹಿಂಸಿಸುವ ರುದ್ರನಿಗೆ; ನಮಃ=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

ಎಲೆಗಳಲ್ಲಿರುವಂತಹ ಶಿವನಿಗೂ, ಒಣಗಿದ ಎಲೆಗಳ ರಾಶಿಯಲ್ಲಿರುವ ರುದ್ರನಿಗೂ ನಮಸ್ಕಾರ.

: ತಾತ್ಪರ್ಯ- ಭ. ಭಾ. ಭಾ. :

ನೀರಸವಾದ ವಸ್ತುವಿನಲ್ಲಿಯೂ, ರಸಭರಿತವಾದ ಹಸಿಯ ವಸ್ತುವಿನಲ್ಲಿಯೂ ಇರುವ ರುದ್ರನಿಗೆ ನಮಸ್ಕಾರ.

ಹುಲ್ಲು ಮುಂತಾದವೂ ಬೆಳೆಯದಂತಹ ಕಠಿನಭೂಪ್ರದೇಶದಲ್ಲಿಯೂ ಶಿವನು ಇರುತ್ತಾನೆ. ಅವನಿಗೂ, ಸಸ್ಯಗಳು, ತೃಣಗಳು ಕಾಣುವ ಭೂಮಿಯಲ್ಲಿರುವ ರುದ್ರನಿಗೂ, ಇಡೀ ಭೂಮಿಯಲ್ಲಿಯೇ ವ್ಯಾಪಕನಾಗಿ ಇರುವ ಶಿವನಿಗೂ ನಮಸ್ಕಾರ. *ಸೂರ್ಮಿ ಎಂದರೆ ಒಳಗೆ ರಂಧ್ರವುಳ್ಳ ಪ್ರತಿಮೆ. ಅದರಲ್ಲಿ ಇರುವ ರುದ್ರನಿಗೆ ನಮಸ್ಕಾರ.

---

* ಸುದೇವೋ ಅಸಿ...ಸೂರ್ಮ್ಯಂ ಸುಷಿರಾಮಿವ ॥ – ಋಗ್ವೇದ ಸಂ. ೬-೬. ಅಧ್ಯಾಯ-೫. ಸೂ-೬೯. ಮಂ-೧೨

# ನಮೋ ವಃ ಕಿರಿಕೇಭ್ಯೋ ದೇವಾನಾಗ್ಂ ಹೃದಯೇಭ್ಯೋ

ನಮಃ । ವಃ । ಕಿರಿಕೇಭ್ಯಃ । ದೇವಾನಾಮ್ । ಹೃದಯೇಭ್ಯಃ ।

| ಮಂತ್ರ | ವಿನಿಯೋಗ |
|---|---|
| ನಮೋ ವಃ...ಹೃದಯೇಭ್ಯಃ ॥ | ಶತರುದ್ರೀಯಹವನ/ರುದ್ರಾವತಾರರನ್ನು ನಮಿಸಲು/ ಶಿವಗಣಗಳನ್ನು ನಮಸ್ಕರಿಸಲು/ ದೇವಹೃದಯರಾದ ರುದ್ರಮೂರ್ತಿಗಳನ್ನು ನಮಸ್ಕರಿಸಲು. **ಭ.ಭಾ.ಭಾ** |

ಪದಶಃ ಅರ್ಥ– ಸಾ. ಭಾ.

**ದೇವಾನಾಮ್**=ಸರ್ವದೇವತೆಗಳಿಗೂ; **ಹೃದಯೇಭ್ಯಃ**=ಹೃದಯದಂತೆ ಪ್ರಿಯರಾದ; **ಕಿರಿಕೇಭ್ಯಃ**= ಭಕ್ತರಿಗೆ ಧನವನ್ನು ವಿಶೇಷವಾಗಿ ಕೊಡುವ/ಭಕ್ತರ ಕಾಮನೆಗಳನ್ನು ಸುರಿಸುವ; ರುದ್ರಾವತಾರರಾದ; **ವಃ**=ನಿಮಗೆ; **ನಮಃ**=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

**ದೇವಾನಾಮ್ ಹೃದಯೇಭ್ಯಃ**=ದೇವಹೃದಯರಾದ ರುದ್ರಮೂರ್ತಿಗಳಾಗಿರುವ; **ಕಿರಿಕೇಭ್ಯಃ**=ಸ್ವೇಚ್ಛೆ ಯಿಂದ ಲೋಕಗಳನ್ನು ಹಿಂಸಿಸುವ/ಲೋಕಗಳನ್ನು ಉತ್ಪಾದಿಸುವ/ಲೋಕಗಳಿಗೆ ಹೋಗುವ; **ವಃ**=ನಿಮಗೆ; **ನಮಃ**=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ಪರಮಾತ್ಮನು ದುರಾತ್ಮರನ್ನು ಶಿಕ್ಷಿಸುವವನು. ಈ ಶಿಕ್ಷೆಯನ್ನು ನೀಡುವುದಕ್ಕಾಗಿ ಆಯುಧವನ್ನು ಎತ್ತಿಕೊಂಡಿರುವನು. ಅಂತಹ ರುದ್ರನಿಗೂ, ದುಷ್ಟರನ್ನು ಸಂಹರಿಸುವ ಸ್ವರೂಪದ ರುದ್ರನಿಗೂ ನಮಸ್ಕಾರ.

: ತಾತ್ಪರ್ಯ– ಭ. ಭಾ. ಭಾ. :

ಎಲೆಗಳಲ್ಲಿರುವ ರುದ್ರನಿಗೂ, ಒಣಗಿದ ಎಲೆಗಳ ರಾಶಿಯಲ್ಲಿರುವ ಶಿವನಿಗೂ ನಮಸ್ಕಾರ.

ಹೀಗೆ ಮಹಾದೇವನು ಸರ್ವಸುಲಭನೆಂದು ಪ್ರತಿಪಾದಿತವಾಗಿದೆ. ಇದರಿಂದ ದೇವನ ಅನುಗ್ರಹಪ್ರಕಾರಗಳು ಹೇಳಲ್ಪಟ್ಟಿವೆ.

ಇನ್ನು ಮುಂದೆ ವಿರೋಧಿಗಳಾದ ದುಷ್ಟರ ವಿಷಯದಲ್ಲಿ ಪರಮೇಶ್ವರನು ಹೇಗೆ ನಡೆದುಕೊಳ್ಳುವನೆಂಬುದನ್ನು ಶ್ರುತಿಯು ಹೇಳುತ್ತದೆ.

ದುಷ್ಟರನ್ನು ಶಿಕ್ಷಿಸಲು ಆಯುಧವನ್ನು ಎತ್ತಿಕೊಂಡಿರುವ ಮತ್ತು ದುರಾತ್ಮರನ್ನು ಎದುರಾಗಿಯೇ ಸಂಹರಿಸುವ ರುದ್ರನಿಗೆ ನಮಸ್ಕಾರ.

ಶಿಕ್ಷಾರ್ಹರಾದವರನ್ನು ಪರಮೇಶ್ವರನು ಶಿಕ್ಷಿಸುವ ಪ್ರಕಾರವನ್ನು ಹೇಳಲಾಗಿದೆ.

ಕೊಂಚ ತಪ್ಪೆಸಗಿದವರನ್ನು ಸ್ವಲ್ಪವೇ ಶಿಕ್ಷಿಸುವ, ಮಹಾಪರಾಧಕ್ಕೆ ದೊಡ್ಡ ದಂಡವನ್ನೇ ನೀಡಿ ಹಿಂಸಿಸುವ ಯಥಾಪರಾಧದಂಡನಾದ ಪರಮೇಶ್ವರನಿಗೆ ನಮಸ್ಕಾರ.

ಮಿಶ್ರರ ಅಭಿಪ್ರಾಯದಂತೆ **'ನಮಃ ಸೋಮಾಯ ಚ'** ಎಂಬಲ್ಲಿಂದ **'ನಮ ಆಕ್ಷಿದತೇ'** ಎಂಬ ಈ ಮಂತ್ರದವರೆಗೆ ಒಂದೇ ಮಂತ್ರ. ಇದರಲ್ಲಿ ದೇವನ ಅನುಗ್ರಾಹಕ–ನಿಗ್ರಾಹಕರೂಪಗಳು ಹೇಳಲ್ಪಟ್ಟಿವೆ.

# ನಮೋ ವಿಕ್ಷೀಣಕೇಭ್ಯೋ ನಮೋ ವಿಚಿನ್ವತ್ಕೇಭ್ಯೋ

ನಮಃ। ವಿಕ್ಷೀಣಕೇಭ್ಯ ಇತಿ ವಿ-ಕ್ಷೀಣಕೇಭ್ಯಃ। ನಮಃ। ವಿಚಿನ್ವತ್ಕೇಭ್ಯ ಇತಿ ವಿ-ಚಿನ್ವತ್ಕೇಭ್ಯಃ।

| ಮಂತ್ರ | ವಿನಿಯೋಗ |
|---|---|
| **ನಮೋ ವಿಕ್ಷೀಣಕೇಭ್ಯಃ...ಹೃದಯೇಭ್ಯಃ ॥** | ಶತರುದ್ರೀಯಹವನ/ರುದ್ರಾವತಾರರನ್ನು ನಮಿಸಲು/ ಶಿವಗಣಗಳನ್ನು ನಮಸ್ಕರಿಸಲು/ದೇವಹೃದಯರಾದ ರುದ್ರಮೂರ್ತಿಗಳನ್ನು ನಮಿಸಲು. |
| **ನಮೋ ವಿಚಿನ್ವತ್ಕೇಭ್ಯಃ...ಹೃದಯೇಭ್ಯಃ ॥** | ಶತರುದ್ರೀಯಹವನ/ರುದ್ರಾವತಾರರನ್ನು ನಮಿಸಲು/ ಶಿವಗಣಗಳನ್ನು ನಮಸ್ಕರಿಸಲು/ದೇವಹೃದಯರಾದ ರುದ್ರಮೂರ್ತಿಗಳನ್ನು ನಮಿಸಲು. |

**ಪದಶಃ ಅರ್ಥ- ಸಾ. ಭಾ.**

▲ **[ಸರ್ವದೇವತೆಗಳಿಗೂ ಹೃದಯದಂತೆ ಪ್ರಿಯರಾಗಿರುವ] ವಿಕ್ಷೀಣಕೇಭ್ಯಃ**=ಕ್ಷಯರಹಿತರಾದ ರುದ್ರಾವತಾರರಾದ ನಿಮಗೆ; **ನಮಃ**=ನಮಸ್ಕಾರ. ▲ **[ಸರ್ವದೇವತೆಗಳಿಗೂ ಹೃದಯದಂತೆ ಪ್ರಿಯರಾಗಿರುವ] ವಿಚಿನ್ವತ್ಕೇಭ್ಯಃ**=ಭಕ್ತರು ಅಪೇಕ್ಷಿಸಿದುದನ್ನು ಹುಡುಕಿ ಕೊಡುವ ರುದ್ರಾವತಾರರಾದ ನಿಮಗೆ; **ನಮಃ**=ನಮಸ್ಕಾರ.

**ಪದಶಃ ಅರ್ಥ- ಭ. ಭಾ. ಭಾ.**

▲ **[ದೇವಹೃದಯರಾದ ರುದ್ರಮೂರ್ತಿಗಳಾಗಿರುವ] ವಿಕ್ಷೀಣಕೇಭ್ಯಃ**=ಭಕ್ತರಲ್ಲದ ದೇವದ್ವೇಷಿಗಳನ್ನು ಬಗೆಬಗೆಯಾಗಿ ಹಿಂಸಿಸುವವರಾದ/ಅಜ್ಞಾತರಾಗಿ ಹಿಂಸಿಸುವವರಾದ ನಿಮಗೆ; **ನಮಃ**=ನಮಸ್ಕಾರ.

▲ **[ದೇವಹೃದಯರಾದ ರುದ್ರಮೂರ್ತಿಗಳಾಗಿರುವ] ವಿಚಿನ್ವತ್ಕೇಭ್ಯಃ**=ಇವರು ಪುಣ್ಯವಂತರು; ಇವರು ಪಾಪಿಗಳೆಂದು ಹುಡುಕಿ ಅನುಗ್ರಹಿಸುವ ಅಥವಾ ಶಿಕ್ಷಿಸುವ ನಿಮಗೆ; **ನಮಃ**=ನಮಸ್ಕಾರ.

**: ತಾತ್ಪರ್ಯ- ಸಾ. ಭಾ. :**

ಅಪರಾಧಿಗಳು ಮಾಡಿರುವ ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸುವ, ದೊಡ್ಡ ಅಪರಾಧಿಗಳನ್ನು ಬಲವಾಗಿ ಶಿಕ್ಷಿಸಿ ನೋಯಿಸುವ ರೂಪದ ರುದ್ರನಿಗೆ ನಮಸ್ಕಾರ.

ಭಕ್ತರ ಕಾಮನೆಗಳನ್ನು ಸುರಿಸಿಕೊಡುವ, ಭಕ್ತರಿಗೆ ಐಶ್ವರ್ಯವನ್ನು ಉದಾರವಾಗಿ ಕರುಣಿಸುವ, ಸರ್ವದೇವಪ್ರಿಯರಾದ ದೇವತೆಗಳ ಹೃದಯದಂತೆ ಇರುವ ರುದ್ರಾವತಾರರಾದ ನಿಮಗೆ ನಮಸ್ಕಾರ.

**: ತಾತ್ಪರ್ಯ- ಭ. ಭಾ. ಭಾ. :**

**'ನಮೋ ವಃ ಕಿರಿಕೇಭ್ಯಃ'** ಎಂದು ಆರಂಭಿಸಿ ಅನುವಾಕದ ಕೊನೆಯವರೆಗೂ ಒಂದೇ ಮಂತ್ರ. ಶತರುದ್ರೀಯ ಹವನದಲ್ಲಿ ಅನುಷಂಗದಿಂದ ಕೂಡಿ ಐದು ಮಂತ್ರಗಳಾಗುತ್ತವೆ. ಈ ಮಂತ್ರಗಳಲ್ಲಿ **'ಯುಷ್ಮದ್'** ಶಬ್ದವಿರುವುದರಿಂದ ಇವು ಪ್ರತ್ಯಕ್ಷಕೃತಗಳು.

ಈವರೆಗೆ ದೇವನ ಲೀಲಾವಿಗ್ರಹಮೂರ್ತಿಗಳಿಗೆ ಆಧಾರವಾಗಿರುವ ಕ್ರಿಯಾ-ಜಾತಿ-ಆಕೃತಿಗಳಿಂದ ಭಿನ್ನರಾದ

# ನಮ ಆನಿರ್ಹತೇಭ್ಯೋ

ನಮಃ। ಆನಿರ್ಹತೇಭ್ಯ ಇತ್ಯಾನಿಃ–ಹತೇಭ್ಯಃ।

| ಮಂತ್ರ | ವಿನಿಯೋಗ |
|---|---|
| ನಮ ಆನಿರ್ಹತೇಭ್ಯಃ...ಹೃದಯೇಭ್ಯಃ॥ | ಶತರುದ್ರೀಯಹವನ/ರುದ್ರಾವತಾರರನ್ನು ನಮಿಸಲು/ ಶಿವಗಣಗಳನ್ನು ನಮಸ್ಕರಿಸಲು/ದೇವಹೃದಯರಾದ ರುದ್ರಮೂರ್ತಿಗಳನ್ನು ನಮಿಸಲು. |

ಪದಶಃ ಅರ್ಥ– ಸಾ. ಭಾ.

▲ **[ಸರ್ವದೇವತೆಗಳಿಗೂ ಹೃದಯದಂತೆ ಪ್ರಿಯರಾಗಿರುವ] ಆನಿರ್ಹತೇಭ್ಯಃ**=ಸಂಪೂರ್ಣವಾಗಿ ಪಾಪಗಳನ್ನು ಹೋಗಲಾಡಿಸುವವರಾದ ನಿಮಗೆ; **ನಮಃ**=ನಮಸ್ಕಾರ.

ಪದಶಃ ಅರ್ಥ– ಭ. ಭಾ. ಭಾ.

▲ **[ದೇವಹೃದಯರಾದ ರುದ್ರಮೂರ್ತಿಗಳಾಗಿರುವ] ಆನಿರ್ಹತೇಭ್ಯಃ**=ಶಿಷ್ಟರಾದವರಿಗೆ ಅನ್ಯಾಯವುಂಟಾಗದಂತೆಯೂ, ಅಪರಾಧಿಗಳು ಶಿಕ್ಷಿಸಲ್ಪಡುವಂತೆಯೂ, ಉದಾಸೀನರಾಗಿರದೆ ಎಚ್ಚರವಾಗಿರುವ/ಬೇರೆ ದೇವತೆಗಳಿಂದ ರುದ್ರನನ್ನು ಪ್ರತ್ಯೇಕವಾಗಿ ಭಾವಿಸಿ, ಭಜಿಸುವಂತೆ ಮಾಡುವ ನಿಮಗೆ; **ನಮಃ**=ನಮಸ್ಕಾರ.

: ತಾತ್ಪರ್ಯ– ಸಾ. ಭಾ. :

ಈ ಮಂತ್ರದ **'ದೇವಾನಾಗ್ಂ ಹೃದಯೇಭ್ಯಃ'** ಎಂಬ ಭಾಗವು ಮುಂದಿನ **'ನಮೋ ವಿಕ್ಷೀಣಕೇಭ್ಯಃ'** ಮುಂತಾದ ನಾಲ್ಕು ಮಂತ್ರಗಳಲ್ಲಿಯೂ ಅನುಷಂಗ ಹೊಂದುತ್ತದೆ.

ಕ್ಷಯರಹಿತರಾಗಿ ರುದ್ರಾವತಾರರಾದ ಸರ್ವದೇವತೆಗಳಿಗೂ ಹೃದಯದಂತೆ ಪ್ರಿಯರಾದ ನಿಮಗೆ ನಮಸ್ಕಾರ.

: ತಾತ್ಪರ್ಯ– ಭ. ಭಾ. ಭಾ. :

ರುದ್ರಮೂರ್ತಿಗಳು ಪ್ರತ್ಯೇಕವಾಗಿ ನಮಸ್ಕರಿಸಲ್ಪಟ್ಟರು. ಈಗ ಅವರೇ ಸಮೂಹರೂಪದಿಂದ ನಮಸ್ಕರಿಸಲ್ಪಡುತ್ತಾರೆ. ಕೆಲವರು ದೇವನನ್ನು ನಮಸ್ಕರಿಸಿದ ಬಳಿಕ ದೇವನ ಅನುಚರರು ನಮಸ್ಕರಿಸಲ್ಪಡುತ್ತಾರೆ ಎಂದು ಹೇಳುತ್ತಾರೆ. ಇತರರು ಪ್ರಸಿದ್ಧವಾದ ವೇಷಾಕಾರವುಳ್ಳ ದೇವನ ಅನುಚರರು ಅಂದರೆ ಮೂರ್ತಿಭೇದಗಳು ನಮಸ್ಕರಿಸಲ್ಪಟ್ಟರು. ಈಗ ಗುಪ್ತರಾದ, ಅಜ್ಞಾತಸ್ವಭಾವದ, ಜಗತ್ತನ್ನು ನಿಯಂತ್ರಿಸುವ, ರುದ್ರರೂಪರು ನಮಸ್ಕರಿಸಲ್ಪಡುತ್ತಾರೆ. ಎಂದು ಹೇಳುತ್ತಾರೆ. ಈ ಪಕ್ಷವು ಯುಕ್ತವಾದುದು. ಹೀಗೆ ಹೇಳಿದರೆ ಕಿರಿಕ, ವಿಕ್ಷೀಣಕ, ವಿಚಿನ್ವತ್ಕ, ಎಂಬಲ್ಲಿರುವ ಅಜ್ಞಾತ ಎಂಬ ಅರ್ಥದಲ್ಲಿ ವಿಧಿಸಲ್ಪಡುವ **'ಪ್ರಾಗಿವಾತ್ಕಃ'** [ಪಾ. ಸೂ. 5.3.70] ಎಂಬ **'ಕ'** ಪ್ರತ್ಯಯವು ಯುಕ್ತವಾಗುತ್ತದೆ. ಈ ಮಂತ್ರಗಳಲ್ಲಿ **'ದೇವಾನಾಗ್ಂ ಹೃದಯೇಭ್ಯಃ'** ಎಂದು ಶ್ರುತಿಯು ಹೇಳುತ್ತದೆ. ಇದರ ಅಭಿಪ್ರಾಯವು ಹೀಗಿದೆ:– ನೀವು ದೇವತೆಗಳ ಹೃದಯಸ್ವರೂಪರಾಗಿರುತ್ತೀರಿ, ದೇವತೆಗಳು ಮಾತ್ರವೇ ನಿಮ್ಮನ್ನು ತಿಳಿದಿರುತ್ತಾರೆ. ನಾವು ಮನುಷ್ಯಾದಿಗಳು ನಿಮ್ಮನ್ನು ತಿಳಿದಿಲ್ಲ ಎಂದು ಹೇಳಲಾಗಿದೆ.

ನೀವು ಕಿರಿಕಾದಿ ಸ್ವಭಾವದವರು. ಹೀಗೆಯೇ ವಿಕ್ಷೀಣಕರು, ವಿಚಿನ್ವತ್ಕರು, ಆನಿರ್ಹತರು, ಆಮೀವತ್ಕರು ಎಂದು

# ನಮ ಆಮೀವತ್ಕೇಭ್ಯಃ ॥ ೨೦-9 ॥

[ಉಲಪ್ಯಾಯ ಚ ತ್ರಯಸ್ತ್ರಿಗ್ಂಶಚ್ಚ ॥]

---

ನಮಃ। ಆಮೀವತ್ಕೇಭ್ಯ ಇತ್ಯಾ-ಮೀವತ್ಕೇಭ್ಯಃ ॥(೨೦)॥

---

| ಮಂತ್ರ | ವಿನಿಯೋಗ |
| --- | --- |
| ನಮ ಆಮೀವತ್ಕೇಭ್ಯಃ...ಹೃದಯೇಭ್ಯಃ ॥ | ಶತರುದ್ರೀಯಹವನ/ರುದ್ರಾವತಾರರನ್ನು ನಮಿಸಲು/ ಶಿವಗಣ ಗಳನ್ನು ನಮಸ್ಕರಿಸಲು/ದೇವಹೃದಯರಾದ ರುದ್ರಮೂರ್ತಿ ಗಳನ್ನು ನಮಿಸಲು. |

ಪದಶಃ ಅರ್ಥ-. ಸಾ. ಭಾ.

▲ **[ಸರ್ವದೇವತೆಗಳಿಗೂ ಹೃದಯದಂತೆ ಪ್ರಿಯರಾಗಿರುವ] ಆಮೀವತ್ಕೇಭ್ಯಃ**=ಸರ್ವತೋಮುಖವಾದ ವೃದ್ಧಿಯನ್ನು ಹೊಂದುತ್ತಲೇ ಇರುವ ಶಿವಮೂರ್ತಿಗಳಿಗೆ; **ನಮಃ**=ನಮಸ್ಕಾರ.

ಪದಶಃ ಅರ್ಥ- ಭ. ಭಾ. ಭಾ.

▲ **[ದೇವಹೃದಯರಾದ ರುದ್ರಮೂರ್ತಿಗಳಾಗಿರುವ;] ಆಮೀವತ್ಕೇಭ್ಯಃ**=ಸರ್ವರೀತಿಯಿಂದಲೂ ವಿಜೃಂಭಿಸುವ/ಪಾಪಿಗಳು ತಪ್ಪಿಸಿಕೊಳ್ಳದಂತೆ ಜಾಗರೂಕರಾಗಿರುವ ನಿಮಗೆ; **ನಮಃ**=ನಮಸ್ಕಾರ.

: ತಾತ್ಪರ್ಯ- ಸಾ. ಭಾ. :

ಅಪೇಕ್ಷಿತವಾದ ಇಷ್ಟಾರ್ಥಗಳನ್ನು ಭಕ್ತರಿಗೆ ಅನುಗ್ರಹಿಸುವ ಶಿವಾನುಚರರಾದ ದೇವಹೃದಯರಾದ ನಿಮಗೆ ನಮಸ್ಕಾರ.

ನಿಃಶೇಷವಾಗಿ ಪಾಪಗಳನ್ನು ಹೋಗಲಾಡಿಸುವ ದೇವಹೃದಯಭೂತರಾದ ಶಿವಾನುಚರರಾದ ನಿಮಗೆ ನಮಸ್ಕಾರ.

ಸುತ್ತಲೂ ಪುಷ್ಟಿಯನ್ನು ಹೊಂದುವ ರುದ್ರರಿಗೆ, ರುದ್ರಭಕ್ತರಾದ ಗಣಗಳಿಗೆ ದೇವತೆಗಳಿಗೆ ಹೃದಯದಂತೆ ಇಷ್ಟರಾದ ನಿಮಗೆ ನಮಸ್ಕಾರ.

ಈ ಪ್ರಪಾಠಕದಲ್ಲಿ **'ನಮೋ ಭವಾಯ ಚ'** ಎಂದು ಆರಂಭವಾಗುವ ಐದನೆಯ ಅನುವಾಕದಿಂದ **'ನಮ ಇರಿಣ್ಯಾಯ ಚ'** ಎಂಬ ಈ ಒಂಭತ್ತನೆಯ ಅನುವಾಕ ಪೂರ್ತಿ ಅನ್ಯತೋನಮಸ್ಕಾರರೂಪವಾದ ಒಂದೊಂದು ಮಂತ್ರಗಳು ರುದ್ರನ ಸರ್ವಾತ್ಮಕತ್ವವನ್ನು ಸ್ತುತಿಸುತ್ತವೆ. ಅನುವಾಕಭೇದವನ್ನು ಮಾಡಿರುವುದು ಯಾಗದ ವಿನಿಯೋಗಕ್ಕಿಂತಲೂ ಬೇರೆಯ ವಿನಿಯೋಗಕ್ಕಾಗಿ. ಆಗ ಒಂದೊಂದು ಅನುವಾಕವೇ ಒಂದೊಂದು ಮಂತ್ರ.* ಆ ಒಂದೊಂದು ಅನುವಾಕದ ಪುರಶ್ಚರಣಕ್ರಮವು ರುದ್ರಕಲ್ಪದಲ್ಲಿ ಹೇಳಲ್ಪಟ್ಟಿದೆ.

: ತಾತ್ಪರ್ಯ- ಭ. ಭಾ. ಭಾ. :

ಹೇಳಲಾಗಿದೆ. ಈ ಎಲ್ಲ ಮಂತ್ರಗಳಲ್ಲಿಯೂ ದೇವತೆಗಳ ಹೃದಯಭೂತರು ಎಂದು ಅನ್ವಯವಾಗುತ್ತದೆ.

* ರುದ್ರಹೋಮದ ಅನುಷ್ಠಾನದಲ್ಲಿ ಹಲವು ಪಕ್ಷಗಳಿವೆ.

: ತಾತ್ಪರ್ಯ- ಛ. ಛಾ. ಛಾ. :

ಹಿಂದೆ ಹೇಳದ, ಜಾತರಾಗದೆಯೇ ಜಗತ್ತನ್ನು ನಿಯಂತ್ರಿಸುವ ಕಿರಿಕಾದ್ಯರಾದ ರುದ್ರಮೂರ್ತಿಗಳೇ! ನಿಮಗೆ ನಮಸ್ಕಾರವು. ನೀವು ಅನುಗ್ರಹಿಸಿ, ಆಯುಧಗಳನ್ನು ಉಪಸಂಹಾರ ಮಾಡಿರಿ. ನಮಗೆ ಅಭಯವನ್ನು ನೀಡಿರಿ.

ಕಿರಿಕರೆಂದರೆ ಸ್ವೇಚ್ಛೆಯಿಂದ ಲೋಕಗಳನ್ನು ಹಿಂಸಿಸುವವರು. ಲೋಕಗಳನ್ನು ತಮ್ಮ ಇಚ್ಛೆಯಿಂದ ಉತ್ಪಾದಿಸುವವರು. ಲೋಕಗಳಲ್ಲಿ ಸಂಚರಿಸುವವರು. **'ದೇವಾನಾಂ ಹೃದಯೇಭ್ಯಃ'** ಎಂದರೆ ದೇವತೆಗಳ ಹೃದಯದಲ್ಲಿ ಇರುವವರು. ದೇವತೆಗಳ ಹೃದಯದಲ್ಲಿ ಅನುಗ್ರಹಕ್ಕಾಗಿ ಆವಿರ್ಭವಿಸುವವರು. ದೇವತೆಗಳಿಂದ ತಮ್ಮ ಅಭೀಷ್ಟಕಾರ್ಯಕ್ಕಾಗಿ ಸದಾ ನೆನಪಿಸಿಕೊಳ್ಳಲ್ಪಡತಕ್ಕವರು. ದೇವತೆಗಳಿಗೆ ಹೃದಯರೂಪರಾಗಿ ಆಪ್ತತಮರಾಗಿರತಕ್ಕವರು. ಇಂತಹ ಕಿರಿಕರಾದ ರುದ್ರಮೂರ್ತಿಗಳಿಗೆ ನಮಸ್ಕಾರ.

ದೇವತೆಗಳ ವಿವರಣೆಯು ಹೀಗಿದೆ; ಪೃಥಿವಿ, ಅಂತರಿಕ್ಷ ಮತ್ತು ದ್ಯುಲೋಕಗಳಲ್ಲಿರುವ ಅಗ್ನಿ, ವಾಯು, ಸೂರ್ಯಪ್ರಧಾನರಾದ ದೇವತೆಗಳು ಹನ್ನೊಂದು ಹನ್ನೊಂದು ಮಂದಿ. ಈ ದೇವತೆಗಳು **'ಯೇ ದೇವಾ ದಿವ್ಯೇಕಾದಶ ಸ್ಥ'** ಎಂದು ಹೇಳಲ್ಪಟ್ಟಿರುತ್ತಾರೆ. ಹೀಗೆ ಮೂವತ್ತಮೂರು ದೇವತೆಗಳು ಇದ್ದಾರೆ.

ಅವರಲ್ಲಿ ಒಬ್ಬೊಬ್ಬರ ವಿಭೂತಿಭೂತರಾದವರು ನೂರುನೂರು ಮಂದಿ. ಅವರ ಗಣಗಳು ಮೂವತ್ತು ಮೂರು. ಇವರಿಗೆ ಅಗ್ನಿ-ವಾಯು-ಸೂರ್ಯರು ಪ್ರಧಾನರು. ಹೀಗೆ ಭೂಲೋಕದಲ್ಲಿ ಪ್ರಧಾನಭೂತರಾದ ದೇವತೆಗಳು ಹನ್ನೊಂದು ಜನ; ಅವರ ಮೂವತ್ತಮೂರು ಮಂದಿಯ ಗಣಗಳು, ಇಂತಹ ಗಣಗಳ ಮೂವತ್ತಮೂರು **'ತ್ರಯಾ ದೇವಾ ಏಕಾದಶ । ತ್ರಯಸ್ತ್ರಿಗ್ಂಶಾಃ ಸುರಾಧಸಃ'** ಹೀಗೆ ಹೇಳಿದೆ. ಅಗ್ನಿಯು ಪ್ರಧಾನನು. ವಾಯು-ಸೂರ್ಯರು ಜೊತೆಯಲ್ಲಿ ಇರುವವರು. ಹೀಗೆ ಒಟ್ಟುಕೂಡಿ ಸಾವಿರದ ನೂರಮೂವತ್ತೊಂಬತ್ತು ದೇವತೆಗಳು. ಹೀಗೆಯೇ ಅಂತರಿಕ್ಷ-ದ್ಯುಲೋಕಗಳಲ್ಲಿಯೂ. ಎಲ್ಲವೂ ಸೇರಿ ಮೂರು ಸಾವಿರದ ಮೂರುನೂರ ಮೂವತ್ತೊಂಬತ್ತು [3339] ದೇವತೆಗಳಾಗುತ್ತಾರೆ. **'ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಮ್ । ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।' [ಋ. 3.9.9]** ಎಂದು ಹೇಳಿದೆ. ಈ ರುದ್ರಮೂರ್ತಿಗಳೆಲ್ಲ ನಾನಾವೇಷಾಧಿಕಾರವುಳ್ಳವರು. ಅಗ್ನಿಯ ಕಿಡಿಗಳಂತೆ ದೇವನ ಅಂಶಭೂತರು. ಅವರಿಗೆ ನಮಸ್ಕಾರವು. ಅವರು ಪ್ರಸನ್ನರಾಗಲಿ.

ಭಕ್ತರಲ್ಲದ ದೇವದ್ವೇಷಿಗಳನ್ನು ಬಗೆಬಗೆಯಾಗಿ ಶಿಕ್ಷಿಸುವ, ಅಜ್ಞಾತರಾಗಿ ಇದ್ದುಕೊಂಡು ಹಿಂಸಿಸುವ, ದೇವಹೃದಯರಾದ, ಪುಣ್ಯವಂತರನ್ನು ಮತ್ತು ಪಾಪಿಗಳನ್ನು ಹುಡುಕಿ ಅವರನ್ನು ಅನುಗ್ರಹಿಸುವವರಾದ ಮತ್ತು ನಿಗ್ರಹಿಸುವವರಾದ ರುದ್ರಮೂರ್ತಿಗಳಾದ ನಿಮಗೆ ನಮಸ್ಕಾರ.

ಶಿಷ್ಟರಾದವರಿಗೆ ಅನ್ಯಾಯವಾಗದಂತೆಯೂ, ಅಪರಾಧಿಗಳು ಶಿಕ್ಷಿಸಲ್ಪಡುವಂತೆಯೂ ಉದಾಸೀನರಾಗಿರದೆ ಎಚ್ಚರವಾಗಿರುವ, ಬೇರೆ ದೇವತೆಗಳಿಂದ ರುದ್ರನನ್ನು ಪ್ರತ್ಯೇಕವಾಗಿ ಭಾವಿಸಿ, ಭಜಿಸುವಂತೆ ಮಾಡುವ ರುದ್ರಮೂರ್ತಿಗಳಿಗೆ ನಮಸ್ಕಾರ. ಇನ್ನೊಂದೆಡೆ ಶ್ರುತಿಯಲ್ಲಿ 'ಹೇ! ರುದ್ರ! ನಿನ್ನನ್ನು ನಿನಗೆ ಸಮಾನಸ್ಕಂಧರಲ್ಲದ ದೇವತೆಗಳೊಡನೆ ಆಮಂತ್ರಿಸಿ ನೀನು ಅಸಮಾಧಾನಗೊಳ್ಳುವಂತೆ ನಾವು ಮಾಡುವುದಿಲ್ಲ' **ಮಾ ತ್ವಾ ರುದ್ರ...[ಋ. 2.33. 4]** ಎಂದು ಹೇಳಿದೆ.

ಸರ್ವರೀತಿಯಿಂದಲೂ ವಿಜೃಂಭಿಸುವವರಾದ, ಪಾಪಿಗಳಾದವರು ತಪ್ಪಿಸಿಕೊಳ್ಳದಂತೆ ಜಾಗರೂಕರಾಗಿರುವ ದೇವಹೃದಯರಾದ ರುದ್ರಮೂರ್ತಿಗಳಾದ ನಿಮಗೆ ನಮಸ್ಕಾರ. ನೀವು ನಮ್ಮನ್ನು ಅನುಗ್ರಹಿಸಿರಿ. ನಿಮ್ಮ ಆಯುಧಗಳನ್ನು ಉಪಸಂಹಾರ ಮಾಡಿ ನಮಗೆ ಎಲ್ಲ ವಿಧದ ಅಭಯವನ್ನು ಕರುಣಿಸಿರಿ.

# ॥ ದಶಮೋऽನುವಾಕಃ ॥

**ದ್ರಾಪೇ ಅಂಧಸಸ್ಪತೇ ದರಿದ್ರನ್ನೀಲಲೋಹಿತ ।**

ದ್ರಾಪೇ । ಅಂಧಸಃ । ಪತೇ । ದರಿದ್ರತ್ । ನೀಲಲೋಹಿತೇತಿ ನೀಲ–ಲೋಹಿತ ॥

| ಮಂತ್ರ | ವಿನಿಯೋಗ |
|---|---|
| **ದ್ರಾಪೇ...ಆಮಮತ್ ॥** | ಅಗ್ನಿಚಯನದಲ್ಲಿ ಶತರುದ್ರೀಯಹೋಮವನ್ನು ಅನುಷ್ಠಿಸಲು/ ರುದ್ರನ ಪ್ರಾರ್ಥನೆ/ರುದ್ರನಲ್ಲಿ ಅಭಯವನ್ನು ಬೇಡಲು. |

**ಎರಡನೆಯ ಅನುವಾಕದಿಂದ ಒಂಬತ್ತನೆಯ ಅನುವಾಕದವರೆಗೂ ನಮಸ್ಕಾರಯುಕ್ತವಾದ ಯಜುಸ್ಸುಗಳು ಹೇಳಲ್ಪಟ್ಟವು. ಅವು ಉಭಯತೋನಮಸ್ಕಾರ ಹಾಗೂ ಅನ್ಯತೋನಮಸ್ಕಾರರೂಪವಾದವುಗಳು. ಈ ಹತ್ತನೆಯ ಅನುವಾಕದಲ್ಲಿ ಪ್ರಾರ್ಥನಾರೂಪವಾದ ಋಕ್‌ರೂಪವಾದ ಮಂತ್ರಗಳು ಹೇಳಲ್ಪಟ್ಟಿವೆ.**

**ಪದಶಃ ಅರ್ಥ– ಸಾ. ಭಾ.**

▲ **ದ್ರಾಪೇ**=ಪಾಪಿಗಳನ್ನು ನರಕಕ್ಕೆ ಹಾಕಿ ಶಿಕ್ಷಿಸುವವನೇ!; **ಅಂಧಸಃ**=[ಭಕ್ತರ] ಅನ್ನದ; **ಪತೇ**= ಒಡೆಯನೇ! [ರಕ್ಷಕನೇ]; **ದರಿದ್ರತ್**=ನಿಷ್ಕಿಂಚನನಾದವನೇ!/ವಿರಕ್ತನಾದವನೇ!/ಕೇವಲನಾದವನೇ! **ನೀಲಲೋಹಿತ**=ಕಂಠದಲ್ಲಿ ವಿಷದಿಂದ ಕೃಷ್ಣವರ್ಣಧಾರಿಯೂ ಉಳಿದ ಭಾಗದಲ್ಲಿ ರಕ್ತವರ್ಣದವನೂ ಆಗಿರುವ ರುದ್ರದೇವನೇ!

**ಪದಶಃ ಅರ್ಥ– ಭ. ಭಾ. ಭಾ.**

▲ **[ಇಲ್ಲಿಯವರೆಗೆ ದೇವನನ್ನು ವಿಶ್ವರೂಪನನ್ನಾಗಿ ಸ್ತುತಿಸಿ, ಈಗ ಅಭಯವನ್ನು ಯಾಚಿಸಲಾಗಿದೆ]** **ದ್ರಾಪೇ**=ಪಾಪಿಗಳಿಗೆ ಯಾತನಾತ್ಮಕವಾದ ಅಥವಾ ದಾರಿದ್ರ್ಯಾತ್ಮಕವಾದ ದುರ್ಗತಿಯನ್ನು ಕೊಡುವವನೇ! /ಪ್ರಳಯದಲ್ಲಿ ಲೋಕಗಳಿಗೆ ಉಪಸಂಹಾರವೆಂಬ ಶೋಚ್ಯಸ್ಥಿತಿಯನ್ನು ಉಂಟುಮಾಡುವವನೇ!/ಕುತ್ಸಿತವಾದ ಗತಿಯನ್ನು ನೀಡುವವನೇ!/ಕವಚಧಾರಿಯೇ!; **ಅಂಧಸಃ ಪತೇ**=ಅನ್ನಪತಿಯೇ!/ಭಕ್ತರ ಅನ್ನದ ರಕ್ಷಕನೇ! **ದರಿದ್ರತ್**=ಭಕ್ತರಿಗೆ ಬೇಡಿದುದನ್ನು ಕೊಡುವವನಾದರೂ ಸ್ವತಃ ನಿಷ್ಪರಿಗ್ರಹನಾಗಿ ವ್ಯಾಘ್ರಚರ್ಮ ಅಥವಾ ಗಜಚರ್ಮಧಾರಿಯೇ!/ಪರಿಗ್ರಹದಲ್ಲಿ ಆದರವಿಲ್ಲದವನೇ! **ನೀಲಲೋಹಿತ**=ನರನಾರೀರೂಪನಾಗಿರುವುದರಿಂದ ನೀಲನೂ ಲೋಹಿತವರ್ಣದವನೂ ಆಗಿರುವವನೇ!/ನಾಮರೂಪಾತ್ಮಕವಾದವನೇ!/ ಕಂಠದಲ್ಲಿ ನೀಲವರ್ಣದವನೂ, ಉಳಿದೆಡೆ ಕೆಂಪುವರ್ಣದವನೇ! ಕಾಲುಷ್ಯರಹಿತನೇ! ರುದ್ರದೇವನೇ!

ಏಷಾಂ ಪುರುಷಾಣಾಮೇಷಾಂ ಪಶೂನಾಂ ಮಾ ಭೇರ್ಮಾಽರೋ

ಮೋ ಏಷಾಂ ಕಿಂ ಚನಾಽಽಮಮತ್ ॥

ಏಷಾಮ್ । ಪುರುಷಾಣಾಮ್ । ಏಷಾಮ್ । ಪಶೂನಾಮ್ । ಮಾ । ಭೇಃ । ಮಾ । ಅರಃ । ಮೋ ಇತಿ । ಏಷಾಮ್ ।

ಕಿಮ್ । ಚನ । ಆಮಮತ್ ॥

ಪದಶಃ ಅರ್ಥ– ಸಾ. ಭಾ.

**ಏಷಾಮ್ ಪುರುಷಾಣಾಮ್**=ಈ ನಮ್ಮ ಪುತ್ರಾದಿಪುರುಷರನ್ನು; **ಏಷಾಮ್**=[ಮತ್ತು] ಈ; **ಪಶೂನಾಮ್**=ಗೋ, ಅಶ್ವಾದಿ ಪಶುಗಳನ್ನು; **ಮಾ ಭೇಃ**=ಭಯಪಡದಿರುವಂತೆ ಮಾಡು; **ಮಾ ಅರಃ**= ಯಾವುದೊಂದೂ ಹೋಗದಿರುವಂತೆ;/ನಾಶವಾಗದಿರುವಂತೆ ಮಾಡು; [ಮತ್ತು] **ಏಷಾಮ್**=ಇವುಗಳಲ್ಲಿ; **ಕಿಮ್ ಚನ**=ಯಾವುದೊಂದೂ; **ಮೋ ಆಮಮತ್**=ರೋಗಪೀಡಿತವಾಗದಿರಲಿ.

ಪದಶಃ ಅರ್ಥ– ಭ. ಭಾ. ಭಾ.

**ಏಷಾಮ್**=ನಮ್ಮವರಾದ; **ಪುರುಷಾಣಾಮ್**=ಪುತ್ರಾದಿಪುರುಷರನ್ನೂ; **ಏಷಾಮ್**=ನಮ್ಮದಾದ; **ಪಶೂನಾಮ್***=ಗೋವು ಮುಂತಾದ ಪಶುಗಳನ್ನು; **ಮಾ ಭೇಃ**=ಹೆದರಿಸಬೇಡ; **ಮಾ ಅರಃ**=ಹಿಂಸಿಸ ಬೇಡ/[ಇವುಗಳಿಗೆ ಹಿಂಸೆಯಾಗದಿರಲಿ][ಯಾವುದೂ ಪೀಡೆಯನ್ನು ಹೊಂದದಿರಲಿ] **ಏಷಾಮ್**=ಇವುಗ ಳನ್ನು; **ಕಿಮ್ ಚನ**=ಯಾವುದೊಂದೂ; [ಜ್ವರಾದಿರೋಗದಿಂದ] **ಮೋ [ಮಾ+ಉ] ಆಮಮತ್**=[ನಿನ್ನ ಅನುಗ್ರಹದಿಂದ] ಹಿಂಸಿಸದಿರಲಿ.

: ತಾತ್ಪರ್ಯ– ಸಾ. ಭಾ. :

ರುದ್ರನ ಪ್ರಾರ್ಥನಾರೂಪವಾದ ಋಕ್‌ಗಳಲ್ಲಿ ಇದು ಮೊದಲನೆಯ ಋಕ್ ಆಗಿದೆ:–ಹೇ! ರುದ್ರದೇವ! ನೀನು ಪಾಪಿಗಳನ್ನು ನರಕಕ್ಕೆ ಹಾಕಿ ದಂಡಿಸುವವನು. ನೀನು ಭಕ್ತರ ಅನ್ನವನ್ನು ನೀಡುವವನು ಮತ್ತು ರಕ್ಷಿಸುವವನು, ನೀನು

* ಪುರುಷಾಣಾಮ್, ಪಶೂನಾಮ್ ಎಂಬಲ್ಲಿ ಷಷ್ಠೀವಿಭಕ್ತಿಯು ಚತುರ್ಥೀವಿಭಕ್ತಿಯ ಅರ್ಥದಲ್ಲಿದೆ. ಆ ಚತುರ್ಥಿಯು ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿದೆ. ಹೀಗಾಗಿ ಪುರುಷಾಣಾಮ್=ಪುರುಷರನ್ನು; ಪಶೂನಾಮ್=ಪಶುಗಳನ್ನು ಎಂದು ಅರ್ಥ. ಎಂದು ಮಿಶ್ರರು ವಿವರಿಸಿದ್ದಾರೆ.

**'ಪಶುನಾ ರುದ್ರಂ ಯಜತೇ'** ಎಂಬ ವಾಕ್ಯಕ್ಕೆ **'ಪಶುಂ ರುದ್ರಾಯ ದದಾತಿ'** ಎಂದು ಅರ್ಥ. ರುದ್ರಂ ಎಂಬಲ್ಲಿ ದ್ವಿತೀಯಾವಿಭಕ್ತಿಯು ಚತುರ್ಥೀವಿಭಕ್ತಿಯ ಅರ್ಥದಲ್ಲಿದೆ. [ಪಶುವಿನಿಂದ ರುದ್ರನಿಗೆ ಯಾಗ ಮಾಡುತ್ತಾನೆ=ರುದ್ರನಿಗೆ ಸಮರ್ಪಿಸುತ್ತಾನೆ]. **'ಚತುರ್ಥ್ಯರ್ಥೇ ಬಹುಲಂ ಛಂದಸಿ'** ಎಂದು ಪಾಣಿನಿಸೂತ್ರ. ಹೀಗಾಗಿ ಪುರುಷಾಣಾಮ್ ಎಂಬ ಷಷ್ಠಿಯು ಚತುರ್ಥ್ಯರ್ಥದಲ್ಲಿದ್ದು, ಆ ಚತುರ್ಥಿಯು **'ರುದ್ರಂ'** ಎಂಬಲ್ಲಿಯಂತೆ ದ್ವಿತೀಯಾವಿಭಕ್ತಿಯ ಅರ್ಥದಲ್ಲಿರುವುದರಿಂದ ಪುರುಷಾಣಾಮ್=ಪುರುಷರನ್ನು; **ಪಶೂನಾಮ್**=ಪಶುಗ ಳನ್ನು ಎಂದು ಅರ್ಥ.

| **ದ್ವಿತೀಯಾ** | **ಚತುರ್ಥೀ** | **ಷಷ್ಠೀ** |
|---|---|---|
| ಪಶೂನ್ | ಪಶುಭ್ಯಃ | ಪಶೂನಾಮ್. |

**'ಸಮುದ್ರಸ್ಯ ನ ಪಿಬಂತಿ'** [ತೈ. ಬ್ರಾ. 2.2]=ಸಮುದ್ರದ ನೀರನ್ನು ಕುಡಿಯುವುದಿಲ್ಲ. ಎಂಬ ಶ್ರುತಿವಚನವೇ ಈ ರೀತಿಯ ವಿವರಣೆಗೆ ಪ್ರಮಾಣ.

**ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾಹಭೇಷಜೀ । ಶಿವಾ ರುದ್ರಸ್ಯ ಭೇಷಜೀ ತಯಾ ನೋ ಮೃಡ ಜೀವಸೇ ॥**

ಯಾ । ತೇ । ರುದ್ರ । ಶಿವಾ । ತನೂಃ । ಶಿವಾ । ವಿಶ್ವಾಹಭೇಷಜೀತಿ ವಿಶ್ವಾಹ-ಭೇಷಜೀ ॥ ಶಿವಾ । ರುದ್ರಸ್ಯ । ಭೇಷಜೀ । ತಯಾ । ನಃ । ಮೃಡ । ಜೀವಸೇ ॥

| ಮಂತ್ರ | ವಿನಿಯೋಗ |
|---|---|
| **ಯಾ ತೇ...ಜೀವಸೇ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

**ಪದಶಃ ಅರ್ಥ- ಸಾ. ಭಾ.**

**ರುದ್ರ**=ರುದ್ರದೇವನೇ! **ತೇ**=ನಿನ್ನ; **ಯಾ**=ಯಾವ; **ಶಿವಾ**=ಮಂಗಳಕರವಾದ; **ತನೂಃ**=ಶರೀರವಿದೆಯೋ; **ಜೀವಸೇ**=ಬಾಳುವುದಕ್ಕಾಗಿ; **ನಃ**=ನಮ್ಮನ್ನು; **ತಯಾ**=ಆ ಶರೀರದಿಂದ; **ಮೃಡ**=ಸುಖವಾಗಿರುವಂತೆ ಮಾಡು. [ಆ ಶರೀರವು] **ವಿಶ್ವಾಹಭೇಷಜೀ**=ಎಲ್ಲ ದಿನಗಳಲ್ಲಿಯೂ ರೋಗ-ದಾರಿದ್ರ್ಯಗಳಿಗೆ ಔಷಧವಾಗಿ; **ಶಿವಾ**=ಮಂಗಳಕರವಾಗಿದೆ. **ರುದ್ರಸ್ಯ**=ರುದ್ರದೇವನ ತಾದಾತ್ಮ್ಯಪ್ರಾಪ್ತಿಗಾಗಿ; **ಭೇಷಜೀ**=ಔಷಧದಂತೆ ಇದ್ದು; **ಶಿವಾ**=ಮಂಗಳಕರವಾಗಿದೆ.

**ಪದಶಃ ಅರ್ಥ- ಭ. ಭಾ. ಭಾ.**

**ರುದ್ರ**=ಹೇ! ರುದ್ರದೇವನೇ! **ತೇ**=ನಿನ್ನ; **ಯಾ**=ಯಾವ; **ಶಿವಾ**=ಸುಖವನ್ನುಂಟುಮಾಡುವ; **ತನೂಃ**=ಶರೀರವಿದೆಯೋ; [ಯಾವ ಶರೀರವು] **ವಿಶ್ವಾಹಭೇಷಜೀ**=ಸರ್ವಕಾಲದಲ್ಲಿಯೂ ಔಷಧರೂಪವಾಗಿ; **ಶಿವಾ**=ಮಂಗಲಕರವಾಗಿದೆಯೋ; [ಯಾವ ಶರೀರವು] **ರುದ್ರಸ್ಯ**=ಜನನ-ಮರಣರೂಪವಾದ ಸಂಸಾರ ರೋಗವನ್ನು; **ಭೇಷಜೀ**=[ಪರಿಹರಿಸಿ] ತಾದಾತ್ಮ್ಯವನ್ನು ಉಂಟುಮಾಡುವ ಔಷಧರೂಪವಾಗಿ; **ಶಿವಾ**=ಮಂಗಲವಾಗಿದೆಯೋ; **ತಯಾ**=ಆ ಉಭಯಮಂಗಲರೂಪವಾದ ಶರೀರದಿಂದ; **ಜೀವಸೇ**=[ನಾವು ಸ್ವಸ್ಥವಾಗಿ] ಬದುಕುವುದಕ್ಕಾಗಿ/ತೃಪ್ತಿಯಿಂದ ಇರುವುದಕ್ಕಾಗಿ; **ನಃ**=ನಮ್ಮನ್ನು; **ಮೃಡ**=ಸುಖವಾಗಿರುವಂತೆ ಮಾಡು.

**: ತಾತ್ಪರ್ಯ- ಸಾ. ಭಾ. :**

**'ಏಕಮೇವಾದ್ವಿತೀಯಂ ಬ್ರಹ್ಮ'** [ಛಾಂ.ಉ.6.2.1] **'ನೇಹ ನಾನಾಽಸ್ತಿ ಕಿಂ ಚನ'** [ಕಠ ಉ.4.11 ಬೃ.ಉ. 4.4.19] ಎಂಬ ಶ್ರುತಿಗಳಂತೆ ಕೇವಲನು. ಬ್ರಹ್ಮವಸ್ತುವೇ. ಕಂಠದಲ್ಲಿ ವಿಷದಿಂದ ಕೃಷ್ಣವರ್ಣಧಾರಿಯೂ ಉಳಿದ ಭಾಗದಲ್ಲಿ ರಕ್ತವರ್ಣನೂ ಆಗಿರುವ ರುದ್ರದೇವನೇ! ಈ ನನ್ನ ಪುತ್ರಾದಿಪುರುಷರ ಮತ್ತು ಗವಾದಿಪಶುಸಮೂಹವನ್ನು ಹೆದರಿಸಬೇಡ. ಇವುಗಳಲ್ಲಿ ಯಾವುದೂ ನಾಶವಾಗದಿರಲಿ. ಯಾವ ರೋಗದಿಂದಲೂ ಇವು ಬಾಧಿತವಾಗದಿರಲಿ.

**: ತಾತ್ಪರ್ಯ- ಭ. ಭಾ. ಭಾ. :**

ರುದ್ರನನ್ನು ವಿಶ್ವರೂಪನನ್ನಾಗಿ ಸ್ತುತಿಸಿ ಈ ಅನುವಾಕದಲ್ಲಿ ಅಭಯವನ್ನು ಪ್ರಾರ್ಥಿಸಲಾಗಿದೆ.

ಹೇ! ರುದ್ರದೇವನೇ! ನೀನು ಪಾಪಿಗಳಿಗೆ ದುರ್ಗತಿಯನ್ನು ನೀಡುವವನು. ಪ್ರಳಯಕಾಲದಲ್ಲಿ ಸಂಹಾರಕಾರ್ಯ

## ಇಮಾಗ್ಂ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರ ಭರಾಮಹೇ ಮತಿಮ್ । ಯಥಾ ನಶ್ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನ [ಅಸ್ಮಿನ್ನ್ (೨೧)ಅನಾತುರಮ್] ನಾತುರಮ್ ॥

ಇಮಾಮ್ । ರುದ್ರಾಯ । ತವಸೇ । ಕಪರ್ದಿನೇ । ಕ್ಷಯದ್ವೀರಾಯೇತಿ ಕ್ಷಯತ್–ವೀರಾಯ । ಪ್ರೇತಿ । ಭರಾಮಹೇ । ಮತಿಮ್ ॥ ಯಥಾ । ನಃ । ಶಮ್ । ಅಸತ್ । ದ್ವಿಪದ ಇತಿ ದ್ವಿ–ಪದೇ । ಚತುಷ್ಪದ ಇತಿ ಚತುಃ–ಪದೇ । ವಿಶ್ವಮ್ । ಪುಷ್ಟಮ್ । ಗ್ರಾಮೇ । ಅಸ್ಮಿನ್ನ್ । (೨೧) । ಅನಾತುರಮಿತ್ಯನಾ–ತುರಮ್ ॥

| ಮಂತ್ರ | ವಿನಿಯೋಗ |
|---|---|
| **ಇಮಾಗ್ಂ...ಅನಾತುರಮ್ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

**ಪದಶಃ ಅರ್ಥ– ಸಾ. ಭಾ.**

▲ **ಯಥಾ**=ಯಾವ ರೀತಿಯಲ್ಲಿ; **ನಃ**=ನಮಗೆ ಸಂಬಂಧಿಸಿದ; **ದ್ವಿಪದೇ**=ಪುತ್ರಪೌತ್ರಾದಿಪುರುಷರಿಗೂ; **ಚತುಷ್ಪದೇ**=ಗೋವು, ಮಹಿಷ ಮುಂತಾದ ಪ್ರಾಣಿಗಳಿಗೂ; **ಶಮ್**=ಸುಖವು; **ಅಸತ್**=ಉಂಟಾಗುವುದೋ; ಯಥಾ=ಯಾವ ರೀತಿಯಲ್ಲಿ; **ಅಸ್ಮಿನ್ ಗ್ರಾಮೇ**=ಈ ಗ್ರಾಮದಲ್ಲಿ; **ವಿಶ್ವಮ್**=ಎಲ್ಲ ಪ್ರಾಣಿಸಮೂಹವೂ; **ಪುಷ್ಟಮ್**=ಸರ್ವವಿಧದಲ್ಲಿಯೂ ಪುಷ್ಟ/ಪರಿಪೂರ್ಣವಾಗಿಯೂ; **ಅನಾತುರಮ್**=ಉಪದ್ರವರಹಿತವಾಗಿಯೂ; ಅಸತ್=ಆಗುವುದೋ; [ಹಾಗೆ ಆಗುವುದಕ್ಕಾಗಿ] **ತವಸೇ**=ನಮ್ಮ ಇಷ್ಟಾರ್ಥವನ್ನು ನೀಡಲು ಸಮರ್ಥನಾದ; **ಕಪರ್ದಿನೇ**=ಜಟಾಜೂಟಧರನಾಗಿ ತಾಪಸವೇಷಧಾರಿಯಾದ; **ಕ್ಷಯದ್ವೀರಾಯ**=ಶತ್ರುವೀರರನ್ನು ಕ್ಷಯಿಸುವಂತೆ ಮಾಡುವ/ಪಾಪನಾಶಕನಾದ; **ರುದ್ರಾಯ**=ರುದ್ರದೇವನಿಗಾಗಿ;/[ಅವನನ್ನು ಉದ್ದೇಶಿಸಿ] **ಇಮಾಮ್**=ಈ ಪೂಜಾಧ್ಯಾನಾದಿ ವಿಷಯವಾದ; **ಮತಿಮ್**=ಬುದ್ಧಿಯನ್ನು; **ಪ್ರ ಭರಾಮಹೇ**=ಹೆಚ್ಚಾಗಿ ಪೋಷಿಸುವೆವು.

**ಪದಶಃ ಅರ್ಥ– ಭ. ಭಾ. ಭಾ.**

▲ [ನಾವು] **ತವಸೇ**=ಎಲ್ಲರನ್ನೂ ವೃದ್ಧಿಗೊಳಿಸಬಲ್ಲ; **ಕಪರ್ದಿನೇ**=ಜಟಾಜೂಟಧರನಾದ; **ಕ್ಷಯದ್ವೀರಾಯ**=ವೀರರಿಗೆ ಆಶ್ರಯನಾದ/ವೀರರನ್ನು ಪರಾಭವಗೊಳಿಸುವ; **ರುದ್ರಾಯ**=ರುದ್ರದೇವನಿಗಾಗಿ; **ಇಮಾಮ್**=ಈ ರೀತಿಯಾದ; **ಮತಿಮ್**=ಮಾನಸಪೂಜಾರೂಪವಾದ ಬುದ್ಧಿಯನ್ನು; **ಪ್ರ ಭರಾಮಹೇ**=ಹೆಚ್ಚಾಗಿ ಧರಿಸಿರುತ್ತೇವೆ/[ಧ್ಯಾನಿಸುತ್ತೇವೆ] **ಯಥಾ**=[ಆ ಧ್ಯಾನದಿಂದ/ಆರಾಧನೆಯಿಂದ] ಯಾವ ರೀತಿ; **ನಃ**=ನಮಗೆ ಸಂಬಂಧಿಸಿದ; **ದ್ವಿಪದೇ**=ಪುತ್ರಾದಿಗಳಿಗೂ; **ಚತುಷ್ಪದೇ**=ಪಶು ಮುಂತಾದವುಗಳಿಗೂ; **ಶಮ್**=ಸುಖವು; **ಅಸತ್**=ಆಗಲಿ. [ಯಾವ ರೀತಿಯಲ್ಲಿ] [ನಾವು ಆರಾಧಿಸುತ್ತಿರಲು] **ಅಸ್ಮಿನ್ ಗ್ರಾಮೇ**= [ನಾವು ವಾಸಿಸುವ] ಈ ಗ್ರಾಮದಲ್ಲಿ; **ವಿಶ್ವಮ್**=ಎಲ್ಲ ಪ್ರಾಣಿಸಮೂಹವೂ; **ಪುಷ್ಟಮ್**=ಪುಷ್ಟಿಯುಳ್ಳದ್ದಾಗಿಯೂ; **ಅನಾತುರಮ್**=ರೋಗರಹಿತವಾದದ್ದಾಗಿ; ಅಸತ್=ಆಗಲಿ.

**ಮೃಡಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮ ತೇ ।**

---

ಮೃಡ । ನಃ । ರುದ್ರ । ಉತ । ನಃ । ಮಯಃ । ಕೃಧಿ । ಕ್ಷಯದ್ವೀರಾಯೇತಿ ಕ್ಷಯತ್-ವೀರಾಯ । ನಮಸಾ । ವಿಧೇಮ । ತೇ ॥

---

| ಮಂತ್ರ | ವಿನಿಯೋಗ |
|---|---|
| **ಮೃಡಾ ನೋ...ಪ್ರಣೀತೌ** ॥ | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

**ಪದಶಃ ಅರ್ಥ– ಸಾ. ಭಾ.**

▲ **ರುದ್ರ**=ರುದ್ರದೇವನೇ! **ನಃ**=ನಮ್ಮನ್ನು; **ಮೃಡ**=ಈ ಲೋಕದಲ್ಲಿ ಸುಖಿಸುವಂತೆ ಮಾಡು; **ಉತ**=ಮತ್ತು; **ನಃ**=ನಮಗೆ; **ಮಯಃ**=[ಪರಲೋಕದಲ್ಲಿಯೂ] ಸುಖವನ್ನು; **ಕೃಧಿ**=ಮಾಡು; **ಕ್ಷಯದ್ವೀರಾಯ**=ಪಾಪನಾಶಕನಾದ/ಶತ್ರುನಾಶಕನಾದ; **ತೇ**=ನಿನಗೆ; **ನಮಸಾ**=ನಮಸ್ಕಾರದಿಂದ; **ವಿಧೇಮ**=ಪರಿಚರ್ಯೆಯನ್ನು ಮಾಡುವೆವು.

**ಪದಶಃ ಅರ್ಥ– ಭ. ಭಾ. ಭಾ.**

▲ **ರುದ್ರ**=ಹೇ! ರುದ್ರದೇವನೇ! **ನಃ**=ನಮ್ಮನ್ನು; **ಮೃಡ**=[ಪುತ್ರ-ಧನಾದಿ ಸಮೃದ್ಧಿಯಿಂದ] ಸುಖಿಗಳನ್ನಾಗಿ ಮಾಡು; **ಉತ**=ಮತ್ತು; **ನಃ**=ನಮಗೆ; **ಮಯಃ**=ನಿರತಿಶಯಾನಂದಾತ್ಮಕವಾದ ಸುಖವನ್ನೂ; **ಕೃಧಿ**=ಉಂಟುಮಾಡು; **ಕ್ಷಯದ್ವೀರಾಯ**=[ನಮ್ಮ] ಶತ್ರುಗಳನ್ನು ನಾಶಪಡಿಸುವ; **ತೇ**=ನಿನಗೆ; **ನಮಸಾ**=ನಮಸ್ಕಾರದಿಂದ; [ಕ್ಷಯದ್ವೀರಾಯ ನಮಸಾ=ಶತ್ರುನಾಶಕನಾದ ನಿನ್ನನ್ನು ಚರು-ಪುರೋಡಾಶಾದಿ ಹವಿಸ್ಸಿನಿಂದ] **ವಿಧೇಮ**=ಪರಿಚರ್ಯೆ ಮಾಡುತ್ತೇವೆ.

**: ತಾತ್ಪರ್ಯ– ಸಾ. ಭಾ. :**

**ಕಾಳಿದಾಸನು 'ನ ಸಂತಿ ಯಾಥಾರ್ಥ್ಯವಿದಃ ಪಿನಾಕಿನಃ'*** [ಶಿವನ ಮಹಿಮೆಯನ್ನು ತಿಳಿದವರಿಲ್ಲ] ಎಂದು **ಹೇಳುತ್ತಾನೆ.**

**: ತಾತ್ಪರ್ಯ– ಭ. ಭಾ. ಭಾ. :**

**ವನ್ನೆಸಗುವವನು. ಕವಚಧಾರಿಯು. ಅನ್ನಪಾಲಕನು. ಪರಿಗ್ರಹರಹಿತನು. ನೀಲಲೋಹಿತನು. ನಿರ್ಮಲನು. ನರ-ನಾರೀ, ನಾಮ-ರೂಪಗಳ ಸ್ವರೂಪದವನು. ನೀನು ನಮ್ಮ ಪುತ್ರಾದಿಗಳನ್ನೂ ಪಶುಗಳನ್ನೂ ಹೆದರಿಸದಿರು, ಹಿಂಸಿಸದಿರು. ಇವುಗಳಲ್ಲಿ ಯಾವುದೂ ನಿನ್ನ ಅನುಗ್ರಹದಿಂದ ತೊಂದರೆಗೊಳಗಾಗದಿರಲಿ.**

---

*** ಕುಮಾರಸಂಭವ ಮಹಾಕಾವ್ಯ-ಸರ್ಗ 5**

**ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತೌ ॥**

---

ಯತ್ । ಶಮ್ । ಚ । ಯೋಃ । ಚ । ಮನುಃ । ಆಯಜ ಇತ್ಯಾ-ಯಜೇ । ಪಿತಾ । ತತ್ । ಅಶ್ಯಾಮ । ತವ । ರುದ್ರ । ಪ್ರಣೀತಾವಿತಿ ಪ್ರ-ನೀತೌ ॥

ಪದಶಃ ಅರ್ಥ- ಸಾ. ಭಾ.

**ಪಿತಾ**=ಪಾಲಕನಾದ/ಉತ್ಪಾದಕನಾದ; **ಮನುಃ**=ಪ್ರಜಾಪತಿದೇವನು; **ಶಮ್ ಚ**=ಸುಖವನ್ನೂ; **ಯೋಃ ಚ**=ದುಃಖರಾಹಿತ್ಯವನ್ನೂ; **ಯತ್**=ಯಾವ [ಇದೆಲ್ಲವನ್ನೂ] **ಆಯಜೇ**=ಸಂಪಾದಿಸಿದನೋ; **ತತ್**=ಅದೆಲ್ಲವನ್ನೂ; **ರುದ್ರ**=ಹೇ! ರುದ್ರದೇವ! **ತವ**=ನಿನ್ನ; **ಪ್ರಣೀತೌ**=ಅನುಗ್ರಹಯುಕ್ತವಾದ ಸ್ನೇಹಾತಿಶಯವು ಉಂಟಾಗಲು; **ಅಶ್ಯಾಮ**=ಹೊಂದೋಣ.

ಪದಶಃ ಅರ್ಥ- ಭ. ಭಾ. ಭಾ.

**ಯತ್**=ಯಾವ ರೀತಿಯ; **ಶಮ್ ಚ**=ಸಂಭವಿಸಿರುವ ದುಃಖಗಳ ಶಮನವನ್ನು; **ಯೋಃ ಚ**=[ಉಂಟಾಗದಿರುವ ದುಃಖಹೇತುಗಳ] ಮೇಲೇಳದೆ ಇರುವಿಕೆಯನ್ನು; **ಮನುಃ**=ಬಲ್ಲವನಾದ/ಸರ್ವಜ್ಞನಾದ; **ಪಿತಾ**=ಪ್ರಜೆಗಳ ಸೃಷ್ಟಿಕರ್ತನಾದ ಪ್ರಜಾಪತಿಯು; [ನಿನ್ನಿಂದ ಸೃಷ್ಟಿಕಾರ್ಯದಲ್ಲಿ ನಿಯೋಜಿಸಲ್ಪಟ್ಟವನು] **ಆಯಜೇ**=ಸಂಪಾದಿಸಿದನೋ; **ರುದ್ರ**=ಹೇ! ರುದ್ರದೇವನೇ! **ತವ ಪ್ರಣೀತೌ**=ನಿನ್ನ ಅನುಶಾಸನದಲ್ಲಿ ಇರುವುದರಿಂದ; **ತತ್**=ಅದನ್ನು; **ಅಶ್ಯಾಮ**=[ನಾವೂ] ಹೊಂದುವೆವು.

: ತಾತ್ಪರ್ಯ- ಸಾ. ಭಾ. :

**ಭಕ್ತರು ಕೇಳಿದುದನ್ನು ಕರುಣಿಸುವ ಆದಿತ್ಯರೂಪನಾದ ರುದ್ರನು ಉದಯಕಾಲದಲ್ಲಿ ನೀಲನೂ ಅನಂತರ ಅರುಣವರ್ಣದವನೂ ಆಗಿರುತ್ತಾನೆ.**

**ಹೇ! ರುದ್ರನೇ! ಸರ್ವದಿನಗಳಲ್ಲಿಯೂ ಅಂದರೆ ಸರ್ವಕಾಲದಲ್ಲಿಯೂ ರೋಗ-ದಾರಿದ್ರ್ಯಾದಿಗಳಿಗೆ ಔಷಧದಂತೆ ಮಂಗಲಕರವಾಗಿರುವ, ಹಾಗೆಯೇ ಜ್ಞಾನವನ್ನು ನೀಡಿ ಜನ್ಮ-ಮರಣದುಃಖವನ್ನು ನೀಗಿಸಿ, ನಿನ್ನ ತಾದಾತ್ಮ್ಯವನ್ನು ಒದಗಿಸಿ ಸುಖವನ್ನುಂಟುಮಾಡುವ ಮಂಗಲಕರವಾದ ಶರೀರದಿಂದ ನಮ್ಮ ಬಾಳು ಸುಖವಾಗುವಂತೆ ಮಾಡು.**

: ತಾತ್ಪರ್ಯ- ಭ. ಭಾ. ಭಾ. :

**ರುದ್ರನಿಗೆ ಮಂಗಲಕರವಾದ ಶರೀರವು ಎರಡು ವಿಧವಾಗಿದೆ. ಜೀವನದ ರೋಗ-ದಾರಿದ್ರ್ಯಾದಿಗಳನ್ನು ಪರಿಹರಿಸಿ ಮಾನವನು ಸುಖವಾಗಿ ಬಾಳುವಂತೆ ಮಾಡುವ ಶಿವಸ್ವರೂಪವು ಒಂದು.**

**ಜ್ಞಾನವನ್ನು ಕರುಣಿಸಿ, ಜನನ-ಮರಣರೂಪವಾದ ಆತ್ಯಂತಿಕದುಃಖವನ್ನು ದೂರಮಾಡುವ, ಶಿವತಾದಾತ್ಮ್ಯವನ್ನು ಮಾಡಿಕೊಡುವ ಶಿವಸ್ವರೂಪವು ಇನ್ನೊಂದು. ಈ ಎರಡೂ ಶರೀರಗಳು ಔಷಧದಂತೆ ಇವೆ. ಶ್ರುತಿಯಲ್ಲಿ ಎರಡೂ ಬಗೆಯ ಔಷಧವನ್ನಾಗಿ ರುದ್ರನ ಶರೀರವನ್ನು ಹೇಳಿದೆ. ಹೇ! ರುದ್ರದೇವನೇ! ಈ ಎರಡು ಬಗೆಯ ಔಷಧದಂತಿರುವ ಶರೀರವುಳ್ಳ ನೀನು ನಾವು ಇಹದಲ್ಲಿ ರೋಗ-ದಾರಿದ್ರ್ಯಾದಿಗಳಿಲ್ಲದೆ ಇಷ್ಟಾರ್ಥವನ್ನು ಪಡೆದು ಸುಖವಾಗಿ ಬಾಳುವಂತೆಯೂ, ಅನಂತರ ಜ್ಞಾನವನ್ನು ಪಡೆದು ಮೋಕ್ಷವನ್ನು ಪಡೆಯುವಂತೆಯೂ ಅನುಗ್ರಹಿಸು.**

# ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ ।

ಮಾ । ನಃ । ಮಹಾಂತಮ್ । ಉತ । ಮಾ । ನಃ । ಅರ್ಭಕಮ್ । ಮಾ । ನಃ । ಉಕ್ಷಂತಮ್ । ಉತ । ಮಾ । ನಃ । ಉಕ್ಷಿತಮ್ ॥

| ಮಂತ್ರ | ವಿನಿಯೋಗ |
| --- | --- |
| ಮಾ ನೋ...ರೀರಿಷಃ ॥ | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

ಪದಶಃ ಅರ್ಥ- ಸಾ. ಭಾ.

**ರುದ್ರ**=ರುದ್ರದೇವನೇ! **ನಃ**=ನಮಗೆ ಸಂಬಂಧಿಸಿದ; **ಮಹಾಂತಮ್**=ವೃದ್ಧನನ್ನು; **ಮಾ ರೀರಿಷಃ**=ಹಿಂಸಿಸಬೇಡ; **ಉತ**=ಮತ್ತು; **ನಃ**=ನಮಗೆ ಸಂಬಂಧಿಸಿದ; **ಅರ್ಭಕಮ್**=ಬಾಲಕನನ್ನೂ; **ಮಾ** ರೀರಿಷಃ=ಹಿಂಸಿಸಬೇಡ; **ಉತ**=ಮತ್ತು; **ನಃ**=ನಮ್ಮವನಾದ; **ಉಕ್ಷಂತಮ್**=ಸೇಚನಸಮರ್ಥನಾದ ಯುವಕನನ್ನು; **ಮಾ** ರೀರಿಷಃ=ಹಿಂಸಿಸದಿರು. ಉತ=ಮತ್ತು; **ನಃ**=ನಮ್ಮ; **ಉಕ್ಷಿತಮ್**=ಗರ್ಭದಲ್ಲಿರುವ ಶಿಶುವನ್ನೂ;

ಪದಶಃ ಅರ್ಥ- ಭ. ಭಾ. ಭಾ.

**ರುದ್ರ**=ಹೇ! ರುದ್ರದೇವನೇ! **ನಃ**=ನಮಗೆ ಸಂಬಂಧಿಸಿದ; **ಮಹಾಂತಮ್**=ಪಿತಾಮಹನೇ ಮೊದಲಾದವರನ್ನು/ಗುಣಾನ್ವಿತನಾದ ಜ್ಯೇಷ್ಠಪುತ್ರನನ್ನು/ವಿದ್ಯೆ-ವಯಸ್ಸುಗಳಿಂದ ಅನುಗ್ರಹೀತನಾಗಬೇಕಾದವನನ್ನು/ **ಮಾ** ವಧೀಃ=[ರೋಗಾದಿಗಳಿಂದ] ಹಿಂಸಿಸಬೇಡ; **ಉತ**=ಮತ್ತು; **ನಃ**=ನಮಗೆ ಸಂಬಂಧಿಸಿದ; **ಅರ್ಭಕಮ್**=ಎಳೆಯ ಶಿಶುವನ್ನು;/ಮಗನನ್ನು/ಹರಸಬೇಕಾದವನನ್ನು; **ಮಾ** ವಧೀಃ=ಹಿಂಸಿಸಬೇಡ; **ಉತ**=ಮತ್ತು; **ನಃ**=ನಮಗೆ ಸೇರಿದವನಾದ; **ಉಕ್ಷಂತಮ್**=ಸೇಚನಸಮರ್ಥನಾದ ತರುಣನನ್ನು/ವಂಶವನ್ನು ಬೆಳೆಸುವವನನ್ನು; **ಮಾ** ವಧೀಃ=ಹಿಂಸಿಸಬೇಡ. **ಉತ**=ಮತ್ತು; **ನಃ**=ನಮಗೆ ಸಂಬಂಧಿಸಿದ; **ಉಕ್ಷಿತಮ್**=ಗರ್ಭದಲ್ಲಿರುವ/ದಯನೀಯವಾದ ಶಿಶುವನ್ನು;

: ತಾತ್ಪರ್ಯ- ಸಾ. ಭಾ. :

ರುದ್ರದೇವನು ನಮ್ಮ ಇಷ್ಟಾರ್ಥಗಳನ್ನು ಪೂರೈಸಲು ಸಮರ್ಥನು. ಪಾಪನಾಶಕನು. ತಾಪಸವೇಷಧಾರಿಯು. ಅವನು ನಮಗೆ ಸಂಬಂಧಿಸಿದ ಎರಡು ಕಾಲಿನ ಪುತ್ರಪೌತ್ರಾದಿ ಪುರುಷರಿಗೂ, ನಾಲ್ಕು ಕಾಲಿನ ಗೋ-ಮಹಿಷಾದಿ ಪ್ರಾಣಿಗಳಿಗೂ, ಸುಖವನ್ನುಂಟುಮಾಡಲಿ. ಈ ಗ್ರಾಮದ ಪ್ರಾಣಿಗಳೆಲ್ಲವೂ ಉಪದ್ರವರಹಿತವಾಗಿರುವಂತೆಯೂ ಮಾಡಲಿ ಎಂದು ನಾವು ರುದ್ರದೇವನನ್ನು ಆರಾಧಿಸಿ, ಪ್ರಾರ್ಥಿಸುತ್ತೇವೆ.

: ತಾತ್ಪರ್ಯ- ಭ. ಭಾ. ಭಾ. :

ಕೆಲವರು **'ಇಮಾಗ್ಂ ರುದ್ರಾಯ...ಅನಾತುರಮ್ । ಮೃಡಾ ನೋ ರುದ್ರ...ಪ್ರಣೀತೌ ।'** ಎಂಬ ಈ ಎರಡೂ ಋಕ್‌ಗಳಿಂದ ಕೂಡಿದ ಮಂತ್ರವು ಒಂದು ಎಂದು ಹೇಳುತ್ತಾರೆ. ನಾವು ರುದ್ರದೇವನಿಗಾಗಿ ಈ ಮಾನಸಪೂಜೆಯೆಂಬ

**ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ**

**[ನಸ್ತನುವಃ(೨೨)ರುದ್ರ ರೀರಿಷಃ ।]ರುದ್ರ ರೀರಿಷಃ ॥**

---

ಮಾ । ನಃ । ವಧೀಃ । ಪಿತರಮ್ । ಮಾ । ಉತ । ಮಾತರಮ್ । ಪ್ರಿಯಾಃ । ಮಾ । ನಃ । ತನುವಃ । (೨೨) । ರುದ್ರ । ರೀರಿಷಃ ॥

ಪದಶಃ ಅರ್ಥ– ಸಾ. ಭಾ.

**ಮಾ** ರೀರಿಷಃ=ಹಿಂಸಿಸದಿರು; **ಉತ**=ಮತ್ತು; **ನಃ**=ನಮ್ಮ; **ಪಿತರಮ್**=ತಂದೆಯನ್ನೂ; **ಮಾ ವಧೀಃ**=ಹಿಂಸಿಸಬೇಡ. ಉತ=ಮತ್ತು; **ಮಾತರಮ್**=ತಾಯಿಯನ್ನೂ; **ಮಾ** ವಧೀಃ=ಹಿಂಸಿಸದಿರು; **ನಃ**=ನಮಗೆ; **ಪ್ರಿಯಾಃ *ತನುವಃ**=ಪ್ರಿಯವಾದ ಎಲ್ಲರ ದೇಹಗಳನ್ನೂ; **ಮಾ** ರೀರಿಷಃ=ಹಿಂಸಿಸದಿರು.

ಪದಶಃ ಅರ್ಥ– ಭ. ಭಾ. ಭಾ.

**ಮಾ** ವಧೀಃ=ಹಿಂಸಿಸದಿರು; ನಃ=ನಮ್ಮ; **ಪಿತರಮ್**=ತಂದೆಯನ್ನೂ; **ಮಾತರಮ್**=ತಾಯಿಯನ್ನೂ; **ಮಾ** ವಧೀಃ=ಹಿಂಸಿಸಬೇಡ; ನಃ=ನಮ್ಮ; **ಪ್ರಿಯಾಃ**=ಪ್ರಿಯವಾದ; **ತನುವಃ**=ಶರೀರಗಳನ್ನು; **ಮಾ** ರೀರಿಷಃ=ರೋಗಾದಿಗಳಿಂದ ಹಿಂಸಿಸದಿರು.

: ತಾತ್ಪರ್ಯ– ಸಾ. ಭಾ. :

ರುದ್ರನು ನಮ್ಮನ್ನು ಇಹ–ಪರಲೋಕಗಳಲ್ಲಿ ಸುಖಿಗಳನ್ನಾಗಿ ಮಾಡಲಿ. ಪಾಪವನ್ನು ದೂರ ಮಾಡುವ ರುದ್ರನನ್ನು ನಮಿಸುವೆವು. ಅವನ ಪರಿಚರ್ಯೆಯನ್ನು ಮಾಡುವೆವು. ನಿನ್ನ ಅನುಗ್ರಹದಿಂದ ಪಾಲಕನಾದ ಮನುಪ್ರಜಾಪತಿಯು ಸುಖವನ್ನೂ, ದುಃಖವಿಲ್ಲದಿರುವಿಕೆಯನ್ನೂ ಪಡೆದಿರುತ್ತಾನೆ. ನಾವೂ ನಿನ್ನ ಸ್ನೇಹಾತಿಶಯ–ಅನುಗ್ರಹದಿಂದ ಪಿತೃವಾದ ಪ್ರಜಾಪತಿದೇವನು ಪಡೆದುಕೊಂಡುದೆಲ್ಲವನ್ನೂ ಹೊಂದುವಂತಾಗಲಿ.

: ತಾತ್ಪರ್ಯ– ಭ. ಭಾ. ಭಾ. :

ಬುದ್ಧಿಯನ್ನು ಧರಿಸಿರುತ್ತೇವೆ. ರುದ್ರನನ್ನು ಯಾವಾಗಲೂ ಮನಸ್ಸಿನಿಂದ ಪೂಜಿಸುತ್ತೇವೆ.

ಆ ರುದ್ರನು ಸ್ತುತಿಗಳಿಂದಲೂ ಹವಿಃಪ್ರದಾನಗಳಿಂದಲೂ ಪ್ರಸನ್ನನಾಗಲಿ. ಆ ರುದ್ರನೇ ಸ್ತುತಿಸಲ್ಪಡಬೇಕಾದವನೂ ಉಪಾಸಿಸಲ್ಪಡಬೇಕಾದವನೂ, ಆಶ್ರಯಿಸಲ್ಪಡಬೇಕಾದವನೂ ಆಗಿರುತ್ತಾನೆ. ಉಪನಿಷತ್ತುಗಳಲ್ಲಿ ಹೇಳುವ ಶ್ರೋತವ್ಯ–ಮಂತವ್ಯ–ನಿದಿಧ್ಯಾಸಿತವ್ಯನೂ ಅವನೇ. ಎಲ್ಲರನ್ನೂ ಪುಷ್ಟಿಗೊಳಿಸಿ, ವೀರರಿಗೆ ಆಶ್ರಯನು. ಅವನು ನಮ್ಮ ರಾಷ್ಟ್ರದ ಎಲ್ಲರನ್ನೂ ರೋಗರಹಿತರಾಗಿ ಪುಷ್ಟರಾಗುವಂತೆ ಅನುಗ್ರಹಿಸಲಿ.

ಹೇ! ರುದ್ರನೇ! ಪುತ್ರ–ಧನಾದಿಸಮೃದ್ಧಿಯನ್ನು ಕರುಣಿಸು. ನಮಗೆ ಸುಖವನ್ನುಂಟುಮಾಡು. ನಮಗೆ ನಿರತಿಶಯಾನಂದಾತ್ಮಕವಾದ ಸುಖವನ್ನುಂಟುಮಾಡು.

ನೀನು ನಮ್ಮ ಶತ್ರುಗಳನ್ನು ನಾಶಪಡಿಸುವವನು. ನೀನು ಸಂಭವಿಸಿರುವ ಹಾಗೂ ಬರಲಿರುವ ದುಃಖವನ್ನು ದೂರ ಮಾಡು. ನಿನ್ನ ಅನುಗ್ರಹದಿಂದ ನಾನು ಪ್ರಮಾದ ಮಾಡದಂತಾಗಲಿ. ನಮ್ಮನ್ನು ಸೇವಕನಂತೆ ನೀನು ಅನುಗ್ರಹಿಸಿದರೆ

---

* ತನುವಃ ಎಂಬ ಬಹುವಚನವು ಭಾರ್ಯೆಯೇ ಮೊದಲಾದವರ ಶರೀರಗಳು ಎಂಬರ್ಥದಲ್ಲಿ ಇದೆ.

**ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್, ಹವಿಷ್ಮಂತೋ ನಮಸಾ ವಿಧೇಮ ತೇ ॥**

---

**ಮಾ । ನಃ । ತೋಕೇ । ತನಯೇ । ಮಾ । ನಃ । ಆಯುಷಿ । ಮಾ । ನಃ । ಗೋಷು । ಮಾ । ನಃ । ಅಶ್ವೇಷು । ರೀರಿಷಃ ॥**

**ವೀರಾನ್ । ಮಾ । ನಃ । ರುದ್ರ । ಭಾಮಿತಃ । ವಧೀಃ । ಹವಿಷ್ಮಂತಃ । ನಮಸಾ । ವಿಧೇಮ । ತೇ ॥**

---

| ಮಂತ್ರ | ವಿನಿಯೋಗ |
|---|---|
| **ಮಾ ನಸ್ತೋಕೇ...ವಿಧೇಮ ತೇ ॥** | **ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ.** |

**ಪದಶಃ ಅರ್ಥ- ಸಾ. ಭಾ.**

♠ **ರುದ್ರ**=ರುದ್ರದೇವನೇ! ನಃ=ನಮಗೆ ಸಂಬಂಧಿಸಿದ; **ತೋಕೇ**=ಮಕ್ಕಳೆಲ್ಲರ ವಿಷಯದಲ್ಲಿಯೂ; **ತನಯೇ**=ವಿಶೇಷವಾಗಿ ಮಗನ ವಿಷಯದಲ್ಲಿಯೂ; **ಮಾ ರೀರಿಷಃ**=ಹಿಂಸಿಸದಿರು. **ನಃ**=ನಮ್ಮ; **ಆಯುಷಿ**=ಪೂರ್ಣಾಯುಸ್ಸಿನ ವಿಷಯದಲ್ಲಿಯೂ; **ಮಾ** ರೀರಿಷಃ=ನ್ಯೂನತೆಯನ್ನು ಉಂಟುಮಾಡಬೇಡ. **ನಃ**=ನಮ್ಮ; **ಗೋಷು**=ಹಸುಗಳ ವಿಷಯದಲ್ಲಿ [ಹಸುಗಳನ್ನು]; **ಮಾ** ರೀರಿಷಃ=ಹಿಂಸಿಸಬೇಡ. **ನಃ**=ನಮ್ಮ; **ಅಶ್ವೇಷು**=ಕುದುರೆ [ಮೊದಲಾದವನ್ನು] **ಮಾ** ರೀರಿಷಃ=ಹಿಂಸಿಸಬೇಡ. **ಭಾಮಿತಃ**=[ನಮ್ಮ ಅಪರಾಧದಿಂದ] ಕೋಪಗೊಂಡವನಾಗಿ; **ನಃ**=ನಮ್ಮ; **ವೀರಾನ್**=ಸೇವಕರನ್ನೂ/ಭಟರನ್ನೂ; **ಮಾ ವಧೀಃ**=ಕೊಲ್ಲಬೇಡ; **ಹವಿಷ್ಮಂತಃ**=ನಿನಗೆ ಸಮರ್ಪಿಸಬೇಕಾದ ಹವಿಸ್ಸುಳ್ಳವರಾಗಿ; **ತೇ**=ನಿನಗೆ; **ನಮಸಾ**=ನಮಸ್ಕಾರ ರೂಪವಾದ ಯಾಗರೂಪವಾದ; [ಸೇವೆಯನ್ನು] **ವಿಧೇಮ**=ಆಚರಿಸುತ್ತೇವೆ.

**ಪದಶಃ ಅರ್ಥ- ಭ. ಭಾ. ಭಾ.**

♠ **ರುದ್ರ**=ಹೇ ರುದ್ರದೇವನೇ!; **ನಃ**=ನಮ್ಮ; ***ತೋಕೇ**=ಪುತ್ರನ ವಿಷಯದಲ್ಲಿಯೂ; **ತನಯೇ**=ಅವನ ಮಕ್ಕಳ ವಿಷಯದಲ್ಲಿಯೂ; **ಮಾ ರೀರಿಷಃ**=ರೋಗಾದಿಗಳಿಂದ ಹಿಂಸೆಯನ್ನುಂಟುಮಾಡಬೇಡ; **ನಃ**=ನಮ್ಮ; **ಆಯುಷಿ**=ಆಯುಸ್ಸಿನ ವಿಷಯದಲ್ಲಿಯೂ; **ಮಾ** ರೀರಿಷಃ=ಹಿಂಸಿಸದಿರು [ಕುಗ್ಗಿಸದಿರು]. **ನಃ**=ನಮ್ಮ; **ಗೋಷು**=ಗೋವು-ಎಮ್ಮೆ ಮುಂತಾದವುಗಳಲ್ಲಿ; **ಮಾ** ರೀರಿಷಃ=ಹಿಂಸಿಸಬೇಡ; **ನಃ**=ನಮ್ಮ; **ಅಶ್ವೇಷು**=ಅಶ್ವ-ಗಜಾದಿಗಳನ್ನೂ; **ಮಾ** ರೀರಿಷಃ=ಹಿಂಸಿಸಬೇಡ; **ನಃ ವೀರಾನ್**=ನಮ್ಮವರಾದ ವೀರರನ್ನು;/ಒಳ್ಳೆಯ ಮಕ್ಕಳನ್ನು; **ಭಾಮಿತಃ**=ಅಪಚಾರದಿಂದ ಕ್ರೋಧವುಂಟಾದವನಾಗಿ; **ಮಾ ವಧೀಃ**=ಹಿಂಸಿಸದಿರು; [ಅದಕ್ಕಾಗಿ ನಾವೂ ಕೂಡ] **ಹವಿಷ್ಮಂತಃ**=ಚರು-ಪುರೋಡಾಶ ಮುಂತಾದ ಹವಿಸ್ಸಿನಿಂದ; **ನಮಸಾ**=ನಮಸ್ಕಾರದಿಂದ; **ತೇ**=ನಿನ್ನ; **ವಿಧೇಮ**=ಪರಿಚರ್ಯೆಯನ್ನು ಮಾಡುವೆವು.

---

* **ತೋಕೇ=ತೋಕಮ್ । ದ್ವಿತೀಯಾವಿಭಕ್ತಿಯ ಅರ್ಥದಲ್ಲಿ ಸಪ್ತಮೀವಿಭಕ್ತಿ.**

## ಆರಾತ್ತೇ ಗೋಘ್ನ ಉತ ಪೂರುಷಘ್ನೇ ಕ್ಷಯದ್ವೀರಾಯ ಸುಮ್ನಮಸ್ಮೇ ತೇ ಅಸ್ತು ।

---

ಆರಾತ್ । ತೇ । ಗೋಘ್ನ ಇತಿ ಗೋ-ಘ್ನೇ । ಉತ । ಪೂರುಷಘ್ನ ಇತಿ ಪೂರುಷ-ಘ್ನೇ । ಕ್ಷಯದ್ವೀರಾಯೇತಿ ಕ್ಷಯತ್-ವೀರಾಯ । ಸುಮ್ನಮ್ । ಅಸ್ಮೇ ಇತಿ । ತೇ । ಅಸ್ತು ॥

---

| ಮಂತ್ರ | ವಿನಿಯೋಗ |
|---|---|
| ಆರಾತ್ತೇ...ದ್ವಿಬರ್ಹಾಃ ॥ | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

ಪದಶಃ ಅರ್ಥ- ಸಾ. ಭಾ.

▲ [ರುದ್ರನೇ!]**ಗೋಘ್ನೇ**=ಪಶುಹಿಂಸಕವಾದ; **ಪೂರುಷಘ್ನೇ**=ಪುತ್ರ-ಪೌತ್ರಾದಿ ಪುರುಷನಾಶಕವಾದ; **ಉತ**=ಮತ್ತು; **ಕ್ಷಯದ್ವೀರಾಯ**=ಭೃತ್ಯನಾಶಕವಾದ; **ತೇ**=ನಿನ್ನ; [ಪ್ರಳಯಕಾಲದ ಉಗ್ರರೂಪವು] **ಆರಾತ್**=ದೂರದಲ್ಲಿಯೇ; **ಅಸ್ತು**=ಇರಲಿ; **ತೇ**=ನಿನ್ನ; **ಸುಮ್ನಮ್**=ಮಂಗಳರೂಪವು; **ಅಸ್ಮೇ**= ನಮ್ಮಲ್ಲಿ; ಅಸ್ತು=ಇರಲಿ.

ಪದಶಃ ಅರ್ಥ- ಭ. ಭಾ. ಭಾ.

▲ [ರುದ್ರದೇವನೇ!] **ಗೋಘ್ನೇ**=ಪಶುಹಿಂಸಕವಾದ; **ಉತ**=ಮತ್ತು; **ಪೂರುಷಘ್ನೇ**=ಪುರುಷರನ್ನು ಹಿಂಸಿಸುವ; **ತೇ**=ನಿನ್ನ; [ಯಾವ ತೃಪ್ತಿಯೋ ಅದು] **ಆರಾತ್**=ದೂರದಲ್ಲಿಯೇ; **ಅಸ್ತು**=ಇರಲಿ. **ಕ್ಷಯದ್ವೀರಾಯ**=ವೀರರಿಗೆ ಆಶ್ರಯನಾದ/ವೀರರನ್ನು ಪರಾಭವಗೊಳಿಸುವವನಾದ; **ತೇ**=ನಿನ್ನ; **ಸುಮ್ನಮ್** =ಸುಖವು; **ಅಸ್ಮೇ ಅಸ್ತು**=ನಮ್ಮಲ್ಲಿ ಇರಲಿ.

: ತಾತ್ಪರ್ಯ- ಸಾ. ಭಾ. :

ಹೇ! ರುದ್ರದೇವನೇ! ನೀನು ನಮಗೆ ಸಂಬಂಧಿಸಿದ ಹಿರಿಯರಾದ ವೃದ್ಧರಾದವರನ್ನೂ, ಬಾಲಕರನ್ನೂ, ತರುಣನನ್ನೂ, ಗರ್ಭದಲ್ಲಿರುವ ಶಿಶುವನ್ನೂ ನಮ್ಮ ತಾಯಿ ತಂದೆಯರನ್ನೂ ನಮಗೆ ಅತ್ಯಂತ ಪ್ರಿಯರಾದ ಪತ್ನಿಯೇ ಮುಂತಾದವರ ಶರೀರಗಳನ್ನು ಹಿಂಸಿಸಬೇಡ.

ಹೇ! ರುದ್ರದೇವನೇ! ನಮ್ಮ ಮಕ್ಕಳು, ವಿಶೇಷವಾಗಿ ಮಗ, ಆಯುಸ್ಸು, ಹಸುಗಳು, ಕುದುರೆಗಳು ಮುಂತಾದ ಪಶುಗಳು, ಭೃತ್ಯರು ಈ ಎಲ್ಲ ವಿಷಯಗಳಲ್ಲಿಯೂ ಕೋಪದಿಂದ ಕೊರತೆಯನ್ನುಂಟುಮಾಡದವನಾಗಿರು. ನಿನ್ನನ್ನು ಪ್ರಸನ್ನಗೊಳಿಸಲು ಹವಿಸ್ಸುಗಳನ್ನು ಸಮರ್ಪಿಸಿ, ನಮಸ್ಕರಿಸಿ ಪರಿಚರ್ಯೆಯನ್ನು ಮಾಡುತ್ತೇವೆ.

: ತಾತ್ಪರ್ಯ- ಭ. ಭಾ. ಭಾ. :

ಪ್ರಜಾಪತಿಯು ಪಡೆದ ಹಿತವನ್ನು ನಾವು ಹೊಂದುವೆವು. ನಿನ್ನಿಂದ ನಿಯೋಜಿಸಲ್ಪಟ್ಟ ಮನುವು ದುಃಖವನ್ನು ದೂರಗೊಳಿಸುವ ರೀತಿಯನ್ನು ತಿಳಿದಂತೆ ನಿನ್ನ ಪರಿಚರ್ಯೆಯಿಂದ ನಾವೂ ತಿಳಿಯುತ್ತೇವೆ.

ಹೇ! ರುದ್ರದೇವನೇ! ನಮಗೆ ಸಂಬಂಧಿಸಿದ ಹಿರಿಯರನ್ನೂ, ಎಳೆಯ ಮಗುವನ್ನೂ, ತರುಣನನ್ನೂ ಗರ್ಭದಲ್ಲಿರುವ ಶಿಶುವನ್ನೂ, ನಮ್ಮ ತಾಯಿ-ತಂದೆಯರನ್ನೂ ಹಿಂಸಿಸದಿರು.

ನಮಗೆ ಸಂಬಂಧಿಸಿದವರ ಪತ್ನೀ, ಪುತ್ರ ಮುಂತಾದ ಎಲ್ಲರ ಪ್ರಿಯವಾದವರ ದೇಹಗಳನ್ನೂ ಹಿಂಸಿಸಬೇಡ.

**ರಕ್ಷಾ ಚ ನೋ ಅಧಿ ಚ ದೇವ ಬ್ರೂಹ್ಯಥಾ ಚ ನಶ್ಶರ್ಮ ಯಚ್ಛ ದ್ವಿಬರ್ಹಾಃ ॥**

ರಕ್ಷ । ಚ । ನಃ । ಅಧೀತಿ । ಚ । ದೇವ । ಬ್ರೂಹಿ । ಅಥ । ಚ । ನಃ । ಶರ್ಮ । ಯಚ್ಛ । ದ್ವಿಬರ್ಹಾ ಇತಿ ದ್ವಿ-ಬರ್ಹಾಃ ॥

**ಪದಶಃ ಅರ್ಥ- ಸಾ. ಭಾ.**

**ಚ**=ಮತ್ತು; **ನಃ**=ನಮ್ಮನ್ನು; **ರಕ್ಷ**=ರಕ್ಷಿಸು; **ಚ**=ಮತ್ತು; **ದೇವ**=ರುದ್ರದೇವನೇ! **ಅಧಿ ಬ್ರೂಹಿ**=[ದೇವತೆಗಳಲ್ಲಿ ಮಧ್ಯದಲ್ಲಿ] ಯಜಮಾನರಲ್ಲಿ ನಾನು ಅಧಿಕನೆಂದು ಹೇಳು. **ಅಥ ಚ**=ಮತ್ತು; **ದ್ವಿಬರ್ಹಾಃ**=ಎರಡು ಲೋಕಗಳಲ್ಲಿ ವೃದ್ಧಿಯನ್ನುಂಟುಮಾಡುವ ನೀನು; **ನಃ**=ನಮಗೆ; **ಶರ್ಮ**=ಸುಖವನ್ನು; **ಯಚ್ಛ**=ಕೊಡು.

**ಪದಶಃ ಅರ್ಥ- ಭ. ಭಾ. ಭಾ.**

**ಚ=ಮತ್ತು**; **ನಃ**=ನಮ್ಮನ್ನು; **ರಕ್ಷ**=ರಕ್ಷಿಸು; **ದೇವ**=ಹೇ ರುದ್ರದೇವನೇ! **ಅಧಿ ಚ ಬ್ರೂಹಿ**=ಹೆದರಬೇಡ, ಕಾಪಾಡುವೆನು ಎಂದು ಅಭಯವನ್ನು ನುಡಿ. **ಅಥ ಚ**=ಮತ್ತು; **ನಃ**=ನಮಗೆ; **ದ್ವಿಬರ್ಹಾಃ**=ಈ ಲೋಕದ ಮತ್ತು ಪರಲೋಕದ; **ಶರ್ಮ**=ಸುಖವನ್ನು; **ಯಚ್ಛ**=ನೀಡು.

**: ತಾತ್ಪರ್ಯ- ಸಾ. ಭಾ. :**

ಹೇ! ರುದ್ರದೇವನೇ! ***'ಘೋರಾಽನ್ಯಾ ತನೂಃ'** ಎಂಬ ಶ್ರುತಿಯಂತೆ ಗವಾದಿ ಪಶುಗಳನ್ನು ಹಿಂಸಿಸುವ, ಪುತ್ರ-ಪೌತ್ರಾದಿಗಳನ್ನು ಪೀಡಿಸುವ, ಭೃತ್ಯಾದಿ ವೀರರನ್ನು ಕ್ಷಯಿಸುವಂತೆ ಮಾಡುವ, ನಿನ್ನ ಉಗ್ರರೂಪವು ದೂರದಲ್ಲಿರಲಿ. ***'ಶಿವಾಽನ್ಯಾ'** ಎಂಬಂತೆ ಸುಖಕರವಾದ ಶಾಂತವಾದುದು ನಮ್ಮಲ್ಲಿರಲಿ. ನಮ್ಮನ್ನು ರಕ್ಷಿಸು. ಶರಣಾಗತರಾದ ನಮ್ಮನ್ನು ಇತರ ಯಜಮಾನರಿಗಿಂತಲೂ ಅಧಿಕನೆಂದು ಪ್ರಸಿದ್ಧಪಡಿಸು ಮತ್ತು ಇಹ-ಪರಲೋಕಗಳಲ್ಲಿ ವೃದ್ಧಿಗೊಳಿಸುವ ನೀನು ಇಹ-ಪರಲೋಕಸುಖವನ್ನೂ/ಭೋಗಗಳನ್ನೂ, ಜ್ಞಾನವನ್ನೂ ಕೊಡು. ಅನುಗ್ರಹಿಸು.

**: ತಾತ್ಪರ್ಯ- ಭ. ಭಾ. ಭಾ. :**

ರುದ್ರದೇವನೇ! ನೀನು ನಮ್ಮ ಪುತ್ರನ ವಿಷಯದಲ್ಲಿಯೂ, ಅವನ ಮಕ್ಕಳ ವಿಷಯದಲ್ಲಿಯೂ, ರೋಗಾದಿಗಳಿಂದ ಹಿಂಸೆಯನ್ನುಂಟುಮಾಡಬೇಡ.

ಆಯುಸ್ಸಿನ ವಿಷಯದಲ್ಲಿ **'ಸ ಹ ಷೋಡಶವರ್ಷಶತಮಜೀವತ್ । ಪ್ರ ಹ ಷೋಡಶವರ್ಷಶತಂ ಜೀವತಿ'** [ನೂರಹದಿನಾರು ವರ್ಷಗಳು ಬದುಕಿದನು] ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿದೆ. [ಛಾ. ಉ. 3.16.7] **ವಿಂಶತಿವರ್ಷಶತಮ್** [ನೂರ ಇಪ್ಪತ್ತು ವರ್ಷಗಳು] ಎಂದು ಜ್ಯೋತಿಷ್ಕರು ಹೇಳುತ್ತಾರೆ. **'ಸಪ್ತವಿಂಶತ್ಯಧಿಕಾನಿ ಶತಂ ವರ್ಷಾಣಿ'** [ನೂರ ಇಪ್ಪತ್ತೇಳು ವರ್ಷಗಳು] ಎಂದು ಕೆಲವರು ಹೇಳುತ್ತಾರೆ. **'ಶತಮೇವ, ಶತಾಯುಃ ಪುರುಷಃ'** [ನೂರೇ ವರ್ಷಗಳು] ಎಂದು-ಹೀಗೆ ಹಲವು ಮತಗಳಿವೆ.

ಅಂತಹ ಆಯುಸ್ಸಿನ ವಿಷಯದಲ್ಲಿ ಹಿಂಸಿಸದಿರು. ನಮ್ಮ ಗೋ-ಮಹಿಷಾದಿಗಳ ವಿಷಯದಲ್ಲಿಯೂ, ಅಶ್ವ-ಗಜಾದಿಗಳ ವಿಷಯದಲ್ಲಿಯೂ ಹಿಂಸಾಕರನಾಗಬೇಡ.ನಾವು ಅಪಚಾರ ಮಾಡಿದ್ದರೂ ಕೋಪಗೊಂಡು ನಮ್ಮ

* ತೈ. ಸಂ. 5.7.3

# ಸ್ತುಹಿ [(೨೩)] ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹತ್ನುಮುಗ್ರಮ್ । ಮೃಡಾ ಜರಿತ್ರೇ ರುದ್ರ ಸ್ತವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥

ಸ್ತುಹಿ । (೨೩) । ಶ್ರುತಮ್ । ಗರ್ತಸದಮಿತಿ ಗರ್ತ-ಸದಮ್ । ಯುವಾನಮ್ । ಮೃಗಮ್ । ನ । ಭೀಮಮ್ । ಉಪಹತ್ನುಮ್ । ಉಗ್ರಮ್ ॥ ಮೃಡ । ಜರಿತ್ರೇ । ರುದ್ರ । ಸ್ತವಾನಃ । ಅನ್ಯಮ್ । ತೇ । ಅಸ್ಮತ್ । ನೀತಿ । ವಪಂತು । ಸೇನಾಃ ॥

| ಮಂತ್ರ | ವಿನಿಯೋಗ |
|---|---|
| **ಸ್ತುಹಿ...ಸೇನಾಃ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

**ಪದಶಃ ಅರ್ಥ- ಸಾ. ಭಾ.**

♠ [ಎಲೈ! ನನ್ನ ಮಾತೇ! [ವಚನವೇ!]; [ನೀನು] **ಶ್ರುತಮ್**=ಶ್ರುತಿಪ್ರಸಿದ್ಧನಾದ; **ಗರ್ತಸದಮ್**=ಹೃದಯ ಪುಂಡರೀಕದಲ್ಲಿ ಇರುವ; **ಯುವಾನಮ್**=ನಿತ್ಯತರುಣನಾದ; **ಉಪಹತ್ನುಮ್**=ಪ್ರಳಯಕಾಲದಲ್ಲಿ ಎಲ್ಲವನ್ನೂ ಸಂಹರಿಸಲು; **ಉಗ್ರಮ್**=ಉಗ್ರರೂಪನಾಗಿರುವ; **ಮೃಗಮ್ ನ**=ಸಿಂಹದಂತೆ; **ಭೀಮಮ್**= ಭಯಂಕರನಾದ [ರುದ್ರದೇವನನ್ನು]; **ಸ್ತುಹಿ**=ಸ್ತುತಿಸು. **ರುದ್ರ**=ರುದ್ರದೇವನೇ! **ಸ್ತವಾನಃ**=ಸ್ತುತಿಸಲ್ಪಟ್ಟವ ನಾಗಿ; **ಜರಿತ್ರೇ**=ದಿನದಿನವೂ ಜೀರ್ಣವಾಗುವ ನಮ್ಮ ಶರೀರದಲ್ಲಿ; **ಮೃಡ**=ಸುಖವನ್ನುಂಟುಮಾಡು. **ತೇ**=ನಿನ್ನ; **ಸೇನಾಃ**=ಸೇನೆಗಳು; **ಅಸ್ಮತ್**=ನಮಗಿಂತಲೂ; **ಅನ್ಯಮ್**=ಬೇರೆಯವನಾದ ವೈರಿಯನ್ನು; **ನಿ ವಪಂತು**=ನಾಶಪಡಿಸಲಿ.

**ಪದಶಃ ಅರ್ಥ- ಭ. ಭಾ. ಭಾ.**

♠ [ಎಲೈ! ಅಂತರಾತ್ಮನೇ! ಮನಸ್ಸೇ!] **ಗರ್ತಸದಮ್**=[ತ್ರಿಪುರದಹನಾದಿ ಸಮಯದಲ್ಲಿ] ರಥದಲ್ಲಿರುವ;/ ಹೃದಯಪುಂಡರೀಕದಲ್ಲಿರುವ;/ವಿಶ್ವವನ್ನು ಆವರಿಸುವಂತೆ ತೇಜೋವಿಶೇಷಸ್ವರೂಪನಾದ;/ಸ್ಮಶಾನವಾಸಿ ಯಾದ/ಶಬ್ದವುಳ್ಳ ಆಕಾಶದಲ್ಲಿರುವ; **ಯುವಾನಮ್**=ನಿತ್ಯತರುಣನಾದ; **ಮೃಗಮ್ ನ**=ಸಿಂಹಾದಿಗಳಂತೆ/ ಮೃಗರಾಜನಾದ ಸಿಂಹದಂತೆ; **ಉಗ್ರಮ್**=ಉಗ್ರನಾದ; **ಶ್ರುತಮ್**=ಪ್ರಸಿದ್ಧನಾದ/ಶ್ರುತಿಪ್ರಸಿದ್ಧನಾದ; **ಉಪ ಹತ್ನುಮ್**=ಶತ್ರುಗಳನ್ನು ಸಂಹರಿಸಲು ಉದ್ಯುಕ್ತನಾದ; [ರುದ್ರದೇವನನ್ನು] **ಭೀಮಮ್**=ಭಯಂಕರನಾದ; [ರುದ್ರನನ್ನು] **ಸ್ತುಹಿ**=ಸ್ತೋತ್ರ ಮಾಡು. **ಜರಿತ್ರೇ**=ಸ್ತೋತ್ರ ಮಾಡುತ್ತಿರುವ ನನ್ನನ್ನು/ಜೀರ್ಣವಾಗುತ್ತಿರುವ ನನ್ನನ್ನು; **ಮೃಡ**=ಸುಖಿಸುವಂತೆ ಮಾಡು. **ರುದ್ರ**=ಹೇ ರುದ್ರದೇವನೇ! [ನೀನು] **ಸ್ತವಾನಃ**=ಸ್ತುತಿಸಲ್ಪಡಬೇಕಾ ದವನಾಗಿರುತ್ತೀಯೆ. **ತೇ**=ನಿನ್ನ; **ಸೇನಾಃ**=ಸೇನೆಗಳು; **ಅಸ್ಮತ್ ಅನ್ಯಮ್**=ನಮಗಿಂತಲೂ ಬೇರೆಯವರಾದ ಶತ್ರುಗಳನ್ನು; **ನಿವಪಂತು**= ಸಂಹರಿಸಲಿ.

**ಪರಿ ಣೋ ರುದ್ರಸ್ಯ ಹೇತಿರ್ವೃಣಕ್ತು ಪರಿ ತ್ವೇಷಸ್ಯ ದುರ್ಮತಿರಘಾಯೋಃ । ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಡಯ ॥**

ಪರೀತಿ । ನಃ । ರುದ್ರಸ್ಯ । ಹೇತಿಃ । ವೃಣಕ್ತು । ಪರೀತಿ । ತ್ವೇಷಸ್ಯ । ದುರ್ಮತಿರಿತಿ ದುಃ-ಮತಿಃ । ಅಘಾಯೋರಿತ್ಯಘ-ಯೋಃ ॥ ಅವೇತಿ । ಸ್ಥಿರಾ । ಮಘವದ್ಭ್ಯ ಇತಿ ಮಘವತ್-ಭ್ಯಃ । ತನುಷ್ವ । ಮೀಢ್ವಃ । ತೋಕಾಯ । ತನಯಾಯ । ಮೃಡಯ ॥

| ಮಂತ್ರ | ವಿನಿಯೋಗ |
|---|---|
| **ಪರಿ ಣೋ...ಮೃಡಯ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

ಪದಶಃ ಅರ್ಥ- ಸಾ. ಭಾ.

**ರುದ್ರಸ್ಯ**=ರುದ್ರದೇವನ; **ಹೇತಿಃ**=ಧನುರ್ಬಾಣವೇ ಮೊದಲಾದ ಆಯುಧಸಮೂಹವು; **ನಃ**=ನಮ್ಮನ್ನು; **ಪರಿ ವೃಣಕ್ತು**=ಬಿಟ್ಟುಬಿಡಲಿ; **ತ್ವೇಷಸ್ಯ**=ಕ್ರುದ್ಧನಾದ; **ಅಘಾಯೋಃ**=ಪ್ರಹರಿಸಬೇಕೆಂಬ ಆಶಯವುಳ್ಳ ರುದ್ರದೇವನ; **ದುರ್ಮತಿಃ**=ಉಗ್ರಬುದ್ಧಿಯು; ನಃ=ನಮ್ಮನ್ನು; **ಪರಿವೃಣಕ್ತು**=ಬಿಟ್ಟುಬಿಡಲಿ; ಯಾ= ಯಾವ; **ಸ್ಥಿರಾ** ದುರ್ಮತಿಃ=ವಿರೋಧಿಗಳನ್ನು ನಾಶಪಡಿಸಬೇಕೆಂಬ ಯಾವ ಸ್ಥಿರವಾದ ಬುದ್ಧಿಯಿದೆಯೋ; ತಾಮ್=ಅದನ್ನು; **ಮಘವದ್ಭ್ಯಃ**=ಹವಿಸ್ಸೆಂಬ ಧನವನ್ನು ಅರ್ಪಿಸುವ ಯಜಮಾನರಾದ ನಮ್ಮಿಂದ; **ಅವ ತನುಷ್ವ**=ದೂರ ಮಾಡು. **ಮೀಢ್ವಃ**=ಬಯಕೆಗಳನ್ನು ಪೂರೈಸುವವನೇ! **ತೋಕಾಯ**=ಮಗನಿಗೂ; **ತನಯಾಯ**=ಮೊಮ್ಮಗನಿಗೂ; **ಮೃಡಯ**=ಸುಖವನ್ನು ಕೊಡು.

ಪದಶಃ ಅರ್ಥ- ಭ. ಭಾ. ಭಾ.

**ರುದ್ರಸ್ಯ**=ರುದ್ರದೇವನ; **ಹೇತಿಃ**=ಹಿಂಸಾಸಾಧನವಾದ ಆಯುಧವು; **ನಃ**=[ಪುತ್ರಪೌತ್ರಾದಿಸಹಿತರಾದ] ನಮ್ಮನ್ನು; **ಪರಿವೃಣಕ್ತು**=ಹಿಂಸಿಸದೇ ಬಿಟ್ಟುಬಿಡಲಿ. **ತ್ವೇಷಸ್ಯ**=ಕ್ರೋಧಜ್ವಲಿತನಾಗಿರುವ; **ಅಘಾಯೋಃ** =ಪಾಪ ಮಾಡಿದವರಿಗೆ ವ್ಯಸನವನ್ನುಂಟುಮಾಡಬೇಕೆನ್ನುವ ರುದ್ರದೇವನ; **ದುರ್ಮತಿಃ**=ನಿಗ್ರಹಾತ್ಮಕ ವಾದ ಬುದ್ಧಿಯು; ನಃ=ನಮ್ಮನ್ನು; **ಪರಿವೃಣಕ್ತು**=ಬಿಟ್ಟುಬಿಡಲಿ. **ಸ್ಥಿರಾ**=ಸ್ಥಿರವಾದ ನಿನ್ನ ಧನುಸ್ಸನ್ನು; **ಅವ ತನುಷ್ವ**=[ನಮ್ಮ ವಿಷಯದಲ್ಲಿ] ಇಳಿಸಿದ ಹೆದೆಯುಳ್ಳದ್ದಾಗುವಂತೆ ಮಾಡು. **ಮಘವದ್ಭ್ಯಃ**=ಹವಿಸ್ಸಿನ ರೂಪದ ಧನವನ್ನು ಸಮರ್ಪಿಸುವ ಯಜಮಾನರ ವಿಷಯದಲ್ಲಿ; [ಅವ ತನುಷ್ವ=ಧನುಸ್ಸುಗಳನ್ನು ಸಡಿಲಿಸು] **ಮೀಢ್ವಃ**=ಕಾಮಗಳನ್ನು ಸುರಿಸುವವನೇ! **ತೋಕಾಯ ತನಯಾಯ**=ಪುತ್ರ-ಪೌತ್ರರನ್ನೂ; **ಮೃಡಯ**=ಸುಖವಾಗಿರುವಂತೆ ಮಾಡು.

: ತಾತ್ಪರ್ಯ- ಭ. ಭಾ. ಭಾ. :

**ಭೃತ್ಯರನ್ನೂ, ಸತ್ಪುತ್ರರನ್ನೂ, ವೀರಪುರುಷರನ್ನೂ ಹಿಂಸಿಸದಿರು. ನಾವು ಚರು-ಪುರೋಡಾಶಾದಿ ಹವಿಸ್ಸನ್ನು ಸಮರ್ಪಿಸಿ, ನಿನ್ನನ್ನು ಸೇವಿಸುತ್ತೇವೆ. ನೀನು ಪ್ರಸನ್ನನಾಗು.**

**ಮೀಢುಷ್ಟಮ ಶಿವತಮ ಶಿವೋ ನಃ ಸುಮನಾ ಭವ । ಪರಮೇ ವೃಕ್ಷ ಆಯುಧಂ ನಿಧಾಯ ಕೃತ್ತಿಂ ವಸಾನ ಆ ಚರ ಪಿನಾಕಂ [ಪಿನಾಕಮ್(೨೪)] ಬಿಭ್ರದಾ ಗಹಿ ॥**

---

**ಮೀಢುಷ್ಟಮೇತಿ ಮೀಢುಃ–ತಮ । ಶಿವತಮೇತಿ ಶಿವ–ತಮ । ಶಿವಃ । ನಃ । ಸುಮನಾ ಇತಿ ಸು–ಮನಾಃ । ಭವ ॥ ಪರಮೇ । ವೃಕ್ಷೇ । ಆಯುಧಮ್ । ನಿಧಾಯೇತಿ ನಿ–ಧಾಯ । ಕೃತ್ತಿಮ್ । ವಸಾನಃ । ಏತಿ । ಚರ । ಪಿನಾಕಮ್ । (೨೪) । ಬಿಭ್ರತ್ । ಏತಿ । ಗಹಿ ॥**

---

| ಮಂತ್ರ | ವಿನಿಯೋಗ |
|---|---|
| **ಮೀಢುಷ್ಟಮ...ಗಹಿ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

**ಪದಶಃ ಅರ್ಥ– ಸಾ. ಭಾ.**

**ಮೀಢುಷ್ಟಮ**=ಅತಿಶಯವಾಗಿ ಇಷ್ಟಾರ್ಥಗಳನ್ನು ಕೊಡುವವನೇ! **ಶಿವತಮ**=ಅತ್ಯಂತ ಶಾಂತ ಸ್ವರೂಪದವನೇ! [ನೀನು] **ನಃ**=ನಮ್ಮ ವಿಷಯದಲ್ಲಿ; **ಶಿವಃ**=ಶಾಂತನೂ, ಮಂಗಲಕರನೂ; **ಸುಮನಾಃ**=ಹಿತಕರವಾದ ಮನಸ್ಸುಳ್ಳವನೂ; **ಭವ**=ಆಗು; **ಪರಮೇ**=ಶ್ರೇಷ್ಠವಾದ; **ವೃಕ್ಷೇ**=ಆಲ ಅಥವಾ ಅರಳೀ ಮರದಲ್ಲಿ; **ಆಯುಧಮ್**=ತ್ರಿಶೂಲಾದಿ ಆಯುಧಗಳನ್ನು; **ನಿಧಾಯ**=ಇಟ್ಟು; **ಕೃತ್ತಿಮ್**=ವ್ಯಾಘ್ರಚರ್ಮವನ್ನು; **ವಸಾನಃ**=ಧರಿಸಿದವನಾಗಿ; **ಆಚರ**=ನಮಗೆ ಅಭಿಮುಖನಾಗಿ ಬಾ. **ಪಿನಾಕಮ್**=ಧನುಸ್ಸನ್ನು ಮಾತ್ರ; **ಬಿಭ್ರತ್**=ಧರಿಸಿದವನಾಗಿ; **ಆ ಗಹಿ**=ಬಾ.

**ಪದಶಃ ಅರ್ಥ– ಭ. ಭಾ. ಭಾ.**

**ಮೀಢುಷ್ಟಮ**=ಉತ್ತಮಪುರುಷನೇ! **ಶಿವತಮ**=ಅತಿಶಾಂತನೇ!; **ನಃ**=[ನೀನು] ನಮ್ಮವನಾಗು. **ಶಿವಃ ಸುಮನಾಃ**=ಮಂಗಲಕರನಾಗಿ, ನಮ್ಮ ಮನಸ್ಸನ್ನು ಒಳ್ಳೆಯದಾಗಿರುವಂತೆ; **ಭವ**=[ನೀನು] ಇದ್ದು [ಮಾಡು]. **ಪರಮೇ**=ಉನ್ನತವಾಗಿರುವ; **ವೃಕ್ಷೇ**=ವಟ, ಕರ್ಣಿಕಾರ ಮುಂತಾದ ನಿನ್ನ; **ವೃಕ್ಷೇ**=ಮರಗಳಲ್ಲಿ; **ಆಯುಧಮ್**=ತ್ರಿಶೂಲವೇ ಮುಂತಾದ ಆಯುಧಗಳನ್ನು; **ನಿಧಾಯ**=ಕ್ಷೇಮವಾಗಿ ಇಟ್ಟು/ನಾವು ನೋಡದಂತೆ ದೂರಪ್ರದೇಶದಲ್ಲಿ ಇಟ್ಟು; **ಕೃತ್ತಿಮ್**=ವ್ಯಾಘ್ರಚರ್ಮವನ್ನು; **ವಸಾನಃ**=ಧರಿಸಿದವನಾಗಿ; **ಆಚರ**=ಇರು/ನಮ್ಮ ಎದುರಾಗಿ ಬಾ. **ಪಿನಾಕಮ್**=ಧನುಸ್ಸನ್ನು ಮಾತ್ರ; **ಬಿಭ್ರತ್**=ಧರಿಸಿದವನಾಗಿ; **ಆ ಗಹಿ**=ಬಾ/ಅನುಗ್ರಹಿಸು.

**: ತಾತ್ಪರ್ಯ– ಶಾ. ಭಾ. :**

ಎಲೈ! ನನ್ನ ಮಾತೇ! ನೀನು ವೇದಪ್ರಸಿದ್ಧನಾದ ರುದ್ರನನ್ನು ಸ್ತುತಿಸು. ಆ ರುದ್ರನು–**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ [ಭಗವದ್ಗೀತೆ]** [ಹೇ! ಅರ್ಜುನ! ಈಶ್ವರನು ಎಲ್ಲ ಪ್ರಾಣಿಗಳ ಹೃದಯದೇಶದಲ್ಲಿ ಇರುವನು] ಎಂಬಂತೆ–ಎಲ್ಲರ ಹೃದಯದಲ್ಲಿ ಇರುವನು. ಅವನು ನಿತ್ಯತರುಣನು. ಪ್ರಳಯಕಾಲದಲ್ಲಿ ಜಗತ್ತನ್ನು ಸಂಹರಿಸುವುದಕ್ಕೆ ಮೃಗ/ಗಜವನ್ನು ಕೊಲ್ಲಲು ಉಗ್ರವಾಗಿರುವ ಸಿಂಹದಂತೆ ಭಯಂಕರನಾಗಿರುವನು.

# ವಿಕಿರಿದ ವಿಲೋಹಿತ ನಮಸ್ತೇ ಅಸ್ತು ಭಗವಃ ।

ವಿಕಿರಿದೇತಿ ವಿ-ಕಿರಿದ। ವಿಲೋಹಿತೇತಿ ವಿ-ಲೋಹಿತ। ನಮಃ। ತೇ। ಅಸ್ತು। ಭಗವ ಇತಿ ಭಗ-ವಃ॥

| ಮಂತ್ರ | ವಿನಿಯೋಗ |
|---|---|
| **ವಿಕಿರಿದ...ತಾಃ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

ಪದಶಃ ಅರ್ಥ- ಸಾ. ಭಾ.

**ವಿಕಿರಿದ**=ಭಕ್ತರಿಗೆ ವಿಶೇಷವಾಗಿ ಧನವನ್ನು ಕೊಡುವವನೇ! **ವಿಲೋಹಿತ**=ಶ್ವೇತವರ್ಣನೇ! ಕಾಂಚನ ವರ್ಣದವನೇ! **ಭಗವಃ**=ಷಡ್ಗುಣಸಂಪನ್ನನಾದ ಪೂಜ್ಯನೇ!; **ತೇ**=ನಿನಗೆ; **ನಮಃ ಅಸ್ತು**=ನಮಸ್ಕಾರವಿರಲಿ.

ಪದಶಃ ಅರ್ಥ- ಭ. ಭಾ. ಭಾ.

**ವಿಕಿರಿದ**=ಧರ್ಮವಿರೋಧಿಗಳನ್ನು ಹಿಂಸಿಸುವ ಆಯುಧಗಳುಳ್ಳವನೇ!/ಬೇರೆಯವರನ್ನು ಹಿಂಸಿಸದ ಆಯುಧ ಗಳುಳ್ಳವನೇ!/ವಿವಿಧವಾಗಿ ಹಿಂಸಿಸುವ ಪಾಪ-ವ್ಯಾಧಿಗಳನ್ನೂ, ಸಂಸಾರಾದಿಗಳನ್ನೂ ಖಂಡಿಸಿ ದೂರಮಾಡುವ ವನೇ!/ಅವಶ್ಯವಾಗಿ ಸಂಹಾರಮಾಡಬೇಕಾದವರನ್ನು ಬಾಣಗಳನ್ನು ಎಸೆದು ಸಂಹರಿಸುವವನೇ! **ವಿಲೋಹಿತ**= ಅರ್ಧ ಕಪ್ಪು ಹಾಗೂ ಅರ್ಧ ಕೆಂಪಾಗಿರುವವನೇ!/ನಿರ್ವಿಕಾರನೇ! **ಭಗವಃ**=ಭಗವಂತನೇ! **ತೇ**=ನಿನಗೆ; **ನಮಃ ಅಸ್ತು**=ನಮಸ್ಕಾರವಿರಲಿ.

: ತಾತ್ಪರ್ಯ- ಸಾ. ಭಾ. :

ರುದ್ರದೇವನೇ! ನೀನು ಸ್ತುತಿಸಲ್ಪಟ್ಟವನಾಗಿ ದಿನದಿನವೂ ಕ್ಷೀಣಿಸುವ ಸ್ವಭಾವವುಳ್ಳ ನಮ್ಮ ಶರೀರದಲ್ಲಿ ಸುಖವನ್ನುಂಟುಮಾಡು. ನಿನ್ನ ಸೇನೆಗಳು ನಮ್ಮ ವೈರಿಯನ್ನು ನಾಶಪಡಿಸಲಿ.

: ತಾತ್ಪರ್ಯ- ಭ. ಭಾ. ಭಾ. :

ಹೇ! ರುದ್ರನೇ! ವೀರರನ್ನು ಪುಷ್ಟಿಗೊಳಿಸುವ ಶಾಂತರೂಪವು ನಮ್ಮಲ್ಲಿರಲಿ. ಗವಾದಿ ಪಶುಗಳನ್ನೂ, ಮನುಷ್ಯರನ್ನೂ ಹಿಂಸಿಸುವ ನಿನ್ನ ರೂಪವು ನಮ್ಮನ್ನು ಬಿಟ್ಟು ಬೇರೆಡೆ ಇರಲಿ. ಅನುಗ್ರಹದ ರೂಪವು ನಮ್ಮಲ್ಲಿರಲಿ, ಹೆದರಬೇಡ, ಕಾಪಾಡುವೆನು, ಎಂದು ಅಭಯವನ್ನಿತ್ತು ನಮಗೆ ಸಂಬಂಧಿಸಿದೆಲ್ಲರನ್ನೂ ಅನುಗ್ರಹಿಸಿ ಉಭಯ ಲೋಕಗಳಲ್ಲಿಯೂ ವೃದ್ಧಿಹೊಂದುವಂತೆ ಮಾಡು.

ರುದ್ರನ ವಿಗ್ರಹವು ಅತ್ಯುಗ್ರವಾದುದರಿಂದ ದೇವನನ್ನು ಪರೋಕ್ಷವಾಗಿ ಇಟ್ಟುಕೊಂಡು ಸ್ತುತಿಯು ಮಂತ್ರದ ಪೂರ್ವಾರ್ಧದಲ್ಲಿದೆ. ಉತ್ತರಾರ್ಧದಲ್ಲಿ ಪ್ರತ್ಯಕ್ಷಸ್ತುತಿಯು ಇದೆ.

ಎಲೈ! ಅಂತರಾತ್ಮನೇ! ನೀನು ರುದ್ರನನ್ನು ಸ್ತುತಿಸು/ನಾನು ರುದ್ರನನ್ನು ಸ್ತುತಿಸುತ್ತೇನೆ. ಆತನು ಪ್ರಸಿದ್ಧನು. ತ್ರಿಪುರ ದಹನಾದಿ ಸಮಯದಲ್ಲಿ ರಥದಲ್ಲಿ ಇರುವವನು. ಹೃದಯಪುಂಡರೀಕದಲ್ಲಿರುವವನು. ವಿಶ್ವವನ್ನು ಆವರಿಸುವ ತೇಜೋವಿಶೇಷಸ್ವರೂಪನು. ಸ್ಮಶಾನವಾಸಿಯು. ಶಬ್ದವುಳ್ಳ ಆಕಾಶದಲ್ಲಿ ಇರುವವನು. **'ಯುವಾ ಪಿತಾ ಸ್ವಪಾ ರುದ್ರ ಏಷಾಮ್'** [ಋಕ್.ಸಂ. 5.60.5] ಎಂಬ ಮಂತ್ರದಂತೆ ನಿತ್ಯತರುಣನು. ಮೃಗರಾಜ ಸಿಂಹದಂತೆ, ಮೃಗದಂತೆ ಉಗ್ರನು. ಶತ್ರುಗಳನ್ನು ಉಪಸಂಹರಿಸುವುದರಲ್ಲಿ ಪ್ರವೃತ್ತನು. ಮೃತ್ಯುಸದೃಶನು. ಎದುರಿಸಲಾಗದವನು. ರುದ್ರನೇ! ಸ್ತುತಿಸುವ ನನಗೆ ಸುಖವನ್ನು ಕೊಡು. ನೀನು ಸ್ತುತ್ಯನು ಅಂದರೆ ಸ್ತುತಿಸಲ್ಪಡಬೇಕಾದವನು. ನಿನ್ನ ಅನುಚರರು ಜಗತ್ತಿಗೆ ಕ್ಷೋಭವ ನ್ನುಂಟು ಮಾಡುವ ಕಿರಣಸ್ವರೂಪರು. ಅವರು ನಮಗಿಂತಲೂ ಬೇರೆಯವರಾದ ನಮ್ಮ ವೈರಿಗಳನ್ನು ನಾಶಪಡಿಸಲಿ.

## ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಮಸ್ಮನ್ನಿ ವಪಂತು ತಾಃ ॥

ಯಾಃ । ತೇ । ಸಹಸ್ರಮ್ । ಹೇತಯಃ । ಅನ್ಯಮ್ । ಅಸ್ಮತ್ । ನೀತಿ । ವಪಂತು । ತಾಃ ॥

ಪದಶಃ ಅರ್ಥ– ಸಾ. ಭಾ.

**ತೇ**=ನಿನ್ನ; **ಯಾಃ**=ಯಾವ; **ಸಹಸ್ರಮ್**=ಸಾವಿರಾರು; **ಹೇತಯಃ**=ಆಯುಧಗಳು [ಇವೆಯೋ] **ತಾಃ**=ಆ ಆಯುಧಗಳು; **ಅಸ್ಮತ್**=ನಮಗಿಂತಲೂ; **ಅನ್ಯಮ್**=ಬೇರೆಯವನಾದ ಶತ್ರುವನ್ನು; **ನಿವಪಂತು**=ನಾಶಗೊಳಿಸಲಿ.

ಪದಶಃ ಅರ್ಥ– ಭ. ಭಾ. ಭಾ.

**ಯಾಃ**=ಯಾವ; **ತೇ**=ನಿನ್ನ; **ಸಹಸ್ರಮ್**=ಸಹಸ್ರಾರುಸಂಖ್ಯೆಯ; **ಹೇತಯಃ**=[ಜಗತ್ತಿನ ಉಪಸಂಹಾರದಲ್ಲಿ ಉಪಯೋಗಿಸುವ] ಆಯುಧಗಳು ಇವೆಯೋ; **ತಾಃ**=ಅವು; **ಅಸ್ಮತ್**=ನಮಗಿಂತಲೂ; **ಅನ್ಯಮ್**=ಬೇರೆ ನಿಗ್ರಹಕ್ಕೆ ಅರ್ಹರಾದ ಧರ್ಮವಿರೋಧಿಗಳನ್ನು; **ನಿವಪಂತು**=ಹಿಂಸಿಸಲಿ.

: ತಾತ್ಪರ್ಯ– ಸಾ. ಭಾ. :

ರುದ್ರದೇವನ ಆಯುಧಗಳು ನಮ್ಮನ್ನು ಎಲ್ಲೆಡೆಗಳಿಂದಲೂ ಬಿಟ್ಟು ಬಿಡಲಿ. ನಮ್ಮನ್ನು ಪ್ರಹರಿಸದಿರಲಿ. ಕ್ರೋಧೋದ್ದೀಪಿತನಾಗಿ ಅಪರಾಧಿಗಳನ್ನು ಪ್ರಹರಿಸಬೇಕೆನ್ನುವ ರುದ್ರದೇವನ ಉಗ್ರಬುದ್ಧಿಯು ನಮ್ಮನ್ನು ಬಿಟ್ಟುಬಿಡಲಿ. ರುದ್ರದೇವನೇ! ವಿರೋಧಿಗಳನ್ನು ನಾಶಪಡಿಸಬೇಕೆನ್ನುವ ನಿನ್ನ ಸ್ಥಿರವಾದ ಯಾವ ಉಗ್ರಬುದ್ಧಿಯು ಇದೆಯೋ ಆ ಬುದ್ಧಿಯನ್ನು ಹವೀರೂಪವಾದ ಅನ್ನವನ್ನು ನಿನಗೆ ಸಮರ್ಪಿಸುವ ಯಜಮಾನರಾದ ನಮ್ಮ ವಿಷಯದಲ್ಲಿ ಬಿಟ್ಟುಬಿಡು. ಇಷ್ಟಗಳನ್ನು ಪೂರ್ಣಗೊಳಿಸುವವನೇ! ನಮ್ಮ ಪುತ್ರರಿಗೂ, ಪೌತ್ರಾದಿಗಳಿಗೂ ಸುಖವನ್ನು ಕೊಡು.

ಶಿವನು ಆಶುತೋಷನು. ಬೇಗನೇ ಸಂತೋಷಿಸುವವನು. ಭಕ್ತರು ಕೇಳಿದುದನ್ನು ಅತಿಶಯವಾಗಿ ಕೊಟ್ಟುಬಿಡುವವನು. ಅತ್ಯಂತ ಶಾಂತನು. ಆತನು ನಮ್ಮ ವಿಷಯದಲ್ಲಿ ಮಂಗಳಕರನಾಗಲಿ. ಒಳ್ಳೆಯ ಮನಸ್ಸುಳ್ಳವನಾಗಲಿ. ಓ! ಶಿವನೇ!

: ತಾತ್ಪರ್ಯ– ಭ. ಭಾ. ಭಾ. :

ಈ ಮಂತ್ರವೂ ಪರೋಕ್ಷಕೃತ, ಪ್ರತ್ಯಕ್ಷಕೃತರೂಪವಾದ ಎರಡು ವಾಕ್ಯಗಳ ರೂಪದಿಂದ ಕೂಡಿದೆ. ಹಿಂಸಾಸಾಧನವಾದ ರುದ್ರದೇವನ ಆಯುಧವು ಪುತ್ರಪೌತ್ರಸಹಿತರಾದ ನಮ್ಮನ್ನು ಹಿಂಸಿಸದೆ ಬಿಟ್ಟುಬಿಡಲಿ. ಕೋಪಗೊಂಡಿರುವ, ಪಾಪ ಮಾಡಿದವರಿಗೆ ವ್ಯಸನವನ್ನು ಉಂಟುಮಾಡಬೇಕೆನ್ನುವ ನಿಗ್ರಹಾತ್ಮಕವಾದ ರುದ್ರದೇವನ ಬುದ್ಧಿಯು ನಮ್ಮ ವಿಷಯದಲ್ಲಿ ಉಂಟಾಗದಿರಲಿ. ನಾವು ಪಾಪಕರ್ಮಿಗಳಾಗುವುದು ಬೇಡ.

ರುದ್ರದೇವನೇ! **'ಇಮಾ ರುದ್ರಾಯ ಸ್ಥಿರಧನ್ವನೇ'** ಎಂಬಂತೆ ಸ್ಥಿರವಾದ ನಿನ್ನ ಧನುಸ್ಸು ನಮ್ಮ ವಿಷಯದಲ್ಲಿ ಇಳಿಸಿದ ಹೆದೆಯುಳ್ಳದ್ದಾಗುವಂತೆ ಮಾಡು. ಸಡಿಲ ಮಾಡು. ನಮ್ಮನ್ನು ಹಿಂಸಿಸದಿರು. ಹವಿಸ್ಸಿನ ರೂಪವಾದ ಧನವನ್ನು ಸಮರ್ಪಿಸುವ ಯಜಮಾನರ ವಿಷಯದಲ್ಲಿ ನಿನ್ನ ಧನುಸ್ಸುಗಳನ್ನು ಸಡಿಲಿಸು. ಹವಿಸ್ಸನ್ನು ನಾವು ಅರ್ಪಿಸುವಂತಾಗಲಿ. ನಿನ್ನ ನಿಶ್ಚಲವಾದ ಸಂಹರಿಸುವ ಬುದ್ಧಿಯನ್ನು ಹವಿಸ್ಸನ್ನು ಅರ್ಪಿಸುವವರ ವಿಷಯದಲ್ಲಿ ಇಡಬೇಡ. ಕಾಮಗಳನ್ನು ಸುರಿಸುವವನೇ! ನಮ್ಮ ಪುತ್ರ–ಪೌತ್ರರನ್ನು ಸುಖವಾಗಿರುವಂತೆ ಅನುಗ್ರಹಿಸು.

ರುದ್ರನೇ! ನೀನು ಉತ್ತಮಪುರುಷನು. ಅತಿಶಾಂತನು. ನೀನು ನಮ್ಮವನಾಗಿದ್ದುಕೊಂಡು ನಮಗೆ ಮಂಗಳವನ್ನುಂಟುಮಾಡು. ನಮ್ಮ ಮನಸ್ಸು ಒಳ್ಳೆಯದಾಗಿರುವಂತೆ ಮಾಡು. ನಿನ್ನ ತ್ರಿಶೂಲಾದಿ ಆಯುಧಗಳನ್ನು ಎತ್ತರವಾದ ವಟ, ಕರ್ಣಿಕಾರಾದಿ ವೃಕ್ಷಗಳಲ್ಲಿ ನಮ್ಮ ಕಣ್ಣಿಗೆ ಬೀಳದಂತೆ ಇಟ್ಟು, ಹುಲಿಯ ಚರ್ಮವನ್ನು ಧರಿಸಿದವನಾಗಿರು. ಹುಲಿಯ ಚರ್ಮಧಾರಿಯಾಗಿ ನಮಗೆ ಎದುರಾಗಿ ಬಾ. ಬರುವಾಗ ಹೆದೆ ಮತ್ತು ಬಾಣವಿಲ್ಲದ ದಂಡದಂತಿರುವ ಪಿನಾಕಧನುಸ್ಸನ್ನು ಅಲಂಕಾರಕ್ಕಾಗಿ ಧರಿಸಿ ಬಾ. ಅನುಗ್ರಹಿಸು.

## ಸಹಸ್ರಾಣಿ ಸಹಸ್ರಧಾ ಬಾಹುವೋಸ್ತವ ಹೇತಯಃ । ತಾಸಾಮೀಶಾನೋ ಭಗವಃ ಪರಾಚೀನಾ ಮುಖಾ ಕೃಧಿ ॥ ೨೫-10 ॥

[ಅಸ್ಮಿನ್ಗ್‌ಂಸ್ತನುವಃ ಸ್ತುಹಿ ಪಿನಾಕಮೇಕಾನ್ನತ್ರಿಗ್‌ಂಶಚ್ಚ ॥]

---

ಸಹಸ್ರಾಣಿ । ಸಹಸ್ರಧೇತಿ ಸಹಸ್ರ-ಧಾ । ಬಾಹುವೋಃ । ತವ । ಹೇತಯಃ ॥ ತಾಸಾಮ್ । ಈಶಾನಃ । ಭಗವ ಇತಿ ಭಗ-ವಃ । ಪರಾಚೀನಾ । ಮುಖಾ । ಕೃಧಿ ॥ (೨೫) ॥

---

| ಮಂತ್ರ | ವಿನಿಯೋಗ |
|---|---|
| **ಸಹಸ್ರಾಣಿ...ಕೃಧಿ ॥** | ಶತರುದ್ರೀಯಹೋಮ/ರುದ್ರನ ಪ್ರಾರ್ಥನೆ/ಅಭಯಯಾಚನೆ. |

ಪದಶಃ ಅರ್ಥ- ಸಾ. ಭಾ.

▲ **ಭಗವಃ**=ಷಡ್ಗುಣಸಂಪನ್ನನಾದ ಪರಮೇಶ್ವರನೇ! **ಈಶಾನಃ**=[ನೀನು] ಸರ್ವಸಮರ್ಥನು. **ತವ**=ನಿನ್ನ; **ಬಾಹುವೋಃ**=ತೋಳುಗಳಲ್ಲಿ; **ಸಹಸ್ರಧಾ**=ಸಾವಿರಾರು ಬಗೆಯ; **ಸಹಸ್ರಾಣಿ**=ಸಾವಿರಾರು ಸಂಖ್ಯೆಯ; **ಹೇತಯಃ**= ಆಯುಧಗಳು [ಯಾವುವು ಇವೆಯೋ] **ತಾಸಾಮ್**=ಅವುಗಳ; **ಮುಖಾ**=ಅಲಗುಗಳನ್ನು; **ಪರಾಚೀನಾ**= [ನಮ್ಮಿಂದ] ಪರಾಙ್ಮುಖವಾಗಿರುವಂತೆ; **ಕೃಧಿ**=ಮಾಡು.

ಪದಶಃ ಅರ್ಥ- ಭ. ಭಾ. ಭಾ.

▲ **ಭಗವಃ**=ಷಡ್ಗುಣಸಂಪನ್ನನಾದ ಭಗವಂತನಾದ ಈಶ್ವರನೇ! **ಸಹಸ್ರಾಣಿ**=ಸಾವಿರಾರು; **ಸಹಸ್ರಧಾ**=ಸಾವಿರಾರು ರೀತಿಯ; **ತವ**=ನಿನ್ನ; **ಬಾಹುವೋಃ**=ತೋಳುಗಳಲ್ಲಿ ಇರುವ; **ಹೇತಯಃ**=ಆಯುಧಗಳು [ಇವೆ]. **ತಾಸಾಮ್**=ಆ ಆಯುಧಗಳ; **ಮುಖಾ**=ಅಂಚುಗಳನ್ನು; **ಪರಾಚೀನಾ**=[ನಮ್ಮಿಂದ] ಬೇರೆ ಕಡೆಗೆ ಮುಖವಾಗಿರುವಂತೆ; **ಕೃಧಿ**= ಮಾಡು. [ನೀನು] **ಈಶಾನಃ**=ಸರ್ವೇಶ್ವರನು. [ಆಯುಧಗಳನ್ನು ಪ್ರಯೋಗಿಸಲು, ಉಪಸಂಹಾರ ಮಾಡಲು ಸಮರ್ಥನು.]

: ತಾತ್ಪರ್ಯ- ಸಾ. ಭಾ. :

**ನಾವು ಹೆದರದಂತೆ ನಿನ್ನ ತ್ರಿಶೂಲವೇ ಮುಂತಾದ ಆಯುಧಗಳನ್ನು ಎತ್ತರವಾಗಿರುವ ಆಲ,ಅರಳಿ ಮುಂತಾದ ವೃಕ್ಷಗಳಲ್ಲಿ ಇಟ್ಟು ಬಾ.* ಹುಲಿಯ ಚರ್ಮವನ್ನು ಧರಿಸಿ, ಧನುಸ್ಸನ್ನು ಮಾತ್ರ ಆಭರಣದಂತೆ ಧರಿಸಿ, ನಮ್ಮ ಬಳಿಗೆ ಬಾ. ಬಂದು ನಮ್ಮನ್ನು ಅನುಗ್ರಹಿಸು.**

: ತಾತ್ಪರ್ಯ- ಭ. ಭಾ. ಭಾ. :

**ಧರ್ಮವಿರೋಧಿಗಳನ್ನೂ, ಪಾಪ-ವ್ಯಾಧಿ-ಸಂಸಾರಗಳನ್ನೂ ಖಂಡಿಸುವ, ಹಿಂಸಿಸದ ಆಯುಧವುಳ್ಳ, 'ದರಿದ್ರನ್ನೀಲಲೋಹಿತ' ಎಂಬ ಮಂತ್ರದಂತೆ ಅರ್ಧ ಕಪ್ಪಾಗಿರುವ, ಅರ್ಧ ಕೆಂಪಾಗಿರುವ ರುದ್ರನೇ! ನಿನಗೆ ನಮಸ್ಕಾರ. ಈ ವಿಷಯದಲ್ಲಿ 'ಪುರುಷಂ ಕೃಷ್ಣಪಿಂಗಲಮ್' ಎಂಬ ಮಂತ್ರವೂ ಇದೆ.**

---

*** ಈ ಪ್ರಸಂಗದಲ್ಲಿ ಪಾಂಡವರು ತಮ್ಮ ಶಸ್ತ್ರಾಸ್ತ್ರಗಳನ್ನು ವಿರಾಟನಗರದ ಹತ್ತಿರ ಬನ್ನಿಯ ಮರದಲ್ಲಿ ಇಟ್ಟಿದ್ದರೆಂಬುದನ್ನು ಗಮನಿಸಬಹುದು.**

: ತಾತ್ಪರ್ಯ- ಸಾ. ಭಾ. :

ರುದ್ರದೇವನು ಭಕ್ತರಿಗೆ ಧನಾದಿಕಾಮನೆಗಳನ್ನು ಅತಿಶಯವಾಗಿ ಪೂರ್ಣಗೊಳಿಸುವವನು. ಪಂಚಾಕ್ಷರ ಮಂತ್ರಧ್ಯಾನದಲ್ಲಿ **'ಧ್ಯೇಯೋ ಮುಕ್ತಾಪರಾಗಾಮೃತರಸಕಲಿತಾದ್ರಿಪ್ರಭಃ'** ಎಂದಿದೆ. ಅದರಂತೆ ಶ್ವೇತವರ್ಣದವನೇ! ಅಥವಾ ಅಷ್ಟಾಕ್ಷರಮಂತ್ರಧ್ಯಾನದಲ್ಲಿ **'ಕಾಂಚನಾಭೋ ಧ್ಯೇಯಃ ಪದ್ಮಾಸನಸ್ಥಃ'** ಎಂದಿರುವಂತೆ ವಿಶೇಷ ಲೋಹಿತವರ್ಣನೇ! ಭಗವಂತನೇ!* ರುದ್ರದೇವನೇ! ನಿನಗೆ ನಮಸ್ಕಾರವು. ನಿನ್ನಲ್ಲಿ ಸಾವಿರಾರು ಆಯುಧಗಳು ಇವೆ. ಅವುಗಳು ನಮ್ಮನ್ನು ಹಿಂಸಿಸದಿರಲಿ. ವಿರೋಧಿಗಳನ್ನು ನಾಶಪಡಿಸಲಿ.

ಹೇ ರುದ್ರದೇವನೇ! ಭಗವಂತನೇ! ನಿನ್ನ ಕೈಗಳಲ್ಲಿ ಇರುವ ಸಾವಿರಾರು ವಿಧದ ಸಾವಿರಾರು ಆಯುಧಗಳಲ್ಲಿರುವ ಮೊನೆಗಳು ನಮ್ಮೆಡೆಗೆ ಇಲ್ಲದಿರಲಿ. ಭಗವಂತನಾದ ರುದ್ರನು **'ಯಸ್ಮಿನ್ನೀಶ್ವರ ಇತ್ಯನನ್ಯವಿಷಯಃ ಶಬ್ದೋ ಯಥಾರ್ಥಾಕ್ಷರಃ'** [ಯಾರ ವಿಷಯದಲ್ಲಿ ಮಾತ್ರ ಪ್ರಯೋಗಿಸಲ್ಪಡುವ 'ಈಶ್ವರ' ಎಂಬ ಶಬ್ದವು ಅರ್ಥಕ್ಕೆ ಪರಿ ಪೂರ್ಣವಾಗಿದೆಯೋ ಅವನು] ಎಂದು ಕಾಳಿದಾಸನು ಹೇಳಿರುವಂತೆ ನೀನು ಸರ್ವಸಮರ್ಥನು. ಪರಮೇಶ್ವರನು. ಅವುಗಳನ್ನು ಪ್ರಯೋಗಿಸಲೂ, ಉಪಸಂಹಾರ ಮಾಡಲೂ ಸಮರ್ಥನಾಗಿರುವನು. ನಮ್ಮನ್ನು ಹಿಂಸಿಸದೇ ಕಾಪಾಡು.

: ತಾತ್ಪರ್ಯ- ಭ. ಭಾ. ಭಾ. :

ಕಾಲುಷ್ಯರಹಿತನಾದ ನಿರ್ವಿಕಾರನೇ! ಭಗವಂತನೇ! ನಿನಗೆ ನಮಸ್ಕಾರವು. ಜಗತ್ತಿನ ಉಪಸಂಹಾರದಲ್ಲಿ ಉಪಯೋಗಿಸುವ ನಿನ್ನ ಆಯುಧಗಳು ನಮ್ಮನ್ನು ಹಿಂಸಿಸದಿರಲಿ. ನಿಗ್ರಹಕ್ಕೆ ಅರ್ಹರಾದ ಧರ್ಮವಿರೋಧಿಗಳನ್ನು ಹಿಂಸಿಸಲಿ. ನಾವು ನಿನ್ನ ನಿಗ್ರಹಕ್ಕೆ ಪಾತ್ರರಾಗದೆ ಇರೋಣ. ಆ ರೀತಿ ಅನುಗ್ರಹಿಸು. ಈ ಮಂತ್ರದಲ್ಲಿ **'ಬಾಹುವೋಃ'** ಎಂಬ ದ್ವಿವಚನವು ಸಾವಿರಾರು ಬಾಹುಗಳು ಎಂಬುದಕ್ಕೆ ಉಪಲಕ್ಷಣ. ಅಥವಾ ಅನೇಕ ಆಯುಧಸಹಿತವಾದ ತೋಳುಗಳು ಇದ್ದರೂ ಪ್ರಹಾರದ ಕಾರ್ಯಕ್ಕೆ ಎರಡು ಬಾಹುಗಳೇ ವಿನಿಯೋಗಿಸಲ್ಪಡುವುದರಿಂದ ದ್ವಿವಚನವು ಹೊಂದುತ್ತದೆ. **'ಸಹಸ್ರಾಣಿ ಹೇತಯಃ'** ಎಂಬ ಶ್ರುತಿಗೆ ಮಹಾಮಹಿಮನಾದ ನಿನ್ನ ಕೈಯಲ್ಲಿ ಒಂದೊಂದೇ ಆಯುಧವು ಸಾವಿರ ಆಯುಧಗಳಿಗೆ ಸಮಾನ ಎಂದರ್ಥ. ಹೇತಿ ಎಂದರೆ ಹಿಂಸೆ ಎಂಬರ್ಥದಂತೆ ನೀನು ನೀಡುವ ಹಿಂಸೆಯು ನಾನಾರೀತಿಯದ್ದಾಗಿದ್ದು ಅದನ್ನು ಧರ್ಮವಿರೋಧಿಗಳೆಡೆ ಅಥವಾ ಆಯುಧಗಳನ್ನು ಧರ್ಮವಿರೋಧಿಗ ಳತ್ತ ವಿನಿಯೋಗಿಸು ಎಂದು ತಾತ್ಪರ್ಯ. ನೀನು ಸರ್ವಸಮರ್ಥನಾಗಿರುವೆ. ಹೀಗಾಗಿ ಅದು ಶಕ್ಯ ಎಂದೂ ತಾತ್ಪರ್ಯ.

---

* ಸಕಲೈಶ್ವರ್ಯ, ಧರ್ಮ, ಕೀರ್ತಿ, ಸಂಪತ್ತು, ಜ್ಞಾನ ಹಾಗೂ ವೈರಾಗ್ಯಗಳಿಗೆ ಭಗವೆಂದು ಹೆಸರು. ಇದನ್ನು ನಿತ್ಯವಾಗಿ ಹೊಂದಿರುವವನು ಭಗವಂತನು.

ಪ್ರಾಣಿಗಳ ಉತ್ಪತ್ತಿ-ನಾಶ, ಸ್ಥಿತಿ-ನಡೆ, ವಿದ್ಯೆ-ಅವಿದ್ಯೆ ಈ ಆರನ್ನೂ ಬಲ್ಲವನು ಭಗವಂತನು.

## ॥ ಏಕಾದಶೋಽನುವಾಕಃ ॥

ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಮ್ । ತೇಷಾಗ್ಂ

ಸಹಸ್ರಯೋಜನೇಽವ ಧನ್ವಾನಿ ತನ್ಮಸಿ ॥

---

ಸಹಸ್ರಾಣಿ । ಸಹಸ್ರಶ ಇತಿ ಸಹಸ್ರ-ಶಃ । ಯೇ । ರುದ್ರಾಃ । ಅಧೀತಿ । ಭೂಮ್ಯಾಮ್ ॥ ತೇಷಾಮ್ । ಸಹಸ್ರಯೋಜನ ಇತಿ ಸಹಸ್ರ-ಯೋಜನೇ । ಅವೇತಿ । ಧನ್ವಾನಿ । ತನ್ಮಸಿ ॥

---

ಹತ್ತನೆಯ ಅನುವಾಕದಲ್ಲಿ ಋಗ್ರೂಪವಾದ ಕೆಲವು ಮಂತ್ರಗಳು ಉಕ್ತವಾಗಿವೆ. ಈ ಹನ್ನೊಂದನೆಯ ಅನುವಾಕ ದಲ್ಲಿ ಹತ್ತು ಋಙ್ಮಂತ್ರಗಳೂ ಅನಂತರ ಮೂರು ಯಜುಸ್ಸುಗಳೂ ಉಕ್ತವಾಗಿವೆ. ಇವುಗಳಲ್ಲಿ ಅನುಷಂಗವೂ ಉಕ್ತವಾಗಿದೆ. ಇವುಗಳಲ್ಲಿ ರಕ್ಷಣೆಗಾಗಿಯೂ ಶತ್ರುನಾಶಕ್ಕಾಗಿಯೂ ಪ್ರಾರ್ಥನೆಯು ಇದೆ.

---

| ಮಂತ್ರ | ವಿನಿಯೋಗ |
|---|---|
| **ಸಹಸ್ರಾಣಿ...ತನ್ಮಸಿ ॥** | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ- ಸಾ. ಭಾ.**

▲ **ಭೂಮ್ಯಾಮ್ ಅಧಿ**=ಭೂಮಿಯ ಮೇಲೆ; **ಯೇ ರುದ್ರಾಃ**=ಯಾವ ರುದ್ರನ ಅಂಶಭೂತರಾದ/ ಅನುಚರಭೂತರಾದವರು; **ಸಹಸ್ರಶಃ**=ಸಹಸ್ರಪ್ರಕಾರರಾಗಿ; **ಸಹಸ್ರಾಣಿ**=ಸಾವಿರಾರು ಸಂಖ್ಯೆಯವರಾಗಿ; [ಇರುವರೋ] **ತೇಷಾಮ್**=ಅವರ; **ಧನ್ವಾನಿ**=ಬಿಲ್ಲುಗಳನ್ನು; **ಸಹಸ್ರಯೋಜನೇ**=ಸಾವಿರಾರು ಯೋಜನೆ ಗಳಷ್ಟು ದೂರದಲ್ಲಿಯೇ; **ಅವ ತನ್ಮಸಿ**=[ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ- ಭ. ಭಾ. ಭಾ.**

▲ **ಸಹಸ್ರಾಣಿ**=ಅನೇಕ ಸಹಸ್ರಸಂಖ್ಯೆಯ ಪರಿಮಾಣವುಳ್ಳ; **ಸಹಸ್ರಶಃ**=ಸಾವಿರಗಟ್ಟಲೆಯಲ್ಲಿರುವ; **ಯೇ ರುದ್ರಾಃ**=ಯಾವ ರುದ್ರರು; **ಅಧಿ ಭೂಮ್ಯಾಮ್**=ಭೂಮಿಯ ಮೇಲೆ/ಭೂಮಿಯ ಒಡೆಯರಾಗಿ [ಇರುವರೋ] **ತೇಷಾಮ್**=ಅವರ; **ಧನ್ವಾನಿ**=ಬಿಲ್ಲುಗಳನ್ನು; **ಸಹಸ್ರಯೋಜನೇ**=ಸಹಸ್ರಯೋಜನಗಳ ವರೆಗೆ [ಇರುವಂತಹವರು ಹಿಡಿದಿರುವುದನ್ನು] [ಬಳಿಕ ಇರುವಂತಹವರು ಹಿಡಿದಿರುವುದನ್ನೇ] **ಅವ ತನ್ಮಸಿ**=ಹೆದೆ ಇಳಿಸಿದವುಗಳನ್ನಾಗಿ ಮಾಡುವೆವು. [ಸಹಸ್ರಯೋಜನದ ಒಳಗಿರುವವರ ಧನುಸ್ಸುಗಳನ್ನಂತೂ ಹಾಗೆಯೇ ಮಾಡುತ್ತೇವೆ.]

# ಅಸ್ಮಿನ್ಮಹತ್ಯರ್ಣವೇऽಂತರಿಕ್ಷೇ ಭವಾ ಅಧಿ ।*

ಅಸ್ಮಿನ್ನ್ । ಮಹತಿ । ಅರ್ಣವೇ । ಅಂತರಿಕ್ಷೇ । ಭವಾಃ । ಅಧಿ ॥

| ಮಂತ್ರ | ವಿನಿಯೋಗ |
|---|---|
| ಅಸ್ಮಿನ್...ಅಧಿ । ತೇಷಾಗ್ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ– ಸಾ. ಭಾ.**

▲ **ಭವಾಃ**=[ಯಾವ] ಈಶ್ವರಾಂಶಭೂತರಾದವರು; **ಅಸ್ಮಿನ್**=ಈ; **ಮಹತಿ**=ದೊಡ್ಡದಾದ; **ಅರ್ಣವೇ**=ಸಮುದ್ರದಂತೆ ಇರುವ; **ಅಂತರಿಕ್ಷೇ ಅಧಿ**=ಅಂತರಿಕ್ಷವನ್ನು ಆಶ್ರಯಿಸಿ ಇರುತ್ತಾರೆಯೋ; ತೇಷಾಮ್=ಅವರ; ಧನ್ವಾನಿ=ಬಿಲ್ಲುಗಳನ್ನು; ಸಹಸ್ರಯೋಜನೇ=ಸಾವಿರಾರು ಯೋಜನೆಗಳಷ್ಟು ದೂರದಲ್ಲಿಯೇ; ಅವ ತನ್ಮಸಿ=[ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ– ಭ. ಭಾ. ಭಾ.**

▲ **ಅಸ್ಮಿನ್**=ಈ; **ಮಹತಿ**=ದೊಡ್ಡದಾದ; **ಅರ್ಣವೇ**=ಮಳೆಯ ನೀರಿನ ರಾಶಿಯನ್ನು ಹೊಂದಿರುವ; **ಅಂತರಿಕ್ಷೇ**=ಅಂತರಿಕ್ಷದಲ್ಲಿ; [ಅರ್ಣವೇ=ಸಮುದ್ರದಲ್ಲಿಯೂ; ಅಂತರಿಕ್ಷೇ=ಆಕಾಶದಲ್ಲಿಯೂ;] **ಅಧಿ**= ಮೇಲ್ಭಾಗದಲ್ಲಿ; **ಭವಾಃ**=ಇರುವ; [ಯಾವ ರುದ್ರರು ಇರುವರೋ] ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿಸುವೆವು.

**: ತಾತ್ಪರ್ಯ– ಸಾ. ಭಾ. :**

ಈಶ್ವರನ ಇಚ್ಛಾನುಸಾರವಾಗಿ ಲೋಕನಿಗ್ರಹ–ಅನುಗ್ರಹ–ಸಂಹಾರಕ್ಕಾಗಿ ಹಲವರು ರುದ್ರರು ಸರ್ವಲೋಕಗಳಲ್ಲಿಯೂ ಉತ್ಪನ್ನರಾಗಿರುತ್ತಾರೆ. ಅವರಲ್ಲಿ ಭೂಮಿಯ ಮೇಲೆ ಅಧೀಶರಾಗಿರುವ ವಿನಾಯಕ–ಪ್ರಮಥ–ಶೈಲ ಮುಂತಾದ ಸಹಸ್ರಸಂಖ್ಯಾಕರಾದ ಯಾವ ರುದ್ರರು/ರುದ್ರಾನುಚರರು ಇದ್ದಾರೆಯೋ ಅವರನ್ನು ಪ್ರಾರ್ಥಿಸುತ್ತೇವೆ. ನಮ್ಮ ಸ್ತುತಿಯಿಂದ ಪ್ರಸನ್ನರಾದ ಆ ರುದ್ರರು ತಮ್ಮ ಬಿಲ್ಲುಗಳನ್ನು ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡಿ ಸಾವಿರಾರು ಯೋಜನ ದೂರದಲ್ಲಿ ಇರುವಂತೆಯೂ, ಅವುಗಳನ್ನು ಸ್ಥಾಪಿಸುವಂತೆಯೂ ಮಾಡುತ್ತೇವೆ.

**: ತಾತ್ಪರ್ಯ– ಭ. ಭಾ. ಭಾ. :**

ಈ ಅನುವಾಕದ ಹತ್ತು ಋಕ್‌ಗಳಿಗೆ **'ಅವತಾನ'** ಎಂಬ ಹೆಸರು ಇದೆ. ಈ ಮಂತ್ರಗಳ ಆದಿಯಲ್ಲಿಯೂ ಅಂತ್ಯದಲ್ಲಿಯೂ ಇರುವ **'ತೇಷಾಗ್ಂ ಸಹಸ್ರಯೋಜನೇऽವ ಧನ್ವಾನಿ ತನ್ಮಸಿ'** ಎಂಬ ಅರ್ಧರ್ಚವು ಉಳಿದ ಮಂತ್ರಗಳಲ್ಲಿಯೂ ಅನುಷಂಗವಾಗಿ ಸೇರುತ್ತದೆ.

**'ನಮೋ ರುದ್ರೇಭ್ಯಃ'** ಎಂಬ ಮಂತ್ರಗಳು ಅನುಷಂಗಯುಕ್ತವಾದ ಮೂರು ಯಜೂರೂಪವಾದವುಗಳು.

ರುದ್ರರ ವಿಷಯದಲ್ಲಿ ಪುರಾಣಗಳಲ್ಲಿ ಹೀಗಿದೆ:–ಬ್ರಹ್ಮನಿಂದ ಪ್ರಾರ್ಥಿತನಾದ ರುದ್ರನು ಸ್ಥಾವರ–ಜಂಗಮಾತ್ಮಕವಾದ

---

* ಇಲ್ಲಿಂದ ಮುಂದಿನ ಎಂಟು ಮಂತ್ರಗಳಲ್ಲಿ **'ತೇಷಾಗ್ಂ ಸಹಸ್ರಯೋಜನೇऽವ ಧನ್ವಾನಿ ತನ್ಮಸಿ'** ಎಂಬ ಅರ್ಧರ್ಚದ ಅನುಷಂಗವಿದೆ.

## ನೀಲಗ್ರೀವಾಶ್ಶಿತಿಕಂಠಾಃ ಶರ್ವಾ ಅಧಃ, ಕ್ಷಮಾಚರಾಃ ॥*

ನೀಲಗ್ರೀವಾ ಇತಿ ನೀಲ-ಗ್ರೀವಾಃ। ಶಿತಿಕಂಠಾ ಇತಿ ಶಿತಿ-ಕಂಠಾಃ। ಶರ್ವಾಃ। ಅಧಃ। ಕ್ಷಮಾಚರಾಃ॥

| ಮಂತ್ರ | ವಿನಿಯೋಗ |
|---|---|
| **ನೀಲಗ್ರೀವಾಃ...ಚರಾಃ। ತೇಷಾಗ್ಂ..ತನ್ಮಸಿ॥** | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ- ಸಾ. ಭಾ.**

▲ [ಯಾವ] **ನೀಲಗ್ರೀವಾಃ**=ಕಂಠದ ಒಂದು ಭಾಗದಲ್ಲಿ ನೀಲವರ್ಣರಾಗಿಯೂ; **ಶಿತಿಕಂಠಾಃ**=ಉಳಿದ ಭಾಗದಲ್ಲಿ ಶ್ವೇತವರ್ಣದವರೂ ಆಗಿರುವ; **ಶರ್ವಾಃ**=ಶರ್ವರೂಪರಾದ ಶಿವಮೂರ್ತಿವಿಶೇಷರು; **ಅಧಃ ಕ್ಷಮಾಚರಾಃ**=ಭೂಮಿಯ ಕೆಳಭಾಗದ ಪಾತಾಳಲೋಕದಲ್ಲಿ ಸಂಚರಿಸುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನೆಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ- ಭ. ಭಾ. ಭಾ.**

▲ [ಯಾವ]**ನೀಲಗ್ರೀವಾಃ**=ಕಂಠದ ಒಂದು ಭಾಗದಲ್ಲಿ ಕಪ್ಪುಬಣ್ಣದವರಾಗಿ; **ಶಿತಿಕಂಠಾಃ**=ಉಳಿದ ಭಾಗದಲ್ಲಿ ಶ್ವೇತವರ್ಣದವರೂ ಆಗಿರುವ; **ಶರ್ವಾಃ**=ರುದ್ರರು; **ಅಧಃ ಕ್ಷಮಾಚರಾಃ**=ಭೂಮಿಯ ಕೆಳಗಿನ ಪಾತಾಳಲೋಕದಲ್ಲಿ ಒಡೆಯರಾಗಿರುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ= ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿಸುವೆವು.

**: ತಾತ್ಪರ್ಯ- ಸಾ. ಭಾ. :**

ಮಹಾಸಮುದ್ರಸದೃಶವಾದ ಅಂತರಿಕ್ಷದಲ್ಲಿರುವ, ಅದರ ಈಶ್ವರರಾದ ರುದ್ರಮೂರ್ತಿವಿಶೇಷರಾದ ಭವರು ತಮ್ಮ ಬಿಲ್ಲುಗಳ ಹೆದೆಯಿಳಿಸಿ ಸಹಸ್ರಯೋಜನ ದೂರದಲ್ಲಿಡಲಿ ಎಂದು ಪ್ರಾರ್ಥಿಸುತ್ತೇವೆ.

**: ತಾತ್ಪರ್ಯ- ಭ. ಭಾ. ಭಾ. :**

ಜಗತ್ತಿನ ರಕ್ಷಣ-ಪೋಷಣ-ಸಂಹಾರಗಳನ್ನು ಮಾಡುವ, ಕರ್ಮಾನುರೂಪವಾದ ಫಲವನ್ನು ಕೊಡುವ, ಬ್ರಹ್ಮಾಂಡದಲ್ಲಿ ವಾಯುರೂಪ-ರಶ್ಮಿರೂಪ-ಮನುಷ್ಯರೂಪ-ಹೀಗೆ ನಾನಾರೂಪರಾಗಿರುವ ರುದ್ರರನ್ನು ಸೃಷ್ಟಿಸಿದನು. ಅವರ ಅನುಗ್ರಹವನ್ನು ಪಡೆಯುವ ಪ್ರಾರ್ಥನೆಯು ಇಲ್ಲಿದೆ.

ಕೆಲವರು-ರುದ್ರದೇವನು ತನ್ನ ಆತ್ಮವನ್ನು ಅನುಗ್ರಹಾರ್ಥವಾಗಿ ವಿಭಾಗ ಮಾಡಿಕೊಂಡು ದರ್ಶನ-ಅಭಿಮತ ಪ್ರದಾನಾದಿಗಳಿಂದ ಅನುಗ್ರಹಿಸುತ್ತಾನೆ. ಸಂಸಾರವು ಅನಾದಿಯಾಗಿದೆ. ಹೀಗಾಗಿ ಅಸಂಖ್ಯರಾದ ವಿಭಕ್ತರಾದವರು ಜಗತ್ತನ್ನು ಅನುಗ್ರಹಿಸುತ್ತಾರೆ. ಅಂತಹ ರುದ್ರರನ್ನು ಕುರಿತು ಈ ಮಂತ್ರಗಳು ಇವೆ-ಎಂದು ಹೇಳುತ್ತಾರೆ.

ಇನ್ನು ಕೆಲವರು-ಸಂಹಾರವನ್ನು ಮಾಡಲು ಕೋಪೋದ್ರಿಕ್ತನಾದ ದೇವನ ಕೋಪರೂಪವಾದ ಕಿಡಿಗಳಂತಿರುವ ರುದ್ರರನ್ನು ಕುರಿತು ಈ ಮಂತ್ರಗಳಿವೆ ಎಂದು-ಹೇಳುತ್ತಾರೆ.

## ನೀಲಗ್ರೀವಾಶ್ಶಿತಿಕಂಠಾ ದಿವಗ್ಂ ರುದ್ರಾ ಉಪಶ್ರಿತಾಃ ॥*

---

ನೀಲಗ್ರೀವಾ ಇತಿ ನೀಲ-ಗ್ರೀವಾಃ । ಶಿತಿಕಂಠಾ ಇತಿ ಶಿತಿ-ಕಂಠಾಃ । ದಿವಮ್ । ರುದ್ರಾಃ । ಉಪಶ್ರಿತಾ ಇತ್ಯುಪ-ಶ್ರಿತಾಃ ॥

---

| ಮಂತ್ರ | ವಿನಿಯೋಗ |
|---|---|
| **ನೀಲಗ್ರೀವಾಃ...ಶ್ರಿತಾಃ** । ತೇಷಾಗ್ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ- ಸಾ. ಭಾ.** ———

▲ [ಯಾವ] **ನೀಲಗ್ರೀವಾಃ**=ನೀಲಕಂಠರೂ; **ಶಿತಿಕಂಠಾಃ**=ಆಂಶದಲ್ಲಿ ಶ್ವೇತಕಂಠವಿರುವ; **ರುದ್ರಾಃ**= ರುದ್ರರು; **ದಿವಮ್**=ಸ್ವರ್ಗಲೋಕವನ್ನು/ಲೋಕದಲ್ಲಿ **ಉಪಶ್ರಿತಾಃ**=ಇರುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನೆಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ- ಭ. ಭಾ. ಭಾ.** ———

▲ [ಯಾವ] **ನೀಲಗ್ರೀವಾಃ**=ನೀಲಗ್ರೀವರೂ; **ಶಿತಿಕಂಠಾಃ**=ಶಿತಿಕಂಠರೂ ಆಗಿರುವ; **ರುದ್ರಾಃ**=ರುದ್ರರು; **ದಿವಮ್**=ಇಂದ್ರಾದಿಲೋಕಗಳನ್ನು; **ಉಪಶ್ರಿತಾಃ**=ಒಡೆಯರಾಗಿ ರಕ್ಷಿಸುತ್ತಿರುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿಸುವೆವು.

**———: ತಾತ್ಪರ್ಯ- ಸಾ. ಭಾ. : ———**

**ಯಾವ ಶರ್ವರೂಪರಾದ ರುದ್ರಮೂರ್ತಿವಿಶೇಷರು ಕಂಠದ ಏಕದೇಶದಲ್ಲಿ ಕಪ್ಪಾಗಿಯೂ, ಉಳಿದ ಭಾಗದಲ್ಲಿ ಬೆಳ್ಳಗೂ ಇದ್ದು, ಭೂಮಿಯ ಕೆಳಭಾಗದಲ್ಲಿ ಪಾತಾಳದಲ್ಲಿ ಸಂಚರಿಸುತ್ತಾರೆಯೋ ಆ ರುದ್ರಮೂರ್ತಿವಿಶೇಷರ ಬಿಲ್ಲುಗಳ ಹೆದೆಗಳನ್ನಿಳಿಸಿ ಸಾವಿರಾರು ಯೋಜನ ದೂರದಲ್ಲಿ ಇಡಲೆಂದು ಪ್ರಾರ್ಥಿಸುತ್ತೇವೆ.**

**———: ತಾತ್ಪರ್ಯ- ಭ. ಭಾ. ಭಾ. : ———**

**ಕೆಲವರು-ರುದ್ರಸದೃಶರಾದ ಗಣೇಶ್ವರರೇ ಇಲ್ಲಿ ರುದ್ರರೆಂದು ಉಕ್ತರಾಗಿದ್ದಾರೆ ಎಂದು-ಹೇಳುತ್ತಾರೆ.**

**ಎಂಟು ಸಾವಿರ ಧನುಸ್ಸುಗಳ ಪರಿಮಾಣ ಒಂದು ಯೋಜನ. ಅಷ್ಟು ದೂರದವರೆಗೂ ಅದಕ್ಕಿಂತಲೂ ಅನಂತರದ ವರೆಗೂ ಬಿಲ್ಲುಗಳ ಹೆದೆಗಳನ್ನು ಬಿಡಿಸಿ ಇಡಲಿ ಎಂದು ಪ್ರಾರ್ಥನೆ.**

**ಅಂತರಿಕ್ಷದಲ್ಲಿಯೂ/ಮಹಾಮೇಘಗಳ ವೃಷ್ಟಿಯುಳ್ಳ ಅಂತರಿಕ್ಷದಲ್ಲಿಯೂ ಸಮುದ್ರದಲ್ಲಿಯೂ ಇರುವ ರುದ್ರ ರನ್ನು ಪ್ರಾರ್ಥಿಸಿ, ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಮತ್ತು ಅದಕ್ಕಿಂತಲೂ ಮುಂದಿನ ವರು ಹಿಡಿದಿರುವುದನ್ನು ರುದ್ರರ ಅನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿ ಮಾಡುವೆವು.**

# ಯೇ ವೃಕ್ಷೇಷು ಸಸ್ಪಿಂಜರಾ ನೀಲಗ್ರೀವಾ ವಿಲೋಹಿತಾಃ ॥*

ಯೇ । ವೃಕ್ಷೇಷು । ಸಸ್ಪಿಂಜರಾಃ । ನೀಲಗ್ರೀವಾ ಇತಿ ನೀಲ-ಗ್ರೀವಾಃ । ವಿಲೋಹಿತಾ ಇತಿ ವಿ-ಲೋಹಿತಾಃ ॥

| ಮಂತ್ರ | ವಿನಿಯೋಗ |
| --- | --- |
| **ಯೇ ವೃಕ್ಷೇಷು..ವಿಲೋಹಿತಾಃ** । ತೇಷಾಗ್‌ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ ರುದ್ರಾನುಚರರ/ರುದ್ರಗಣೇಶ್ವರರ ಪ್ರಾರ್ಥನೆ. |

ಪದಶಃ ಅರ್ಥ- ಸಾ. ಭಾ.

▲ **ಯೇ**=ಯಾರು; **ವೃಕ್ಷೇಷು**=ಮರಗಳಲ್ಲಿ ಇರುವವರಾಗಿ; **ಸಸ್ಪಿಂಜರಾಃ**=ಹಳದಿಮಿಶ್ರವಾದ ಕೆಂಪುಬಣ್ಣವುಳ್ಳ ಎಳೆಯ ಹುಲ್ಲಿನ ಬಣ್ಣವುಳ್ಳವರಾಗಿ ಇರುವರೋ; [ಅಂತಹ] **ನೀಲಗ್ರೀವಾಃ**=ನೀಲಕಂಠರಾದ; **ವಿಲೋಹಿತಾಃ**=ಕೆಂಪು ಬಣ್ಣವುಳ್ಳ ರುದ್ರರು [ನಮ್ಮ ವಿಷಯದಲ್ಲಿ] ಶಾಂತರಾಗಲಿ. ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನೆಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

ಪದಶಃ ಅರ್ಥ- ಭ. ಭಾ. ಭಾ.

▲ **ಯೇ**=ಯಾರು; **ವೃಕ್ಷೇಷು**=ಸ್ಥಾವರವಾದ ವೃಕ್ಷಗಳಲ್ಲಿ/ಬದುಕಿರುವ ವೃಕ್ಷಗಳಲ್ಲಿ/ವೃಕ್ಷಗಳಲ್ಲಿ ಜೀವಿಸಿರುವ ರುದ್ರರಲ್ಲಿ; **ಸಸ್ಪಿಂಜರಾಃ**=ಬಾಲತೃಣದಂತೆ ಕೆಂಪುಮಿಶ್ರವಾದ ಹಸಿರು ಬಣ್ಣದವರು/ ಲೋಕ ಪೀಡಕರನ್ನು ಹಿಂಸಿಸುವರು; **ನೀಲಗ್ರೀವಾಃ**=ಕಪ್ಪಾದ ಕಂಠವುಳ್ಳವರು; **ವಿಲೋಹಿತಾಃ**=ಬಗೆಬಗೆಯ ಕೆಂಪು ಬಣ್ಣದವರು/ಕಾಲುಷ್ಯರಹಿತರು/ವೃಕ್ಷದ ಒಡೆಯರಾದವರು [ಇರುವರೋ] ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು-ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ-ಹೆದೆ ಇಳಿಸಿದವುಗಳನ್ನಾಗಿ ಮಾಡುತ್ತೇವೆ.

: ತಾತ್ಪರ್ಯ- ಸಾ. ಭಾ. :

ಯಾವ ನೀಲಗ್ರೀವರೂ ಶಿತಿಕಂಠರೂ ಆದ ರುದ್ರಮೂರ್ತಿವಿಶೇಷರು ಸ್ವರ್ಗಲೋಕವನ್ನು ಆಶ್ರಯಿಸಿರುತ್ತಾರೆಯೋ ಅಂತಹವರು ಬಿಲ್ಲುಗಳನ್ನು ಹೆದೆಗಳನ್ನಿಳಿಸಿ ಸಾವಿರಾರು ಯೋಜನಗಳ ದೂರದಲ್ಲಿಡಲಿ.

: ತಾತ್ಪರ್ಯ- ಭ. ಭಾ. ಭಾ. :

ಶಿತಿಕಂಠರೂ, ಭೂಮಿಯ ಕೆಳಗಿನ ಪಾತಾಳದಲ್ಲಿ ಯಾರು ಒಡೆಯರಾಗಿ ಇರುವರೋ ಅಂತಹ ರುದ್ರರನ್ನು ಪ್ರಾರ್ಥಿಸಿ, ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಮತ್ತು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ಆ ರುದ್ರರ ಅನುಗ್ರಹದಿಂದ-ಹೆದೆ ಇಳಿಸಿದವುಗಳನ್ನಾಗಿ ಮಾಡುವೆವು.

ಯಾವ ನೀಲಗ್ರೀವರೂ ಶಿತಿಕಂಠರೂ ಆದ ರುದ್ರರು ಇಂದ್ರಾದಿಲೋಕವನ್ನು ಆಶ್ರಯಿಸಿರುತ್ತಾರೆಯೋ, ಒಡೆಯರಾಗಿಯೂ ಇರುತ್ತಾರೆಯೋ ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಮತ್ತು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ಆ ರುದ್ರರ ಅನುಗ್ರಹದಿಂದ ಹೆದೆಯಿಳಿಸಿದವುಗಳನ್ನಾಗಿ ಮಾಡುವೆವು.

## ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ ॥*

ಯೇ । ಭೂತಾನಾಮ್ । ಅಧಿಪತಯ ಇತ್ಯಧಿ–ಪತಯಃ । ವಿಶಿಖಾಸ ಇತಿ ವಿ–ಶಿಖಾಸಃ । ಕಪರ್ದಿನಃ ॥

| ಮಂತ್ರ | ವಿನಿಯೋಗ |
|---|---|
| **ಯೇ ಭೂತಾನಾಂ...ಕಪರ್ದಿನಃ** । ತೇಷಾಗ್ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ ರುದ್ರಾನುಚರರ/ರುದ್ರಗಣೇಶ್ವರರ ಪ್ರಾರ್ಥನೆ. |

ಪದಶಃ ಅರ್ಥ– ಸಾ. ಭಾ.

**ಭೂತಾನಾಮ್**=ಕಾಣದಿರುವ ಜನಗಳಿಗೆ ಪೀಡಾಕರವಾದ ಭೂತಗಳ; **ಅಧಿಪತಯಃ**=ಒಡೆಯರಾಗಿರುವ; **ಯೇ**=ಯಾವ ರುದ್ರಾನುಚರರಿರುವರೋ; **ವಿಶಿಖಾಸಃ**=ಶಿಖಾರಹಿತರಾಗಿರುವವರು; **ಕಪರ್ದಿನಃ**=[ಕೆಲವರು] ಜಡೆಯುಳ್ಳವರಾಗಿ ಇರುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನೆಗಳಷ್ಟು ದೂರದಲ್ಲಿಯೇ ಅವರ ಅನುಗ್ರಹದಿಂದ ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

ಪದಶಃ ಅರ್ಥ– ಭ. ಭಾ. ಭಾ.

**ಭೂತಾನಾಮ್**=ಪಂಚಮಹಾಭೂತಗಳ/ರುದ್ರಗಣಗಳ; **ಯೇ**=ಯಾರು; **ಅಧಿಪತಯಃ**=ಒಡೆಯರಾಗಿದ್ದು ಪ್ರವೃತ್ತಿ–ನಿವೃತ್ತಿಗೆ ಕಾರಣರಾದ ಮತ್ತು ಸುಖವನ್ನು ಕೊಡುವ ಅಧಿಪತಿಗಳು [ಇರುವರೋ] [ಅವರು]; **ವಿಶಿಖಾಸಃ**=ಶಿಖಾರಹಿತರಾಗಿಯೂ/ಬಗೆಬಗೆಯ ಶಿಖೆಯುಳ್ಳವರು/ರಶ್ಮಿರೂಪರಾಗಿ ಇರುವವರು; [ಇರುತ್ತಾರೆ]. **ಕಪರ್ದಿನಃ**=[ಕೆಲವರು] ಜಟಾಜೂಟಧಾರಿಗಳು. ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿ ಮಾಡುತ್ತೇವೆ.

: ತಾತ್ಪರ್ಯ– ಸಾ. ಭಾ. :

ರುದ್ರರು ಲೋಕಗಳಲ್ಲಿ ಇರುವಂತೆ ವೃಕ್ಷಗಳಲ್ಲಿಯೂ ಇರುತ್ತಾರೆ. ವೃಕ್ಷಸ್ವಾಮಿಗಳಾಗಿಯೂ ಇರುತ್ತಾರೆ. ಅವರಲ್ಲಿ ಕೆಲವರು ಬಾಲತೃಣದಂತೆ ಪಿಂಗಲವರ್ಣರು. ಕೆಲವರು ಕಪ್ಪಾದ ಕಂಠವುಳ್ಳವರು. ಮತ್ತೆ ಕೆಲವರು ವಿಶೇಷವಾಗಿ ಕೆಂಪುವರ್ಣದವರು. ಹೀಗಿರುವ ರುದ್ರರು ತಮ್ಮ ಬಿಲ್ಲುಗಳ ಹೆದೆಗಳನ್ನು ಸಡಿಲಿಸಿ ಸಹಸ್ರಯೋಜನ ದೂರದಲ್ಲಿ ಇಡಲಿ. ನಮಗೆ ಭಯವಿಲ್ಲದಂತೆ ಮಾಡಲಿ ಎಂದು ಪ್ರಾರ್ಥಿಸುತ್ತೇವೆ.

: ತಾತ್ಪರ್ಯ– ಭ. ಭಾ. ಭಾ. :

ಸ್ಥಾವರವಾದ ವೃಕ್ಷಗಳು, ಬದುಕಿರುವ ಮರಗಳು–ಇವುಗಳಲ್ಲಿ ಜೀವಿಸಿರುವ ರುದ್ರರಲ್ಲಿ ಕೆಲವರು ಎಳೆಯ ಹುಲ್ಲಿನಂತೆ ಕೆಂಪುಮಿಶ್ರವಾದ ಹಸಿರು ಬಣ್ಣದವರು. ಕೆಲವರು ಲೋಕಪೀಡಕರನ್ನು ಹಿಂಸಿಸುವರು. ಕೆಲವರು ವೃಕ್ಷಸ್ವಾಮಿಗಳು. ಕಾಲುಷ್ಯರಹಿತರು. ಇಂತಹವರನ್ನು ಪ್ರಾರ್ಥಿಸಿ, ಬಿಲ್ಲುಗಳನ್ನು ಉಪಸಂಹರಿಸುವಂತೆ ಮಾಡುತ್ತೇವೆ.

ಭೂತಗಳೆಂದರೆ ಮಹಾಭೂತಗಳು. ಪ್ರವೃತ್ತಿ–ನಿವೃತ್ತಿ ಕಾರಣರಾದ ಈ ಭೂತಗಳ ಅಧಿಪತಿಗಳು ಮತ್ತು ಸುಖವನ್ನು ಕೊಡುವ ಅಧಿಪತಿಗಳು ಅವುಗಳಲ್ಲಿ ಇರುತ್ತಾರೆ. ಇವರು ರಶ್ಮಿರೂಪರೂ ಆಗಿರುತ್ತಾರೆ. ಇವರು ನಮ್ಮ

## ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್ ॥*

ಯೇ । ಅನ್ನೇಷು । ವಿವಿಧ್ಯಂತೀತಿ ವಿ–ವಿಧ್ಯಂತಿ । ಪಾತ್ರೇಷು । ಪಿಬತಃ । ಜನಾನ್ ॥

| ಮಂತ್ರ | ವಿನಿಯೋಗ |
|---|---|
| **ಯೇ ಅನ್ನೇಷು...ಜನಾನ್** । ತೇಷಾಗ್ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ– ಸಾ. ಭಾ.**

▲ **ಯೇ**=ಯಾವ ರುದ್ರರು; **ಅನ್ನೇಷು**=ಭಕ್ಷಿಸುತ್ತಿರುವ ಅನ್ನಗಳಲ್ಲಿ [ಇದ್ದುಕೊಂಡು] **ಜನಾನ್**=ಜನರನ್ನು; **ವಿವಿಧ್ಯಂತಿ**=[ಧಾತುವೈಷಮ್ಯಾದಿಗಳಿಂದ] ಪೀಡಿಸುತ್ತಾರೆಯೋ; **ಪಾತ್ರೇಷು**=ಕುಡಿಯುವ ವಸ್ತುಗಳಲ್ಲಿ; [ಸೇರಿಕೊಂಡು] **ಪಿಬತಃ**=ಕುಡಿಯುವವರನ್ನು; ವಿವಿಧ್ಯಂತಿ=ಹಿಂಸಿಸುತ್ತಾರೆಯೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹ ದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ– ಭ. ಭಾ. ಭಾ.**

▲ **ಯೇ**=ಯಾವ ರುದ್ರರು; **ಅನ್ನೇಷು**=ತಿನ್ನಲ್ಪಡುವ ಅನ್ನ ಮುಂತಾದ ವಸ್ತುಗಳಲ್ಲಿ [ಇರುವವರಾಗಿ ಪಾಪಿಗಳನ್ನು] **ವಿವಿಧ್ಯಂತಿ**=ವಿವಿಧವಾದ ವ್ಯಾಧಿಗಳನ್ನು ತಂದೊಡ್ಡುತ್ತಾರೆಯೋ; **ಪಾತ್ರೇಷು**=ಕುಡಿಯುವ ವಸ್ತುಗಳಾದ ನೀರು ಮುಂತಾದವುಗಳಲ್ಲಿ [ಇರುವವರಾಗಿ] **ಪಿಬತಃ**=ಕುಡಿಯುವ; **ಜನಾನ್**=[ಪಾಪಿಗಳಾದ] ಜನರನ್ನು; ವಿವಿಧ್ಯಂತಿ=ವಿವಿಧವಾಗಿ ಬಾಧಿಸುವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿ ಮಾಡುತ್ತೇವೆ.

**: ತಾತ್ಪರ್ಯ– ಸಾ. ಭಾ. :**

**ಭೂತಗಳೆಂದರೆ ಕಣ್ಣಿಗೆ ಕಾಣದಿರುವ, ಮನುಷ್ಯೋಪದ್ರವಕಾರಿಗಳಾದ ಗಣವಿಶೇಷಗಳು. ಇವುಗಳ ಅಧಿಪತಿಗಳಲ್ಲಿ ಕೆಲವರು ಮುಂಡಿತಕೇಶರು. ಮತ್ತೆ ಕೆಲವರು ಜಟಾಜೂಟಧಾರಿಗಳು. ಇಂತಹ ಗಣಪತಿಗಳು ಪ್ರಸನ್ನರಾಗಲಿ. ತಮ್ಮ ಧನುಸ್ಸುಗಳ ಹೆದೆಗಳನ್ನು ಇಳಿಸಿ, ಸಾವಿರಾರು ಯೋಜನಗಳ ದೂರದಲ್ಲಿಡಲಿ ಎಂದು ಪ್ರಾರ್ಥಿಸುತ್ತೇವೆ.**

**: ತಾತ್ಪರ್ಯ– ಭ. ಭಾ. ಭಾ. :**

**ಪ್ರಾರ್ಥನೆಯಿಂದ ಪ್ರಸನ್ನರಾಗಿ ತಮ್ಮ ಧನುಸ್ಸುಗಳನ್ನು ಉಪಸಂಹರಿಸಿ, ದೂರದಲ್ಲಿ ಇಡಲೆಂದು ಪ್ರಾರ್ಥಿಸುವೆವು.**

**ಅನ್ನವನ್ನು ತಿನ್ನುವ ಮತ್ತು ನೀರನ್ನು ಕುಡಿಯುವ ಪಾಪಿಗಳನ್ನು ಅನ್ನ, ನೀರುಗಳಲ್ಲಿ ಗೂಢವಾಗಿರುವ ರುದ್ರರು ಬಾಧಿಸುತ್ತಾರೆ. ಅವರು ನಮ್ಮ ಸ್ತುತಿಯಿಂದ ಪ್ರಸನ್ನರಾಗಲಿ. ಬಿಲ್ಲುಗಳನ್ನು ಬಹುದೂರ ಇಡಲಿ.**

# ಯೇ ಪಥಾಂ ಪಥಿರಕ್ಷಯ ಐಲಬೃದಾ ಯವ್ಯುಧಃ ॥*

ಯೇ । ಪಥಾಮ್ । ಪಥಿರಕ್ಷಯ ಇತಿ ಪಥಿ–ರಕ್ಷಯಃ । ಐಲಬೃದಾಃ । ಯವ್ಯುಧಃ ॥

| ಮಂತ್ರ | ವಿನಿಯೋಗ |
|---|---|
| **ಯೇ ಪಥಾಂ...ಯವ್ಯುಧಃ** । ತೇಷಾಗ್ಂ..ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

ಪದಶಃ ಅರ್ಥ– ಸಾ. ಭಾ.

▲ **ಯೇ**=ಯಾವ ರುದ್ರರು; **ಪಥಾಮ್**=ಲೌಕಿಕ–ವೈದಿಕಮಾರ್ಗಗಳಲ್ಲಿ; **ಪಥಿರಕ್ಷಯಃ**=ಎಲ್ಲ ಮಾರ್ಗಗಳನ್ನೂ ರಕ್ಷಿಸುತ್ತಾರೆಯೋ; **ಐಲಬೃದಾಃ**=ಅನ್ನವನ್ನು ಕೊಟ್ಟು ಪೋಷಿಸುತ್ತಾರೆಯೋ; **ಯವ್ಯುಧಃ**=ವೈರಿಗಳನ್ನು ಅಡಗಿಸಿ, ನಮ್ಮನ್ನು ರಕ್ಷಿಸುತ್ತಾರೆಯೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಾವಿರಾರು ಯೋಜನಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

ಪದಶಃ ಅರ್ಥ– ಭ. ಭಾ. ಭಾ.

▲ **ಪಥಾಮ್**=ಲೌಕಿಕ–ವೈದಿಕಮಾರ್ಗಗಳ; **ಪಥಿರಕ್ಷಯಃ**= ಸರ್ವಮಾರ್ಗರಕ್ಷಕರಾದ; **ಯೇ**=ಯಾವ ರುದ್ರವಿಶೇಷರಿರುವರೋ; **ಐಲಬೃದಾಃ**=ಅನ್ನವನ್ನು ಧರಿಸಿರುವರೋ; **ಯವ್ಯುಧಃ**=ಯುವಕರೊಡನೆಯೇ ಯುದ್ಧ ಮಾಡುವ ಮಹಾತ್ಮರೋ/ಆಯುಸ್ಸನ್ನು ಅಪಹರಿಸುವವರೋ/ಹೊಡೆಯಬೇಕಾದುದನ್ನೇ ಹೊಡೆಯುವರೋ/ ಕೊಡಬೇಕಾದ ಫಲವನ್ನೇ ಕೊಡುವವರೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು–ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ–ಹೆದೆ ಇಳಿಸಿದವುಗಳನ್ನಾಗಿ ಮಾಡುತ್ತೇವೆ.

: ತಾತ್ಪರ್ಯ– ಸಾ. ಭಾ. :

**ಕೆಲವರು ರುದ್ರಮೂರ್ತಿವಿಶೇಷರು ಭಕ್ಷಿಸುವ ಅನ್ನದಲ್ಲಿ ಗೂಢವಾಗಿದ್ದುಕೊಂಡು ಧಾತುವೈಷಮ್ಯದಿಂದ ಜನರನ್ನು ಬಾಧಿಸುತ್ತಾರೆ. ಕುಡಿಯುವ ನೀರು, ಹಾಲು ಮೊದಲಾದವುಗಳಲ್ಲಿ ಕೆಲವರು ಗೂಢವಾಗಿದ್ದು ಜನರನ್ನು ವಿವಿಧವಾಗಿ ಹಿಂಸಿಸುತ್ತಾರೆ. ಅವರನ್ನು ಪ್ರಾರ್ಥಿಸಿ, ಪ್ರಶಾಂತರಾಗುವಂತೆ ಮಾಡುತ್ತೇವೆ. ಅವರು ನಮ್ಮನ್ನು ಭಯಪಡಿಸುವ ಧನುರಾದಿಗಳನ್ನು ಉಪಸಂಹರಿಸಿ, ಬಹಳ ದೂರದಲ್ಲಿ ಇಡುವಂತೆ ಮಾಡುತ್ತೇವೆ.**

: ತಾತ್ಪರ್ಯ– ಭ. ಭಾ. ಭಾ. :

**'ಪಥಾಂ ಪಥಿರಕ್ಷಯಃ'** ಎಂದರೆ ಸರ್ವಮಾರ್ಗರಕ್ಷಕರೆಂದು ಅರ್ಥ. ಶ್ರುತಿಯಲ್ಲಿ ಈ ರೀತಿಯು ಅನೇಕ ಕಡೆ ಇದೆ. **'ವಸೂಯವ್ಯೋ ವಸುಪತೇ ವಸೂನಾಮ್', 'ಗವಾಮಸಿ ಗೋಪತಿಃ', 'ನಿಧೀನಾಂ ತ್ವಾ ನಿಧಿಪತಿಮ್', 'ಗಣಾನಾಂ ತ್ವಾ ಗಣಪತಿಮ್'** ಎಂಬಲ್ಲಿ ಸಮಾಸಪದದಿಂದ ತೋರದ ಎಲ್ಲಾ ಎಂಬ ಅರ್ಥದ ಪ್ರತೀತಿಗಾಗಿ ಸಮಾಸವಲ್ಲದ ಪದವೂ ಇರುತ್ತದೆ. **'ಐಲಬೃದ'** ಎಂದರೆ ಅನ್ನವನ್ನು ಧರಿಸಿದವರು. **ಐರಭೃತಃ** ಎಂಬುದು ಆ ರೀತಿ ನಿರ್ದೇಶಿಸಲ್ಪಟ್ಟಿದೆ.

# ಯೇ ತೀರ್ಥಾನಿ [(೨೬)] ಪ್ರಚರಂತಿ ಸೃಕಾವಂತೋ ನಿಷಂಗಿಣಃ ॥*

ಯೇ । ತೀರ್ಥಾನಿ । (೨೬) । ಪ್ರಚರಂತೀತಿ ಪ್ರ-ಚರಂತಿ । ಸೃಕಾವಂತ ಇತಿ ಸೃಕಾ-ವಂತಃ । ನಿಷಂಗಿಣ ಇತಿ ನಿ-ಸಂಗಿನಃ ॥

| ಮಂತ್ರ | ವಿನಿಯೋಗ |
|---|---|
| **ಯೇ ತೀರ್ಥಾನಿ...ನಿಷಂಗಿಣಃ । ತೇಷಾಗ್ಂ..ತನ್ಮಸಿ ॥** | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ- ಸಾ. ಭಾ.**

▲ **ಯೇ**=ಯಾವ ರುದ್ರರು; **ಸೃಕಾವಂತಃ**=ಹರಿತವಾದ ಚೂರಿಯನ್ನು ಧರಿಸಿದವರಾಗಿ; **ನಿಷಂಗಿಣಃ**=ಕತ್ತಿಯುಳ್ಳವರಾಗಿ; **ತೀರ್ಥಾನಿ**=ಕಾಶಿ-ಪ್ರಯಾಗಾದಿ ತೀರ್ಥಕ್ಷೇತ್ರಗಳನ್ನು [ರಕ್ಷಿಸಲು] **ಪ್ರಚರಂತಿ**=ಸಂಚರಿಸುತ್ತಾರೆಯೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು-ಸಾವಿರಾರು ಯೋಜನಗಳಷ್ಟು ದೂರದಲ್ಲಿಯೇ [ಅವರ ಅನುಗ್ರಹದಿಂದ]-ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ- ಭ. ಭಾ. ಭಾ.**

▲ **ಯೇ**=ಯಾವ ರುದ್ರರು; **ತೀರ್ಥಾನಿ**=ಅವಿಮುಕ್ತ ಕಾಶಿಯೇ ಮುಂತಾದ ತೀರ್ಥಕ್ಷೇತ್ರಗಳನ್ನು [ರಕ್ಷಿಸುವುದಕ್ಕಾಗಿ] **ಸೃಕಾವಂತಃ**=ಚೂರಿಯನ್ನು ಧರಿಸಿದವರಾಗಿ; **ನಿಷಂಗಿಣಃ**=ಕತ್ತಿಯನ್ನು ಧರಿಸಿದವರಾಗಿ/ಹೆಚ್ಚು ಸಂಗವುಳ್ಳವರಾಗಿ/**ಪ್ರಚರಂತಿ**=ಸಂಚರಿಸುತ್ತಾರೆಯೋ; ತೇಷಾಮ್ ಧನ್ವಾನಿ ಸಹಸ್ರಯೋಜನೇ ಅವ ತನ್ಮಸಿ=ಅವರ ಬಿಲ್ಲುಗಳನ್ನು ಸಹಸ್ರಯೋಜನಗಳವರೆಗೆ ಇರುವವರು ಅದಕ್ಕಿಂತಲೂ ಮುಂದಿನವರು ಹಿಡಿದಿರುವುದನ್ನು ರುದ್ರಾನುಗ್ರಹದಿಂದ ಹೆದೆ ಇಳಿಸಿದವುಗಳನ್ನಾಗಿ ಮಾಡುತ್ತೇವೆ.

**: ತಾತ್ಪರ್ಯ- ಭ. ಭಾ. ಭಾ. :**

**'ಇರಾ ಭೂವಾಕ್ಸುರಾಪ್ಸು ಸ್ಯಾತ್'** ಎಂಬ ಕೋಶವಚನದಂತೆ ಐರವನ್ನು=ಇರಾಸಮೂಹವನ್ನು ಧರಿಸಿದವರು. [ಇರಾ=ಅನ್ನ.] ಆ ರುದ್ರರು ಯವ್ಯುಧರು. ಯುವಕರೊಡನೆ ಯುದ್ಧ ಮಾಡುವವರು. ಹೊಡೆಯಬೇಕಾದುದನ್ನೇ ಹೊಡೆಯುವವರು. ಅನ್ನವನ್ನೂ, ಆಯುಸ್ಸನ್ನೂ ಅಪಹರಿಸುವವರು. ಲೌಕಿಕ-ವೈದಿಕಮಾರ್ಗಗಳಲ್ಲಿ ಇರುವವರಿಗೆ ಅವರವರ ಕರ್ಮಕ್ಕೆ ಅನುಗುಣವಾಗಿ ಕೆಲವರಿಗೆ ಅನ್ನವನ್ನೂ, ಆಯುಸ್ಸನ್ನೂ ನೀಡುವವರು. ಕೆಲವರಿಂದ ಎರಡನ್ನೂ ಕಸಿಯುವರು. ಕೆಲವರಿಗೆ ಅನ್ನವನ್ನಿತ್ತು ಆಯುಸ್ಸನ್ನು ಅಪಹರಿಸುವರು. ಕೆಲವರಿಗೆ ಆಯುಸ್ಸನ್ನು ನೀಡಿ ಅನ್ನವನ್ನು ಕಸಿದುಕೊಳ್ಳುವರು. ಇಂತಹ ರುದ್ರರು ನಮ್ಮ ಪ್ರಾರ್ಥನೆಯಿಂದ ಪ್ರಸನ್ನರಾಗಲಿ.

ಯಾವ ರುದ್ರರು ತೀರ್ಥಗಳ ರಕ್ಷಣೆಗಾಗಿ ಚೂರಿ, ಕತ್ತಿಗಳನ್ನು ಧರಿಸಿ ಸಂಚರಿಸುವರೋ, ಅವರು ಕೆಲವರಿಗೆ ತೀರ್ಥಫಲವನ್ನು ನೀಡುತ್ತಾರೆ. ಕೆಲವರಿಗೆ ಆ ಫಲವು ಅವರ ಪಾಪಕ್ಕನುಗುಣವಾಗಿ ದೊರೆಯದಂತೆ ತಡೆಯುತ್ತಾರೆ. ಅವರು ನಮ್ಮನ್ನು ರಕ್ಷಿಸಲಿ.

**'ಸಹಸ್ರಾಣಿ ಸಹಸ್ರಶಃ'** ಎಂದು ಆರಂಭಿಸಿ, **'ಯೇ ತೀರ್ಥಾನಿ'** ಎಂಬಲ್ಲಿಯವರೆಗೆ ನಿರ್ದಿಷ್ಟರಾದ ಇಷ್ಟೇ

**ಯ ಏತಾವಂತಶ್ಚ ಭೂಯಾಗ್ಂಸಶ್ಚ ದಿಶೋ ರುದ್ರಾ ವಿತಸ್ಥಿರೇ । ತೇಷಾಗ್ಂ ಸಹಸ್ರಯೋಜನೇऽವ ಧನ್ವಾನಿ ತನ್ಮಸಿ ॥**

---

ಯೇ । ಏತಾವಂತಃ । ಚ । ಭೂಯಾಗ್ಂಸಃ । ಚ । ದಿಶಃ । ರುದ್ರಾಃ । ವಿತಸ್ಥಿರ ಇತಿ ವಿ–ತಸ್ಥಿರೇ ॥ ತೇಷಾಮ್ । ಸಹಸ್ರಯೋಜನ ಇತಿ ಸಹಸ್ರ –ಯೋಜನೇ । ಅವೇತಿ । ಧನ್ವಾನಿ । ತನ್ಮಸಿ ॥

---

| ಮಂತ್ರ | ವಿನಿಯೋಗ |
|---|---|
| ಯ ಏತಾವಂತಃ...ತನ್ಮಸಿ ॥ | ಶತರುದ್ರೀಯಹವನ/ರುದ್ರಮೂರ್ತಿಗಳ/ರುದ್ರಾನುಚರರ/ ರುದ್ರಗಣೇಶ್ವರರ ಪ್ರಾರ್ಥನೆ. |

**ಪದಶಃ ಅರ್ಥ– ಸಾ. ಭಾ.**

▲ **ಯೇ ರುದ್ರಾಃ**=ಯಾವ ರುದ್ರರು; **ಏತಾವಂತಃ ಚ**=ಇಲ್ಲಿಯ ಮಂತ್ರಗಳಲ್ಲಿ ಹೇಳಿರುವಷ್ಟು ಜನರೂ; **ಭೂಯಾಗ್ಂಸಃ ಚ**=ಮತ್ತು ಇನ್ನೂ ಹೆಚ್ಚಿನವರೂ; **ದಿಶಃ**=ಎಲ್ಲ ದಿಕ್ಕುಗಳನ್ನೂ; **ವಿತಸ್ಥಿರೇ**=ಆಶ್ರಯಿಸಿ ಇರುತ್ತಾರೆಯೋ; **ತೇಷಾಮ್**=ಅವರ; **ಧನ್ವಾನಿ**=ಬಿಲ್ಲುಗಳನ್ನು; **ಸಹಸ್ರಯೋಜನೇ**=ಸಾವಿರಾರು ಯೋಜನಗಳಷ್ಟು ದೂರದಲ್ಲಿಯೇ; **ಅವ ತನ್ಮಸಿ**=[ಅವರ ಅನುಗ್ರಹದಿಂದ] ಇಳಿಸಿದ ಹೆದೆಯುಳ್ಳವುಗಳನ್ನಾಗಿ ಮಾಡುವೆವು.

**ಪದಶಃ ಅರ್ಥ– ಭ. ಭಾ. ಭಾ.**

▲**ಯೇ ರುದ್ರಾಃ**=ಯಾವ ರುದ್ರರು; **ಏತಾವಂತಃ**=ಇಲ್ಲಿಯವರೆಗೆ ಹೇಳಲ್ಪಟ್ಟಿರುವವರು; **ಚ**=ಮತ್ತು; **ಭೂಯಾಗ್ಂಸಃ ಚ**=ಅದಕ್ಕಿಂತಲೂ ಮಿಕ್ಕಿ ಹೆಚ್ಚಾಗಿರುವವರೂ ಸಹ; **ದಿಶಃ**=ದಿಕ್ಕುಗಳನ್ನು; **ವಿತಸ್ಥಿರೇ**=ವ್ಯಾಪಿಸಿ ಇರುವರು. [ಏತಾವಂತಃ=ಇಷ್ಟೇ ಎಂಬುದಾಗಿ; ಭೂಯಾಗ್ಂಸಃ=ಹೆಚ್ಚು ಎಂಬುದಾಗಿ ನಿರ್ಣಯಿಸಲು ಸಾಧ್ಯವಿಲ್ಲದ] [ರುದ್ರರು] **ತೇಷಾಮ್**=ಅವರ; **ಧನ್ವಾನಿ**=ಬಿಲ್ಲುಗಳನ್ನು; **ಸಹಸ್ರಯೋಜನೇ**=ಸಹಸ್ರಯೋಜನಗಳವರೆಗೆ [ಇರುವಂತಹವರು ಹಿಡಿದಿರುವುದನ್ನು] [ಬಳಿಕ ಇರುವಂತಹವರು ಹಿಡಿದಿರುವುದನ್ನೇ] **ಅವ ತನ್ಮಸಿ**=ಹೆದೆ ಇಳಿಸಿದವುಗಳನ್ನಾಗಿ ಮಾಡುವೆವು. [ಸಹಸ್ರಯೋಜನದ ಒಳಗಿರುವವರ ಧನುಸ್ಸುಗಳನ್ನಂತೂ ಹಾಗೆಯೇ ಮಾಡುತ್ತೇವೆ.]

**: ತಾತ್ಪರ್ಯ– ಭ. ಭಾ. ಭಾ. :**

ರುದ್ರವಿಶೇಷರೆಂದು ನಿರ್ಣಯಿಸಲು ಸಾಧ್ಯವಿಲ್ಲ. ಹೀಗಾಗಿ ಅಸಂಖ್ಯಾತರುದ್ರರು ಇರುವರು. ಅವರು ಅನುಗ್ರಹಿಸಲಿ.

ಈ ರುದ್ರರ ಬಿಲ್ಲುಗಳನ್ನು ಸಾವಿರಾರು ಯೋಜನಗಳವರೆಗೆ ಮತ್ತು ಮುಂದೆ ಹಿಡಿದಿರುವುದನ್ನು ನಮ್ಮ ಪ್ರಾರ್ಥನೆಯಿಂದ ಹೆದೆ ಇಳಿಸಿದವುಗಳನ್ನಾಗಿ ಮಾಡುವೆವು.

**'ತೇಷಾಂ..ತನ್ಮಸಿ'** ಎಂಬುದರ ಪುನಃ ಪಾಠವು ಎಲ್ಲ ಮಂತ್ರಗಳಲ್ಲಿ ಆ ಅಂಶವು ಅನುಷಂಗವಾಗಿ ಸೇರುತ್ತದೆಯೆಂಬುದನ್ನು ತಿಳಿಸುವುದಕ್ಕಾಗಿದೆ.

## ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇ ಯೇ ದಿವಿ ಯೇಷಾಮನ್ನಂ ವಾತೋ ವರ್ಷಮಿಷವಸ್ತೇಭ್ಯೋ ದಶ ಪ್ರಾಚೀರ್ದಶ ದಕ್ಷಿಣಾ

---

ನಮಃ । ರುದ್ರೇಭ್ಯಃ । ಯೇ । ಪೃಥಿವ್ಯಾಮ್ । ಯೇ । ಅಂತರಿಕ್ಷೇ । ಯೇ । ದಿವಿ । ಯೇಷಾಮ್ । ಅನ್ನಮ್ । ವಾತಃ । ವರ್ಷಮ್ । ಇಷವಃ । ತೇಭ್ಯಃ । ದಶ । ಪ್ರಾಚೀಃ । ದಶ । ದಕ್ಷಿಣಾ ।

---

| ಮಂತ್ರ | ವಿನಿಯೋಗ |
| --- | --- |
| **ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಷಾಮನ್ನಮಿಷವಃ..ತೇಭ್ಯಃ..ದಧಾಮಿ ॥** | ಅನ್ವಾರೋಹಹೋಮ/ಪ್ರತ್ಯವರೋಹಹೋಮ. |
| ನಮೋ ರುದ್ರೇಭ್ಯೋ **ಯೇಽಂತರಿಕ್ಷೇ** ಯೇಷಾಂ **ವಾತ** ಇಷವಃ..ತೇಭ್ಯಃ..ದಧಾಮಿ ॥ | ಅನ್ವಾರೋಹಹೋಮ/ಪ್ರತ್ಯವರೋಹಹೋಮ. |
| ನಮೋ ರುದ್ರೇಭ್ಯೋ **ಯೇ ದಿವಿ** ಯೇಷಾಂ **ವರ್ಷಮಿ**ಷವಃ..ತೇಭ್ಯಃ..ದಧಾಮಿ ॥ | ಅನ್ವಾರೋಹಹೋಮ/ಪ್ರತ್ಯವರೋಹಹೋಮ. |

**ಪದಶಃ ಅರ್ಥ– ಸಾ. ಭಾ.** ————

▲ **ಯೇ**=ಯಾವ ರುದ್ರರು; **ಪೃಥಿವ್ಯಾಮ್**=ಭೂಮಿಯಲ್ಲಿ [ಇರುತ್ತಾರೆಯೋ] **ಯೇಷಾಮ್**=ಯಾರಿಗೆ; **ಅನ್ನಮ್**=ಅನ್ನವೇ; **ಇಷವಃ**=ಬಾಣದಂತೆ ಹಿಂಸಾಸಾಧನವಾಗಿದೆಯೋ; **ತೇಭ್ಯಃ ರುದ್ರೇಭ್ಯಃ**=ಆ ರುದ್ರ ದೇವತೆಗಳಿಗೆ; **ನಮಃ**=ನಮಸ್ಕಾರವಾಗಲಿ. **ದಶ ಪ್ರಾಚೀಃ**=ಪೂರ್ವಮುಖವಾಗಿರುವ ಹತ್ತು ಬೆರಳು ಗಳುಳ್ಳ ಬೊಗಸೆಗಳು; **ದಶ ದಕ್ಷಿಣಾ**=ದಕ್ಷಿಣಮುಖವಾದ ಹತ್ತು ಬೊಗಸೆಗಳು;

**ಪದಶಃ ಅರ್ಥ– ಭ. ಭಾ. ಭಾ.** ————

▲ **ಯೇ**=ಯಾವ ರುದ್ರವಿಶೇಷರು; **ಪೃಥಿವ್ಯಾಮ್**=ಭೂಮಿಯಲ್ಲಿರುವರೋ; **ಯೇಷಾಮ್ ಅನ್ನಮ್ ಇಷವಃ**=ಯಾರಿಗೆ ಅನ್ನವೇ ಬಾಣದಂತೆ ಹಿಂಸಾಸಾಧನವಾಗಿದೆಯೋ; **ತೇಭ್ಯಃ ರುದ್ರೇಭ್ಯಃ ನಮಃ**= ಆ ರುದ್ರವಿಶೇಷರಿಗೆ ನಮಸ್ಕಾರವಿರಲಿ. **ದಶ ಪ್ರಾಚೀಃ**=ಪ್ರಾಙ್ಮುಖವಾದ ಹತ್ತು ಬೆರಳುಗಳುಳ್ಳ ಹತ್ತು ಬೊಗಸೆಗಳು; **ದಶ ದಕ್ಷಿಣಾ**=ದಕ್ಷಿಣಾಭಿಮುಖವಾದ ಹತ್ತು ಬೆರಳುಗಳುಳ್ಳ ಹತ್ತು ಬೊಗಸೆಗಳು;

## ದಶ ಪ್ರತೀಚೀರ್ದಶೋದೀಚೀರ್ದಶೋರ್ಧ್ವಾಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ ದ್ವಿಷ್ಮೋ

ದಶ । ಪ್ರತೀಚೀಃ । ದಶ । ಉದೀಚೀಃ । ದಶ । ಊರ್ಧ್ವಾಃ । ತೇಭ್ಯಃ । ನಮಃ । ತೇ । ನಃ । ಮೃಡಯಂತು । ತೇ ।

ಯಮ್ । ದ್ವಿಷ್ಮಃ ।

ಪದಶಃ ಅರ್ಥ– ಸಾ. ಭಾ.

**ದಶ ಪ್ರತೀಚೀಃ**= ಪಶ್ಚಿಮಾಭಿಮುಖವಾದ ಹತ್ತು ಬೊಗಸೆಗಳು; **ದಶ ಉದೀಚೀಃ**=ಉತ್ತರಾಭಿಮುಖವಾದ ಹತ್ತು ಬೊಗಸೆಗಳು; **ದಶ ಊರ್ಧ್ವಾಃ**=ಊರ್ಧ್ವಮುಖವಾದ ಹತ್ತು ಬೊಗಸೆಗಳು [ಹೀಗೆ ಜೋಡಿಸಿದ ಐವತ್ತು ಬೊಗಸೆಗಳಿಂದ] **ತೇಭ್ಯಃ ನಮಃ**=ಅವರಿಗೆ ನಮಸ್ಕಾರವು. **ತೇ**=ಆ ರುದ್ರರು; **ನಃ**=ನಮ್ಮನ್ನು; **ಮೃಡಯಂತು**= ಸುಖವಾಗಿರುವಂತೆ ಮಾಡಲಿ. **ತೇ**=ಈ [ನಾವು] **ಯಮ್**=ಯಾರನ್ನು; **ದ್ವಿಷ್ಮಃ**=ದ್ವೇಷಿಸುತ್ತೇವೆಯೋ; **ಚ**=ಮತ್ತು; **ಯಃ**=ಯಾವ ವೈರಿಯು; **ನಃ**=ನಮ್ಮನ್ನು; **ದ್ವೇಷ್ಟಿ**=ದ್ವೇಷಿಸುತ್ತಾನೆಯೋ; **ತಮ್**=ಅವನನ್ನು; **ವಃ**=ನಿಮ್ಮ; **ಜಂಭೇ**=ತೆರೆದ ಬಾಯಿಯಲ್ಲಿ; **ದಧಾಮಿ**=ಹಾಕುತ್ತೇನೆ. [ಅವನನ್ನು ತಿಂದುಹಾಕಿರಿ]

ಪದಶಃ ಅರ್ಥ– ಭ. ಭಾ. ಭಾ.

**ದಶ ಪ್ರತೀಚೀಃ**=ಪಶ್ಚಿಮಕ್ಕೆ ಅಭಿಮುಖವಾದ ಹತ್ತು ಬೆರಳುಗಳ ಹತ್ತು ಬೊಗಸೆಗಳು; **ದಶ ಉದೀಚೀಃ**= ಉತ್ತರಾಭಿಮುಖವಾದ ಹತ್ತು ಬೊಗಸೆಗಳು; **ದಶ ಊರ್ಧ್ವಾಃ**=ಮೇಲ್ಮುಖವಾದ ಹತ್ತು ಬೊಗಸೆಗಳು; ಹೀಗೆ [ಪ್ರತಿದಿಕ್ಕಿಗೂ ಹತ್ತು ಬೆರಳುಗಳಿಂದ ಮಾಡುವ] **ನಮಃ**=ನಮಸ್ಕಾರವು; **ತೇಭ್ಯಃ**=ಆ ರುದ್ರರಿಗೆ ಸಲ್ಲಲಿ. **ತೇ**=ಆ ರುದ್ರರು **ನಃ**=ನಮ್ಮನ್ನು; **ಮೃಡಯಂತು**=ಸುಖವಾಗಿರಿಸಲಿ. **ತೇ ಯಮ್ ದ್ವಿಷ್ಮಃ**=ಈ ನಾವು ಯಾರನ್ನು ದ್ವೇಷಿಸುತ್ತೇವೆಯೋ; **ಯಃ ಚ ನಃ ದ್ವೇಷ್ಟಿ**=ಯಾವ ವೈರಿಯು ನಮ್ಮನ್ನು ದ್ವೇಷಿಸುವನೋ; **ತಮ್ ವಃ ಜಂಭೇ ದಧಾಮಿ**=ಅವನನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುವೆನು [ಅವನನ್ನು ತಿಂದು ಹಾಕಿರಿ]

: ತಾತ್ಪರ್ಯ– ಸಾ. ಭಾ. :

ಕೆಲವರು ರುದ್ರವಿಶೇಷರು ಎಲ್ಲಾ ಲೌಕಿಕ–ವೈದಿಕಮಾರ್ಗಗಳ ರಕ್ಷಕರು. ಕೆಲವರು ಅನ್ನವನ್ನು ಕೊಟ್ಟು ಪೋಷಿಸುವರು. ಕೆಲವರು ಭಕ್ತರಾದ ನಮ್ಮ ಶತ್ರುಗಳೊಡನೆ ಹೋರಾಡತಕ್ಕವರು. ಹೀಗೆ ಮಾರ್ಗರಕ್ಷಕರಾದ, ಅನ್ನದಾತರಾದ, ಅನಿಷ್ಟನಿವಾರಕರಾದ ರುದ್ರವಿಶೇಷರು ನಮ್ಮ ಸ್ತುತಿಯಿಂದ ಪ್ರಸನ್ನರಾಗಿ ನಮಗೆ ಅಭಯವನ್ನು ಕೊಡುವುದಕ್ಕಾಗಿ ತಮ್ಮ ಆಯುಧಗಳನ್ನು ದೂರದಲ್ಲಿ ಇಟ್ಟು ನಮ್ಮನ್ನು ರಕ್ಷಿಸಲಿ.

ಕೆಲವರು ರುದ್ರವಿಶೇಷರು ಕಾಶಿಯೇ ಮೊದಲಾದ ತೀರ್ಥಗಳನ್ನು ರಕ್ಷಿಸುವುದಕ್ಕಾಗಿ ಚೂರಿಯಂತೆ ಹರಿತವಾದ ಆಯುಧಗಳನ್ನೂ ಕತ್ತಿಯೇ ಮೊದಲಾದ ಆಯುಧಗಳನ್ನೂ ಧರಿಸಿ ಸಂಚರಿಸುತ್ತಿರುತ್ತಾರೆ. ಇವರು ನಮ್ಮ ವಿಷಯದಲ್ಲಿ ಪ್ರಸನ್ನರಾಗಲಿ.

# ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ ॥ ೨೭-11 ॥

[ತೀರ್ಥಾನಿ ಯಶ್ಚ ಷಟ್ಚ ॥]

---

ಯಃ । ಚ । ನಃ । ದ್ವೇಷ್ಟಿ । ತಮ್ । ವಃ । ಜಂಭೇ । ದಧಾಮಿ ॥ (೨೭) ॥

**ಪದಶಃ ಅರ್ಥ– ಸಾ. ಭಾ.** ——

▲ **ಯೇ**=ಯಾವ ರುದ್ರರು; **ಅಂತರಿಕ್ಷೇ**=ಅಂತರಿಕ್ಷದಲ್ಲಿರುತ್ತಾರೆಯೋ; ಯೇಷಾಮ್=ಯಾರಿಗೆ **ವಾತಃ**=ಬಿರುಗಾಳಿ ಮೊದಲಾದವುಗಳು; ಇಷವಃ=ಬಾಣದಂತೆ ಹಿಂಸಾಸಾಧನಗಳಾಗಿವೆಯೋ; ತೇಭ್ಯಃ ರುದ್ರೇಭ್ಯಃ ನಮಃ=ಆ ರುದ್ರದೇವತೆಗಳಿಗೆ ನಮಸ್ಕಾರವಾಗಲಿ. ದಶ ಪ್ರಾಚೀಃ ದಶ ದಕ್ಷಿಣಾ ದಶ ಪ್ರತೀಚೀಃ ದಶ ಉದೀಚೀಃ ದಶ ಊರ್ಧ್ವಾಃ=ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಹಾಗೂ ಊರ್ಧ್ವಮುಖವಾದ [ಹತ್ತು ಹತ್ತು ಬೆರಳುಗಳ ಬೊಗಸೆಗಳಿಂದ] ತೇಭ್ಯಃ ನಮಃ=ಅವರಿಗೆ ನಮಸ್ಕಾರವು. ತೇ ನಃ ಮೃಡಯಂತು =ಅವರು ನಮ್ಮನ್ನು ಸುಖವಾಗಿರುವಂತೆ ಮಾಡಲಿ. ತೇ ಯಮ್ ದ್ವಿಷ್ಮಃ=ಈ ನಾವು ಯಾರನ್ನು ದ್ವೇಷಿಸುತ್ತೇವೆಯೋ; ಯಃ ಚ ನಃ ದ್ವೇಷ್ಟಿ=ಯಾವ ವೈರಿಯು ನಮ್ಮನ್ನು ದ್ವೇಷಿಸುತ್ತಾನೆಯೋ; ತಮ್ ವಃ ಜಂಭೇ ದಧಾಮಿ=ಅವನನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುವೆನು.

**ಪದಶಃ ಅರ್ಥ– ಭ. ಭಾ. ಭಾ.** ——

▲ **ಯೇ**=ಯಾವ ರುದ್ರರು; **ಅಂತರಿಕ್ಷೇ**=ಅಂತರಿಕ್ಷದಲ್ಲಿರುತ್ತಾರೆಯೋ; ಯೇಷಾಮ್=ಯಾರಿಗೆ; **ವಾತಃ** =ವಾಯುವು/ಪ್ರಾಣಾದಿಪಂಚವಾಯುಗಳು; ಇಷವಃ=ಹಿಂಸಾಸಾಧನವಾಗಿದೆಯೋ; ತೇಭ್ಯಃ ರುದ್ರೇಭ್ಯಃ ನಮಃ=ಆ ರುದ್ರದೇವತೆಗಳಿಗೆ ನಮಸ್ಕಾರವಿರಲಿ. ದಶ ಪ್ರಾಚೀಃ ದಶ ದಕ್ಷಿಣಾ ದಶ ಪ್ರತೀಚೀಃ ದಶ ಉದೀಚೀಃ ದಶ ಊರ್ಧ್ವಾಃ=ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಹಾಗೂ ಊರ್ಧ್ವಮುಖವಾದ ಹತ್ತು ಬೆರಳುಗಳ ಬೊಗಸೆಗಳು–ಹೀಗೆ ಹತ್ತು ಬೆರಳುಗಳಿಂದ ಪ್ರತಿ ದಿಕ್ಕಿಗೂ ಮಾಡುವ ನಮಸ್ಕಾರವು; ತೇಭ್ಯಃ ನಮಃ=ಆ ರುದ್ರರಿಗೆ ಸಲ್ಲಲಿ. ತೇ ನಃ ಮೃಡಯಂತು=ಆ ರುದ್ರರು ನಮ್ಮನ್ನು ಸುಖವಾಗಿರಿಸಲಿ. ತೇ ಯಮ್ ದ್ವಿಷ್ಮಃ ಯಃ ಚ ನಃ ದ್ವೇಷ್ಟಿ ತಮ್ ವಃ ಜಂಭೇ ದಧಾಮಿ=ಈ ನಾವು ಯಾರನ್ನು ದ್ವೇಷಿಸುತ್ತೇವೆಯೋ, ಯಾವ ವೈರಿಯು ನಮ್ಮನ್ನು ದ್ವೇಷಿಸುವನೋ, ಅವನನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುವೆನು.

—— : ತಾತ್ಪರ್ಯ– ಭ. ಭಾ. ಭಾ. : ——

**ಈ ಮಂತ್ರದಲ್ಲಿ 'ನಮೋ ರುದ್ರೇಭ್ಯಃ' ಎಂಬುದರಿಂದ ವಾಚಿಕವಾದ ನಮಸ್ಕಾರವು ಉಕ್ತವಾಗಿದೆ. 'ತೇಭ್ಯೋ ದಶ' ಮೊದಲಾದುದು ಕಾಯಿಕನಮಸ್ಕಾರವು. 'ತೇಭ್ಯೋ ನಮಃ' ಎಂಬುದು ಮಾನಸಿಕ ನಮಸ್ಕಾರ. ಬಳಿಕ 'ತೇ ನೋ ಮೃಡಯಂತು' ಎಂಬುದು ಸ್ವಾಭಿಮತಪ್ರಾರ್ಥನೆ ಎಂದು ಕೆಲವರ ಅಭಿಪ್ರಾಯ.**

**ನಮ್ಮ ಕೋಪಾದಿ ಶತ್ರುಗಳನ್ನು ಹೋಗಲಾಡಿಸಿ ಐಹಿಕ-ಪಾರಲೌಕಿಕ ಸುಖಗಳನ್ನೂ, ಆತ್ಯಂತಿಕವಾದ ಮೋಕ್ಷ ಸುಖವನ್ನೂ ಕರುಣಿಸಿ ಎಂಬ ಪ್ರಾರ್ಥನೆ ಎಂದೂ ಹೇಳಬಹುದು.**

**ಪದಶಃ ಅರ್ಥ– ಸಾ. ಭಾ.**

**ಯೇ**=ಯಾವ ರುದ್ರರು; **ದಿವಿ**=ದ್ಯುಲೋಕದಲ್ಲಿರುವರೋ; ಯೇಷಾಮ್=ಯಾರಿಗೆ; **ವರ್ಷಮ್**=ಮಳೆಯೇ; ಇಷವಃ=ಬಾಣದಂತೆ ಹಿಂಸಾಸಾಧನವಾಗಿದೆಯೋ; ತೇಭ್ಯಃ ರುದ್ರೇಭ್ಯಃ ನಮಃ=ಆ ರುದ್ರ ದೇವತೆಗಳಿಗೆ ನಮಸ್ಕಾರವಾಗಲಿ. ದಶ ಪ್ರಾಚೀಃ ದಶ ದಕ್ಷಿಣಾ ದಶ ಪ್ರತೀಚೀಃ ದಶ ಉದೀಚೀಃ ದಶ ಊರ್ಧ್ವಾಃ=ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಹಾಗೂ ಊರ್ಧ್ವಮುಖವಾದ [ಹತ್ತು ಹತ್ತು ಬೆರಳುಗಳ ಬೊಗಸೆಗಳಿಂದ] ತೇಭ್ಯಃ ನಮಃ=ಅವರಿಗೆ ನಮಸ್ಕಾರವು. ತೇ ನಃ ಮೃಡಯಂತು=ಅವರು ನಮ್ಮನ್ನು ಸುಖವಾಗಿರುವಂತೆ ಮಾಡಲಿ. ತೇ ಯಮ್ ದ್ವಿಷ್ಮಃ=ಈ ನಾವು ಯಾರನ್ನು ದ್ವೇಷಿಸುತ್ತೇವೆಯೋ; ಯಃ ಚ ನಃ ದ್ವೇಷ್ಟಿ=ಯಾವ ವೈರಿಯು ನಮ್ಮನ್ನು ದ್ವೇಷಿಸುತ್ತಾನೆಯೋ; ತಮ್ ವಃ ಜಂಭೇ ದಧಾಮಿ=ಅವನನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುವೆನು.

**ಪದಶಃ ಅರ್ಥ– ಭ. ಭಾ. ಭಾ.**

**ಯೇ**=ಯಾವ ರುದ್ರರು; **ದಿವಿ**=ದ್ಯುಲೋಕದಲ್ಲಿ ಇರುವರೋ; ಯೇಷಾಮ್=ಯಾರಿಗೆ; **ವರ್ಷಮ್**=ಮಳೆಯೇ; ಇಷವಃ=ಹಿಂಸಾಸಾಧನವಾಗಿದೆಯೋ; ತೇಭ್ಯಃ ರುದ್ರೇಭ್ಯಃ ನಮಃ=ಆ ರುದ್ರದೇವತೆಗಳಿಗೆ ನಮಸ್ಕಾರವಿರಲಿ. ದಶ ಪ್ರಾಚೀಃ ದಶ ದಕ್ಷಿಣಾ ದಶ ಪ್ರತೀಚೀಃ ದಶ ಉದೀಚೀಃ ದಶ ಊರ್ಧ್ವಾಃ= ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಹಾಗೂ ಊರ್ಧ್ವಮುಖವಾದ ಹತ್ತು ಬೆರಳುಗಳ ಬೊಗಸೆಗಳು–ಹೀಗೆ ಹತ್ತು ಬೆರಳುಗಳಿಂದ ಪ್ರತಿ ದಿಕ್ಕಿಗೂ ಮಾಡುವ; ನಮಃ=ನಮಸ್ಕಾರವು; ತೇಭ್ಯಃ=ಆ ರುದ್ರರಿಗೆ ಸಲ್ಲಲಿ. ತೇ ನಃ ಮೃಡಯಂತು =ಆ ರುದ್ರರು ನಮ್ಮನ್ನು ಸುಖವಾಗಿರಿಸಲಿ. ತೇ ಯಮ್ ದ್ವಿಷ್ಮಃ ಯಃ ಚ ನಃ ದ್ವೇಷ್ಟಿ ತಮ್ ವಃ ಜಂಭೇ ದಧಾಮಿ=ಈ ನಾವು ಯಾರನ್ನು ದ್ವೇಷಿಸುತ್ತೇವೆಯೋ, ಯಾವ ವೈರಿಯು ನಮ್ಮನ್ನು ದ್ವೇಷಿಸುವನೋ, ಅವನನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುವೆನು.

**: ತಾತ್ಪರ್ಯ– ಸಾ. ಭಾ. :**

**'ಸಹಸ್ರಾಣಿ ಸಹಸ್ರಶಃ'** ಎಂದು ಆರಂಭಿಸಿ ಹತ್ತು ಮಂತ್ರಗಳಲ್ಲಿ ಹೇಳಿರುವ ರುದ್ರವಿಶೇಷರೂ, ಅವರೇ ಅಲ್ಲದೆ ಮತ್ತೂ ಹೆಚ್ಚು ರುದ್ರರೂ, ದಿಕ್ಕುಗಳನ್ನು ಆಶ್ರಯಿಸಿರುವ ರುದ್ರರೂ ತಮ್ಮ ಬಿಲ್ಲುಗಳನ್ನು ಸಹಸ್ರಯೋಜನದೂರದಲ್ಲಿಯೇ ನಮ್ಮ ಪ್ರಾರ್ಥನೆಯಿಂದ ಉಪಸಂಹರಿಸಲಿ. ಅವುಗಳ ಹೆದೆಯನ್ನು ಇಳಿಸಲಿ. ನಮಗೆ ಅಭಯವನ್ನು ಕೊಡಲಿ.

ಈ ಮಂತ್ರದಲ್ಲಿ ಪೃಥಿವಿ, ಅಂತರಿಕ್ಷ ಹಾಗೂ ದ್ಯುಲೋಕಗಳೆಂಬ ಭೇದದಿಂದ ಮೂರು ಯಜುಸ್ಸುಗಳೆಂದು ತಿಳಿಯಬೇಕು. ಆಗ ಮಂತ್ರಪಾಠವು ಈ ರೀತಿ ಆಗುತ್ತದೆ. **'ನಮೋ ರುದ್ರೇಭ್ಯಃ'** ಎಂದು ಆರಂಭಿಸಿ **'ಯೇ ಪೃಥಿವ್ಯಾಮ್ ಯೇಷಾಮನ್ನಮಿಷವಃ'** ಎಂದು ಮೊದಲನೆಯ ಮಂತ್ರ. **'ಯೇಽಂತರಿಕ್ಷೇ ಯೇಷಾಂ ವಾತ ಇಷವಃ'** ಎಂದು ಎರಡನೆಯ ಮಂತ್ರ. **'ಯೇ ದಿವಿ ಯೇಷಾಂ ವರ್ಷಮಿಷವಃ'** ಎಂದು ಮೂರನೆಯ ಮಂತ್ರ. **'ತೇಭ್ಯೋ ದಶ ಪ್ರಾಚೀಃ...ದಧಾಮಿ'** ಎಂಬ ಭಾಗವು ಮೂರಕ್ಕೂ ಸೇರುವುದು.

**: ತಾತ್ಪರ್ಯ– ಭ. ಭಾ. ಭಾ. :**

ಭೂಮಿಯಲ್ಲಿರುವ ರುದ್ರರಿಗೆ ಅನ್ನವೇ ಹಿಂಸಾಸಾಧನವಾಗಿದೆ. ಕೆಲವರನ್ನು ಅನ್ನವನ್ನು ತಿನ್ನುವಂತೆ ಮಾಡಿ ಅಪಥ್ಯವಾದುದರಿಂದ ವ್ಯಾಧಿ ಉಂಟಾಗುವಂತೆ ಮಾಡಿ ಹಿಂಸಿಸುತ್ತಾರೆ.

ಕೆಲವರನ್ನು ಹಸಿವಿನಿಂದ ಪೀಡಿಸುತ್ತಾರೆ. ಕೆಲವರನ್ನು ಅನ್ನಕ್ಕಾಗಿ ಕಳ್ಳತನ ಮಾಡುವಂತೆ ಮಾಡಿ ಬಳಿಕ ಶಿಕ್ಷೆಯಿಂದ ಹಿಂಸಿಸುತ್ತಾರೆ. ಹೀಗೆ ಅನ್ನವನ್ನೇ ಹಿಂಸಾಸಾಧನವನ್ನಾಗಿಸಿ ದುಷ್ಟರನ್ನು ಶಿಕ್ಷಿಸುವ ರುದ್ರರಿಗೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಹೀಗೆ ಅಂಜಲಿಗಳಿಂದ ನಮಸ್ಕರಿಸುವೆವು. ಯಾರು ಈ ರೀತಿ ನಮಸ್ಕರಿಸುವ ನಮ್ಮನ್ನು ದ್ವೇಷಿಸುವರೋ, ಈ ರೀತಿ ನಮಸ್ಕರಿಸದ ಯಾರನ್ನು ನಾವು ದ್ವೇಷಿಸುವೆವೋ ಅವರನ್ನು ನಿಮ್ಮ ದವಡೆಯಲ್ಲಿ

: ತಾತ್ಪರ್ಯ- ಸಾ. ಭಾ. :

ಯಾವ ರುದ್ರರು ಭೂಮಿಯಲ್ಲಿರುವರೋ, ಯಾವ ರುದ್ರವಿಶೇಷರಿಗೆ ಅನ್ನವೇ ಬಾಣದಂತೆ ಹಿಂಸಕವಾಗಿದೆಯೋ, ಭೂಮಿಯಲ್ಲಿರುವ ಆ ರುದ್ರರಿಗೆ ನಮಸ್ಕಾರ.

ಅಪಥ್ಯವಾದ ಅನ್ನವನ್ನು ತಿಂದರೂ ಹಿಂಸೆಯಾಗುತ್ತದೆ. ಅನ್ನವಿಲ್ಲದಿದ್ದರೂ ಹಿಂಸೆ. ಯಾರನ್ನು ಹಿಂಸಿಸ ಬೇಕಾಗಿದೆಯೋ ಅವರಿಗೆ ಅಪಥ್ಯಾನ್ನಭಕ್ಷಣದಲ್ಲಿ ಅಭಿರುಚಿಯನ್ನುಂಟುಮಾಡಿ ಅಥವಾ ಹಸಿವಿಲ್ಲದಂತೆ ಮಾಡಿ, ಅಥವಾ ಅನ್ನಕ್ಕಾಗಿ ಅಕಾರ್ಯಪ್ರವೃತ್ತರಾಗುವಂತೆ ಮಾಡಿ, ಈ ಕಾರ್ಯಗಳಿಂದ ವ್ಯಾಧಿಯೇ ಮುಂತಾದ ತೊಂದರೆ ಯನ್ನು ನೀಡಿ ಹಿಂಸೆಗೆ ಗುರಿಯಾಗುವಂತೆ ಮಾಡುತ್ತಾರೆ.

ಹಾಗೆಯೇ ಯಾವ ರುದ್ರವಿಶೇಷರು ಅಂತರಿಕ್ಷದಲ್ಲಿ ಇರುವರೋ, ಯಾರಿಗೆ ಬಿರುಗಾಳಿ ಮೊದಲಾದವುಗಳೇ ಹಿಂಸಾಸಾಧನವಾಗಿದೆಯೋ ಆ ರುದ್ರವಿಶೇಷರಿಗೆ ನಮಸ್ಕಾರವು. ಅವರು ವಾಯುಗಳಿಂದ ರೋಗಗಳನ್ನುಂಟು ಮಾಡಿ, ಕೋಪಕ್ಕೆ ಗುರಿಯಾದವರನ್ನು ಅತಿಯಾಗಿ ಹಿಂಸಿಸುತ್ತಾರೆ.

ಹಾಗೆಯೇ ಯಾವ ರುದ್ರವಿಶೇಷರು ದ್ಯುಲೋಕದಲ್ಲಿ ಇರುವರೋ, ಯಾರಿಗೆ ಮಳೆಯೇ ಹಿಂಸಾಸಾಧನ ವಾಗಿದೆಯೋ ಅವರಿಗೆ ನಮಸ್ಕರಿಸುತ್ತೇವೆ. ಅವರು ಅತಿವೃಷ್ಟಿ, ಅನಾವೃಷ್ಟಿ, ಅಕಾಲವೃಷ್ಟಿಗಳಿಂದ ತಮ್ಮ ಕೋಪಕ್ಕೆ ಗುರಿಯಾದವರನ್ನು ಬಗೆಬಗೆಯಾಗಿ ಹಿಂಸಿಸುತ್ತಾರೆ. ಇಂತಹ ರುದ್ರರಿಗೆ ಹತ್ತು ಬೆರಳುಗಳನ್ನು ಪೂರ್ವ ಮುಖವಾಗಿ ಜೋಡಿಸಿ ನಮಸ್ಕರಿಸುತ್ತೇವೆ. ಹಾಗೆಯೇ ದಕ್ಷಿಣಾಭಿಮುಖ, ಪಶ್ಚಿಮಾಭಿಮುಖ, ಉತ್ತರಾಭಿಮುಖ ಹಾಗೂ ಊರ್ಧ್ವಾಭಿಮುಖವಾದ ಹತ್ತು-ಹತ್ತು ಬೆರಳುಗಳಿಂದಲೂ ನಮಸ್ಕರಿಸುತ್ತೇವೆ. ಆ ರುದ್ರವಿಶೇಷರು ನಮಗೆ ಸುಖವನ್ನುಂಟುಮಾಡಲಿ. ನಾವು ಯಾವನನ್ನು ದ್ವೇಷಿಸುತ್ತೇವೆಯೋ ನಮ್ಮನ್ನು ಯಾವನು ದ್ವೇಷಿಸುವನೋ ಅವನನ್ನು ರುದ್ರವಿಶೇಷಮೂರ್ತಿಗಳಾದ ನಿಮ್ಮ ತೆರೆದ ಬಾಯಿಯಲ್ಲಿ ಹಾಕಿ ಬಿಡುತ್ತೇವೆ. ಅವರನ್ನು ತಿಂದು ಹಾಕಿ ನಮ್ಮನ್ನು ರಕ್ಷಿಸಿರಿ. ಹೀಗೆ ನಿಮ್ಮನ್ನು ಪ್ರಾರ್ಥಿಸುತ್ತೇವೆ.

: ತಾತ್ಪರ್ಯ- ಭ. ಭಾ. ಭಾ. :

ಹಾಕುವೆವು. ಅವರನ್ನು ನಾಶಮಾಡಿರಿ.

ಅಂತರಿಕ್ಷದಲ್ಲಿರುವ ರುದ್ರವಿಶೇಷರಿಗೆ ವಾಯುವೇ ಹಿಂಸಾಸಾಧನವಾಗಿದೆ. ವಾತದ ನ್ಯೂನಾತಿರೇಕಗಳಿಂದಲೂ, ವಾತವೃತ್ತಿಗಳಿಂದಲೂ ಪ್ರಾಣವೇ ಮುಂತಾದ ವಾಯುಪಂಚಕಗಳ ಅನ್ಯಥಾಸ್ಥಿತಿಯಿಂದಲೂ ಪ್ರಾಣಿಗಳನ್ನು ಹಿಂಸಿಸುವ ರುದ್ರವಿಶೇಷರಿಗೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಹೀಗೆ ಅಂಜಲಿಗಳಿಂದ ನಮಸ್ಕರಿಸು ವೆವು. ಯಾರು ಈ ರೀತಿ ನಮಸ್ಕರಿಸುವ ನಮ್ಮನ್ನು ದ್ವೇಷಿಸುವರೋ, ಈ ರೀತಿ ನಮಸ್ಕರಿಸದ ಯಾರನ್ನು ನಾವು ದ್ವೇಷಿಸುವೆವೋ ಅವರನ್ನು ನಿಮ್ಮ ದವಡೆಯಲ್ಲಿ ಹಾಕುವೆವು. ಅವರನ್ನು ತಿಂದು ಹಾಕಿರಿ.

ದ್ಯುಲೋಕದಲ್ಲಿರುವ ರುದ್ರವಿಶೇಷರಿಗೆ ಮಳೆಯೇ ಹಿಂಸೆಯ ಸಾಧನವಾಗಿದೆ. ಅವರು ಹಿಂಸಿಸಬೇಕಾದವ ರನ್ನು ಅತಿವೃಷ್ಟಿ ಅನಾವೃಷ್ಟಿಗಳಿಂದ ಹಿಂಸಿಸುವರು. ಅಂತಹ ರುದ್ರವಿಶೇಷರಿಗೆ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ ಹೀಗೆ ಅಂಜಲಿಗಳಿಂದ ನಮಸ್ಕರಿಸುವೆವು. ಯಾರು ಈ ರೀತಿ ನಮಸ್ಕರಿಸುವ ನಮ್ಮನ್ನು ದ್ವೇಷಿಸುವರೋ, ಈ ರೀತಿ ನಮಸ್ಕರಿಸದ ಯಾರನ್ನು ನಾವು ದ್ವೇಷಿಸುವೆವೋ ಅವರನ್ನು ನಿಮ್ಮ ದವಡೆಯಲ್ಲಿ ಹಾಕುವೆವು. ಅವರನ್ನು ತಿಂದು ಹಾಕಿರಿ.*

---

* ರುದ್ರಾಧ್ಯಾಯದ ಹನ್ನೊಂದು ಅನುವಾಕಗಳ ಭಾಷ್ಯದ ಅನಂತರ ಭಟ್ಟಭಾಸ್ಕರಮಿಶ್ರರು ರುದ್ರಕಲ್ಪದಂತೆ ಪ್ರಯೋಗವನ್ನೂ, ಫಲವನ್ನೂ ಹೇಳಿರುತ್ತಾರೆ. ಅದನ್ನು ಅಯಜ್ಞಸಂಯುಕ್ತಕಲ್ಪದಂತೆ ತಿಳಿಸಲಾಗುವುದು.

ನಮಸ್ತೇ ನಮೋ ಹಿರಣ್ಯಬಾಹವೇ ನಮಸ್ಸಹಮಾನಾಯ ನಮ ಅವ್ಯಾಧಿನೀಭ್ಯೋ ನಮೋ ಭವಾಯ ನಮೋ ಜ್ಯೇಷ್ಠಾಯ ನಮೋ ದುಂದುಭ್ಯಾಯ ನಮಸ್ಸೋಮಾಯ ನಮ ಇರಿಣ್ಯಾಯ ದ್ರಾಪೇ ಸಹಸ್ರಾಣ್ಯೇಕಾದಶ ॥ 11 ॥

ನಮಸ್ತೇ ನಮೋ ಭವಾಯ ದ್ರಾಪೇ ಸಪ್ತವಿಗ್ಂಶತಿಃ ॥ 27 ॥

ನಮಸ್ತೇ ರುದ್ರ ತಂ ವೋ ಜಂಭೇ ದಧಾಮಿ ॥

ಹರಿಃ ಓಮ್

ಶ್ರೀ ಕೃಷ್ಣಾರ್ಪಣಮಸ್ತು

ಇತಿ ಚತುರ್ಥಕಾಂಡೇ ಪಂಚಮಃ ಪ್ರಶ್ನಃ

## ಶ್ರೌತ ಶತರುದ್ರೀಯಹವನ

ಸಾಯಣಭಾಷ್ಯದಂತೆ ಶ್ರೌತವಾದ ಶತರುದ್ರೀಯಹೋಮದ ವಿವರಣೆಯು ಹೀಗಿದೆ:-

ಅಗ್ನಿಚಯನದಲ್ಲಿ ಸರ್ವಚಿತಿಗಳೂ ಪೂರ್ಣವಾದರೆ ಆ ಚಿತನಾದ ಅಗ್ನಿಯು ಉತ್ಪನ್ನನಾದ ಅಗ್ನಿಯಂತೆ. ಆ ರೀತಿ ಉತ್ಪನ್ನನಾದ ಅಗ್ನಿಯೇ ರುದ್ರನೆನಿಸಿಕೊಳ್ಳುವನು. *1ದೇವತೆಗಳು ತಮ್ಮದಾದ ಶ್ರೇಷ್ಠವಾದ ಸಂಪತ್ತನ್ನು ಅಗ್ನಿಯಲ್ಲಿ ಇದ್ದುದನ್ನು ಬಲಾತ್ಕಾರದಿಂದ ತೆಗೆದುಕೊಂಡಿದ್ದರಿಂದ ಅಥವಾ ಅಳುವಿಕೆಗೆ ಕಾರಣವಾದ ದುಃಖವನ್ನು ಕರಗಿಸುವವನಾದುದರಿಂದ ಅಗ್ನಿಯೇ ರುದ್ರನು.

ಹುಟ್ಟಿದ ಕರುವು ತಾಯಿಯ ಹಾಲನ್ನು ಅಪೇಕ್ಷಿಸುವಂತೆ ಅಗ್ನಿಯು ತನ್ನ ಭಾಗವನ್ನು ಅಪೇಕ್ಷಿಸುವನು. ಭಾಗವು ದೊರೆಯದಿದ್ದರೆ ಅಗ್ನಿಯು ಅಧ್ವರ್ಯುವನ್ನೂ, ಯಜಮಾನನನ್ನೂ ಹಿಂಸಿಸುವನು. ಹೀಗಾಗಿ ಅಗ್ನಿಯ ಜನನವಾದ ಬಳಿಕ ಶತರುದ್ರೀಯಹೋಮವನ್ನು ಅನುಷ್ಠಿಸಬೇಕು. ಅದರ ಅನುಷ್ಠಾನದಿಂದ ತೃಪ್ತನಾದ ಅಗ್ನಿಯು ಅಧ್ವರ್ಯು-ಯಜಮಾನರನ್ನು ಹಿಂಸಿಸುವುದಿಲ್ಲ.

## ಶತರುದ್ರೀಯಹೋಮದ್ರವ್ಯ

ಶತರುದ್ರೀಯಹವನಕ್ಕೆ ಗ್ರಾಮ್ಯಪಶುಗಳ ಕ್ಷೀರವಾದರೆ ಗ್ರಾಮ್ಯಪಶುಗಳಿಗೆ ಹಿಂಸೆಯಾಗುತ್ತದೆ. ಆರಣ್ಯ ಪಶುಗಳ ಪಯಸ್ಸಾದರೆ ಆರಣ್ಯಪಶುಗಳಿಗೆ ಬಾಧೆಯಾಗುತ್ತದೆ. ಆದ್ದರಿಂದ ಆರಣ್ಯತಿಲಗಳಿಂದಾಗಲೀ, ಆರಣ್ಯಗೋಧೂಮದಿಂದಾಗಲೀ ಹೋಮವನ್ನು ಅನುಷ್ಠಿಸಬೇಕು. ಇದರಿಂದ ಗ್ರಾಮ್ಯ-ಆರಣ್ಯ ಪಶುಹಿಂಸೆಯು ಆಗುವುದಿಲ್ಲ. **'ಯದನ್ನಃ ಪುರುಷೋ ಭವತಿ ತದನ್ನಾಸ್ತಸ್ಯ ದೇವತಾಃ'***2 ಎಂಬ ವಚನವಿದೆ. [ಮನುಷ್ಯರು ಯಾವ ಆಹಾರವನ್ನು ತಿನ್ನುವರೋ ಅವನು ಆರಾಧಿಸುವ ದೇವತೆಗಳೂ ಅದೇ ಆಹಾರವುಳ್ಳ ವರಾಗಿರುತ್ತಾರೆ]. ಗವೀಧುಕ [ಕಾಡಿನ ಗೋಧಿ] ಜರ್ತಿಲಗಳು [ಕಾಡಿನ ಎಳ್ಳು] ಅನ್ನಯೋಗ್ಯವಲ್ಲವಾದು ದರಿಂದ ಅವು ಆಹುತಿಯೋಗ್ಯವಲ್ಲ. ಈ ದೋಷಗಳು ಇಲ್ಲದಂತೆ ಇರುವುದಕ್ಕಾಗಿ ಅಜಕ್ಷೀರ [ಆಡಿನ ಹಾಲು]ದಿಂದ ರುದ್ರಹೋಮವನ್ನು ಮಾಡಬೇಕು. ಅಜ-ಅಗ್ನಿ ಈ ಇಬ್ಬರೂ ಪ್ರಜಾಪತಿದೇವನ*3 ಮುಖ ದಲ್ಲಿ ಜನಿಸಿರುವುದರಿಂದ ಪರಸ್ಪರಸಂಬಂಧಿಯಾಗಿವೆ. ಅಲ್ಲದೆ ಅಜಕ್ಷೀರವು ಅಗ್ನಿಪ್ರಿಯವೂ, ಆಹುತಿ ಯೋಗ್ಯವೂ ಆಗಿರುವುದರಿಂದ ಅಜಕ್ಷೀರವು ಶತರುದ್ರೀಯಹೋಮದ್ರವ್ಯವಾಗಿದೆ.

**ಯಾವ ಪಾತ್ರೆಯಿಂದ ಹೋಮವನ್ನು ಅನುಷ್ಠಿಸಬೇಕು?**

ಅಂಗಿರಸರು ಸ್ವರ್ಗಕ್ಕೆ ಹೋಗುವಾಗ ಪ್ರಮಾದದಿಂದ ಕುದಿಯುತ್ತಿರುವ *4ಘರ್ಮವನ್ನು ಅಜೆಯ [ಆಡು] ಮೇಲೆ ಚೆಲ್ಲಿದರು. ಪೀಡಿತವಾದ ಆ ಅಜೆಯು ತನ್ನ ರೋಮಗಳನ್ನು ಉದುರಿಸಿತು. ಅದರಿಂದ ಅರ್ಕವು [ಎಕ್ಕ] ಹುಟ್ಟಿತು. ಆದುದರಿಂದ ಅರ್ಕದ ಎಲೆಯೇ ಇಲ್ಲಿ ಹೋಮವನ್ನು ಅನುಷ್ಠಿಸುವ ಪಾತ್ರೆಯಾಗಿದೆ.

## ಶತರುದ್ರೀಯಹೋಮಪ್ರದೇಶ

ಉತ್ತರದಿಕ್ಕಿನಲ್ಲಿ ನಿಂತು ಹೋಮವನ್ನು ಮಾಡಬೇಕು. ಇದರಿಂದ ರುದ್ರನ ದಿಕ್ಕಾದ ಈಶಾನ್ಯಕ್ಕೆ ಸಮೀಪ

*1 ತೈ. ಸಂ. 1.5.1

*2 ವಾಲ್ಮೀಕೀಯ ರಾಮಾಯಣ-ಅಯೋಧ್ಯಾಕಾಂಡ, ೮೫ ಸರ್ಗ ಶ್ಲೋಕ ೩೦.

*3 ತೈ. ಸಂ. 7.1.1

*4 ಪ್ರವರ್ಗ್ಯಾನುಷ್ಠಾನದ ಸಮಯದಲ್ಲಿ ಮಹಾವೀರವೆಂಬ ಪಾತ್ರೆಯಲ್ಲಿರುವ ಹಾಲಿನಿಂದ ಕೂಡಿದ ಕಾದಿರುವ ತುಪ್ಪ.

ವಿರುವುದರಿಂದ ರುದ್ರನ ದಿಕ್ಕಿನಲ್ಲಿಯೇ ರುದ್ರನನ್ನು ತೃಪ್ತಿಪಡಿಸಿದಂತಾಗುತ್ತದೆ. ಕೊನೆಯ ಇಷ್ಟಕೆಯಲ್ಲಿ ಹೋಮ ಮಾಡುವುದರಿಂದ ಕೊನೆಯಲ್ಲಿಯೇ ರುದ್ರನನ್ನು ಸಂತೋಷಪಡಿಸಿದಂತಾಗುತ್ತದೆ. ಸುತ್ತುತ್ತಾ ಹೋಮವನ್ನು ಮಾಡುವುದರಿಂದ ಎಲ್ಲೆಲ್ಲಿಯೂ ಇರುವ ರುದ್ರನನ್ನು ಶಾಂತನನ್ನಾಗಿ ಮಾಡಿದಂತಾಗುತ್ತದೆ.

## ಹೋಮಪ್ರಕಾರ

ಶತರುದ್ರೀಯಹೋಮವನ್ನು ಅನುಷ್ಠಿಸಲು ರುದ್ರಾಧ್ಯಾಯವನ್ನು ಮೂರು ಭಾಗ ಮಾಡಬೇಕು. ಇದು ತ್ರೇಧಾ ವಿಭಾಗ. **'ತ್ರೇಧಾ ವಿಭಕ್ತಂ ಜುಹೋತಿ'** ಎಂಬುದು ವಿಧಿವಾಕ್ಯ. [ತೈ. ಸಂ. 5.4.3] *ರುದ್ರಾಧ್ಯಾಯ ದಲ್ಲಿ **'ನಮಸ್ತೇ ರುದ್ರ'** ಎಂದು ಆರಂಭಿಸಿ **'ಸಭಾಪತಿಭ್ಯಶ್ಚ ವೋ ನಮಃ'** ಎಂಬಲ್ಲಿಯವರೆಗೆ ಮೊದಲನೆಯ ಹೋಮಮಂತ್ರ. **'ನಮೋ ಅಶ್ವೇಭ್ಯಃ'** ಎಂದು ಆರಂಭಿಸಿ **'ಅವಾರ್ಯಾಯ ಚ'** ಎಂಬಲ್ಲಿಯವರೆಗೆ ಎರಡನೆಯ ಹೋಮ ಮಂತ್ರ. **'ನಮಃ ಪ್ರತರಣಾಯ ಚ'** ಎಂದು ಆರಂಭಿಸಿ **'ಯ ಏತಾವಂತಶ್ಚ'** ಎಂಬ ಋಕ್ಕಿನಿಂದ ಕೂಡಿ ಮೂರನೆಯ ಹೋಮಮಂತ್ರ.

ಮೂರು ಹೋಮಗಳಲ್ಲಿ ಕ್ರಮವಾಗಿ ಸ್ರುಕ್ ಅನ್ನು/ಅರ್ಕಪರ್ಣವನ್ನು ಜಾನು [ಮೊಳಕಾಲು], ನಾಭಿ (ಹೊಕ್ಕಳು), ಗ್ರೀವಾ (ಕುತ್ತಿಗೆ) ಪ್ರದೇಶದಲ್ಲಿ ಹಿಡಿದುಕೊಂಡು ಹೋಮವನ್ನು ಮಾಡಬೇಕು. ಇದರಿಂದ ಮೂರು ಲೋಕಗಳಲ್ಲಿಯೂ ರುದ್ರನನ್ನು ಶಾಂತನನ್ನಾಗಿ ಮಾಡಿದಂತಾಗುತ್ತದೆ.

**'ನಮೋ ರುದ್ರೇಭ್ಯಃ....ದಧಾಮಿ'** ಎಂಬ ಅನುಷಂಗಯುಕ್ತವಾದ ಮೂರು ಉತ್ತರಾಹುತಿಗಳನ್ನು ಅನುಷ್ಠಿಸುವುದರಿಂದ ಹಿಂದಿನ ಮೂರು ಆಹುತಿಗಳನ್ನು ಮತ್ತು ಈ ಆಹುತಿಗಳನ್ನು ಸೇರಿಸಿ ಆರು ಆಹುತಿಗಳಾದಂತಾಗಿ ಋತುಗಳಿಂದಲೇ ರುದ್ರನನ್ನು ಶಾಂತನನ್ನಾಗಿ ಮಾಡಿದಂತಾಗುತ್ತದೆ.

## ಯಜಮಾನವಾಚನ

**'ನಮೋ ರುದ್ರೇಭ್ಯಃ...ದಧಾಮಿ'** ಎಂಬುದಾಗಿ ಕೊನೆಯಲ್ಲಿರುವ ಮಂತ್ರಗಳಿಂದ ಪ್ರತಿಪಾದಿಸುವ ದೇವತೆ ಗಳು ಸ್ವರ್ಗಕ್ಕೆ ಕಾರಣವಾದವರು. ಹೀಗಾಗಿ ಆ ಮಂತ್ರಗಳು ಉತ್ತಮ ಎಂದರೆ ಉತ್ಕೃಷ್ಟ ಎನಿಸಿವೆ. ಕಡೆಯ ಮಂತ್ರಗಳಿಂದ ಪ್ರತಿಪಾದ್ಯರಾಗಿರುವುದರಿಂದಲೂ 'ಉತ್ತಮ' ಎನಿಸಿವೆ. ಅವುಗಳನ್ನು ಅಧ್ವರ್ಯುವು ಯಜಮಾನನಿಂದ ಹೇಳಿಸಬೇಕು. ಹೀಗಾಗಿ ಆ ದೇವತೆಗಳಿಂದಲೇ ಯಜಮಾನನಿಗೆ ಸ್ವರ್ಗಲೋಕವನ್ನು ಹೊಂದಿಸುತ್ತಾರೆ.

## ಅರ್ಕಪರ್ಣದ ವಿಸರ್ಜನಪ್ರದೇಶ

ಯಜಮಾನನು ದ್ವೇಷಿಸುವ ಶತ್ರುವಿನ ಗವಾದಿಗಳು ಸಂಚರಿಸುವ ಪ್ರದೇಶದಲ್ಲಿ ಆ ಹೋಮ ಮಾಡಿದ ಅರ್ಕಪರ್ಣವನ್ನು ಹಾಕಬೇಕು. ಆ ಪರ್ಣವನ್ನು ತುಳಿಯುವ ಮೊದಲನೆಯ ಪಶುವು ಪೀಡೆಯನ್ನು ಹೊಂದುತ್ತದೆ.

ಹೀಗೆ ಸಂಹಿತೆಯಲ್ಲಿ ಉಕ್ತವಾಗಿರುವ ಶ್ರೌತ ಶತರುದ್ರೀಯಹೋಮದ ಪ್ರಯೋಗವಿದೆ.

---

* ರುದ್ರಾಧ್ಯಾಯದಲ್ಲಿ ವಿವಿಧವಾದ ತ್ರೇಧಾವಿಭಾಗಗಳನ್ನು ಕೋಷ್ಟಕದಲ್ಲಿ ತೋರಿಸಿದೆ. ಪುಟ-೧೫೫

## ವಿನಿಯೋಗಸಂಗ್ರಹ

ಪ್ರಶ್ನೇ ತು ಪಂಚಮೇ ಪ್ರೋಕ್ತಃ ಶತರುದ್ರೀಯಹೋಮಕಃ।
ಸಭಾಪತಿಭ್ಯ ಇತ್ಯಂತ ಏಕೋ ಮಂತ್ರಃ ಪ್ರಕೀರ್ತಿತಃ॥
ಅವಾರ್ಯಾಯೇತ್ಯಂತ ಏಕಸ್ತನ್ಮಸೀತ್ಯಂತ ಉತ್ತರಃ।
ನಮೋ ರುದ್ರೇಭ್ಯ ಇತ್ಯೇಷು ಪೃಥಿವ್ಯಾದಿವಿಭೇದತಃ॥
ತ್ರೇಧಾ ಭಿನ್ನಸ್ತತೋ ಹೋಮೇ ಷಣ್ಮಂತ್ರಾ ಇಹ ಕೀರ್ತಿತಾಃ॥

*ರುದ್ರಾಧ್ಯಾಯದ ಮಂತ್ರಗಳ ಸಂಖ್ಯೆ-6

## ಪ್ರಪಾಠಕದ ವಿಶೇಷವಿಷಯಗಳು

### ಅ) ಮೀಮಾಂಸಾ

**✦ ಶತರುದ್ರೀಯಹವನದ ಹವಿಸ್ಸು ಯಾವುದು ?**

**ಜರ್ತಿಲೋಕ್ತೌ ಚತುರ್ಧಾ ಕಿಂ ವಿಕಲ್ಪೋಽಥ ಪಯಃಸ್ತುತಿಃ।**
**ವಿಕಲ್ಪಃ ಪೂರ್ವವನ್ಮೈವಂ ವಾಕ್ಯೈಕ್ಯಾತ್ಪಯಸಾ ಸಹ।** [ಜೈ. ನ್ಯಾ. 10.8.8]

ಚಯನಪ್ರಕರಣದಲ್ಲಿ **'ಯದ್ಗ್ರಾಮ್ಯಾಣಾಂ ಪಶೂನಾಂ ಪಯಸಾ ಜುಹುಯಾದ್ಗ್ರಾಮ್ಯಾನ್ಪಶೂಞ್ಛುಚಾರ್ಪಯೇದ್ಯದಾರಣ್ಯಾನಾಮಾರಣ್ಯಾಞ್ಜರ್ತಿಲಯವಾಗ್ವಾ ವಾ ಜುಹುಯಾದ್ಗವೀಧುಕಯವಾಗ್ವಾ ವಾ ನ ಗ್ರಾಮ್ಯಾನ್ಪಶೂನ್ ಹಿನಸ್ತಿ ನಾರಣ್ಯಾನಥೋ ಖಲ್ವಾಹುರನಾಹುತಿರ್ವೈ ಜರ್ತಿಲಾಶ್ಚ ಗವೀಧುಕಾಶ್ಚೇತ್ಯಜಕ್ಷೀರೇಣ ಜುಹೋತ್ಯಾಗ್ನೇಯೀ ವಾ ಏಷಾ ಯದಜಾಹುತ್ಯೈವ ಜುಹೋತಿ'** ಎಂಬ ವಚನವಿದೆ.

ಇಲ್ಲಿ ಜರ್ತಿಲಹೋಮವೂ, ಗವೀಧುಕಹೋಮವೂ ಶ್ರುತಿಯಲ್ಲಿಯೇ ಉಕ್ತವಾಗಿದೆ. ಜರ್ತಿಲ, ಗವೀಧುಕಗಳು ಆಹುತಿಯೋಗ್ಯವಲ್ಲವೆಂದು ನಿಂದೆ ಇರುವುದರಿಂದ ಹೋಮಾಭಾವವೂ ಒಂದು ಪಕ್ಷ. **'ಅಜಕ್ಷೀರೇಣ ಜುಹೋತಿ'** ಎಂಬ ವಚನವೂ ಇರುವುದರಿಂದ ಅಜಕ್ಷೀರಹೋಮವೆಂಬ ಪಕ್ಷವೂ ಇದೆ.

ಹೀಗೆ ಜರ್ತಿಲಹೋಮ, ಗವೀಧುಕಹೋಮ, ಹೋಮಾಭಾವ, ಹಾಗೂ ಅಜಕ್ಷೀರಹೋಮಗಳೆಂಬ ನಾಲ್ಕು ಪಕ್ಷಗಳೂ ಸಮಾನಬಲವುಳ್ಳವುಗಳಾದುದರಿಂದ **'ಅತಿರಾತ್ರೇ ಷೋಡಶಿನಂ ಗೃಹ್ಣಾತಿ, ನಾತಿರಾತ್ರೇ ಷೋಡಶಿನಂ ಗೃಹ್ಣಾತಿ'** ಎಂಬ ಎರಡು ವಚನಗಳಿರುವುದರಿಂದ ಅತಿರಾತ್ರದಲ್ಲಿ ಷೋಡಶಿಗ್ರಹಣವು ವಿಕಲ್ಪವೆಂದು ಅಂಗೀಕರಿಸಿರುವಂತೆ ಇಲ್ಲಿಯೂ ಹೋಮಾನುಷ್ಠಾನ, ಹೋಮಾಭಾವ ಈ ರೀತಿ ವಿಕಲ್ಪವು ಯುಕ್ತವೆಂದು **ಪೂರ್ವಪಕ್ಷ.**

ಗ್ರಾಮ್ಯಪಶುಗಳ ಕ್ಷೀರದಿಂದ ಹೋಮ, ಆರಣ್ಯಪಶುಗಳ ಕ್ಷೀರದಿಂದ ಹೋಮ ಎಂಬ ಪಕ್ಷಗಳಲ್ಲಿ

---

* ತ್ರೇಧಾವಿಭಾಗದ ಒಂದು ಪ್ರಕಾರದಂತೆ. ಬೇರೆಯ ಪ್ರಕಾರದ ತ್ರೇಧಾವಿಭಾಗದಲ್ಲಿಯೂ, ಷೋಢಾ ಮುಂತಾದ ವಿಭಾಗದಲ್ಲಿಯೂ ಮಂತ್ರಗಳ ಸಂಖ್ಯೆಯು ಬೇರೆಯಾಗುತ್ತದೆ. ಕೋಷ್ಟಕವನ್ನು ನೋಡಿ ಪುಟ-೧೫

ಗ್ರಾಮ್ಯ–ಆರಣ್ಯ ಪಶುಗಳ ಹಿಂಸೆ. ಜರ್ತಿಲ–ಗವೀಧುಕ ಹೋಮಪಕ್ಷಗಳಲ್ಲಿ ಪ್ರಶಸ್ತವಾದ ಹವಿಸ್ಸು ಅಲ್ಲ ವೆಂಬ ಅನಾಹುತಿ ಎಂಬ ದೋಷವಿರುವುದರಿಂದ ದೋಷರಹಿತವಾದ; ಅಗ್ನಿಪ್ರಿಯವಾದ ಅಜಕ್ಷೀರ ಹೋಮವೇ ಪ್ರಶಸ್ತವಾಗಿದೆ ಎಂದು ಅರ್ಥವಾದರೂಪವಾಗಿ ಒಂದೇ ವಾಕ್ಯವಾಗಿ ಅನ್ವಯ ಮಾಡಲು ಸಾಧ್ಯವಿರುವು ದರಿಂದ ಅಷ್ಟದೋಷದುಷ್ಟವಾದ ವಿಕಲ್ಪವು ಯುಕ್ತವಲ್ಲ. ಆದುದರಿಂದ ಅಜಕ್ಷೀರ ಹೋಮವೇ. ಅದೇ ಶತರುದ್ರೀಯ ಹವನದ ಹವಿಸ್ಸು. ಇದು ಇಲ್ಲಿನ **ಸಿದ್ಧಾಂತ.**

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಷಷ್ಠಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

**ಅಶ್ಮನ್ನೂರ್ಜಂ ಪರ್ವತೇ ಶಿಶ್ರಿಯಾಣಾಂ ವಾತೇ ಪರ್ಜನ್ಯೇ ವರುಣಸ್ಯ ಶುಷ್ಮೇ ।**

---

ಅಶ್ಮನ್ನ್ । ಊರ್ಜಮ್ । ಪರ್ವತೇ । ಶಿಶ್ರಿಯಾಣಾಮ್ । ವಾತೇ । ಪರ್ಜನ್ಯೇ । ವರುಣಸ್ಯ । ಶುಷ್ಮೇ ॥

---

ಚಯನನಿರ್ಮಾಣದ ಸಂಪೂರ್ತಿಯಾದ ಮೇಲೆ ಅನುಷ್ಠಿಸಬೇಕಾದ ರುದ್ರಹೋಮವು ಐದನೆಯ ಪ್ರಶ್ನದಲ್ಲಿ ಹೇಳಲ್ಪಟ್ಟಿತು. ಈ ಆರನೆಯ ಪ್ರಶ್ನೆಯಲ್ಲಿ ಮೊದಲಿನ ಐದು ಅನುವಾಕಗಳಲ್ಲಿ ಅಗ್ನಿಪರಿಷೇಚನಾದಿಸಂಸ್ಕಾರಗಳು ಉಕ್ತವಾಗಿವೆ. ಅನಂತರ ಅಶ್ವಮೇಧಕ್ಕೆ ಸಂಬಂಧಿಸಿದ ವಿಷಯಗಳು ಇವೆ.

ಈ ಮೊದಲನೆಯ ಅನುವಾಕದಲ್ಲಿ ಪರಿಷೇಚನ–ವಿಕರ್ಷಣಾದಿಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| **ಅಶ್ಮನ್ನೂರ್ಜಂ...ರರಾಣಾಃ ॥** | ಅಧ್ವರ್ಯುವು ಜಲಕುಂಭವನ್ನು ತೆಗೆದುಕೊಂಡು ಪ್ರದಕ್ಷಿಣವಾಗಿ ಮೂರು ಬಾರಿ ಅಗ್ನಿಯನ್ನು ಪರಿಷೇಚನ ಮಾಡಲು. |

ಪದಶಃ ಅರ್ಥ– ಸಾ. ಭಾ. *

**ಸಂರರಾಣಾಃ**=ಒಳ್ಳೆಯ ದಾನಶೀಲರಾದ; **ಮರುತಃ**=ಮರುತರೇ! [ನೀವು]; **ಅಶ್ಮನ್**=ಕಲ್ಲಿನಂತೆ ದೃಢವಾಗಿರುವ ಅಗ್ನಿಯಲ್ಲಿ; **ಪರ್ವತೇ**=ಮೇರು, ವಿಂಧ್ಯಾದಿಪರ್ವತಗಳಲ್ಲಿ; **ವಾತೇ**= ಮಹಾವಾಯುವಿನಲ್ಲಿ/ಬಿರುಗಾಳಿಯಲ್ಲಿ; **ಪರ್ಜನ್ಯೇ**=ಮಳೆಯನ್ನು ಸುರಿಸಲು ಸಮರ್ಥವಾದ ಮಹಾಮೇಘದಲ್ಲಿಯೂ; **ವರುಣಸ್ಯ**=ಜಲಾಧಿಪತಿಯಾದ ವರುಣನ; **ಶುಷ್ಮೇ**=ಬಲದಲ್ಲಿಯೂ; **ಶಿಶ್ರಿಯಾಣಾಮ್**=ಆಶ್ರಿತವಾದ; **ಊರ್ಜಮ್**=ಬಲವನ್ನು; **ಅದ್ಭ್ಯಃ**=ನೀರುಗಳಿಂದಲೂ; **ಓಷಧೀಭ್ಯಃ**=ವ್ರೀಹಿ–ಯವಾದಿ ಸಸ್ಯಗಳಿಂದಲೂ; **ವನಸ್ಪತಿಭ್ಯಃ**=ಅತ್ತಿಯೇ ಮೊದಲಾದ ವೃಕ್ಷಗಳಿಂದಲೂ; **ಅಧಿ ಸಂಭೃತಾಮ್**=ಅಧಿಕವಾಗಿ ಸಂಪಾದಿಸಲ್ಪಟ್ಟಿರುವ; **ತಾಮ್**=ಆ; **ಊರ್ಜಮ್**=ಬಲವನ್ನೂ; [ಬಲಕ್ಕೆ ಕಾರಣವಾದ]; **ಇಷಮ್**= ಅನ್ನವನ್ನೂ; **ನಃ**=ನಮಗೆ; **ಧತ್ತ**=ಕೊಡಿರಿ.

---

* ನಾಲ್ಕನೆಯ ಕಾಂಡದಲ್ಲಿ ಐದನೆಯ ಪ್ರಪಾಠಕವನ್ನು ಬಿಟ್ಟು ಉಳಿದ ಭಾಗಗಳಿಗೆ ಭಟ್ಟಭಾಸ್ಕರಭಾಷ್ಯವು ಉಪಲಬ್ಧವಿಲ್ಲ.

ಅದ್ಭ್ಯ ಓಷಧೀಭ್ಯೋ ವನಸ್ಪತಿಭ್ಯೋಽಧಿ ಸಂಭೃತಾಂ ತಾಂ ನ ಇಷಮೂರ್ಜಂ ಧತ್ತ ಮರುತಸ್ಸಗ್ಂರರಾಣಾಃ ॥ ಅಶ್ಮಗ್ಗ್ಂಸ್ತೇ ಕ್ಷುದಮುಂ ತೇ ಶುಗೃಚ್ಛತು ಯಂ ದ್ವಿಷ್ಮಃ ॥ ಸಮುದ್ರಸ್ಯ ತ್ವಾಽವಾಕಯಾಽಗ್ನೇ ಪರಿವ್ಯಯಾಮಸಿ ।

---

ಅದ್ಭ್ಯ ಇತ್ಯತ್–ಭ್ಯಃ । ಓಷಧೀಭ್ಯ ಇತ್ಯೋಷಧಿ–ಭ್ಯಃ । ವನಸ್ಪತಿಭ್ಯ ಇತಿ ವನಸ್ಪತಿ–ಭ್ಯಃ । ಅಧೀತಿ । ಸಂಭೃತಾಮಿತಿ ಸಂ–ಭೃತಾಮ್ । ತಾಮ್ । ನಃ । ಇಷಮ್ । ಊರ್ಜಮ್ । ಧತ್ತ । ಮರುತಃ । ಸಗ್ಂರರಾಣಾ ಇತಿ ಸಮ್–ರರಾಣಾಃ ॥ ಅಶ್ಮನ್ನ್ । ತೇ । ಕ್ಷುತ್ । ಅಮುಮ್ । ತೇ । ಶುಕ್ । ಋಚ್ಛತು । ಯಮ್ । ದ್ವಿಷ್ಮಃ ॥ ಸಮುದ್ರಸ್ಯ । ತ್ವಾ । ಅವಾಕಯಾ । ಅಗ್ನೇ । ಪರೀತಿ । ವ್ಯಯಾಮಸಿ ॥

---

| ಮಂತ್ರ | ವಿನಿಯೋಗ |
|---|---|
| ಅಶ್ಮಗ್ಂಸ್ತೇ...ದ್ವಿಷ್ಮಃ ॥ | ಅಧ್ವರ್ಯುವು ಅಗ್ನಿಯ ಸುತ್ತಲೂ ಮೂರು ಬಾರಿ ಸುತ್ತಲು |
| ಸಮುದ್ರಸ್ಯ...ವ್ಯಯಾಮಸಿ ॥ | ಒಂದು ಉದ್ದವಾದ ಬಿದಿರಿನಲ್ಲಿ ಸಮುದ್ರದ ಪಾಚಿಯನ್ನೂ, ವೇತಸ (ಹೆಬ್ಬೆಗಿಡ)ದ ಕೊನೆಯನ್ನೂ ಮತ್ತು ಕಪ್ಪೆಯನ್ನೂ ಕಟ್ಟಿ ಅಗ್ನಿಚಿತಿಯ ಸುತ್ತಲೂ ಸುತ್ತಿಸುವ (ವಿಕರ್ಷಣ) ವಿಧಿಯ ಪ್ರಥಮಮಂತ್ರ. |

---

▲ **ಅಶ್ಮನ್**=[ಇಟ್ಟಿಗೆಗಳಿಂದ ನಿರ್ಮಿತನಾಗಿ] ಕಲ್ಲಿನಂತೆ ಗಟ್ಟಿಯಾಗಿರುವ ಅಗ್ನಿದೇವನೇ! **ತೇ**=ನಿನ್ನ; **ಕ್ಷುತ್**=ಹಸಿವಿನ ಬಾಧೆಯೂ; **ತೇ**=ನಿನ್ನ; **ಶುಕ್**=ಸಂತಾಪವೂ; **ಯಮ್**=ಯಾವ ವೈರಿಯನ್ನು; **ದ್ವಿಷ್ಮಃ**=ನಾವು ದ್ವೇಷಿಸುವೆವೋ; **ಅಮುಮ್**=ಅವನನ್ನು; **ಋಚ್ಛತು**=ಹೊಂದಲಿ. ▲ **ಅಗ್ನೇ**=ಅಗ್ನಿಯೇ! **ಸಮುದ್ರಸ್ಯ**=ಸಮುದ್ರದ; **ಅವಾಕಯಾ**=ಪಾಚಿಯಿಂದ; **ತ್ವಾ**=ನಿನ್ನನ್ನು; **ಪರಿ ವ್ಯಯಾಮಸಿ**=ಮೇಲುಭಾಗದಲ್ಲಿ ಎಳೆದಾಡುತ್ತೇನೆ/ಸುತ್ತಿಸುತ್ತೇನೆ.

---

ಎಲೈ! ದಾನಶೀಲರಾದ ಮರುತರೇ!, ನೀವು ಅಗ್ನಿ, ಪರ್ವತಗಳು, ಬಿರುಗಾಳಿ, ಮಳೆಯನ್ನು ಸುರಿಸುವ ಮಹಾಮೇಘಗಳು, ಜಲಾಧಿಪತಿಯಾದ ವರುಣನಲ್ಲಿ ಇರುವ ಬಲದಲ್ಲಿಯೂ, ಆ ಬಲಗಳಲ್ಲಿ ಆಶ್ರಿತವಾದ ಸಾರಭೂತವಾಗಿ ಇರುವ ನೀರುಗಳಿಂದಲೂ, ವ್ರೀಹಿ, ಯವ ಮುಂತಾದ ಧಾನ್ಯವನ್ನು ನೀಡುವ ಸಸ್ಯಗಳಿಂದಲೂ, ಔದುಂಬರವೇ ಮುಂತಾದ ವೃಕ್ಷಗಳಿಂದಲೂ ಅಧಿಕವಾಗಿ ಸಂಪಾದಿಸಲ್ಪಟ್ಟಿರುವ ಆ ವಿಶಿಷ್ಟವಾದ ಬಲವನ್ನೂ, ಆ ಬಲಕ್ಕೆ ಕಾರಣವಾಗಿ ಇರುವ ಅನ್ನವನ್ನೂ ನಮಗೆ ನೀಡಿರಿ.

ಪಾವಕೋ ಅಸ್ಮಭ್ಯಗ್ಂ ಶಿವೋ ಭವ ॥ ಹಿಮಸ್ಯ ತ್ವಾ ಜರಾಯುಣಾಽಗ್ನೇ ಪರಿವ್ಯಯಾಮಸಿ । ಪಾವಕೋ ಅಸ್ಮಭ್ಯಗ್ಂ ಶಿವೋ ಭವ ॥ ಉಪ [ಉಪ(೧)] ಜ್ಮನ್ನುಪವೇತಸೇಽವತ್ತರಂ ನದೀಷ್ವಾ । ಅಗ್ನೇ ಪಿತ್ತಮಪಾಮಸಿ ॥

---

ಪಾವಕಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಿವಃ । ಭವ ॥ ಹಿಮಸ್ಯ । ತ್ವಾ । ಜರಾಯುಣಾ । ಅಗ್ನೇ । ಪರೀತಿ । ವ್ಯಯಾಮಸಿ ॥ ಪಾವಕಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಿವಃ । ಭವ ॥ ಉಪೇತಿ । (೧) । ಜ್ಮನ್ । ಉಪೇತಿ । ವೇತಸೇ । ಅವತ್ತರಮಿತ್ಯವತ್-ತರಮ್ । ನದೀಷು । ಆ ॥ ಅಗ್ನೇ । ಪಿತ್ತಮ್ । ಅಪಾಮ್ । ಅಸಿ ॥

---

| ಮಂತ್ರ | ವಿನಿಯೋಗ |
|---|---|
| ಹಿಮಸ್ಯ...ಭವ ॥ | ವಿಕರ್ಷಣದ ಎರಡನೆಯ ಮಂತ್ರ. |
| ಉಪ...ಅಪಾಮಸಿ ॥ | ವಿಕರ್ಷಣದ ಮೂರನೆಯ ಮಂತ್ರ. |

---

[ನೀನು] **ಅಸ್ಮಭ್ಯಮ್**=ನಮಗಾಗಿ; **ಪಾವಕಃ**=ಶೋಧಕನೂ; **ಶಿವಃ**=ಶಾಂತನಾಗಿಯೂ; **ಭವ**=ಇರು. ▲ **ಅಗ್ನೇ**=ಹೇ! ಅಗ್ನಿಯೇ! **ಹಿಮಸ್ಯ**=ಶೈತ್ಯಕ್ಕೆ; **ಜರಾಯುಣಾ**=ಗರ್ಭಕೋಶದಂತೆ ಉತ್ಪತ್ತಿಸ್ಥಾನವಾಗಿರುವ ಈ ಪಾಚಿಯಿಂದ; **ತ್ವಾ**=ನಿನ್ನನ್ನು/ನಿನ್ನ ಮೇಲೆ; **ಪರಿ ವ್ಯಯಾಮಸಿ**=ಮೇಲುಭಾಗದಲ್ಲಿ ಎಳೆದಾಡುತ್ತೇನೆ/ಸುತ್ತಿಸುತ್ತೇನೆ. [ನೀನು] **ಅಸ್ಮಭ್ಯಮ್**=ನಮಗಾಗಿ; **ಪಾವಕಃ**=ಶುದ್ಧಿಗೊಳಿಸುವವನೂ; **ಶಿವಃ**=ಶಾಂತನಾಗಿಯೂ; **ಭವ**=ಇರು. ▲ **ಅಗ್ನೇ**=ಹೇ! ಅಗ್ನಿಯೇ! [ನೀನು] **ಜ್ಮನ್**=ಪೃಥಿವಿಯಲ್ಲಿ; **ಉಪ** [ಗತಃ]=ಸೇರಿದವನಾಗಿದ್ದೀಯೆ. **ವೇತಸೇ**=ಹೆಬ್ಬೆಗಿಡದ ಶಾಖೆಯಲ್ಲಿಯೂ; **ಉಪ**[ಗತಃ ವರ್ತಸೇ]= ಸೇರಿದವನಾಗಿರುತ್ತೀಯೆ. **ನದೀಷು ಆ**=ನದಿಗಳ ಜಲದಲ್ಲಿಯೂ ಕೂಡ; **ಅವತ್ತರಮ್**=ಹೆಚ್ಚಾದ ರಕ್ಷಕನಾಗಿರುವಂತೆ; ಉಪ=ಸೇರಿದವನಾಗಿರುತ್ತೀಯೆ; [ನೀನು] **ಅಪಾಮ್**=ನೀರುಗಳ; **ಪಿತ್ತಮ್**=ತೇಜೋರೂಪನಾಗಿ; **ಅಸಿ**=ಇರುವೆ.

---

ಯಾವ ಅನ್ನವು ಪರ್ವತದಲ್ಲಿ ಸಾರವಾಗಿದ್ದುದಾಗಿದೆಯೋ, ಜಲಾದಿಗಳಿಂದ ಸಂಪಾದಿಸಲ್ಪಡುವದೋ, ಯಾವುದು ನಮಗೆ ಬಲಕ್ಕೆ ಕಾರಣವಾಗಿದೆಯೋ ಆ ರೀತಿಯ ಅನ್ನವನ್ನು ನೀಡಿರಿ.

ಇಷ್ಟಕೆಗಳಿಂದ ನಿರ್ಮಿತವಾಗಿರುವ ಅಗ್ನಿದೇವನೇ! ನೀನು ಕಲ್ಲಿನಂತೆ ದೃಢವಾಗಿರುವೆ. ನಿನ್ನ ಹಸಿವು ಹಾಗೂ ಸಂತಾಪವು ನಮ್ಮ ವೈರಿಯನ್ನು ಸೇರಲಿ. ನಮ್ಮನ್ನು ಹಿಂಸಿಸದಿರಲಿ.

ಹೇ! ಅಗ್ನಿಯೇ! ನಿನ್ನ ಮೇಲೆ ವಿಕರ್ಷಣ[ಸುತ್ತಿಸುತ್ತಿರುವ]ಕಾರ್ಯದಿಂದ ನೀನು ಪ್ರಸನ್ನನಾಗು. ನಮ್ಮನ್ನು ಶುದ್ಧಿಗೊಳಿಸು. ಶಾಂತನಾಗು.

**ಮಂಡೂಕಿ ತಾಭಿರಾಗಹಿ ಸೇಮಂ ನೋ ಯಜ್ಞಮ್ । ಪಾವಕವರ್ಣಗ್ಂ ಶಿವಂ ಕೃಧಿ ॥ ಪಾವಕ ಆ ಚಿತಯಂತ್ಯಾ ಕೃಪಾ । ಕ್ಷಾಮನ್ರುರುಚ ಉಷಸೋ ನ ಭಾನುನಾ ॥**

---

ಮಂಡೂಕಿ । ತಾಭಿಃ । ಏತಿ । ಗಹಿ । ಸಾ । ಇಮಮ್ । ನಃ । ಯಜ್ಞಮ್ ॥ ಪಾವಕವರ್ಣಮಿತಿ ಪಾವಕ–ವರ್ಣಮ್ । ಶಿವಮ್ । ಕೃಧಿ ॥ ಪಾವಕೇ । ಏತಿ । ಚಿತಯಂತ್ಯಾ । ಕೃಪಾ ॥ ಕ್ಷಾಮನ್ನ್ । ರುರುಚೇ । ಉಷಸಃ । ನ । ಭಾನುನಾ ॥

---

| ಮಂತ್ರ | ವಿನಿಯೋಗ |
|---|---|
| **ಮಂಡೂಕಿ...ಕೃಧಿ ॥** | ವಿಕರ್ಷಣದ ನಾಲ್ಕನೆಯ ಮಂತ್ರ. |
| **ಪಾವಕ...ಭಾನುನಾ ॥** | ವಿಕರ್ಷಣದ ಐದನೆಯ ಮಂತ್ರ. |

---

▲ **ಮಂಡೂಕಿ**=ಎಲೈ! ಮಂಡೂಕವೇ [ಕಪ್ಪೆಯೇ!]; **ತಾಭಿಃ**=ಪ್ರಸಿದ್ಧವಾದ ಆ ಋಕ್‌ಗಳೊಡನೆ; **ಆ ಗಹಿ**=ಬಾ. **ಸಾ**=ಅಂತಹ ನೀನು; **ನಃ**=ನಮ್ಮ; **ಇಮಮ್**=ಈ; **ಯಜ್ಞಮ್**=ಯಾಗವನ್ನು; **ಪಾವಕ ವರ್ಣಮ್**=ಅಗ್ನಿಯಂತೆ ತೇಜಸ್ಸುಳ್ಳದ್ದನ್ನಾಗಿಯೂ; **ಶಿವಮ್**=ಫಲಪ್ರದವಾಗಿ ಶಾಂತವಾಗಿರುವುದ ನ್ನಾಗಿಯೂ; **ಕೃಧಿ**=ಮಾಡು; ▲ [ಮಂಡೂಕಿಯೇ!] **ಪಾವಕೇ**=ಅಗ್ನಿಚಯನವಿಷಯದಲ್ಲಿ; **ಚಿತಯಂತ್ಯಾ**=ಚಯನ ಮಾಡುವ; **ಕೃಪಾ**=ಸಾಮರ್ಥ್ಯದಿಂದ ಕೂಡಿ; **ಆ**[ಗಚ್ಛ]=ಇಲ್ಲಿಗೆ ಬಾ; [ನೀನು ಬರಲಾಗಿ ಈ ಅಗ್ನಿಯು] **ಕ್ಷಾಮನ್**=ಭೂಮಿಯಲ್ಲಿ; **ಉಷಸಃ ನ**=ಉಷಃಕಾಲದಂತೆ; **ಭಾನುನಾ**= ಪ್ರಕಾಶಮಾನನಾಗಿ/ವಸ್ತುಗಳನ್ನು ಪ್ರಕಾಶಪಡಿಸುವವನಾಗಿ; **ರುರುಚೇ**=ಪ್ರಕಾಶಿಸಲಿ.

---

**ಹೇ! ಅಗ್ನಿಯೇ! ಈ ಪಾಚಿಯು ಶೈತ್ಯಕ್ಕೆ ಗರ್ಭಕೋಶದಂತೆ ಉತ್ಪತ್ತಿಸ್ಥಾನವಾಗಿದೆ. ಇದನ್ನು ನಿನ್ನ ಮೇಲೆ ಸುತ್ತಿಸುವೆನು. ನೀನು ನಮ್ಮ ಶೋಧಕನೂ, ಶಾಂತನೂ ಆಗು.**

**ಅಗ್ನಿಯು ಭೂಮಿಯಲ್ಲಿರುತ್ತಾನೆ. ವೇತಸಶಾಖೆಯಲ್ಲಿಯೂ ಇರುತ್ತಾನೆ. ನದಿಗಳ ನೀರಿನಲ್ಲಿ ರಕ್ಷಕನಾಗಿರುತ್ತಾನೆ. ನೀರಿನ ತೇಜೋರೂಪನಾಗಿರುತ್ತಾನೆ. ಆತನು ನಮಗೆ ಪಾವಕನೂ, ಶಾಂತನೂ, ರಕ್ಷಕನೂ ಆಗಲಿ.**

**ಈ ಮಂತ್ರದಲ್ಲಿ ಮಂಡೂಕಿಯನ್ನು ಪ್ರಶಂಸಿಸಲಾಗಿದೆ. ಎಲೈ! ಮಂಡೂಕಜಾತೀಯವಾದ ಕಪ್ಪೆಯೇ! ನೀನು ಆ ಋಕ್ಕುಗಳೊಡನೆ ಬಂದು ನಮ್ಮ ಯಾಗವನ್ನು ಅಗ್ನಿಗೆ ಸಮಾನವಾದ ತೇಜೋಯುಕ್ತವಾದುದನ್ನಾಗಿ, ಫಲಪ್ರದವಾಗಿ ರುವಂತೆಯೂ ಮಾಡು.**

ತೂರ್ವನ್ನ ಯಾಮನ್ನೇತಶಸ್ಯ ನೂ ರಣ ಆ ಯೋ ಘೃಣೇ । ನ ತತೃಷಾಣೋ ಅಜರಃ ॥ ಅಗ್ನೇ ಪಾವಕ ರೋಚಿಷಾ ಮಂದ್ರಯಾ ದೇವ ಜಿಹ್ವಯಾ । ಆ ದೇವಾನ್[(೨)ವಕ್ಷಿ ಯಕ್ಷಿ] ವಕ್ಷಿ ಯಕ್ಷಿ ಚ ॥

---

ತೂರ್ವನ್ । ನ । ಯಾಮನ್ । ಏತಶಸ್ಯ । ನು । ರಣೇ । ಏತಿ । ಯಃ । ಘೃಣೇ ॥ ನ । ತತೃಷಾಣಃ । ಅಜರಃ ॥ ಅಗ್ನೇ । ಪಾವಕ । ರೋಚಿಷಾ । ಮಂದ್ರಯಾ । ದೇವ । ಜಿಹ್ವಯಾ ॥ ಏತಿ । ದೇವಾನ್ । (೨) । ವಕ್ಷಿ । ಯಕ್ಷಿ । ಚ ॥

---

| ಮಂತ್ರ | ವಿನಿಯೋಗ |
|---|---|
| ತೂರ್ವನ್ನ...ಅಜರಃ ॥ | ವಿಕರ್ಷಣದ ಆರನೆಯ ಮಂತ್ರ. |
| ಅಗ್ನೇ...ಯಕ್ಷಿ ಚ ॥ | ವಿಕರ್ಷಣದ ಏಳನೆಯ ಮಂತ್ರ. |

---

▲ **ಯಃ**=ಯಾವ ಅಗ್ನಿಯು; **ಏತಶಸ್ಯ**=ಶೀಘ್ರವಾಗಿ ಓಡಬಲ್ಲ ಕುದುರೆಯ; **ಯಾಮನ್**=ನಿಯಾಮಕವಾದ; **ರಣೇ**=ಯುದ್ಧದಲ್ಲಿ; **ತೂರ್ವನ್ ನ**=ಶತ್ರುಸೈನ್ಯಗಳನ್ನು ಹಿಂಸಿಸುವ ಯೋಧನಂತೆ; **ಆ ಘೃಣೇ ನು**=ಎಲ್ಲೆಡೆ ಪ್ರಕಾಶಯುಕ್ತನಾಗಿರುತ್ತಾನಷ್ಟೆ. [ಆ ಅಗ್ನಿಯು] **ಅಜರಃ**=ಜರಾರಹಿತನು. [ಆತನು] **ನ ತತೃಷಾಣಃ**=ತೃಷ್ಣಾಯುಕ್ತನಾಗಿರುವುದಿಲ್ಲ. [ನಿತ್ಯತೃಪ್ತನು] ಇಂತಹ ಅಗ್ನಿಯು ನಮ್ಮನ್ನು ಅನುಗ್ರಹಿಸಲಿ. ▲ **ಪಾವಕ**=ಶೋಧಕನಾದ; **ದೇವ**=ಪ್ರಕಾಶಮಾನನಾದ; **ಅಗ್ನೇ**=ಅಗ್ನಿಯೇ! **ರೋಚಿಷಾ**=ಕಾಂತಿಯುಕ್ತವಾದ; **ಮಂದ್ರಯಾ**=ಮೃದುವಾಗಿರುವ/ಮಂದ್ರಧ್ವನಿಯ; **ಜಿಹ್ವಯಾ**=ನಾಲಗೆಯಿಂದ; [ಮಂತ್ರರೂಪ ವಚನದಿಂದ] **ದೇವಾನ್**=ದೇವತೆಗಳನ್ನು; **ಆ ವಕ್ಷಿ**=[ಯಾಗಕ್ಕೆ] ಆಹ್ವಾನಿಸು. **ಚ**=ಮತ್ತು; **ಯಕ್ಷಿ**=ಯಾಗದಿಂದ/ಹವಿಃಸಮರ್ಪಣೆಯಿಂದ ಆರಾಧಿಸು.

---

ಚಯನವನ್ನು ನೆರವೇರಿಸುವ ಸಾಮರ್ಥ್ಯವನ್ನು ಹೊಂದಿರುವ ಮಂಡೂಕಿಯೇ! ನೀನು ಚಯನಕ್ಕೆ ಬಾ. ಅಗ್ನಿಯು ಭೂಮಿಯಲ್ಲಿ ಉಷಃಕಾಲವು ವಸ್ತುಗಳನ್ನು ಪ್ರಕಾಶಗೊಳಿಸುವಂತೆ ಪ್ರಕಾಶಿಸಲಿ.

ಲೋಕದಲ್ಲಿ ಹೇಗೆ ಶೀಘ್ರಗಮನಸ್ವಭಾವದ ಕುದುರೆಯನ್ನು ಕಡಿವಾಣದಿಂದ ನಿಯಂತ್ರಿಸಿ, ಯುದ್ಧದಲ್ಲಿ ತೊಡಗುವ ಸವಾರನು ಪರಸೈನ್ಯವನ್ನು ಧ್ವಂಸಮಾಡುತ್ತಾ ಮುನ್ನುಗ್ಗುವನೋ, ಹಾಗೆ ಈ ಅಗ್ನಿಯು ಪ್ರಜ್ವಲಿಸುವನು. ಮಂಕಾಗುವುದಿಲ್ಲ. ಅವನು ನಿತ್ಯತೃಪ್ತನು. ತರುಣನು.

ಅಗ್ನಿಯು ಎಲ್ಲ ವಸ್ತುಗಳನ್ನೂ ಶುದ್ಧಿಗೊಳಿಸುವವನು. ಪ್ರಕಾಶಮಾನನು. ಅಂತಹ ಅಗ್ನಿಯು ಮೃದುವಾದ ಮಾತಿನಿಂದ ದೇವತೆಗಳನ್ನು ಆಹ್ವಾನಿಸಿ ಅವರಿಗೆ ಹವಿಸ್ಸನ್ನು ಸಮರ್ಪಿಸಲಿ.

**ಸ ನಃ ಪಾವಕ ದೀದಿವೋಽಗ್ನೇ ದೇವಾಗ್ಂ ಇಹಾವಹ । ಉಪ ಯಜ್ಞಗ್ಂ ಹವಿಶ್ಚ ನಃ ॥ ಅಪಾಮಿದಂ ನ್ಯಯನಗ್ಂ ಸಮುದ್ರಸ್ಯ ನಿವೇಶನಮ್ । ಅನ್ಯಂ ತೇ ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್ಂ ಶಿವೋ ಭವ ॥**

---

ಸಃ । ನಃ । ಪಾವಕ । ದೀದಿವಃ । ಅಗ್ನೇ । ದೇವಾನ್ । ಇಹ । ಏತಿ । ವಹ ॥ ಉಪೇತಿ । ಯಜ್ಞಮ್ । ಹವಿಃ । ಚ । ನಃ ॥ ಅಪಾಮ್ । ಇದಮ್ । ನ್ಯಯನಮಿತಿ ನಿ–ಅಯನಮ್ । ಸಮುದ್ರಸ್ಯ । ನಿವೇಶನಮಿತಿ ನಿ–ವೇಶನಮ್ ॥ ಅನ್ಯಮ್ । ತೇ । ಅಸ್ಮತ್ । ತಪಂತು । ಹೇತಯಃ । ಪಾವಕಃ । ಅಸ್ಮಭ್ಯಮಿತ್ಯಸ್ಮ–ಭ್ಯಮ್ । ಶಿವಃ । ಭವ ॥

---

| ಮಂತ್ರ | ವಿನಿಯೋಗ |
|---|---|
| ಸ ನಃ...ಚ ನಃ ॥ | ವಿಕರ್ಷಣದ ಎಂಟನೆಯ ಮಂತ್ರ. |
| ಅಪಾಮಿದಂ...ಭವ ॥ | ಚಿತ್ಯಾಧಿರೋಹಣದ ಪ್ರಥಮಮಂತ್ರ. |

---

▲ **ಪಾವಕ**=ಶೋಧಕನೇ! **ದೀದಿವಃ**=ದೀಪ್ತಿಯುಕ್ತನೇ! **ಅಗ್ನೇ**=ಅಗ್ನಿದೇವನೇ! **ಸಃ**=ಅಂತಹ [ನೀನು]; **ದೇವಾನ್**=ದೇವತೆಗಳನ್ನು; **ನಃ**=ನಮ್ಮ; **ಇಹ**=ಈ ಯಾಗಕ್ಕೆ; **ಆವಹ**=ಆಹ್ವಾನಿಸು. **ನಃ**=ನಮ್ಮ; **ಯಜ್ಞಮ್**=ಯಜ್ಞವನ್ನು; **ಉಪ**[ನಯ]=ನೆರವೇರಿಸು; **ಚ**=ಮತ್ತು; **ಹವಿಃ**=ಹವಿಸ್ಸನ್ನು; ಉಪ ನಯ= ದೇವತೆಗಳ ಸಮೀಪಕ್ಕೆ ಒಯ್ಯುವವನಾಗು. ▲ **ಇದಮ್**=ಈ ಚಿತ್ಯಾಗ್ನಿಸ್ಥಾನವು; **ಅಪಾಮ್**=ನೀರುಗಳ; **ನ್ಯಯನಮ್**=ಪ್ರಾಪ್ತಿಸ್ಥಾನವಾಗಿದೆ. **ಸಮುದ್ರಸ್ಯ**=[ಆದುದರಿಂದ] ಸಮುದ್ರದ ನೀರಿನ; **ನಿವೇಶನಮ್**= [ಗೃಹಸ್ಥಾನವಾಗಿದೆ; ಅಗ್ನಿಯೇ]; **ತೇ**=ನಿನ್ನ; **ಹೇತಯಃ**=ಆಯುಧಗಳು; **ಅಸ್ಮತ್**=ನಮ್ಮಿಂದ; **ಅನ್ಯಮ್**=ಬೇರೆಯವನನ್ನು/ವೈರಿಯನ್ನು; **ತಪಂತು**=ಸಂತಾಪಗೊಳಿಸಲಿ. **ಅಸ್ಮಭ್ಯಮ್**=ನಮಗೆ; **ಪಾವಕಃ**=ಶೋಧಕನೂ; **ಶಿವಃ**=ಮಂಗಲಕರನೂ; **ಭವ**=ಆಗು.

---

**'ಅಗ್ನಿರ್ವೈ ದೇವಾನಾಂ ಹೋತಾ' 'ಅಗ್ನಿಃ ಹವ್ಯವಾಹನಃ'** ಎಂಬ ವಚನಗಳು ಇವೆ. ಹೇ! ಅಗ್ನಿಯೇ! ನೀನು ಶೋಧಕನು, ತೇಜಸ್ವಿಯು. ದೇವತೆಗಳನ್ನು ನಮ್ಮ ಈ ಯಾಗಕ್ಕೆ ಆಹ್ವಾನಿಸು. ನಮ್ಮ ಯಜ್ಞವನ್ನು ನೆರವೇರಿಸುವವನಾಗಿ ಹವಿಸ್ಸನ್ನು ದೇವತೆಗಳಿಗೆ ಒಯ್ದು ಮುಟ್ಟಿಸು.

**'ಅಗ್ನೇಃ ಆಪಃ'** [ಅಗ್ನಿತತ್ತ್ವದಿಂದ ಜಲತತ್ತ್ವವು ಉಂಟಾಯಿತು] **'ಯಜ್ಞಾದ್ಭವತಿ ಪರ್ಜನ್ಯಃ'** [ಯಜ್ಞದ ಅನುಷ್ಠಾನದಿಂದ ಮಳೆಯು ಉಂಟಾಗುತ್ತದೆ] ಎಂಬ ವಚನಗಳು ಇವೆ.

ಈ ಚಿತ್ಯಾಗ್ನಿಸ್ಥಾನವು ನೀರಿನ ಆಶ್ರಯವಾಗಿದೆ. ಇಲ್ಲಿ ಅಗ್ನಿಯು ನೀರಿನ ಆಶ್ರಯಸ್ಥಾನವೆಂದು ವರ್ಣಿಸಲಾಗಿದೆ.

ನಮಸ್ತೇ ಹರಸೇ ಶೋಚಿಷೇ ನಮಸ್ತೇ ಅಸ್ತ್ವರ್ಚಿಷೇ ॥ ಅನ್ಯಂ ತೇ

ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್ಂ ಶಿವೋ ಭವ ।

ನೃಷದೇ ವ[ನೃಷದೇ ವಟ್(೩)ಅಪ್ಸುಷದೇ]ಡಪ್ಸುಷದೇ

---

ನಮಃ । ತೇ । ಹರಸೇ । ಶೋಚಿಷೇ । ನಮಃ । ತೇ । ಅಸ್ತು । ಅರ್ಚಿಷೇ ॥ ಅನ್ಯಮ್ । ತೇ । ಅಸ್ಮತ್ । ತಪಂತು । ಹೇತಯಃ । ಪಾವಕಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಿವಃ । ಭವ ॥ ನೃಷದ ಇತಿ ನೃ-ಸದೇ । ವಟ್ । (೩) । ಅಪ್ಸುಷದ ಇತ್ಯಪ್ಸು-ಸದೇ ।

---

| ಮಂತ್ರ | ವಿನಿಯೋಗ |
|---|---|
| ನಮಸ್ತೇ ಹರಸೇ...ಭವ ॥ | ಚಿತ್ಯಾಧಿರೋಹಣದ ಎರಡನೆಯ ಮತ್ತು ಕೊನೆಯ ಮಂತ್ರ. |
| ೧) ನೃಷದೇ ವಟ್ ॥ ೨) ಅಪ್ಸುಷದೇ ವಟ್ ॥ | ಉತ್ತರವೇದಿಯಲ್ಲಿ ಅಥವಾ ಸ್ವಯಮಾತೃಣ್ಣೆಯಲ್ಲಿ ಅಗ್ನಿಯ ಹೋಮವನ್ನು ಅನುಷ್ಠಿಸಲು ಮೊದಲ ಎರಡು ಮಂತ್ರ. |

---

▲ [ಅಗ್ನಿಯೇ!]**ತೇ**=ನಿನ್ನ; **ಹರಸೇ**=ಪದಾರ್ಥಗಳ ರಸವನ್ನು ಹೀರಿಕೊಳ್ಳುವ; ತೇಜಸೇ=ತೇಜಸ್ಸಿಗೆ; **ನಮಃ**=ನಮಸ್ಕಾರವು. **ತೇ**=ನಿನ್ನ; **ಶೋಚಿಷೇ**=ಪದಾರ್ಥಗಳನ್ನು ಒಣಗಿಸುವ; ತೇಜಸೇ=ತೇಜಸ್ಸಿಗೆ; **ನಮಃ**=ನಮಸ್ಕಾರವು. ತೇ=ನಿನ್ನ; **ಅರ್ಚಿಷೇ**=ಪದಾರ್ಥಗಳನ್ನು ಪ್ರಕಾಶಗೊಳಿಸುವ; ತೇಜಸೇ= ತೇಜಸ್ಸಿಗೆ; ನಮಃ=ನಮಸ್ಕಾರವು; **ಅಸ್ತು**=ಇರಲಿ. **ತೇ ಹೇತಯಃ**=ನಿನ್ನ ಆಯುಧಗಳು; **ಅಸ್ಮತ್ ಅನ್ಯಮ್**=ನಮಗಿಂತಲೂ ಬೇರೆಯವರಾದ ಹಗೆಗಳನ್ನು; **ತಪಂತು**=ಸಂತಾಪಗೊಳಿಸಲಿ; **ಅಸ್ಮಭ್ಯಮ್ ಪಾವಕಃ ಶಿವಃ ಭವ**=ನಮಗೆ ನೀನು ಶೋಧಕನೂ, ಶಾಂತನೂ ಆಗಿರು. ▲ **ನೃಷದೇ**=ಜಾಠರಾಗ್ನಿರೂಪದಿಂದ ಮನುಷ್ಯರಲ್ಲಿರುವ ಅಗ್ನಿಗೆ; **ವಟ್**=ಈ ಹವಿಸ್ಸು ಹುತವಾಗಲಿ. **ಅಪ್ಸುಷದೇ**=ಬಾಡಬಾಗ್ನಿರೂಪದಿಂದ/ವೈದ್ಯುತರೂಪದಿಂದ ನೀರಿನಲ್ಲಿರುವ ಅಗ್ನಿಗೆ;

---

**ಹೇ! ಅಗ್ನಿಯೇ! ನಿನ್ನ ತೇಜಸ್ಸು ಅನೇಕ ಶಕ್ತಿಯುಳ್ಳದ್ದು. ಅದು ರಸವನ್ನು ಹೀರುವುದು. ಒಣಗಿಸುವುದು. ಪದಾರ್ಥಗಳನ್ನು ಬೆಳಗಿಸುವುದು. ಅಂತಹ ನೀನು ನಿನ್ನ ಆಯುಧಗಳನ್ನು ನಮ್ಮ ಶತ್ರುಗಳಲ್ಲಿ ಪ್ರಯೋಗಿಸು. ನಮಗೆ ಶಾಂತನಾಗಿರು ಎಂದು ಪ್ರಾರ್ಥಿಸುವೆವು.**

**ಜಾಠರಾಗ್ನಿ, ವಾಡಬಾಗ್ನಿ, ಕಾಡುಗಿಚ್ಚು, ಆಹವನೀಯಾದಿರೂಪದ ಯಜ್ಞಾಗ್ನಿ-ಹೀಗೆ ಇರುವ ಅಗ್ನಿಗೂ, ಆದಿತ್ಯರೂಪದಿಂದ ಸ್ವರ್ಗವನ್ನು ಹೊಂದುವ ಅಗ್ನಿಗೂ ಈ ಹವಿಸ್ಸು ಹುತವಾಗಲಿ.**

ವಡ್ವನಸದೇ ವಡ್ಬರ್ಹಿಷದೇ ವಟ್ಥ್ಸುವರ್ವಿದೇ ವಟ್ ॥ ಯೇ ದೇವಾ ದೇವಾನಾಂ ಯಜ್ಞಿಯಾ ಯಜ್ಞಿಯಾನಾಗ್ಂ ಸಂವತ್ಸರೀಣಮುಪ ಭಾಗಮಾಸತೇ । ಅಹುತಾದೋ ಹವಿಷೋ ಯಜ್ಞೇ ಅಸ್ಮಿನ್ತ್ಸ್ವಯಂ ಜುಹುಧ್ವಂ ಮಧುನೋ ಘೃತಸ್ಯ ॥

---

ವಟ್ । ವನಸದ ಇತಿ ವನ–ಸದೇ । ವಟ್ । ಬರ್ಹಿಷದ ಇತಿ ಬರ್ಹಿ–ಸದೇ । ವಟ್ । ಸುವರ್ವಿದ ಇತಿ ಸುವಃ–ವಿದೇ । ವಟ್ ॥ ಯೇ । ದೇವಾಃ । ದೇವಾನಾಮ್ । ಯಜ್ಞಿಯಾಃ । ಯಜ್ಞಿಯಾನಾಮ್ । ಸಂವತ್ಸರೀಣಮಿತಿ ಸಮ್–ವತ್ಸರೀಣಮ್ । ಉಪೇತಿ । ಭಾಗಮ್ । ಆಸತೇ ॥ ಅಹುತಾದ ಇತ್ಯಹುತ–ಅದಃ । ಹವಿಷಃ । ಯಜ್ಞೇ । ಅಸ್ಮಿನ್ನ್ । ಸ್ವಯಮ್ । ಜುಹುಧ್ವಮ್ । ಮಧುನಃ । ಘೃತಸ್ಯ ॥

---

| ಮಂತ್ರ | ವಿನಿಯೋಗ |
|---|---|
| **೩) ವನಸದೇ ವಟ್ ೪) ಬರ್ಹಿಷದೇ ವಟ್ ೫) ಸುವರ್ವಿದೇ ವಟ್ ।** | ಉತ್ತರವೇದಿಯಲ್ಲಿ ಅಥವಾ ಸ್ವಯಮಾತೃಣ್ಣೆಯಲ್ಲಿ ಅಗ್ನಿಯ ಹೋಮವನ್ನು ಅನುಷ್ಠಿಸಲು ಕೊನೆಯ ಮೂರು ಮಂತ್ರಗಳು. |
| **ಯೇ ದೇವಾಃ...ಘೃತಸ್ಯ ॥** | ದೊಡ್ಡದಾದ ದರ್ಭಮುಷ್ಟಿಯಿಂದ ಮಧುಮಿಶ್ರವಾದ ದಧಿಯನ್ನು ಅಗ್ನಿಯಲ್ಲಿ ಅವೋಕ್ಷಣ ಮಾಡಲು ಪ್ರಥಮಮಂತ್ರ. |

---

**ವಟ್**=ಇದು ಹುತವಾಗಲಿ; ♠ **ವನಸದೇ ವಟ್**=ಕಾಡುಗಿಚ್ಚಿನ ರೂಪದಿಂದ ಕಾಡುಗಳಲ್ಲಿರುವ ಅಗ್ನಿಗೆ ಇದು ಹುತವಾಗಲಿ. **ಬರ್ಹಿಷದೇ ವಟ್**=ಆಹವನೀಯಾದಿರೂಪದಿಂದ ಯಜ್ಞಗಳಲ್ಲಿರುವ ಅಗ್ನಿಗೆ ಈ ಹವಿಸ್ಸು ಹುತವಾಗಲಿ; **ಸುವರ್ವಿದೇ ವಟ್**=ಆದಿತ್ಯರೂಪದಿಂದ ಸ್ವರ್ಗವನ್ನು ಹೊಂದಿರುವ ಅಗ್ನಿದೇವನಿಗೆ ಈ ಹವಿಸ್ಸು ಹುತವಾಗಲಿ. ♠ **ಯಜ್ಞಿಯಾನಾಮ್**=ಯಜ್ಞದಿಂದ ಪೂಜ್ಯರಾಗಿ ಯಜ್ಞಿಯರಾಗಿರುವ; **ದೇವಾನಾಮ್**=ಇಂದ್ರಾದಿ ದೇವತೆಗಳ ಸಂಬಂಧಿಯಾದ; **ಯೇ ಯಜ್ಞಿಯಾಃ**=ಯಜ್ಞದಿಂದ ಪೂಜಕರಾಗಿ ಯಜ್ಞಿಯರಾಗಿರುವ ಯಾವ; **ದೇವಾಃ**=ಪ್ರಾಣರೂಪದೇವತೆಗಳಿರುವರೋ [ಅವರು] **ಸಂವತ್ಸರೀಣಮ್**=ಸಂವತ್ಸರಸಾಧ್ಯವಾದ ಚಯನದ; **ಭಾಗಮ್**=ಭಾಗವನ್ನು; **ಉಪ ಆಸತೇ**=ಸೇವಿಸುತ್ತಾರೆ. **ಅಹುತಾದಃ**=ಅಹುತರಾದ ಪ್ರಾಣಾದಿದೇವತೆಗಳೇ! **ಅಸ್ಮಿನ್ ಯಜ್ಞೇ**=ಈ ಯಜ್ಞದಲ್ಲಿ; **ಹವಿಷಃ**=ಹವಿಸ್ಸಾಗಿರುವ; **ಮಧುನಃ**=ಮಧುರವಾದ; **ಘೃತಸ್ಯ**=ಆಜ್ಯದ ಭಾಗವನ್ನು; [ದಧಿ–ಮಧುಭಾಗವನ್ನು] **ಸ್ವಯಮ್ ಜುಹುಧ್ವಮ್**=ನೀವೇ ಸ್ವತಃ ಸ್ವೀಕರಿಸಿರಿ.

**ಯೇ ದೇವಾ ದೇವೇಷ್ವಧಿ ದೇವತ್ವಮಾಯನ್, ಯೇ ಬ್ರಹ್ಮಣಃ ಪುರಏತಾರೋ ಅಸ್ಯ । ಯೇಭ್ಯೋ ನರ್ತೇ ಪವತೇ ಧಾಮ ಕಿಂ ಚನ ನ ತೇ ದಿವೋ ನ ಪೃಥಿವ್ಯಾ ಅಧಿಸ್ನುಷು ॥**

---

ಯೇ । ದೇವಾಃ । ದೇವೇಷು । ಅಧೀತಿ । ದೇವತ್ವಮಿತಿ ದೇವ-ತ್ವಮ್ । ಆಯನ್ನ್ । ಯೇ । ಬ್ರಹ್ಮಣಃ । ಪುರಏತಾರ ಇತಿ ಪುರಃ-ಏತಾರಃ । ಅಸ್ಯ ॥ ಯೇಭ್ಯಃ । ನ । ಋತೇ । ಪವತೇ । ಧಾಮ । ಕಿಮ್ । ಚನ । ನ । ತೇ । ದಿವಃ । ನ । ಪೃಥಿವ್ಯಾಃ । ಅಧೀತಿ । ಸ್ನುಷು ॥

---

| ಮಂತ್ರ | ವಿನಿಯೋಗ |
|---|---|
| **ಯೇ ದೇವಾಃ...ಸ್ನುಷು ॥** | ಅವೋಕ್ಷಣದ ದ್ವಿತೀಯ ಹಾಗೂ ಕಡೆಯ ಮಂತ್ರ. |

---

**ಯೇ ದೇವಾಃ**=ಯಾವ ಪ್ರಾಣಾದಿಗಳು; **ದೇವೇಷು**=ಇಂದ್ರಾದಿಗಳನ್ನು; **ಅಧಿ**[ಷ್ಠಾಯ]=ಆಶ್ರಯಿಸಿ; **ದೇವತ್ವಮ್**=ದೇವತ್ವವನ್ನು; **ಆಯನ್**=ಹೊಂದಿವೆಯೋ; **ಯೇ**=ಯಾವ ಪ್ರಾಣಾದಿಗಳು; **ಬ್ರಹ್ಮಣಃ ಅಸ್ಯ**=ಪ್ರೌಢನಾದ ಈ ಚಿತ್ಯಾಗ್ನಿಯ; **ಪುರಏತಾರಃ**=ಮುಂದೆ ಹೋಗತಕ್ಕವುಗಳಾಗಿವೆಯೋ; **ಯೇಭ್ಯಃ ಋತೇ**=ಯಾವುವು ಇಲ್ಲದೆ [ಮಾನವರಲ್ಲಿ]; **ಕಿಮ್ ಚನ ಧಾಮ**=ಯಾವ ವಸ್ತುವೂ; **ನ ಪವತೇ**= ಶುದ್ಧವಾಗಿರುವುದಿಲ್ಲವೋ; **ತೇ**=ಆ ಪ್ರಾಣಾದಿಗಳು; **ದಿವಃ ನ**=ಸ್ವರ್ಗದ ಸ್ಥಾನದಲ್ಲಿಯೂ; [ಇರುವುದಿಲ್ಲ]; **ಪೃಥಿವ್ಯಾಃ ನ**=ಭೂಮಿಯ ಪ್ರದೇಶದಲ್ಲಿಯೂ ಇರುವುದಿಲ್ಲ. **ಸ್ನುಷು ಅಧಿ**[ಷ್ಠಾಯ ವರ್ತಂತೇ]= ಪರ್ವತದ ಶಿಖರಪ್ರದೇಶದಂತಿರುವ [ಮಾನವರ ಚಕ್ಷುರಾದಿ ಗೋಲಕಗಳನ್ನು] ಆಶ್ರಯಿಸಿ ಇರುತ್ತವೆ.

---

ಇಬ್ಬಗೆಯ ದೇವತೆಗಳು ಇದ್ದಾರೆ. ಹವಿಸ್ಸನ್ನು ಸ್ವೀಕರಿಸುವ ಇಂದ್ರ-ವರುಣ ಮುಂತಾದವರು. ಶರೀರವನ್ನು ನಿರ್ವಹಿಸುವ ಪ್ರಾಣ-ಅಪಾನ ಮುಂತಾದವುಗಳು. **'ದೀವ್ಯಂತಿ ಇತಿ ದೇವಾಃ'** ಎಂಬ ವಿವರಣೆಯು ಎರಡಕ್ಕೂ ಹೊಂದುವುದು. ಈ ಇಬ್ಬಗೆಯ ದೇವತೆಗಳೂ ಯಜ್ಞಿಯರೇ. ಯಜ್ಞಾರ್ಹರೇ. ಯಜ್ಞದಿಂದ ಪೂಜ್ಯರಾದ ಇಂದ್ರಾದಿ ಗಳೂ ಯಜ್ಞಿಯರೇ. ಯಜ್ಞಪೂಜಕರಾದ ಪ್ರಾಣಾದಿಗಳೂ ಯಜ್ಞಿಯರೇ. ಹೀಗೆ ಇರುವಾಗ ಈ ಮಂತ್ರದ ತಾತ್ಪರ್ಯವು ಹೀಗೆ ಇದೆ-ಹುತಾದರಾದ ಮತ್ತು ಹುತಾದರಲ್ಲದ ದೇವತೆಗಳು ಯಜ್ಞಿಯರು. ಸಂವತ್ಸರ ಸಾಧ್ಯವಾದ ಚಯನದಲ್ಲಿ ಅವರು ಯಜಮಾನರು ಕೊಡುವ ಹವಿರ್ಭಾಗವನ್ನು ಸ್ವೀಕರಿಸುತ್ತಾರೆ. ಅಹುತಾದ ಪ್ರಾಣಾದಿಗಳೇ! ನೀವು ಹವಿಸ್ಸಿನ ಭಾಗವನ್ನು ತಾವಾಗಿಯೇ ಸ್ವೀಕರಿಸಿ ತೃಪ್ತರಾಗಿರಿ. ಈ ದಧಿ-ಮಧು ಅವೋಕ್ಷಣದಿಂದ ಉಭಯವಿಧ ದೇವತೆಗಳೂ ತೃಪ್ತರಾಗಲಿ.

**ಪ್ರಾಣದಾ[ಪ್ರಾಣದಾಃ(ಳ)ಅಪಾನದಾ]ಅಪಾನದಾ ವ್ಯಾನದಾಶ್ಚಕ್ಷುರ್ದಾ ವರ್ಚೋದಾ ವರಿವೋದಾಃ । ಅನ್ಯಂ ತೇ ಅಸ್ಮತ್ತಪಂತು ಹೇತಯಃ ಪಾವಕೋ ಅಸ್ಮಭ್ಯಗ್‌ಂ ಶಿವೋ ಭವ ॥ ಅಗ್ನಿಸ್ತಿಗ್ಮೇನ ಶೋಚಿಷಾ ಯಗ್‌ಂಸದ್ವಿಶ್ವಂ ನ್ಯತ್ರಿಣಮ್ । ಅಗ್ನಿರ್ನೋ ವಗ್‌ಂಸತೇ ರಯಿಮ್ ॥**

---

ಪ್ರಾಣದಾ ಇತಿ ಪ್ರಾಣ-ದಾಃ ।(ಳ)। ಅಪಾನದಾ ಇತ್ಯಪಾನ-ದಾಃ । ವ್ಯಾನದಾ ಇತಿ ವ್ಯಾನ-ದಾಃ । ಚಕ್ಷುರ್ದಾ ಇತಿ ಚಕ್ಷುಃ-ದಾಃ । ವರ್ಚೋದಾ ಇತಿ ವರ್ಚಃ-ದಾಃ । ವರಿವೋದಾ ಇತಿ ವರಿವಃ-ದಾಃ ॥ ಅನ್ಯಮ್ । ತೇ । ಅಸ್ಮತ್ । ತಪಂತು । ಹೇತಯಃ । ಪಾವಕಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಿವಃ । ಭವ ॥ ಅಗ್ನಿಃ । ತಿಗ್ಮೇನ । ಶೋಚಿಷಾ । ಯಗ್‌ಂಸತ್ । ವಿಶ್ವಮ್ । ನೀತಿ । ಅತ್ರಿಣಮ್ ॥ ಅಗ್ನಿಃ । ನಃ । ವಗ್‌ಂಸತೇ । ರಯಿಮ್ ॥

---

| ಮಂತ್ರ | ವಿನಿಯೋಗ |
|---|---|
| **ಪ್ರಾಣದಾಃ...ಶಿವೋ ಭವ ॥** | ಅಗ್ನಿಯ ಚಿತಿಯ ಮೇಲಿಂದ ಇಳಿಯಲು. |
| **ಅಗ್ನಿಃ...ರಯಿಮ್ ॥** | ಅನೀಕವದಗ್ನಿಯ ಹೋಮದ ಪ್ರಥಮಮಂತ್ರ. |

---

[ಈ ಅಗ್ನಿಯು] **ಪ್ರಾಣದಾಃ**=ಯಜಮಾನನ ಪ್ರಾಣವನ್ನು ಸರಿಯಾದ ಸ್ಥಿತಿಯಲ್ಲಿ ಇಡುವವನು; **ಅಪಾನದಾಃ**=ಅಪಾನವನ್ನು ಸರಿಯಾಗಿ ಇಡುವವನು; **ವ್ಯಾನದಾಃ**=ವ್ಯಾನವನ್ನು ಸರಿಪಡಿಸುವವನು; **ಚಕ್ಷುರ್ದಾಃ**=ಒಳ್ಳೆಯ ಕಣ್ಣುಗಳನ್ನು ಕೊಡುವವನು; **ವರ್ಚೋದಾಃ**=ಒಳ್ಳೆಯ ಬಲವನ್ನು ಕೊಡುವವನು; **ವರಿವೋದಾಃ**=ಪೂಜೆಯನ್ನು/ಪೂಜೆಗೆ ಕಾರಣವಾದ ವಸ್ತುಗಳನ್ನು ಕೊಡುವವನು [ಇಂತಹ ಅಗ್ನಿಯೇ!] **ತೇ**=ನಿನ್ನ; **ಹೇತಯಃ**=ಆಯುಧಗಳು; **ಅಸ್ಮತ್ ಅನ್ಯಮ್**=ನಮಗಿಂತಲೂ ಬೇರೆಯವನಾದ ನಮ್ಮ ಶತ್ರುವನ್ನು; **ತಪಂತು**=ಸಂತಾಪಗೊಳಿಸಲಿ. **ಪಾವಕಃ**=[ನೀನು] [ನಮ್ಮನ್ನು] ಶುಚಿಗೊಳಿಸುವವನಾಗು. **ಅಸ್ಮಭ್ಯಮ್**=ನಮ್ಮ ವಿಷಯದಲ್ಲಿ; **ಶಿವಃ ಭವ**=ಶಾಂತನಾಗು. ♠ **ಅಗ್ನಿಃ**=ಅಗ್ನಿದೇವನು; **ತಿಗ್ಮೇನ**=ತೀಕ್ಷ್ಣವಾದ; **ಶೋಚಿಷಾ**=ಜ್ವಾಲೆಯಿಂದ; **ವಿಶ್ವಮ್ ಅತ್ರಿಣಮ್**=ವಿರೋಧಿಗಳಾದ ರಾಕ್ಷಸಾದಿಗಳೆಲ್ಲರನ್ನೂ; **ನಿ ಯಗ್‌ಂಸತ್**=ನಿಯಮಿಸಲಿ/ನಾಶಪಡಿಸಲಿ. **ಅಗ್ನಿಃ**=ಅಗ್ನಿಯು; **ನಃ**=ನಮಗೆ; **ರಯಿಮ್**=ಧನವನ್ನು; **ವಗ್‌ಂಸತೇ**=ಕೊಡಲು ಇಚ್ಛಿಸಲಿ.

**ಸ್ಯೈನಾಽನೀಕೇನ ಸುವಿದತ್ರೋ ಅಸ್ಮೇ ಯಷ್ಟಾ ದೇವಾಗ್ಂ ಆಯಜಿಷ್ಠಸ್ಸ್ವಸ್ತಿ ।**

**ಅದಬ್ಧೋ ಗೋಪಾ ಉತ ನಃ ಪರಸ್ಪಾ ಅಗ್ನೇ ದ್ಯುಮದುತ ರೇವದ್ದಿದೀಹಿ ॥ ೫-1 ॥**

**[ಉಪ ದೇವಾನ್ ವಟ್ಪ್ರಾಣದಾಶ್ಚತುಶ್ಚತ್ವಾರಿಗ್ಂಶಚ್ಚ ॥]**

---

ಸಃ । ಏನಾ । ಅನೀಕೇನ । ಸುವಿದತ್ರ ಇತಿ ಸು-ವಿದತ್ರಃ । ಅಸ್ಮೇ ಇತಿ । ಯಷ್ಟಾ । ದೇವಾನ್ । ಆಯಜಿಷ್ಠ ಇತ್ಯಾ-ಯಜಿಷ್ಠಃ । ಸ್ವಸ್ತಿ ॥ ಅದಬ್ಧಃ । ಗೋಪಾ ಇತಿ ಗೋ-ಪಾಃ । ಉತ । ನಃ । ಪರಸ್ಪಾ ಇತಿ ಪರಃ-ಪಾಃ । ಅಗ್ನೇ । ದ್ಯುಮದಿತಿ ದ್ಯು-ಮತ್ । ಉತ । ರೇವತ್ । ದಿದೀಹಿ ॥ ೫ ॥

---

| ಮಂತ್ರ | ವಿನಿಯೋಗ |
|---|---|
| **ಸ್ಯೈನಾನೀಕೇನ...ದಿದೀಹಿ ॥** | ಅನೀಕವದಗ್ನಿಯ ಹೋಮದ ಎರಡನೆಯ ಮತ್ತು ಕಡೆಯ ಮಂತ್ರ. |

---

▲ **ಅಗ್ನೇ**=ಅಗ್ನಿಯೇ! **ಸಃ**=ಅಂತಹ ನೀನು; **ಏನಾ ಅನೀಕೇನ**=ಈ ಜ್ವಾಲಾಸಮೂಹರೂಪವಾದ ಸೈನ್ಯದಿಂದ; **ಸುವಿದತ್ರಃ**=ಎಲ್ಲವನ್ನೂ ತಿಳಿದವನು. **ಅಸ್ಮೇ**=ನಮಗಾಗಿ; **ದೇವಾನ್**=ದೇವತೆಗಳನ್ನು ಕುರಿತು; **ಯಷ್ಟಾ**=ಯಾಗವನ್ನು ನೆರವೇರಿಸುವವನು. **ಸ್ವಸ್ತಿ**=ಚೆನ್ನಾಗಿ ಯಾವ ವಿಘ್ನವೂ ಇಲ್ಲದಂತೆ; **ಆಯಜಿಷ್ಠಃ**=ಯಾಗವನ್ನು ಪೂರ್ಣಗೊಳಿಸುವವನು; **ಅದಬ್ಧಃ**=ಯಾರಿಂದಲೂ ಹಿಂಸಿಸಲು ಸಾಧ್ಯವಾಗದವನು; **ಗೋಪಾಃ**=ಮಂತ್ರಗಳನ್ನು ರಕ್ಷಿಸುವವನು; **ಉತ**=ಮತ್ತು; **ನಃ ಪರಸ್ಪಾಃ**=ನಮ್ಮನ್ನು ಅತಿಶಯವಾಗಿ ರಕ್ಷಿಸುವವನು [ಇಂತಹ ನೀನು] **ದ್ಯುಮತ್**=ಪ್ರಕಾಶಮಾನವಾಗಿರುವ; **ಉತ**=ಮತ್ತು; **ರೇವತ್**=ಧನಯುಕ್ತವಾಗಿರುವ ಗೃಹ-ಕ್ಷೇತ್ರಾದಿಗಳನ್ನು; **ದಿದೀಹಿ**=ಪ್ರಕಾಶಪಡಿಸು.

---

ಯಾವ ಪ್ರಾಣಾದಿಗಳು ಇಂದ್ರಾದಿಗಳನ್ನು ಆಶ್ರಯಿಸಿವೆಯೋ, ಪ್ರೌಢನಾದ ಚಿತ್ಯಾಗ್ನಿಯನ್ನು ಮುನ್ನಡೆಸುತ್ತವೆಯೋ, ಯಾವುದು ಇಲ್ಲದಿದ್ದರೆ ಮಾನವರಲ್ಲಿ ಯಾವ ವಸ್ತುವೂ ಶುದ್ಧವಾಗಿರುವುದಿಲ್ಲವೋ, ಆ ಪ್ರಾಣಾದಿಗಳು ಸ್ವರ್ಗ, ಭೂಮಿಗಳಲ್ಲಿ ಇರದೆ ಮಾನವರ ಚಕ್ಷುರಾದಿಗೋಲಕದಲ್ಲಿ ಇರುತ್ತವೆ.

ಈ ಅಗ್ನಿಯು ಪ್ರಾಣ, ಅಪಾನ, ವ್ಯಾನವಾಯುಗಳನ್ನು ಸುಸ್ಥಿತಿಯಲ್ಲಿಡುವವನು. ಕಣ್ಣುಗಳನ್ನು ನೀಡುವವನು. ಬಲಪ್ರದನು. ಆರಾಧನೆಯ ವಸ್ತುಗಳನ್ನು ನೀಡುವವನು. ಅವನು ತನ್ನ ಆಯುಧಗಳಿಂದ ವೈರಿಗಳನ್ನು ನಾಶ ಮಾಡಲಿ. ನಮ್ಮ ವಿಷಯದಲ್ಲಿ ಶಾಂತನಾಗಿರಲಿ.

ಅಗ್ನಿಯು ರಾಕ್ಷಸಾದಿ ಎಲ್ಲ ವಿರೋಧಿಗಳನ್ನೂ ತನ್ನ ಜ್ವಾಲೆಯಿಂದ ನಾಶ ಮಾಡಲಿ. ನಮಗೆ ಧನವನ್ನು ನೀಡಲಿ.

ಹೇ! ಅಗ್ನಿಯೇ! ನೀನು ಎಲ್ಲವನ್ನೂ ಅರಿತವನು. ನಮಗಾಗಿ ಹವಿಸ್ಸನ್ನು ಒಯ್ದು ದೇವತೆಗಳನ್ನು ತೃಪ್ತಿಪಡಿಸುವವನು. ನಮ್ಮ ಯಾಗವನ್ನು ನಿರ್ವಿಘ್ನವಾಗಿ ಕೊನೆಮುಟ್ಟಿಸುವವನು. ನೀನು ಶಕ್ತನು. ಮಂತ್ರರಕ್ಷಕನು. ನಮ್ಮನ್ನು

ಪೊರೆಯುವವನು. ನೀನು ನಮಗೆ ಧನಪೂರ್ಣವಾದ ಗೃಹಾದಿಗಳನ್ನು ಕರುಣಿಸು.

---

## ವಿನಿಯೋಗಸಂಗ್ರಹ

ಷಷ್ಠೇ ಪಂಚಾನುವಾಕಾಃ ಸ್ಯುರಗ್ನಿಶೇಷಾಸ್ತತಃ ಪರೇ ।
ಚತ್ವಾರೋ ಹ್ಯಶ್ವಮೇಧಾರ್ಥಾ1 ಅಶ್ಮೇತಿ ಪರಿಷಿಂಚತಿ ॥
2ಅಶ್ಮಂಸ್ತೇ ಪ್ರತಿಪರ್ಯೇತಿ 3-10ಸಮುದ್ರೇತ್ಯಗ್ನಿಮಷ್ಟಭಿಃ ।
ವಿಕರ್ಷೇದಿತ್ಯಪಾಂ 11-12ದ್ವಾಭ್ಯಾಮಾರೋಹತಿ ಚಿತಿಂ13-17 ನೃಷತ್ ॥
ವ್ಯಾಘಾರಃ ಪಂಚಭಿರ್ಯೇ ದೇ18-19 ದ್ವಾಭ್ಯಾಮಗ್ನಿಮವೋಕ್ಷತಿ ।
20ಪ್ರಾಣದಾ ಅವರುಹ್ಯಾಗ್ನಿಸ್ತಿಗ್ಮೇನೇ21-22ತ್ಯಾಹುತಿದ್ವಯಮ್ ॥
ಪ್ರಥಮೇ ತ್ವನುವಾಕೇಽಸ್ಮಿನ್ ಮಂತ್ರಾ ದ್ವಾವಿಂಶತಿಃ ಸ್ಥಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–22

---

## ಅನುವಾಕದ ವಿಶೇಷ ವಿಷಯಗಳು

### ಅ) ಮೀಮಾಂಸಾ

೧) ವಿಕರ್ಷಣ–ಪ್ರೋಕ್ಷಣಗಳು ಹೇಗೆ? [ಜೈ. ಸೂ. 9.1.12]

**'ಇಷ್ಟಕಾಭಿರಗ್ನಿಂ ಚಿನುತೇ'** ಎಂಬ ವಚನವಿದೆ. **'ಮಂಡೂಕೇನ ವಿಕರ್ಷತಿ'** [ತೈ. ಸಂ. 5.4.4] **'ಹಿರಣ್ಯಶಕಲಸಹಸ್ರೇಣಾಗ್ನಿಂ ಪ್ರೋಕ್ಷತಿ'** ಎಂಬ ವಚನಗಳಿವೆ. ಇಷ್ಟಕೆಗಳಿಗಿಂತಲೂ ಅವಯವಿವಾಚಕವಾದ ಶಬ್ದವಿಲ್ಲದಿರುವುದರಿಂದ ಆ ವಿಕರ್ಷಣ–ಪ್ರೋಕ್ಷಣಗಳನ್ನು ಪ್ರತಿಯೊಂದು ಇಷ್ಟಕೆಯಲ್ಲಿಯೂ ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಷ್ಟಕೆಗಳಿಂದ ನಿರ್ಮಿತವಾದ ಚಿತಿಯೇ ಅಗ್ನಿ. ಆ ಪ್ರದೇಶವೇ ಅವಯವಿ. ಹೀಗಾಗಿ ಒಮ್ಮೆಯೇ ವಿಕರ್ಷಣ–ಅವೋಕ್ಷಣಗಳು. ಇದು **ಸಿದ್ಧಾಂತ.**

ഇ❀ഢഇ❀ഢ

## ॥ ದ್ವಿತೀಯೋಽನುವಾಕಃ ॥

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್, ಹೋತಾ ನಿಷಸಾದಾ ಪಿತಾ ನಃ ।**

**ಸ ಆಶಿಷಾ ದ್ರವಿಣಮಿಚ್ಛಮಾನಃ ಪರಮಚ್ಛದೋ ವರ ಆವಿವೇಶ ॥**

---

**ಯಃ । ಇಮಾ । ವಿಶ್ವಾ । ಭುವನಾನಿ । ಜುಹ್ವತ್ । ಋಷಿಃ । ಹೋತಾ । ನಿಷಸಾದೇತಿ ನಿ-ಸಸಾದ । ಪಿತಾ । ನಃ ॥ ಸಃ । ಆಶಿಷೇತ್ಯಾ-ಶಿಷಾ । ದ್ರವಿಣಮ್ । ಇಚ್ಛಮಾನಃ । ಪರಮಚ್ಛದ ಇತಿ ಪರಮ-ಛದಃ । ವರೇ । ಏತಿ । ವಿವೇಶ ॥**

---

ಮೊದಲನೆಯ ಅನುವಾಕದಲ್ಲಿ ಪರಿಷೇಚನಾದಿಗಳು ಹೇಳಲ್ಪಟ್ಟವು. ಈ ಎರಡನೆಯ ಅನುವಾಕದಲ್ಲಿ ಎರಡು ಸೂಕ್ತಗಳಿಂದ ವೈಶ್ವಕರ್ಮಣಹೋಮವು ಹೇಳಲ್ಪಟ್ಟಿದೆ. ಮೊದಲನೆಯ ಸೂಕ್ತವು **'ಯ ಇಮಾ'** ಎಂದು ಪ್ರಾರಂಭವಾಗಿ **'ವಿಶ್ವಕರ್ಮಾ...ಪುರುತ್ರಾ'** ಎಂದು ಎಂಟು ಮಂತ್ರಗಳಿಂದ ಮುಕ್ತಾಯವಾಗುವುದು. ಎರಡನೆಯ ಸೂಕ್ತವು **'ಚಕ್ಷುಷಃ ಪಿತಾ'** ಎಂಬ ಮಂತ್ರದಿಂದ ಆರಂಭವಾಗಿ ಎಂಟು ಮಂತ್ರಗಳೊಡನೆ ಅನುವಾಕದ ಕಡೆಯವರೆವಿಗೂ ಇದೆ.

---

| ಮಂತ್ರ | ವಿನಿಯೋಗ |
|---|---|
| **ಯ ಇಮಾ...ಆ ವಿವೇಶ ॥** | ವೈಶ್ವಕರ್ಮಣಹೋಮದ ಸೂಕ್ತದ ಮೊದಲನೆಯ ಮಂತ್ರ. |

---

▲ **ಯಃ**=ಯಾವ ವಿಶ್ವಕರ್ಮನಾದ ಪರಮೇಶ್ವರನು; **ಇಮಾ**=ಈ; **ವಿಶ್ವಾ ಭುವನಾನಿ**=ಎಲ್ಲ ಜಗತ್ತುಗಳನ್ನೂ; **ಜುಹ್ವತ್**=ಹೋಮ ಮಾಡುವಂತೆ [ಪ್ರಳಯಕಾಲದಲ್ಲಿ ಎಲ್ಲವನ್ನೂ ಉಪಸಂಹರಿಸುವನೋ] **ಋಷಿಃ**=ಸರ್ವಜ್ಞನೋ; **ಹೋತಾ**=ತನ್ನಲ್ಲಿಯೇ ಎಲ್ಲವನ್ನೂ ಹೋಮ ಮಾಡಿಕೊಳ್ಳುವನೋ; **ನಃ ಪಿತಾ**=ನಮ್ಮನ್ನು ಸೃಷ್ಟಿಸಿದ ತಂದೆಯೋ; **ನಿಷಸಾದ**=ಪ್ರಳಯಕಾಲದಲ್ಲಿ ಒಬ್ಬನೇ ಇರುವನೋ; **ಸಃ**=ಆ ಪರಮೇಶ್ವರನು; **ಆಶಿಷಾ**=ಜಗದ್ಭೋಗವನ್ನು ಆಶಿಸಿ; **ದ್ರವಿಣಮ್**=ಜಗದ್ಭೋಗವೆಂಬ ಧನವನ್ನು; **ಇಚ್ಛಮಾನಃ**=ಆಶಿಸುವವನಾಗಿ; **ಪರಮಚ್ಛದಃ**=ತನ್ನ ಪರಮಾತ್ಮರೂಪವನ್ನು ಆವರಿಸಿ; **ವರೇ**=[ತನ್ನಿಂದ ಸೃಷ್ಟವಾದ ಶರೀರದ ಮಧ್ಯದಲ್ಲಿರುವ] ಹೃದಯಪುಂಡರೀಕದಲ್ಲಿ; **ಆ ವಿವೇಶ**=ಪ್ರವೇಶಿಸಿ ಇರುತ್ತಾನೆ.

**ವಿಶ್ವಕರ್ಮಾ ಮನಸಾ ಯದ್ವಿಹಾಯಾ ಧಾತಾ ವಿಧಾತಾ ಪರಮೋತ ಸಂದೃಕ್ । ತೇಷಾಮಿಷ್ಟಾನಿ ಸಮಿಷಾ ಮದಂತಿ ಯತ್ರ ಸಪ್ತರ್‌ಷೀನ್ಪರ ಏಕಮಾಹುಃ ॥ ಯೋ ನಃ ಪಿತಾ ಜನಿತಾ ಯೋ ವಿಧಾತಾ ಯೋನಸ್ಸತೋ ಅಭ್ಯಾ ಸಜ್ಜಜಾನ । [(೬)] ।**

---

ವಿಶ್ವಕರ್ಮೇತಿ ವಿಶ್ವ-ಕರ್ಮಾ । ಮನಸಾ । ಯತ್ । ವಿಹಾಯಾ ಇತಿ ವಿ-ಹಾಯಾಃ । ಧಾತಾ । ವಿಧಾತೇತಿ ವಿ-ಧಾತಾ । ಪರಮಾ । ಉತ । ಸಂದೃಗಿತಿ ಸಮ್-ದೃಕ್ ॥ ತೇಷಾಮ್ । ಇಷ್ಟಾನಿ । ಸಮಿತಿ । ಇಷಾ । ಮದಂತಿ । ಯತ್ರ । ಸಪ್ತರ್‌ಷೀನಿತಿ ಸಪ್ತ-ಋಷೀನ್ । ಪರಃ । ಏಕಮ್ । ಆಹುಃ ॥ ಯಃ । ನಃ । ಪಿತಾ । ಜನಿತಾ । ಯಃ । ವಿಧಾತೇತಿ ವಿ-ಧಾತಾ । ಯಃ । ನಃ । ಸತಃ । ಅಭಿ । ಎತಿ । ಸತ್ । ಜಜಾನ । [(೬)]

---

| ಮಂತ್ರ | ವಿನಿಯೋಗ |
|---|---|
| **ವಿಶ್ವಕರ್ಮಾ...ಆಹುಃ ॥** | ವೈಶ್ವಕರ್ಮಣಸೂಕ್ತದ ಎರಡನೆಯ ಮಂತ್ರ. |
| **ಯೋ ನಃ...ಯಂತ್ಯನ್ಯಾ ॥** | ವೈಶ್ವಕರ್ಮಣಸೂಕ್ತದ ಮೂರನೆಯ ಮಂತ್ರ. |

---

▲ **ಯತ್**=ಯಾವ ಕಾರಣದಿಂದ [ಪರಮೇಶ್ವರನು] **ಮನಸಾ ವಿಶ್ವಕರ್ಮಾ**=ಸಂಕಲ್ಪಮಾತ್ರದಿಂದಲೇ ಎಲ್ಲವನ್ನೂ ಮಾಡಬಲ್ಲನೋ; [ಆ ಕಾರಣದಿಂದಲೇ] **ಧಾತಾ**=ಸೃಷ್ಟಿಕರ್ತನೂ; **ವಿಧಾತಾ**=ಪೋಷಣ ಕರ್ತನೂ; **ವಿಹಾಯಾಃ**=ಸಂಹಾರಕರ್ತನೂ; [ಆಗಿರುತ್ತಾನೆ] [ಆತನು] **ಪರಮಾ**=ಪರಮಶ್ರೇಷ್ಠನು. **ಉತ ಸಂದೃಕ್**=ಮತ್ತು ಸರ್ವಜ್ಞನು; **ಯತ್ರ ಪರೇ**=ಯಾವ ಪರಮೇಶ್ವರನಲ್ಲಿ; **ಸಪ್ತರ್ಷೀನ್**=ಮರೀಚಿಯೇ ಮೊದಲಾದ ಸಪ್ತಮಹರ್ಷಿಗಳನ್ನೂ; **ಏಕಮ್ ಆಹುಃ**=[ಸೃಷ್ಟಿಗೆ ಮೊದಲು] ಏಕೀಭೂತರಾಗಿರುವಂತೆ [ವೇದಾಂತಜ್ಞರು] ಹೇಳುತ್ತಾರೆಯೋ [ಆ ಪರಮೇಶ್ವರನು] **ತೇಷಾಮ್**=ಆ ಮಹರ್ಷಿಗಳು; **ಇಷ್ಟಾನಿ**=ಇಚ್ಛಿಸುವುದನ್ನು; **ಇಷಾ**=ಸ್ವೇಚ್ಛಾಮಾತ್ರದಿಂದಲೇ; **ಸಮ್** ಪಾದಯತಿ=ಕೊಡುತ್ತಾನೆ; [ಆ ಮಹರ್ಷಿಗಳು] [ಅದರಿಂದ]; **ಮದಂತಿ**= ಸಂತೋಷಪಡುತ್ತಾರೆ. ▲ **ಯಃ**=ಯಾವ ವಿಶ್ವಕರ್ಮನು; **ನಃ ಪಿತಾ**=ನಮ್ಮ ಪಾಲಕನೋ; **ಜನಿತಾ**= ಉತ್ಪಾದಕನೋ; **ಯಃ ವಿಧಾತಾ**=ಯಾವನು ಸರ್ವಜಗತ್ತಿಗೂ ಉತ್ಪಾದಕನೋ; **ಯಃ**=ಯಾವ ಪರಮೇಶ್ವರನು; **ನಃ**=ನಮಗಾಗಿ; **ಸತ್**=ಈಗ ಇರುವ ಭೋಗ್ಯಜಾತವೆಲ್ಲವನ್ನೂ; **ಸತಃ**=ಯಾವಾಗಲೂ ಇರುವ ತನ್ನಿಂದಲೇ; **ಅಭಿ ಆ ಜಜಾನ**=ಉಂಟು ಮಾಡಿರುವನೋ;

---

**ಪರಮೇಶ್ವರನು ಸೃಷ್ಟಿ-ಸ್ಥಿತಿ-ಸಂಹಾರಕರ್ತನು. ಆವನು-ಪ್ರಳಯಕಾಲದಲ್ಲಿ ಎಲ್ಲ ಲೋಕಗಳನ್ನೂ ಸಂಹರಿಸಿ, ನಮ್ಮೆಲ್ಲರನ್ನೂ ಸಂಹರಿಸಿ, ಪುನಃ ಸೃಷ್ಟಿಸುವವನಾಗಿ ಸರ್ವಜ್ಞನಾದ ಪರಮೇಶ್ವರನು-ಒಬ್ಬನೇ ಇರುತ್ತಾನೆ. ಆವನು**

**ಯೋ ದೇವಾನಾಂ ನಾಮಧಾ ಏಕ ಏವ ತಗ್ಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ । ತ ಆಯಜಂತ ದ್ರವಿಣಗ್ಂ ಸಮಸ್ಮಾ ಋಷಯಃ ಪೂರ್ವೇ ಜರಿತಾರೋ ನ ಭೂನಾ । ಅಸೂರ್ತಾ ಸೂರ್ತಾ ರಜಸೋ ವಿಮಾನೇ ಯೇ ಭೂತಾನಿ ಸಮಕೃಣ್ವನ್ನಿಮಾನಿ ॥**

---

ಯಃ । ದೇವಾನಾಮ್ । ನಾಮಧಾ ಇತಿ ನಾಮ-ಧಾಃ । ಏಕಃ । ಏವ । ತಮ್ । ಸಂಪ್ರಶ್ನಮಿತಿ ಸಮ್-ಪ್ರಶ್ನಮ್ । ಭುವನಾ । ಯಂತಿ । ಅನ್ಯಾ ॥ ತೇ । ಏತಿ । ಅಯಜಂತ । ದ್ರವಿಣಮ್ । ಸಮಿತಿ । ಅಸ್ಮೈ । ಋಷಯಃ । ಪೂರ್ವೇ । ಜರಿತಾರಃ । ನ । ಭೂನಾ ॥ ಅಸೂರ್ತಾ । ಸೂರ್ತಾ । ರಜಸಃ । ವಿಮಾನ ಇತಿ ವಿ-ಮಾನೇ । ಯೇ । ಭೂತಾನಿ । ಸಮಕೃಣ್ವನ್ನಿತಿ ಸಮ್-ಅಕೃಣ್ವನ್ । ಇಮಾನಿ ॥

---

| ಮಂತ್ರ | ವಿನಿಯೋಗ |
|---|---|
| **ತ ಆ ಯಜಂತ...ಇಮಾನಿ ॥** | ವೈಶ್ವಕರ್ಮಣಸೂಕ್ತದ ನಾಲ್ಕನೆಯ ಮಂತ್ರ. |

---

**ಯಃ ಏಕಃ ಏವ**=ಯಾವನು ಒಬ್ಬನೇ; **ದೇವಾನಾಮ್**=ಇಂದ್ರ-ಮಿತ್ರಾದಿ ದೇವತೆಗಳ; **ನಾಮಧಾಃ**= ನಾಮಧೇಯಗಳನ್ನು ಹೊಂದಿರುವನೋ; **ತಮ್**=ಅವನನ್ನು ಕುರಿತು; **ಅನ್ಯಾ ಭುವನಾ**=[ಪ್ರಳಯಕಾಲ ದಲ್ಲಿ] ಜಗತ್ತೆಲ್ಲವೂ; **ಸಂಪ್ರಶ್ನಮ್**=ಯಾವನು ಪರಮಾತ್ಮನು? ಎಂಬ ಪ್ರಶ್ನೆಯನ್ನು; **ಯಂತಿ**=ಹೊಂದು ತ್ತವೆಯೋ; [ಅಂತಹ ವಿಶ್ವಕರ್ಮನು ನಮ್ಮನ್ನು ಅನುಗ್ರಹಿಸಲಿ] 🔔 **ತೇ**=ಆ; **ಋಷಯಃ**=ಅತೀಂದ್ರಿಯ ಜ್ಞಾನಿಗಳಾದ; **ಭೂನಾ**=ತಮ್ಮ ಮಹತ್ತ್ವದಿಂದ; **ನ ಜರಿತಾರಃ**=ಯಾವಾಗಲೂ ಜೀರ್ಣರಾ ಗದ; **ಪೂರ್ವೇ**=[ವಿಶ್ವಕರ್ಮನು ಸೃಷ್ಟಿಸಿದ] ಪೂರ್ವಿಕರಾದ ಮುನಿಗಳು; **ಅಸ್ಮೈ**=ಈ ಜಗತ್ತಿಗಾಗಿ; **ದ್ರವಿಣಮ್**= ಭೋಗ್ಯವಸ್ತುಜಾತವನ್ನು; **ಸಮ್ ಆ ಅಯಜಂತ**=ಚೆನ್ನಾಗಿ ಉತ್ಪತ್ತಿ ಮಾಡಿದರು; **ಯೇ**=ಯಾವ ಮಹರ್ಷಿ ಗಳು; **ಅಸೂರ್ತಾ**=ಪ್ರಾಣವುಳ್ಳ; **ರಜಸಃ**= ರಂಜನೀಯವಾದ ಕರ್ಮಗಳ; **ವಿಮಾನೇ**=ಯಥಾರ್ಥಜ್ಞಾನ ದಲ್ಲಿ; **ಸೂರ್ತಾ**=ತಮ್ಮ ತಮ್ಮ ಕರ್ಮಗಳಿಂದ ಪ್ರೇರಿತವಾದ; **ಭೂತಾನಿ ಇಮಾನಿ**=ಈ ಪ್ರಾಣಿಗಳನ್ನು; **ಸಮ್ ಅಕೃಣ್ವನ್**=ಚೆನ್ನಾಗಿ ಸೃಷ್ಟಿಸಿದರೋ [ಅವರು ಪ್ರಾಣಿಗಳಿಗೆ ಬೇಕಾದ ಭೋಗ್ಯವಸ್ತುಗಳನ್ನು ಸೃಷ್ಟಿಸಿರುತ್ತಾರೆ.]

---

**ಸರ್ವಜ್ಞನು. ನಮ್ಮೆಲ್ಲರ ತಂದೆಯು. ಸೃಷ್ಟಿಕಾಲದಲ್ಲಿ ಎಲ್ಲವನ್ನೂ ಸೃಷ್ಟಿಸಿ, ಹೃದಯಪುಂಡರಿಕದಲ್ಲಿ ಜೀವರೂಪ ದಲ್ಲಿ ಅಂತರ್ಯಾಮಿಯಾಗಿ ಇರುತ್ತಾನೆ.**

**ನ ತಂ ವಿದಾಥ ಯ ಇದಂ ಜಜಾನಾನ್ಯದ್ಯುಷ್ಮಾಕಮಂತರಂ ಭವಾತಿ ।**

**ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥**

---

ನ । ತಮ್ । ವಿದಾಥ । ಯಃ । ಇದಮ್ । ಜಜಾನ । ಅನ್ಯತ್ । ಯುಷ್ಮಾಕಮ್ । ಅಂತರಮ್ । ಭವಾತಿ ॥

ನೀಹಾರೇಣ । ಪ್ರಾವೃತಾಃ । ಜಲ್ಪ್ಯಾ । ಚ । ಅಸುತೃಪ ಇತ್ಯಸು-ತೃಪಃ । ಉಕ್ಥಶಾಸ ಇತ್ಯುಕ್ಥ-ಶಾಸಃ । ಚರಂತಿ ॥

---

| ಮಂತ್ರ | ವಿನಿಯೋಗ |
| --- | --- |
| ನ ತಂ ವಿದಾಥ...ಚರಂತಿ ॥ | ವೈಶ್ವಕರ್ಮಣಸೂಕ್ತದ ಐದನೆಯ ಮಂತ್ರ. |

---

[ವಿಶ್ವಕರ್ಮನಿಂದ ಸೃಷ್ಟರಾದ ಜೀವರೇ! ನೀವು] **ಯಃ**=ಯಾರು; **ಇದಮ್**=ಈ ವಿಶ್ವವನ್ನು; **ಜಜಾನ**=ಸೃಷ್ಟಿಸಿರುತ್ತಾನೆಯೋ; **ತಮ್**=ಅವನನ್ನು; **ನ ವಿದಾಥ**=ತಿಳಿದಿಲ್ಲ. **ಯುಷ್ಮಾಕಮ್**=ನಿಮ್ಮ [ನಾನು ಎಂಬ ಅರಿವಿಗಿಂತಲೂ]; **ಅನ್ಯತ್ ಅಂತರಮ್**=ಭಿನ್ನವಾದ [ಸರ್ವವೇದಾಂತಪ್ರತಿಪಾದ್ಯವಾದ ಈಶ್ವರ ತತ್ತ್ವವು] **ಭವಾತಿ**=ಇದೆ. **ನೀಹಾರೇಣ**=ಮಂಜಿನಂತೆ ಇರುವ [ಅಜ್ಞಾನದಿಂದ]; **ಪ್ರಾವೃತಾಃ**=[ನೀವು] ಆವೃತರಾಗಿದ್ದೀರಿ. **ಜಲ್ಪ್ಯಾ ಚ**=[ನಾನು ದೇವನು, ನಾನು ಮನುಷ್ಯನು/ನನ್ನ ಕ್ಷೇತ್ರವಿದು] ಎಂಬ ಮಿಥ್ಯಾ ವಚನವನ್ನು ಹೇಳುತ್ತಿರುತ್ತೀರಿ. **ಅಸುತೃಪಃ**=ಪ್ರಾಣಗಳನ್ನು ತೃಪ್ತಿಪಡಿಸುವವರಾಗಿರುತ್ತೀರಿ. **ಉಕ್ಥಶಾಸಃ**=[ಇಂತಹ ಜಂತುಗಳು] ಸ್ವರ್ಗಪ್ರಾಪ್ತಿಗಾಗಿ ಯಜ್ಞಾದಿಗಳಲ್ಲಿ ಆಸಕ್ತರಾಗಿ; **ಚರಂತಿ**=ನಡೆದುಕೊಳ್ಳುತ್ತಾರೆ.

---

**ಪರಮೇಶ್ವರನು ಇಚ್ಛಾಮಾತ್ರದಿಂದಲೇ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡಬಲ್ಲವನಾಗಿದ್ದಾನೆ. ಅವನು ಸರ್ವಜ್ಞನು. ಪರಮಶ್ರೇಷ್ಠನು. ಮರೀಚಿಯೇ ಮುಂತಾದ ಸಪ್ತಋಷಿಗಳು ಸೃಷ್ಟಿಗೆ ಮೊದಲು ಪರಮೇಶ್ವರನಲ್ಲಿಯೇ ಒಂದಾಗಿದ್ದರು. ಸೃಷ್ಟಿಯ ಬಳಿಕ ಆ ಮಹರ್ಷಿಗಳಿಗೆ ಬೇಕಾದುದೆಲ್ಲವನ್ನೂ ಪರಮೇಶ್ವರನು ಕರುಣಿಸಿದನು. ಇದರಿಂದ ಆ ಮುನಿಗಳು ಸಂತುಷ್ಟರಾಗಿದ್ದಾರೆ. ಇಂತಹ ಪರಮೇಶ್ವರನು ನಮಗೂ ಕರುಣಿಸಲಿ.**

**ಪರಮೇಶ್ವರನು ಎಲ್ಲವನ್ನೂ ಸೃಷ್ಟಿಸಿದನು. ಅವನೇ ಪಾಲಿಸುವವನು. ಅವನೊಬ್ಬನೇ ಇಂದ್ರ-ಮಿತ್ರಾದಿ ದೇವತೆಗಳ ಹೆಸರನ್ನೂ ಹೊಂದಿರುತ್ತಾನೆ. ನಮಗೆ ಬೇಕಾದುದೆಲ್ಲವನ್ನೂ ತನ್ನಿಂದಲೇ ಸೃಷ್ಟಿಸುತ್ತಾನೆ. ಪ್ರಳಯ ಕಾಲದಲ್ಲಿ ಎಲ್ಲವನ್ನೂ ತನ್ನಲ್ಲಿಯೇ ಅಡಗಿಸಿಕೊಳ್ಳುತ್ತಾನೆ. ಈ ರಹಸ್ಯವನ್ನು ಸಾಮಾನ್ಯರು ತಿಳಿಯಲಾರರು. ಜ್ಞಾನಿಗಳು ಮಾತ್ರ ತಿಳಿದಿರುತ್ತಾರೆ. ಅಂತಹ ವಿಶ್ವಕರ್ಮನ ಅನುಗ್ರಹವು ನಮಗೆ ಉಂಟಾಗಲಿ.**

**ವಿಶ್ವಕರ್ಮನು/ಪರಮೇಶ್ವರನು ಯಾವಾಗಲೂ ತಮ್ಮ ಮಹತ್ತ್ವವನ್ನು ಕಳೆದುಕೊಳ್ಳದ, ಅತೀಂದ್ರಿಯ ದ್ರಷ್ಟಾರರಾದ ಸರ್ವಜ್ಞರಾದ ಮಹರ್ಷಿಗಳನ್ನು ಸೃಷ್ಟಿಸಿರುತ್ತಾನೆ. ಅಂತಹ ಸೃಷ್ಟಿಕರ್ತರಾದ ಪ್ರಜಾಪತಿಗಳು ಪ್ರಾಣಯುಕ್ತವಾದ ಮತ್ತು ತಮ್ಮ ತಮ್ಮ ಕರ್ಮಗಳಿಂದ ಪ್ರೇರಿತವಾದ ಈ ಭೂತಗಳನ್ನೂ, ಅವರಿಗೆ ಬೇಕಾದ ಭೋಗ್ಯವಸ್ತುಜಾತವನ್ನೂ ಸೃಷ್ಟಿಸಿರುತ್ತಾರೆ. ಅಂತಹ ವಿಶ್ವಕರ್ಮನು ಈ ಹೋಮದಿಂದ ಪ್ರಸನ್ನನಾಗಲಿ.**

ಪರೋ ದಿವಾ ಪರ ಏನಾ[(ಽ)ಪೃಥಿವ್ಯಾ]ಪೃಥಿವ್ಯಾ ಪರೋ ದೇವೇಭಿರಸುರ್ರೈರ್ಗುಹಾ ಯತ್ । ಕಗ್ಂಸ್ವಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಸ್ಸಮಗಚ್ಛಂತ ವಿಶ್ವೇ ॥ ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಸ್ಸಮಗಚ್ಛಂತ ವಿಶ್ವೇ ।

---

ಪರಃ । ದಿವಾ । ಪರಃ । ಏನಾ । (ಽ) । ಪೃಥಿವ್ಯಾ । ಪರಃ । ದೇವೇಭಿಃ । ಅಸುರೈಃ । ಗುಹಾ । ಯತ್ ॥ ಕಮ್ । ಸ್ವಿತ್ । ಗರ್ಭಮ್ । ಪ್ರಥಮಮ್ । ದಧ್ರೇ । ಆಪಃ । ಯತ್ರ । ದೇವಾಃ । ಸಮಗಚ್ಛಂತೇತಿ ಸಮ್-ಅಗಚ್ಛಂತ । ವಿಶ್ವೇ ॥ ತಮ್ । ಇತ್ । ಗರ್ಭಮ್ । ಪ್ರಥಮಮ್ । ದಧ್ರೇ । ಆಪಃ । ಯತ್ರ । ದೇವಾಃ । ಸಮಗಚ್ಛಂತೇತಿ ಸಮ್-ಅಗಚ್ಛಂತ । ವಿಶ್ವೇ ॥

---

| ಮಂತ್ರ | ವಿನಿಯೋಗ |
| --- | --- |
| **ಪರೋ ದಿವಾ...ವಿಶ್ವೇ ॥** | ವೈಶ್ವಕರ್ಮಣಸೂಕ್ತದ ಆರನೆಯ ಮಂತ್ರ. |
| **ತಮಿದ್ಗರ್ಭಂ...ಶ್ರಿತಮ್ ॥** | ವೈಶ್ವಕರ್ಮಣಸೂಕ್ತದ ಏಳನೆಯ ಮಂತ್ರ. |

---

▲ **ಯತ್**=ಯಾವ ಈಶ್ವರತತ್ತ್ವವು; **ಗುಹಾ**=ಹೃದಯಪುಂಡರೀಕದಲ್ಲಿ ಗೂಢವಾಗಿದೆಯೋ; [ಅದು] **ದಿವಾ ಪರಃ**=ದ್ಯುಲೋಕದಿಂದಲೂ ದೂರ/ವಿಲಕ್ಷಣವಾಗಿದೆ; **ಏನಾ ಪೃಥಿವ್ಯಾ**=ಈ ಭೂಮಿಯಿಂದಲೂ **ಪರಃ**=ದೂರವಾಗಿದೆ; **ದೇವೇಭಿಃ ಅಸುರೈಃ**=ದೇವತೆಗಳಿಂದಲೂ, ಅಸುರರಿಂದಲೂ; **ಪರಃ**= ದೂರವಾಗಿದೆ. **ಯತ್ರ**=ಯಾವ ಗರ್ಭದಲ್ಲಿ; **ವಿಶ್ವೇ ದೇವಾಃ**=ಸಮಸ್ತದೇವಾದಿಗಳು; **ಸಮಗಚ್ಛಂತ** =ಸೇರಿಹೋಗಿದ್ದಾರೋ; **ಕಮ್ ಸ್ವಿತ್**= ಅನಿರ್ವಾಚ್ಯವಾದ ಆ; **ಗರ್ಭಮ್**=ಗರ್ಭವನ್ನು; **ಆಪಃ**=ನೀರುಗಳು; **ಪ್ರಥಮಮ್** =ಮೊದಲು; **ದಧ್ರೇ**=ಧರಿಸಿದ್ದವು. ▲ **ಯತ್ರ**=ಯಾವ ಬ್ರಹ್ಮಾಂಡದ ಗರ್ಭದಲ್ಲಿ; **ವಿಶ್ವೇ ದೇವಾಃ**=ದೇವಾದಿಗಳೆಲ್ಲರೂ; **ಸಮಗಚ್ಛಂತ**=ಒಂದಾಗಿದ್ದರೋ; **ತಮ್ ಗರ್ಭಮ್ ಇತ್**=ಆ ಬ್ರಹ್ಮಾಂಡಬೀಜವನ್ನು; **ಆಪಃ**=ನೀರುಗಳು; **ಪ್ರಥಮಮ್**=ಮೊದಲು; **ದಧ್ರೇ**=ಧರಿಸಿದವು. **ಯಸ್ಮಿನ್**=ಯಾವ ಬೀಜರೂಪವಾದ ಬ್ರಹ್ಮಾಂಡದಲ್ಲಿ;

---

ಈ ವಿಶ್ವವನ್ನು ಸೃಷ್ಟಿಸಿದವನನ್ನು ನೀವು ತಿಳಿದಿಲ್ಲ. ನಾನು ದೇವದತ್ತನು, ನಾನೇ ವಿಶ್ವಕರ್ಮನು ಎಂದು ನೀವು ತಿಳಿದಿದ್ದರೆ ಅದು ಸುಳ್ಳು. ಆ ಮಿಥ್ಯಾಜ್ಞಾನವು ಮಂಜಿನಂತೆ ಈಶ್ವರತತ್ತ್ವವನ್ನು ಆವರಿಸಿರುತ್ತದೆ.

**ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ನಿದಂ ವಿಶ್ವಂ ಭುವನಮಧಿಶ್ರಿತಮ್ ॥**

**ವಿಶ್ವಕರ್ಮಾ ಹ್ಯಜನಿಷ್ಟ ದೇವ ಆದಿದ್ಗಂಧರ್ವೋ ಅಭವದ್ದ್ವಿತೀಯಃ ।**

**ತೃತೀಯಃ ಪಿತಾ ಜನಿತೌಷಧೀನಾ[...ಷಧೀನಾಮ್(೮)ಅಪಾಂ]ಮಪಾಂ ಗರ್ಭಂ**

**ವ್ಯದಧಾತ್ಪುರುತ್ರಾ ॥ ಚಕ್ಷುಷಃ ಪಿತಾ ಮನಸಾ ಹಿ ಧೀರೋ**

---

ಅಜಸ್ಯ । ನಾಭೌ । ಅಧೀತಿ । ಏಕಮ್ । ಅರ್ಪಿತಮ್ । ಯಸ್ಮಿನ್ನ್ । ಇದಮ್ । ವಿಶ್ವಮ್ । ಭುವನಮ್ । ಅಧೀತಿ । ಶ್ರಿತಮ್ ॥ ವಿಶ್ವಕರ್ಮೇತಿ ವಿಶ್ವ-ಕರ್ಮಾ । ಹಿ । ಅಜನಿಷ್ಟ । ದೇವಃ । ಆತ್ । ಇತ್ । ಗಂಧರ್ವಃ । ಅಭವತ್ । ದ್ವಿತೀಯಃ ॥ ತೃತೀಯಃ । ಪಿತಾ । ಜನಿತಾ । ಓಷಧೀನಾಮ್ । (೮) । ಅಪಾಮ್ । ಗರ್ಭಮ್ । ವೀತಿ । ಅದಧಾತ್ । ಪುರುತ್ರೇತಿ ಪುರು-ತ್ರಾ ॥ ಚಕ್ಷುಷಃ । ಪಿತಾ । ಮನಸಾ । ಹಿ । ಧೀರಃ ।

---

| ಮಂತ್ರ | ವಿನಿಯೋಗ |
|---|---|
| **ವಿಶ್ವಕರ್ಮಾ...ಪುರುತ್ರಾ ॥** | ವೈಶ್ವಕರ್ಮಣಸೂಕ್ತದ ಎಂಟನೆಯ ಮಂತ್ರ. |
| **ಚಕ್ಷುಷಃ...ಅಪ್ರಥೇತಾಮ್ ॥** | ಎರಡನೆಯ ವೈಶ್ವಕರ್ಮಣಸೂಕ್ತದ ಪ್ರಥಮಮಂತ್ರ. |

---

**ಇದಮ್ ವಿಶ್ವಮ್ ಭುವನಮ್**=ಈ ವಿಶ್ವವೆಲ್ಲವೂ; **ಅಧಿ ಶ್ರಿತಮ್**=ಅಧಿಕವಾಗಿ ಆಶ್ರಿತವಾಗಿದೆಯೋ; **ಅಜಸ್ಯ**= ಜನ್ಮರಹಿತನಾದ ಪರಮೇಶ್ವರನ; **ನಾಭೌ** =ನಾಭಿಸ್ವರೂಪವಾದ ಮಧ್ಯದಲ್ಲಿ; **ಏಕಮ್**=ಒಂದು [ಬೀಜರೂಪವಾಗಿ]; **ಅಧಿ ಅರ್ಪಿತಮ್**=ಇಡಲ್ಪಟ್ಟಿತು. 🔔 **ವಿಶ್ವಕರ್ಮಾ**=ದೇವ-ತಿರ್ಯಗಾದಿಕರ್ತನಾದ; **ದೇವಃ**=ಚತುರ್ಮುಖಬ್ರಹ್ಮದೇವನು; **ಅಜನಿಷ್ಟ ಹಿ**=ಹುಟ್ಟಿದನಷ್ಟೆ. **ಆತ್ ಇತ್**=ಅನಂತರವೇ; **ದ್ವಿತೀಯಃ**=ಎರಡನೆಯವನಾಗಿ; **ಗಂಧರ್ವಃ**=ಗಂಧರ್ವನು; **ಅಭವತ್**=ಉಂಟಾದನು. **ತೃತೀಯಃ**= ಮೂರನೆಯವನಾಗಿ; **ಓಷಧೀನಾಮ್** =ಓಷಧಿ-ಸಸ್ಯವರ್ಗಕ್ಕೆ; **ಪಿತಾ**=ಪಾಲಕನೂ/ಉತ್ಪಾದಕನೂ ಆಗಿ; ಸೋಮದೇವನು; **ಜನಿತಾ**=ಜನಿಸಿದನು. **ಅಪಾಮ್**=[ಹೀಗೆ] [ಪರಮೇಶ್ವರನು] ನೀರಿನ; **ಗರ್ಭಮ್**= ಗರ್ಭರೂಪವಾದ ಬ್ರಹ್ಮಾಂಡವನ್ನು; **ಪುರುತ್ರಾ**=ಬಹುಪ್ರಕಾರವಾಗಿ; **ವಿ ಅದಧಾತ್**=ವ್ಯಕ್ತವಾಗುವಂತೆ ಮಾಡಿದನು. 🔔 **ಚಕ್ಷುಷಃ ಪಿತಾ**=ಚಕ್ಷುರಾದಿ ಪ್ರಾಣಗಳ ಉತ್ಪಾದಕನಾದ; **ಧೀರಃ**=ಧೈರ್ಯವುಳ್ಳ ವಿಶ್ವಕರ್ಮನು; **ಮನಸಾ**=ಸ್ವೇಚ್ಛೆಯಿಂದ;

**ಘೃತಮೇನೇ ಅಜನನ್ನನ್ನಮಾನೇ । ಯದೇದಂತಾ ಅದದೃಗ್ಂಹಂತ ಪೂರ್ವ**

**ಆದಿದ್ದ್ಯಾವಾಪೃಥಿವೀ ಅಪ್ರಥೇತಾಮ್ ॥**

---

ಘೃತಮ್ । ಏನೇ ಇತಿ । ಅಜನತ್ । ನನ್ನಮಾನೇ ಇತಿ ॥ ಯದಾ । ಇತ್ । ಅಂತಾಃ । ಅದದೃಗ್ಂಹಂತ । ಪೂರ್ವೇ । ಆತ್ । ಇತ್ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅಪ್ರಥೇತಾಮ್ ॥

---

**ಘೃತಮ್**=ಘೃತದಂತೆ [ಪ್ರಾಣಿಗಳಿಗೆ ಉಪಭೋಗಸಾಧನವಾದ]; **ಏನೇ**=[ದ್ಯಾವಾಪೃಥಿವೀ] ಈ ದ್ಯುಲೋಕ-ಭೂಲೋಕಗಳನ್ನು; **ನನ್ನಮಾನೇ**= ಪರಸ್ಪರಾನುಕೂಲವಾಗಿ; **ಅಜನತ್ ಹಿ**=ಸೃಷ್ಟಿಸಿದನಷ್ಟೆ. **ಯದಾ ಇತ್**=ಯಾವಾಗ; **ಪೂರ್ವೇ**=ಮೊದಲು ಸೃಷ್ಟಿಸಲ್ಪಟ್ಟ; **ಅಂತಾಃ**=ಚೇಷ್ಟಾಯುಕ್ತವಾದ ಚಕ್ಷುರಾದಿಗಳು; **ಅದದೃಗ್ಂಹಂತ**=ದೃಢವಾದವೋ; **ಆತ್ ಇತ್**=ಅನಂತರವೇ; **ದ್ಯಾವಾಪೃಥಿವೀ**= ದ್ಯುಲೋಕ-ಭೂಲೋಕಗಳು; **ಅಪ್ರಥೇತಾಮ್**=ವಿಸ್ತೀರ್ಣವಾದವು.

---

**ಬ್ರಹ್ಮಜ್ಞಾನದಿಂದ ನಿವೃತ್ತವಾಗುತ್ತದೆ. ಹೀಗೆ ಅನಿರ್ವಾಚ್ಯವಾದ ಅಜ್ಞಾನದಿಂದ ಆವೃತರಾದ ಪ್ರಾಣಿಗಳು ಪ್ರಾಣಗಳನ್ನು ತೃಪ್ತಗೊಳಿಸುವ ಕರ್ಮದಲ್ಲಿ ಪ್ರವೃತ್ತರಾಗಿರುತ್ತಾರೆ. ಸ್ವರ್ಗಪ್ರಾಪ್ತಿಗಾಗಿ ಯಜ್ಞಾದಿಗಳನ್ನೂ ಮಾಡುತ್ತಾರೆ. ಆ ಪರಮೇಶ್ವರನು ಜ್ಞಾನವನ್ನು ಕರುಣಿಸಲಿ.**

**ಅನಿರ್ವಾಚ್ಯನಾದ ಪರಮಾತ್ಮನು ಪ್ರಾಣಿಗಳ ಹೃದಯಪುಂಡರೀಕದಲ್ಲಿ ಇರುತ್ತಾನೆ. ಅವನು ಭೂಲೋಕ-ದ್ಯುಲೋಕಗಳಿಂದ ದೂರ ಅಂದರೆ ವಿಲಕ್ಷಣವಾಗಿದ್ದಾನೆ. ಅವನು ದೇವಾಸುರರಿಂದಲೂ ದೂರನು. ಪ್ರಳಯಕಾಲ ದಲ್ಲಿ ದೇವಾದಿಗಳೆಲ್ಲರೂ ಅವನಲ್ಲಿಯೇ ಲೀನವಾಗಿದ್ದಾರೆ. ಬ್ರಹ್ಮಾಂಡವನ್ನು ಮೊದಲು ನೀರುಗಳು ಧರಿಸಿವೆ. ಈ ತತ್ತ್ವವು ಶಾಸ್ತ್ರಜ್ಞಾನದ ಹೊರತು, ಗುರುಗಳ ಅನುಗ್ರಹದ ಹೊರತು ತಿಳಿಯಲಾರದು. ಜ್ಞಾನ-ಅನುಗ್ರಹಗಳಿಂದ ಅದನ್ನು ತಿಳಿಯಬೇಕು.**

**ಸೃಷ್ಟಿಯ ಪ್ರಕಾರವನ್ನು ಹೀಗೆ ಹೇಳುತ್ತಾರೆ. ಪರಮಾತ್ಮನು ಸೃಷ್ಟಿಸುವಾಗ ನೀರನ್ನು ಮೊದಲು ಸೃಷ್ಟಿಸಿದನು.**

**'ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ।**

**ತದಂಡಮಭವದ್ಧೈಮಂ ಕೋಟಿಸೂರ್ಯಸಮಪ್ರಭಮ್ ॥** [ಮನುಸ್ಮೃತಿ-೧...]

**ಅದರಲ್ಲಿ ಬೀಜರೂಪವಾದ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಅದರಲ್ಲಿ ವಿಶ್ವವೆಲ್ಲವೂ ಸ್ಥಾಪಿತವಾಗಿದೆ. ಅದು ಜನ್ಮರಹಿತನಾದ ಪರಮೇಶ್ವರನ ನಾಭಿರೂಪವಾದ ಮಧ್ಯದಲ್ಲಿ ಇಡಲ್ಪಟ್ಟಿದೆ.**

**ಬ್ರಹ್ಮದೇವ, ಗಂಧರ್ವ, ಸೋಮ-ಹೀಗೆ ಇಲ್ಲಿ ಸೃಷ್ಟಿಯ ಪ್ರಕಾರವು ಉಕ್ತವಾಗಿದೆ. ಪುರಾಣಗಳಲ್ಲಿಯೂ ಬೇರೆಡೆಯಲ್ಲಿಯೂ ಬೇರೆ ರೀತಿಯ ಸೃಷ್ಟಿಯ ಕ್ರಮವು ಉಕ್ತವಾಗಿದೆ.**

**ಏತಸ್ಮಾದಾತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಮುಂತಾಗಿ ಉಪನಿಷತ್ತಿನಲ್ಲಿದೆ. [ತೈ. ಉ. 2.1] ಕಲ್ಪಭೇದದಿಂದ ವ್ಯವಸ್ಥೆಯೆಂದು ತಿಳಿಯಬೇಕು.**

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್ । ಸಂ ಬಾಹುಭ್ಯಾಂ ನಮತಿ ಸಂ ಪತತ್ರೈರ್ದ್ಯಾವಾಪೃಥಿವೀ ಜನಯನ್ದೇವ ಏಕಃ ॥ ಕಿಗ್ಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಿಮಾಸೀತ್ ।

---

ವಿಶ್ವತಶ್ಚಕ್ಷುರಿತಿ ವಿಶ್ವತಃ–ಚಕ್ಷುಃ । ಉತ । ವಿಶ್ವತೋಮುಖ ಇತಿ ವಿಶ್ವತಃ–ಮುಖಃ । ವಿಶ್ವತೋಹಸ್ತ ಇತಿ ವಿಶ್ವತಃ–ಹಸ್ತಃ । ಉತ । ವಿಶ್ವತಸ್ಪಾದಿತಿ ವಿಶ್ವತಃ–ಪಾತ್ ॥ ಸಮಿತಿ । ಬಾಹುಭ್ಯಾಮಿತಿ ಬಾಹು–ಭ್ಯಾಮ್ । ನಮತಿ । ಸಮಿತಿ । ಪತತ್ರೈಃ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಜನಯನ್ನ್ । ದೇವಃ । ಏಕಃ ॥ ಕಿಮ್ । ಸ್ವಿತ್ । ಆಸೀತ್ । ಅಧಿಷ್ಠಾನಮಿತ್ಯಧಿ–ಸ್ಥಾನಮ್ । ಆರಂಭಣಮಿತ್ಯಾ–ರಂಭಣಮ್ । ಕತಮತ್ । ಸ್ವಿತ್ । ಕಿಮ್ । ಆಸೀತ್ ॥

---

| ಮಂತ್ರ | ವಿನಿಯೋಗ |
| --- | --- |
| **ವಿಶ್ವತಶ್ಚಕ್ಷುಃ...ಏಕಃ ॥** | ಎರಡನೆಯ ಸೂಕ್ತದ ಎರಡನೆಯ ಮಂತ್ರ. |
| **ಕಿಗ್ಂಸ್ವಿದಾಸೀತ್...ವಿಶ್ವಚಕ್ಷಾಃ ॥** | ಎರಡನೆಯ ಸೂಕ್ತದ ಮೂರನೆಯ ಮಂತ್ರ. |

---

🔔 **ದ್ಯಾವಾಪೃಥಿವೀ**=ದ್ಯುಲೋಕ–ಪೃಥಿವಿಗಳನ್ನೂ [ಎಲ್ಲವನ್ನೂ] **ಜನಯನ್**=ಸೃಷ್ಟಿಸಿದ; **ಏಕಃ ದೇವಃ**=ಒಬ್ಬ ವಿಶ್ವಕರ್ಮದೇವನು [ಹೀಗೆ ಪ್ರಕಾಶಿಸುತ್ತಾನೆ] **ವಿಶ್ವತಶ್ಚಕ್ಷುಃ**=[ಸರ್ವಪ್ರಾಣಿಸ್ವರೂಪನಾದುದರಿಂದ] ಎಲ್ಲೆಲ್ಲೂ ಕಣ್ಣುಗಳುಳ್ಳವನು; **ಉತ**=ಮತ್ತು; **ವಿಶ್ವತೋಮುಖಃ**=ಮತ್ತು ಎಲ್ಲೆಲ್ಲೂ ಮುಖವುಳ್ಳವನು; **ವಿಶ್ವತೋಹಸ್ತಃ**=ಎಲ್ಲ ಕಡೆಗಳಲ್ಲಿಯೂ ಕೈಗಳುಳ್ಳವನು. **ಉತ**=ಮತ್ತು; **ವಿಶ್ವತಸ್ಪಾತ್**=ಸರ್ವತ್ರ ಪಾದಗಳುಳ್ಳವನು; [ಆತನು] **ಬಾಹುಭ್ಯಾಮ್**=ಧರ್ಮಾಧರ್ಮರೂಪವಾದ ಬಾಹುಗಳಿಂದ; **ಸಮ್ ನಮತಿ**=ಎಲ್ಲವನ್ನೂ ಸ್ವಾಧೀನದಲ್ಲಿ ಇಟ್ಟುಕೊಳ್ಳುತ್ತಾನೆ. **ಪತತ್ರೈಃ**=ಅನಿತ್ಯವಾದ ಪಂಚಭೂತಗಳಿಂದ; **ಸಮ್** ನಮತಿ=(ಜಗತ್ತನ್ನು) ಸ್ವಾಧೀನವಾಗಿ ಇಟ್ಟುಕೊಳ್ಳುತ್ತಾನೆ. 🔔[ಜಗತ್ತನ್ನು ಸೃಷ್ಟಿಸುವಾಗ ವಿಶ್ವಕರ್ಮನಿಗೆ] **ಅಧಿಷ್ಠಾನಮ್**=ನಿವಾಸಸ್ಥಾನವು; **ಕಿಮ್ ಸ್ವಿತ್ ಆಸೀತ್**= ಯಾವುದಾಗಿತ್ತು? **ಆರಂಭಣಮ್**=[ದ್ಯಾವಾಪೃಥಿವಿಗಳ] ಉತ್ಪತ್ತಿಸಾಧನವು; **ಕತಮತ್**=ಯಾವುದು ತಾನೆ; **ಕಿಮ್ ಸ್ವಿತ್ ಆಸೀತ್**=ಏನು ತಾನೇ ಆಗಿತ್ತು? [ನಿಮಿತ್ತಕಾರಣದ್ರವ್ಯವೂ; ಕಿಮ್ ಸ್ವಿತ್ ಆಸೀತ್=ಯಾವುದು ಆಗಿದ್ದಿತು?

---

**ಈ ಮಂತ್ರದೊಡನೆ ಈ ಪ್ರಥಮವಿಶ್ವಕರ್ಮಸೂಕ್ತವು ಮುಕ್ತಾಯವಾಯಿತು. ಮುಂದೆ ಎರಡನೆಯ ವಿಶ್ವಕರ್ಮಸೂಕ್ತವು ಆರಂಭವಾಗುವುದು.**

**ಯದೀ ಭೂಮಿಂ ಜನಯ[ಜನಯನ್ನ್(೯)ವಿಶ್ವಕರ್ಮಾ]ನ್ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ । ಕಿಗ್ಂಸ್ವಿದ್ವನಂ ಕ ಉ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ಪೃಚ್ಛತೇದು ತದ್ಯದಧ್ಯತಿಷ್ಠದ್ಭುವನಾನಿ ಧಾರಯನ್ನ್ ॥**

---

ಯದಿ । ಭೂಮಿಮ್ । ಜನಯನ್ನ್ । (೯) । ವಿಶ್ವಕರ್ಮೇತಿ ವಿಶ್ವ-ಕರ್ಮಾ । ವೀತಿ । ದ್ಯಾಮ್ । ಔರ್ಣೋತ್ । ಮಹಿನಾ । ವಿಶ್ವಚಕ್ಷಾ ಇತಿ ವಿಶ್ವ-ಚಕ್ಷಾಃ ॥ ಕಿಮ್ । ಸ್ವಿತ್ । ವನಮ್ । ಕಃ । ಉ । ಸಃ । ವೃಕ್ಷಃ । ಆಸೀತ್ । ಯತಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ನಿಷ್ಟತಕ್ಷುರಿತಿ ನಿಃ-ತತಕ್ಷುಃ ॥ ಮನೀಷಿಣಃ । ಮನಸಾ । ಪೃಚ್ಛತ । ಇತ್ । ಉ । ತತ್ । ಯತ್ । ಅಧ್ಯತಿಷ್ಠದಿತ್ಯಧಿ-ಅತಿಷ್ಠತ್ । ಭುವನಾನಿ । ಧಾರಯನ್ನ್ ॥

---

| ಮಂತ್ರ | ವಿನಿಯೋಗ |
|---|---|
| **ಕಿಗ್ಂಸ್ವಿದ್ವನಂ...ಧಾರಯನ್ನ್ ॥** | ಎರಡನೆಯ ಸೂಕ್ತದ ನಾಲ್ಕನೆಯ ಮಂತ್ರ. |

---

**ವಿಶ್ವಚಕ್ಷಾಃ**=ವಿಶ್ವದ್ರಷ್ಟನಾದ; **ವಿಶ್ವಕರ್ಮಾ**=ಪರಮೇಶ್ವರನು; **ಯದಿ**=ಯಾವಾಗ; **ಭೂಮಿಮ್**=ಭೂಮಿಯನ್ನು; **ಜನಯನ್**=ಸೃಷ್ಟಿಸಿದನೋ; [ಆಗ] **ಮಹಿನಾ**=ತನ್ನ ಮಹಿಮೆಯಿಂದಲೇ [ಸೃಷ್ಟಿಸಿ] **ದ್ಯಾಮ್**=ದ್ಯಾವಾಪೃಥಿವಿಗಳನ್ನು; **ವಿ ಔರ್ಣೋತ್**=ವಿಶೇಷವಾಗಿ ಆಚ್ಛಾದಿಸಿದನು. ▲ [ಪರಮೇಶ್ವರನು] **ಯತಃ**=[ಯಾವ ಕಾಡಿನಿಂದ ಮರವನ್ನು ತಂದು] **ದ್ಯಾವಾಪೃಥಿವೀ**=ದ್ಯಾವಾಪೃಥಿವಿಗಳನ್ನು; **ನಿಷ್ಟತಕ್ಷುಃ**=[ಕೆತ್ತಿ] ನಿರ್ಮಿಸಿದನೋ; [ಅಂತಹ] **ವನಮ್ ಕಿಮ್ ಸ್ವಿತ್**=ಯಾವ ಕಾಡು; **ಆಸೀತ್**=ಇದ್ದಿತು? **ಕಃ ಉ ಸಃ ವೃಕ್ಷಃ**=ಅಂತಹ ದೊಡ್ಡ ಮರವು ಯಾವುದು; ಆಸೀತ್=ಇದ್ದಿತು? [ಯಾವುದೂ ಸಂಭವಿಸುವುದಿಲ್ಲ] **ಮನೀಷಿಣಃ**=ಎಲೈ! ವಿದ್ವಾಂಸರೇ! **ಭುವನಾನಿ**=ಭುವನಗಳನ್ನು; **ಧಾರಯನ್**=ಸೃಷ್ಟಿಸುವಾಗ; **ಯತ್ ಅಧ್ಯತಿಷ್ಠತ್**=ಯಾವುದನ್ನು ಆಶ್ರಯಿಸಿದ್ದನೋ; **ತತ್**=ಆ; **ಇತ್ ಉ**=ಈ [ಎಲ್ಲವನ್ನೂ;] **ಮನಸಾ**=ಮನಸ್ಸಿನಿಂದ; **ಪೃಚ್ಛತ**=[ಚೆನ್ನಾಗಿ ಆಲೋಚಿಸಿ ಇದೆಲ್ಲವನ್ನೂ] ಪ್ರಶ್ನಿಸಿರಿ.

---

**ಎಲ್ಲವನ್ನೂ ಸೃಷ್ಟಿಸುವುದರಿಂದ ವಿಶ್ವಕರ್ಮನೆನಿಸಿರುವ ಪರಮಾತ್ಮನು ಸ್ವೇಚ್ಛೆಯಿಂದಲೇ ಚಕ್ಷುರಾದಿಗಳನ್ನು ಸೃಷ್ಟಿಸಿದನು. ಬಳಿಕ ಪ್ರಾಣಿಗಳ ಉಪಭೋಗಾರ್ಥವಾಗಿ ಪರಸ್ಪರಾನುಕೂಲವಾಗಿ ದ್ಯಾವಾಪೃಥಿವಿಗಳನ್ನು ಸೃಷ್ಟಿಸಿದನು. ಪ್ರಾಣಾದಿಗಳು ದೃಢವಾದಂತೆ ದ್ಯುಲೋಕ-ಭೂಲೋಕಗಳನ್ನು ವಿಸ್ತರಿಸಿದನು.**

**ಯಾ ತೇ ಧಾಮಾನಿ ಪರಮಾಣಿ ಯಾಽವಮಾ ಯಾ ಮಧ್ಯಮಾ ವಿಶ್ವಕರ್ಮನ್ನುತೇಮಾ। ಶಿಕ್ಷಾ ಸಖಿಭ್ಯೋ ಹವಿಷಿ ಸ್ವಧಾವಸ್ಸ್ವಯಂ ಯಜಸ್ವ ತನುವಂ ಜುಷಾಣಃ॥**

---

ಯಾ। ತೇ। ಧಾಮಾನಿ। ಪರಮಾಣಿ। ಯಾ। ಅವಮಾ। ಯಾ। ಮಧ್ಯಮಾ। ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್। ಉತ। ಇಮಾ॥ ಶಿಕ್ಷ। ಸಖಿಭ್ಯ ಇತಿ ಸಖಿ-ಭ್ಯಃ॥ ಹವಿಷಿ। ಸ್ವಧಾವ ಇತಿ ಸ್ವಧಾ-ವಃ। ಸ್ವಯಮ್। ಯಜಸ್ವ। ತನುವಮ್। ಜುಷಾಣಃ॥

---

| ಮಂತ್ರ | ವಿನಿಯೋಗ |
|---|---|
| **ಯಾ ತೇ...ಜುಷಾಣಃ॥** | ಎರಡನೆಯ ಸೂಕ್ತದ ಐದನೆಯ ಮಂತ್ರ. |

---

🔔 **ವಿಶ್ವಕರ್ಮನ್**=ಪರಮೇಶ್ವರನೇ! **ತೇ**= ನಿನ್ನ; **ಯಾ**=ಯಾವ; **ಪರಮಾಣಿ**=ಉತ್ಕೃಷ್ಟವಾದ; **ಧಾಮಾನಿ**=ಸ್ಥಾನಗಳು [ಇವೆಯೋ] **ಯಾ**=ಯಾವ; **ಅವಮಾ**=ನಿಕೃಷ್ಟವಾದ; [ಸ್ಥಾನಗಳು ಇವೆಯೋ] **ಯಾ**=ಯಾವ; **ಮಧ್ಯಮಾ**=ಮಧ್ಯಮವಾದ [ಸ್ಥಾನಗಳು ಇವೆಯೋ] **ಇಮಾ ಉತ**=ಆ ಎಲ್ಲಾ ಸ್ಥಾನಗಳನ್ನೂ; **ಸಖಿಭ್ಯಃ**=ಮಿತ್ರರಂತೆ ಪ್ರಿಯರಾದವರಿಗೆ; **ಹವಿಷಿ**=ಹವಿಸ್ಸಿನ ನಿಮಿತ್ತವಾಗಿ [ಹವಿಸ್ಸನ್ನು ಕೊಡುವ ನಿಮಿತ್ತವಾಗಿ] **ಶಿಕ್ಷ**=ತಿಳಿಸಿಕೊಡು. **ಸ್ವಧಾವಃ**=ಹವೀರೂಪವಾದ ಅನ್ನವುಳ್ಳ ವಿಶ್ವಕರ್ಮನೇ! **ತನುವಮ್**=[ಯಜಮಾನನ] ಶರೀರವನ್ನು; **ಜುಷಾಣಃ**=ಸೇವಿಸುವವನಾಗಿ; **ಸ್ವಯಮ್**= ತಾನಾಗಿಯೇ: **ಯಜಸ್ವ**=ಯಾಗ ಮಾಡು.

---

ಸರ್ವಪ್ರಾಣಿಸ್ವರೂಪನಾದುದರಿಂದ ಪರಮಾತ್ಮನು ಎಲ್ಲೆಡೆಯಲ್ಲಿಯೂ ಕೈ, ಕಾಲು, ಕಣ್ಣುಳ್ಳವನು. ಅವನು ಧರ್ಮಾಧರ್ಮಗಳೆಂಬ ನಿಮಿತ್ತಕಾರಣದಿಂದ ಎಲ್ಲವನ್ನೂ ಸ್ವಾಧೀನದಲ್ಲಿ ಇಟ್ಟುಕೊಳ್ಳುವನು.

ಧರ್ಮ-ಅಧರ್ಮಗಳು ನಿಮಿತ್ತಕಾರಣಗಳು. ಪಂಚಭೂತಗಳು ಜಗತ್ತಿನ ಉಪಾದಾನಕಾರಣಗಳು. ದೇವನೊಬ್ಬನೇ ಸರ್ವಕರ್ತನು. ಸರ್ವಾತ್ಮಕನು. ಅವನು ನಮಗೆ ಪ್ರಸನ್ನನಾಗಲಿ. ಜಗತ್ತನ್ನು ಸೃಷ್ಟಿಸುವ ಪರಮೇಶ್ವರನಿಗೆ ಯಾವ ಸಾಧನವಿದೆಯೆಂದೂ ಅದು ತೋರುವುದಿಲ್ಲವೆಂದೂ ಆಕ್ಷೇಪಿಸಬಾರದು. ಅವನ ಮಹಿಮೆ ಅಪಾರ.

ಕುಂಬಾರನು ಎಲ್ಲಿಯಾದರೂ ಒಂದೆಡೆ ಕುಳಿತು ಮಣ್ಣನ್ನು ಉಪಯೋಗಿಸಿಕೊಂಡು ಚಕ್ರಾದಿಗಳ ಸಹಾಯದಿಂದ ಮಡಕೆಯನ್ನು ಮಾಡುವಂತೆ ಪರಮೇಶ್ವರನು ಜಗತ್ತನ್ನು ಸೃಷ್ಟಿಸಬೇಕಾಗಿಲ್ಲ. ಅವನು ತನ್ನ ಇಚ್ಛಾಮಾತ್ರದಿಂದಲೇ ದ್ಯಾವಾಪೃಥಿವಿಗಳನ್ನು ನಿರ್ಮಿಸುವ ಸರ್ವಶಕ್ತನಾಗಿದ್ದಾನೆ. ಅವನು ಸರ್ವಜ್ಞನಾದುದರಿಂದ ಇದು ಶಕ್ಯ.

ವಾಚಸ್ಪತಿಂ ವಿಶ್ವಕರ್ಮಾಣಮೂತಯೇ [...ಮೂತಯೇ(೧೦)ಮನೋಯುಜಂ]
ಮನೋಯುಜಂ ವಾಜೇ ಅದ್ಯಾ ಹುವೇಮ । ಸ ನೋ ನೇದಿಷ್ಠಾ ಹವನಾನಿ
ಜೋಷತೇ ವಿಶ್ವಶಂಭೂರವಸೇ ಸಾಧುಕರ್ಮಾ ॥ ವಿಶ್ವಕರ್ಮನ್, ಹವಿಷಾ
ವಾವೃಧಾನಸ್ಸ್ವಯಂ ಯಜಸ್ವ ತನುವಂ ಜುಷಾಣಃ ।

---

ವಾಚಃ । ಪತಿಮ್ । ವಿಶ್ವಕರ್ಮಾಣಮಿತಿ ವಿಶ್ವ-ಕರ್ಮಾಣಮ್ । ಊತಯೇ ।(೧೦)। ಮನೋಯುಜಮಿತಿ ಮನಃ-ಯುಜಮ್ । ವಾಜೇ । ಅದ್ಯ । ಹುವೇಮ ॥ ಸಃ । ನಃ । ನೇದಿಷ್ಠಾ । ಹವನಾನಿ । ಜೋಷತೇ । ವಿಶ್ವಶಂಭೂರಿತಿ ವಿಶ್ವ-ಶಂಭೂಃ । ಅವಸೇ । ಸಾಧುಕರ್ಮೇತಿ ಸಾಧು-ಕರ್ಮಾ ॥ ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್ । ಹವಿಷಾ । ವಾವೃಧಾನಃ । ಸ್ವಯಮ್ । ಯಜಸ್ವ । ತನುವಮ್ । ಜುಷಾಣಃ ॥

---

| ಮಂತ್ರ | ವಿನಿಯೋಗ |
|---|---|
| ವಾಚಸ್ಪತಿಂ...ಸಾಧುಕರ್ಮಾ ॥ | ಎರಡನೆಯ ಸೂಕ್ತದ ಆರನೆಯ ಮಂತ್ರ. |
| ವಿಶ್ವಕರ್ಮನ್...ಅಸ್ತು ॥ | ಎರಡನೆಯ ಸೂಕ್ತದ ಏಳನೆಯ ಮಂತ್ರ. |

---

▲ **ವಾಚಃ ಪತಿಮ್**=ಮಂತ್ರರೂಪವಾದ ವಾಕ್ಕಿನ ಪಾಲಕನಾದ; **ಮನೋಯುಜಮ್**=[ಕರ್ಮಗಳಲ್ಲಿ] ನಮ್ಮ ಮನಸ್ಸನ್ನು ಪ್ರವರ್ತಿಸುವಂತೆ ಮಾಡುವ; **ವಿಶ್ವಕರ್ಮಾಣಮ್**=ಪರಮೇಶ್ವರನನ್ನು; **ಅದ್ಯ**=ಈ ದಿನದಲ್ಲಿ; **ವಾಜೇ** =ಅನ್ನ/ಹವಿರ್ನಿಮಿತ್ತವಾಗಿ; **ಊತಯೇ**=ಭಕ್ಷಣ/ಸ್ವೀಕಾರಕ್ಕಾಗಿ; **ಹುವೇಮ**= ಆಹ್ವಾನಿಸುತ್ತೇವೆ; **ಸಃ**=ಆ; **ವಿಶ್ವಶಂಭೂಃ**=ಸರ್ವಜಗತ್ತಿನಲ್ಲಿಯೂ ಎಲ್ಲರಿಗೂ ಸುಖವನ್ನು ಕೊಡುವವ ನಾದ; **ಸಾಧುಕರ್ಮಾ**=ನಮಗೆ ಒಳ್ಳೆಯದನ್ನು ಮಾಡುವವನಾದ ವಿಶ್ವಕರ್ಮನು; **ಅವಸೇ**=[ನಮ್ಮನ್ನು] ರಕ್ಷಿಸಲು; **ನಃ**=ನಮ್ಮ; **ನೇದಿಷ್ಠಾ**=ಅತ್ಯಂತ ಸಮೀಪವಾಗಿರುವ; **ಹವನಾನಿ**=ಹವಿಸ್ಸುಗಳನ್ನೂ; **ಜೋಷತೇ** =ಸೇವಿಸಲಿ. ▲ **ವಿಶ್ವಕರ್ಮನ್**=ಪರಮೇಶ್ವರನೇ! **ಹವಿಷಾ**=ಹವಿಸ್ಸಿನಿಂದ; **ವಾವೃಧಾನಃ**=ಅತಿಶಯ ವಾಗಿ ವೃದ್ಧಿಹೊಂದುವವನಾಗಿ; **ತನುವಮ್**=ಶರೀರವನ್ನು; **ಜುಷಾಣಃ**=ಸ್ವೀಕರಿಸುವವನಾಗಿ; **ಸ್ವಯಮ್** =ತಾನಾಗಿಯೇ; **ಯಜಸ್ವ**=ಯಾಗ ಮಾಡು.

---

**ಮನೆಯನ್ನು ಕಟ್ಟುವವನಿಗೆ ಬೇಕಾದ ಮರಗಳನ್ನು ಒದಗಿಸುವ ಕಾಡಿನಂತೆ ಸೃಷ್ಟಿಗೆ ಸಾಧನವಾದ ವನವು ಯಾವುದು?**

**ಮುಹ್ಯಂತ್ವನ್ಯೇ ಅಭಿತಸ್ಸಪತ್ನಾ ಇಹಾಸ್ಮಾಕಂ ಮಘವಾ ಸೂರಿರಸ್ತು ॥**

**ವಿಶ್ವಕರ್ಮನ್, ಹವಿಷಾ ವರ್ಧನೇನ ತ್ರಾತಾರಮಿಂದ್ರಮಕೃಣೋರವಧ್ಯಮ್ ।**

**ತಸ್ಮೈ ವಿಶಸ್ಸಮನಮಂತ ಪೂರ್ವೀರಯಮುಗ್ರೋ ವಿಹವ್ಯೋ ಯಥಾಽಸತ್ ॥**

---

ಮುಹ್ಯಂತು । ಅನ್ಯೇ । ಅಭಿತಃ । ಸಪತ್ನಾಃ । ಇಹ । ಅಸ್ಮಾಕಮ್ । ಮಘವೇತಿ ಮಘ-ವಾ । ಸೂರಿಃ । ಅಸ್ತು ॥

ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್ । ಹವಿಷಾ । ವರ್ಧನೇನ । ತ್ರಾತಾರಮ್ । ಇಂದ್ರಮ್ । ಅಕೃಣೋಃ । ಅವಧ್ಯಮ್ ॥

ತಸ್ಮೈ । ವಿಶಃ । ಸಮಿತಿ । ಅನಮಂತ । ಪೂರ್ವೀಃ । ಅಯಮ್ । ಉಗ್ರಃ । ವಿಹವ್ಯ ಇತಿ ವಿ-ಹವ್ಯಃ । ಯಥಾ । ಅಸತ್ ॥

---

| ಮಂತ್ರ | ವಿನಿಯೋಗ |
|---|---|
| **ವಿಶ್ವಕರ್ಮನ್ ಹವಿಷಾ...ಅಸತ್ ॥** | ಎರಡನೆಯ ಸೂಕ್ತದ ಎಂಟನೆಯ ಮಂತ್ರ. |

---

**ಅನ್ಯೇ**=ನಮಗಿಂತ ಬೇರೆಯವರಾದ; **ಅಭಿತಃ**=ಸುತ್ತಮುತ್ತಲೂ ಇರುವವರಾದ; **ಸಪತ್ನಾಃ**=ಶತ್ರುಗಳು; **ಇಹ**=ಈ ಕರ್ಮದಲ್ಲಿ; **ಮುಹ್ಯಂತು**=ಭ್ರಾಂತರಾಗಲಿ. **ಅಸ್ಮಾಕಮ್**=ನಮಗೆ; **ಮಘವಾ**=ಅನ್ನವುಳ್ಳ/ಇಂದ್ರನಂತೆ ಇರುವ; **ಸೂರಿಃ**=ವಿದ್ವಾಂಸನಾದ ಪುತ್ರನು; **ಅಸ್ತು**=ಉತ್ಪನ್ನನಾಗಲಿ. ▲ **ವಿಶ್ವಕರ್ಮನ್**=ವಿಶ್ವಕರ್ತನಾದ ಪರಮೇಶ್ವರನೇ! **ಹವಿಷಾ**=ಹವಿಸ್ಸಿನಿಂದ ಉಂಟಾದ; **ವರ್ಧನೇನ**=ವೃದ್ಧಿಯಿಂದ ಕೂಡಿದವನಾಗಿ [ಈ ಯಜಮಾನನನ್ನು]; **ತ್ರಾತಾರಮ್**=ಬೇರೆಯವರಿಗೆ ರಕ್ಷಕನನ್ನಾಗಿಯೂ; **ಇಂದ್ರಮ್**=ಪರಮೈಶ್ವರ್ಯಯುಕ್ತನನ್ನಾಗಿಯೂ; **ಅವಧ್ಯಮ್**=ಯಾರಿಂದಲೂ ಹಿಂಸಿಸಲು ಅಶಕ್ಯನನ್ನಾಗಿಯೂ; **ಅಕೃಣೋಃ**=ಮಾಡು; **ತಸ್ಮೈ**=ಆ [ಅಂತಹ] ಯಜಮಾನನಿಗೆ; **ಪೂರ್ವೀಃ**=ಹಿಂದಿನ; **ವಿಶಃ**=ಪ್ರಜೆಗಳು [ವೃದ್ಧಿಯನ್ನು ಹೊಂದಿದವರಾಗಿ] **ಸಮ್ ಅನಮಂತ**=ಚೆನ್ನಾಗಿ ಅಧೀನರಾಗಲಿ. **ಅಯಮ್**=ಈ ಯಜಮಾನನು; **ಉಗ್ರಃ**=ತೀಕ್ಷ್ಣಶಕ್ತಿಯುಳ್ಳವನೂ/ಯಾರಿಂದಲೂ ಸೋಲಿಸಲಾಗದವನೂ; **ವಿಹವ್ಯಃ**=ವಿವಿಧವಾದ ಯಾಗಗಳನ್ನು ಅನುಷ್ಠಿಸಲು ಯೋಗ್ಯನೂ; **ಯಥಾ**=ಹೇಗೆ; **ಅಸತ್**=ಆಗುತ್ತಾನೆಯೋ [ಹಾಗೆ ಮಾಡು]

---

ಮರವು ಯಾವುದು? ಹೇ ವಿದ್ವಾಂಸರೇ! ಭುವನಗಳನ್ನು ಸೃಷ್ಟಿಸುವಾಗ ಯಾವುದನ್ನು ಆಶ್ರಯಿಸಿದ್ದನೋ ಅದನ್ನು ಮನಸ್ಸಿನಿಂದ ಚೆನ್ನಾಗಿ ಪರ್ಯಾಲೋಚಿಸಿರಿ. ಆ ಪರಮೇಶ್ವರನು ಸರ್ವಶಕ್ತನಾದುದರಿಂದ ಅವನಿಗೆ ಬೇರೆಯ ಸಾಧನವು ಬೇಕಾಗಿಲ್ಲ.

ತೈತ್ತಿರೀಯಬ್ರಾಹ್ಮಣದಲ್ಲಿ **'ಕಿಂಸ್ವಿದ್ವನಂ ಕ ಉ ಸ ವೃಕ್ಷ ಆಸೀತ್'** ಎಂಬ ಪ್ರಶ್ನೆಯಲ್ಲಿ ಇದೇ ಪ್ರಶ್ನೆಯನ್ನು ಎತ್ತಿ

ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಽಹಾಮರ್ತ್ಯಗ್ಂ ಹವಿಃ ॥ ೧೧-2 ॥

[ಜಜಾನ್ಯೈಸೌಷಧೀನಾಂ ಭೂಮಿಂ ಜನಯನ್ನೂತಯೇ ನಮೋ ನವ ಚ ॥]

---

ಸಮುದ್ರಾಯ । ವಯುನಾಯ । ಸಿಂಧೂನಾಮ್ । ಪತಯೇ । ನಮಃ ॥ ನದೀನಾಮ್ । ಸರ್ವಾಸಾಮ್ । ಪಿತ್ರೇ । ಜುಹುತ । ವಿಶ್ವಕರ್ಮಣ ಇತಿ ವಿಶ್ವ-ಕರ್ಮಣೇ । ವಿಶ್ವಾ । ಅಹಾ । ಅಮರ್ತ್ಯಮ್ । ಹವಿಃ ॥ ೧೧ ॥

---

| ಮಂತ್ರ | ವಿನಿಯೋಗ |
|---|---|
| ಸಮುದ್ರಾಯ...ಹವಿಃ ॥ | ಯಜಮಾನನಿಗೆ ನೀರಿನಿಂದ ತೊಂದರೆಯಾದರೆ ನೀರಿನಲ್ಲಿ ಹೋಮ ಮಾಡಲು. |

---

**ವಯುನಾಯ**=ಮನೋಹರನಾದ; **ಸಿಂಧೂನಾಮ್**=ಹರಿಯುತ್ತಿರುವ ನದಿಗಳಿಗೆ; **ಪತಯೇ**=ಭರ್ತನಾದ; **ಸಮುದ್ರಾಯ**=ಸಮುದ್ರರೂಪನಾದ ಪರಮೇಶ್ವರನಿಗೆ; **ನಮಃ**=ನಮಸ್ಕಾರವು. **ಸರ್ವಾಸಾಮ್**=ಎಲ್ಲ; **ನದೀನಾಮ್**=ನದಿಗಳ; **ಪಿತ್ರೇ**=[ವಿಶ್ವಕರ್ಮರೂಪದಿಂದ]ಉತ್ಪಾದಕನಾದ ಸಮುದ್ರನಿಗೆ; [ನಮಸ್ಕಾರವು]. **ವಿಶ್ವಕರ್ಮಣೇ**=ಅಂತಹ ವಿಶ್ವಕರ್ಮನಿಗೆ; [ಎಲೈ! ಋತ್ವಿಗ್ಯಜಮಾನರೇ!] **ವಿಶ್ವಾ ಅಹಾ**=ನಿರಂತರವಾಗಿ; **ಅಮರ್ತ್ಯಮ್**=ಅನಶ್ವರವಾದ; **ಹವಿಃ**=ಹವಿಸ್ಸನ್ನು; **ಜುಹುತ**=ಸಮರ್ಪಿಸಿರಿ. [ಅವನು ಪ್ರಸನ್ನನಾಗಲಿ.]

---

**'ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್'** ಎಲ್ಲವೂ ಬ್ರಹ್ಮವಸ್ತುವೇ ಆಗಿದ್ದಿತು ಎಂದು ಸ್ಪಷ್ಟವಾದ ಉತ್ತರವನ್ನು ಕೊಡಲಾಗಿದೆ. ಇಲ್ಲಿ ಅದೇ ಉತ್ತರವನ್ನು ನಾವು ಊಹಿಸಿಕೊಳ್ಳಬಹುದು.

ಹೇ! ವಿಶ್ವರೂಪನೇ! ನೀನು ಸರ್ವಾತ್ಮನು. ನಿನ್ನ ಸ್ಥಾನಗಳೆಲ್ಲವನ್ನೂ ನಿನ್ನ ಮಿತ್ರರಂತೆ ಇರುವ ಯಜಮಾನರಿಗೆ ತಿಳಿಸಿಕೊಡು. ನೀನೇ ಯಾಗ ಮಾಡುವವನೂ ಆಗಿ ದೇವತೆಗಳಿಗೆ/ವಿಶ್ವಕರ್ಮನಿಗೆ ಹವಿಸ್ಸನ್ನು ಸಮರ್ಪಿಸು. ನಿನ್ನ ಅನುಗ್ರಹವಿಲ್ಲದೆ ಇದ್ದರೆ ಯಾರು ತಾನೇ ಯಾಗವನ್ನು ಮಾಡಿಯಾರು?

ಮಂತ್ರರೂಪವಾದ ವಾಕ್ಕಿನ ಪಾಲಕನೂ, ನಮ್ಮಗಳ ಮನಃಪ್ರವರ್ತಕನೂ ಆದ ವಿಶ್ವಕರ್ಮನನ್ನು ಹವಿರ್ಭಕ್ಷಣಕ್ಕಾಗಿ ಆಮಂತ್ರಿಸುತ್ತೇವೆ. ಅವನು ನಮ್ಮ ಆಹ್ವಾನಗಳನ್ನು ಅಂಗೀಕರಿಸಿ ಬಂದು, ನಾವು ಸಮರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಲಿ. ಪರಮೇಶ್ವರನು ಸರ್ವಾತ್ಮಕನೆಂದು ಒಟ್ಟು ತಾತ್ಪರ್ಯ.

ಹೇ! ವಿಶ್ವಕರ್ಮನೇ! ನಾವು ನೀಡುವ ಹವಿಸ್ಸಿನಿಂದ ನೀನು ವರ್ಧಿಸಿ, ನೀನೇ ಯಾಗವನ್ನು ಅನುಷ್ಠಿಸು. ನಮ್ಮ ಶತ್ರುಗಳು ಈ ಯಜ್ಞಕರ್ಮದಲ್ಲಿ ಭ್ರಾಂತರಾಗಲಿ. ನಮಗೆ ಅನ್ನದಾತನೂ, ವಿದ್ವಾಂಸನೂ ಆದ ಪುತ್ರನು ಜನಿಸಲಿ.

ಹೇ! ವಿಶ್ವಕರ್ತನಾದ ಪರಮೇಶ್ವರನೇ! ನಾವು ಅರ್ಪಿಸಿದ ಹವಿಸ್ಸಿನಿಂದ ಕೂಡಿದ ನೀನು ಈ ಯಜಮಾನನನ್ನು ಎಲ್ಲರನ್ನೂ ಕಾಪಾಡುವವನನ್ನಾಗಿ ಮಾಡು. ಐಶ್ವರ್ಯಯುಕ್ತನನ್ನಾಗಿ ಮಾಡು.

ಅವನನ್ನು ಸರ್ವಪಾಲಕನನ್ನಾಗಿಸು. ಅವನ ಸಂತತಿಯು ವರ್ಧಿಸಲಿ. ಅವನು ಅನೇಕ ಯಜ್ಞಗಳನ್ನು ಅನುಷ್ಠಿಸುವಂತಾಗಲಿ.

ಈ ಯಜ್ಞಕ್ಕೆ ಸಂಬಂಧಿಸದೇ ಇರುವ ಕಲ್ಪದಂತೆ ಈ ಮಂತ್ರದ ವಿನಿಯೋಗವಿದೆ.
ಯಜಮಾನನಿಗೆ ನೀರಿನಿಂದ ಭೀತಿಯಾದಾಗ ಈ ಮಂತ್ರದಿಂದ ನೀರಿನಲ್ಲಿಯೇ ಹವನ ಮಾಡಬೇಕು.

ಹರಿಯುವ ನದಿಗಳಿಗೆ ಭರ್ತನೂ, ನದಿಗಳ ಉತ್ಪಾದಕನೂ ಆದ ವಿಶ್ವಕರ್ಮರೂಪನಾದ ಸಮುದ್ರನಿಗೆ ನಮಸ್ಕಾರ. ಹೇ! ಋತ್ವಿಜರೇ! ಯಜಮಾನರೇ! ಆ ವಿಶ್ವಕರ್ಮನಿಗೆ ನಿರಂತರವಾಗಿ ಹವಿಸ್ಸನ್ನು ಸಮರ್ಪಿಸಿರಿ.

---

## ವಿನಿಯೋಗಸಂಗ್ರಹ

1-8ಯ ಇಮಾ 9-16ಚಕ್ಷುಷೋ ದ್ವಾಭ್ಯಾಂ ಸೂಕ್ತಾಭ್ಯಾಮಾಹುತಿದ್ವಯಮ್ ।
17ಸಮುದ್ರೇತಿ ಜಲೇ ಹೋಮಃ ಮಂತ್ರಾಃ ಸಪ್ತದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–17

ಐ❀ಐಐ❀ಐ

## ॥ ತೃತೀಯೋऽನುವಾಕಃ ॥

ಉದೇನಮುತ್ತರಾಂ ನಯಾऽಗ್ನೇ ಘೃತೇನಾಹುತ । ರಾಯಸ್ಪೋಷೇಣ
ಸಗ್ಂಸೃಜ ಪ್ರಜಯಾ ಚ ಧನೇನ ಚ ॥

---

ಉದಿತಿ । ಏನಮ್ । ಉತ್ತರಾಮಿತ್ಯುತ್-ತರಾಮ್ । ನಯ । ಅಗ್ನೇ । ಘೃತೇನ । ಆಹುತೇತ್ಯಾ-ಹುತ ॥ ರಾಯಃ । ಪೋಷೇಣ । ಸಮಿತಿ । ಸೃಜ । ಪ್ರಜಯೇತಿ ಪ್ರ-ಜಯಾ । ಚ । ಧನೇನ । ಚ ॥

---

ಎರಡನೆಯ ಅನುವಾಕದಲ್ಲಿ ವೈಶ್ವಕರ್ಮಣಹೋಮವು ಉಕ್ತವಾಗಿದೆ. ಈ ಮೂರನೆಯ ಅನುವಾಕ ದಲ್ಲಿ ಅಗ್ನಿಪ್ರಣಯನವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
|---|---|
| ಉದೇನಮುತ್ತರಾಂ...ಚ ॥ | ಔದುಂಬರೀಸಮಿತ್ತುಗಳ ಅಧಾನವನ್ನು ಮಾಡಲು ಮೊದಲ ಮಂತ್ರ. |

---

▲ **ಘೃತೇನ**=ತುಪ್ಪದಿಂದ; **ಆಹುತ**=ಸುತ್ತಲೂ ಹೋಮ ಮಾಡಲ್ಪಟ್ಟ; **ಅಗ್ನೇ**=ಅಗ್ನಿದೇವನೇ! **ಏನಮ್**= ಈ ಯಜಮಾನನನ್ನು; **ಉತ್ತರಾಮ್**=ಉತ್ಕೃಷ್ಟವಾದ ಐಶ್ವರ್ಯವನ್ನು; **ಉತ್ ನಯ**=ಬೇಗನೆ ಹೊಂದು ವಂತೆ ಮಾಡು. **ರಾಯಃ**=ಧನದ; **ಪೋಷೇಣ**=ಸಮೃದ್ಧಿಯೊಡನೆ; **ಸಮ್ ಸೃಜ**=ಹೊಂದಿಸು; **ಪ್ರಜಯಾ ಚ**=ಪುತ್ರ-ಪೌತ್ರಾದಿ ಪ್ರಜೆಯಿಂದಲೂ; **ಧನೇನ ಚ**=ಗೋ-ಅಶ್ವಾದಿ ಧನಸಮೃದ್ಧಿಯೊಡನೆಯೂ; ಸಗ್ಂಸೃಜ=ಹೊಂದಿಸು [ಸಂಪದ್ಯುಕ್ತನನ್ನಾಗಿ ಮಾಡು]

---

ಹೇ! ಅಗ್ನಿದೇವನೇ! ನೀನು ಸುತ್ತಲೂ ತುಪ್ಪದಿಂದ ಹೋಮ ಮಾಡಲ್ಪಟ್ಟವನಾಗಿರುವೆ. ನೀನು ಈ ಯಜಮಾನನನ್ನು ಉತ್ಕೃಷ್ಟವಾದ ಐಶ್ವರ್ಯವನ್ನೂ, ಪುತ್ರಪೌತ್ರಾದಿಪ್ರಜೆಯನ್ನೂ, ಗವಾಶ್ವಾದಿ ಧನಸಮೃದ್ಧಿ ಯನ್ನೂ ಹೊಂದುವಂತೆ ಮಾಡು.

ಇಂದ್ರೇಮಂ ಪ್ರತರಾಂ ಕೃಧಿ ಸಜಾತಾನಾಮಸದ್ವಶೀ । ಸಮೇನಂ ವರ್ಚಸಾ ಸೃಜ ದೇವೇಭ್ಯೋ ಭಾಗಧಾ ಅಸತ್ ॥ ಯಸ್ಯ ಕುರ್ಮೋ ಹವಿರ್ಗೃಹೇ ತಮಗ್ನೇ ವರ್ಧಯಾ ತ್ವಮ್ । ತಸ್ಮೈ ದೇವಾ ಅಧಿಬ್ರವನ್ನಯಂ ಚ ಬ್ರಹ್ಮಣಸ್ಪತಿಃ ॥

---

ಇಂದ್ರ । ಇಮಮ್ । ಪ್ರತರಾಮಿತಿ ಪ್ರ-ತರಾಮ್ । ಕೃಧಿ । ಸಜಾತಾನಾಮಿತಿ ಸ-ಜಾತಾನಾಮ್ । ಅಸತ್ । ವಶೀ ॥ ಸಮಿತಿ । ಏನಮ್ । ವರ್ಚಸಾ । ಸೃಜ । ದೇವೇಭ್ಯಃ । ಭಾಗಧಾ ಇತಿ ಭಾಗ-ಧಾಃ । ಅಸತ್ ॥ ಯಸ್ಯ । ಕುರ್ಮಃ । ಹವಿಃ । ಗೃಹೇ । ತಮ್ । ಅಗ್ನೇ । ವರ್ಧಯ । ತ್ವಮ್ ॥ ತಸ್ಮೈ । ದೇವಾಃ । ಅಧೀತಿ । ಬ್ರವನ್ । ಅಯಮ್ । ಚ । ಬ್ರಹ್ಮಣಃ । ಪತಿಃ ॥

---

| ಮಂತ್ರ | ವಿನಿಯೋಗ |
|---|---|
| **ಇಂದ್ರೇಮಂ...ಅಸತ್ ॥** | ಸಮಿದಾಧಾನದ ಎರಡನೆಯ ಮಂತ್ರ. |
| **ಯಸ್ಯ ಕುರ್ಮೋ...ಪತಿಃ ॥** | ಸಮಿದಾಧಾನದ ಮೂರನೆಯ ಮಂತ್ರ. |

---

🔔 **ಇಂದ್ರ**=ಪರಮೈಶ್ವರ್ಯಯುಕ್ತನಾದ ಅಗ್ನಿದೇವನೇ! **ಇಮಮ್**=ಈ ಯಜಮಾನನನ್ನು; **ಪ್ರತರಾಮ್**=ಅತಿಶಯವಾಗಿ ಶ್ರೇಷ್ಠನನ್ನಾಗಿ; **ಕೃಧಿ**=ಮಾಡು; **ಸಜಾತಾನಾಮ್**=ಜೊತೆಯಲ್ಲಿ ಹುಟ್ಟಿದ ಜ್ಞಾತಿಗಳಲ್ಲಿ; **ವಶೀ**=ಅವರನ್ನು ವಶದಲ್ಲಿ ಇಟ್ಟಿಕೊಳ್ಳುವವನಾಗಿ; **ಅಸತ್**=ಆಗಲಿ; **ಏನಮ್**=ಈ ಯಜಮಾನನನ್ನು; **ವರ್ಚಸಾ**=ಬಲದಿಂದ; **ಸಮ್ ಸೃಜ**=ಕೂಡಿದವನನ್ನಾಗಿ ಮಾಡು; **ದೇವೇಭ್ಯಃ**=ದೇವತೆಗಳಿಗೆ; **ಭಾಗಧಾಃ**=ಹವಿರ್ಭಾಗವನ್ನು ಕೊಡುವವನಾಗುವಂತೆ; **ಅಸತ್**=ಆಗಲಿ. [ನೀನು ಆ ರೀತಿ ಅನುಗ್ರಹಿಸು] 🔔 **ಅಗ್ನೇ**=ಹೇ! ಅಗ್ನಿದೇವನೇ! [ಋತ್ವಿಜರಾದ ನಾವು] **ಯಸ್ಯ**=ಯಾವ ಯಜಮಾನನ; **ಗೃಹೇ**= ಮನೆಯಲ್ಲಿ; **ಹವಿಃ**=[ದೇವತೆಗಳಿಗೆ] ಹವಿಸ್ಸನ್ನು; **ಕುರ್ಮಃ** =ಅರ್ಪಿಸುತ್ತೇವೆಯೋ; **ತ್ವಮ್**=ನೀನು; **ತಮ್**=ಅವನನ್ನು; **ವರ್ಧಯ**=ವೃದ್ಧಿಗೊಳಿಸು. **ತಸ್ಮೈ**=ಆ ಯಜಮಾನನಿಗೆ; **ದೇವಾಃ**=ದೇವತೆಗಳು; **ಅಧಿ ಬ್ರವನ್**=[ಈ ಯಜಮಾನನು] ಅಧಿಕನೆಂದು ಹೊಗಳಲಿ; **ಅಯಮ್ ಚ**=ಈ ಯಜಮಾನನೂ; **ಬ್ರಹ್ಮಣಃ ಪತಿಃ**=ವೈದಿಕಕರ್ಮಗಳಿಗೆ ಪಾಲಕನಾಗಲಿ. [ಆ ರೀತಿ ಅನುಗ್ರಹಿಸು]

---

**ಈ ಮಂತ್ರದಲ್ಲಿರುವ ಇಂದ್ರ ಎಂಬ ಶಬ್ದಕ್ಕೆ ಪರಮೈಶ್ವರ್ಯಯುಕ್ತನಾದ ಅಗ್ನಿಯೆಂದು ಅರ್ಥ.**
**ಹೇ! ಅಗ್ನಿದೇವನೇ! ಈ ಯಜಮಾನನು ಶ್ರೇಷ್ಠನಾಗಲಿ. ಜ್ಞಾತಿಗಳನ್ನು ನಿಯಮದಲ್ಲಿ ಇಡುವಂತಾಗಲಿ.**

ಉದು ತ್ವಾ ವಿಶ್ವೇ ದೇವಾ [ದೇವಾಃ(೧೨)] ಅಗ್ನೇ ಭರಂತು ಚಿತ್ತಿಭಿಃ । ಸ ನೋ ಭವ ಶಿವತಮಃ ಸುಪ್ರತೀಕೋ ವಿಭಾವಸುಃ ॥ ಪಂಚ ದಿಶೋ ದೈವೀರ್ಯಜ್ಞಮವಂತು ದೇವೀರಪಾಮತಿಂ ದುರ್ಮತಿಂ ಬಾಧಮಾನಾಃ । ರಾಯಸ್ಪೋಷೇ ಯಜ್ಞಪತಿಮಾಭಜಂತೀಃ ॥

---

ಉದಿತಿ । ಉ । ತ್ವಾ । ವಿಶ್ವೇ । ದೇವಾಃ ।(೧೨)। ಅಗ್ನೇ । ಭರಂತು । ಚಿತ್ತಿಭಿರಿತಿ ಚಿತ್ತಿ-ಭಿಃ ॥ ಸಃ । ನಃ । ಭವ । ಶಿವತಮ ಇತಿ ಶಿವ-ತಮಃ । ಸುಪ್ರತೀಕ ಇತಿ ಸು-ಪ್ರತೀಕಃ । ವಿಭಾವಸುರಿತಿ ವಿಭಾ-ವಸುಃ ॥ ಪಂಚ । ದಿಶಃ । ದೈವೀಃ । ಯಜ್ಞಮ್ । ಅವಂತು । ದೇವೀಃ । ಅಪೇತಿ । ಅಮತಿಮ್ । ದುರ್ಮತಿಮಿತಿ ದುಃ-ಮತಿಮ್ । ಬಾಧಮಾನಾಃ ॥ ರಾಯಃ । ಪೋಷೇ । ಯಜ್ಞಪತಿಮಿತಿ ಯಜ್ಞ-ಪತಿಮ್ । ಆಭಜಂತೀರಿತ್ಯಾ-ಭಜಂತೀಃ ॥

---

| ಮಂತ್ರ | ವಿನಿಯೋಗ |
|---|---|
| **ಉದು ತ್ವಾ...ವಿಭಾವಸುಃ ॥** | ಪ್ರಣಯನಕ್ಕಾಗಿ ಅಗ್ನಿಯನ್ನು ಎತ್ತಿಕೊಳ್ಳಲು. |
| **ಪಂಚ ದಿಶೋ...ಆಭಜಂತೀಃ ॥** | ಆಗ್ನೀಧ್ರದಿಂದ ಅಗ್ನಿಯನ್ನು ಒಯ್ಯಲು ಪ್ರಥಮಮಂತ್ರ. |

---

▲ **ಅಗ್ನೇ**=ಹೇ! ಅಗ್ನಿದೇವನೇ! **ವಿಶ್ವೇ ದೇವಾಃ**=ಪ್ರಾಣರೂಪರಾದ ಸರ್ವದೇವತೆಗಳೂ; **ಚಿತ್ತಿಭಿಃ**= ಮೇಲೆತ್ತುವುದರಲ್ಲಿ ಕುಶಲವಾದ ಇಂದ್ರಿಯವೃತ್ತಿಗಳಿಂದ; **ತ್ವಾ**=ನಿನ್ನನ್ನು; **ಉತ್ ಉ ಭರಂತು**=ಮೇಲೆತ್ತಿ ಹಿಡಿಯಲಿ. **ಸಃ**= ಅಂತಹ [ನೀನು] **ನಃ**=ನಮಗೆ; **ಶಿವತಮಃ**=ಅತ್ಯಂತ ಶಾಂತನೂ; **ಸುಪ್ರತೀಕಃ**= ಸುಮುಖನೂ; **ವಿಭಾವಸುಃ**=ಪ್ರಭಾವಶಾಲಿಯೂ/ಪ್ರಭಾವಿಯನ್ನಾಗಿ ಮಾಡುವವನೂ/ಚೆನ್ನಾಗಿ ವಾಸಗೊಳಿಸುವವನೂ; **ಭವ**=ಆಗು. ▲ **ದೈವೀಃ** =ಇಂದ್ರಾದಿದೇವತೆಗಳಿಗೆ ಸಂಬಂಧಿಸಿದ; **ಪಂಚ ದಿಶಃ**=ಪೂರ್ವಾದಿ ಐದು ದಿಕ್ಕುಗಳು; **ದೇವೀಃ**=ತಾವೂ ದೇವತಾರೂಪರಾಗಿದ್ದು; **ಅಮತಿಮ್**=[ನಮ್ಮ] ಬುದ್ಧಿಮಾಂದ್ಯವನ್ನೂ; **ದುರ್ಮತಿಮ್**=ದುಷ್ಟಬುದ್ಧಿಯನ್ನೂ; **ಅಪ ಬಾಧಮಾನಾಃ**=ಹೋಗಲಾಡಿಸುವುವುಗಳಾಗಿ; **ಯಜ್ಞಮ್**=[ನಮ್ಮ] ಯಜ್ಞವನ್ನು; **ಅವಂತು**=ರಕ್ಷಿಸಲಿ. **ರಾಯಃ ಪೋಷೇ**=ಧನಸಂಪತ್ತಿನಲ್ಲಿ; **ಯಜ್ಞಪತಿಮ್**=ಯಜಮಾನನನ್ನು; **ಆಭಜಂತೀಃ**=ಸುತ್ತಲೂ ಸೇವಿಸುವವರಾಗಿ; ಯಜ್ಞಮ್ ಅವಂತು=ನಮ್ಮ ಯಜ್ಞವನ್ನು ರಕ್ಷಿಸಲಿ.

---

ಬಲಿಷ್ಠನಾಗಿರಲಿ. ದೇವತೆಗಳಿಗೆ ಹವಿಸ್ಸನ್ನು ನೀಡುವವನಾಗಲಿ. ಹಾಗೆ ನೀನು ಅನುಗ್ರಹಿಸು.

**ರಾಯಸ್ಪೋಷೇ ಅಧಿ ಯಜ್ಞೋ ಅಸ್ಥಾತ್ಸಮಿದ್ಧೇ ಅಗ್ನಾವಧಿ ಮಾಮಹಾನಃ ।**

**ಉಕ್ಥಪತ್ರ ಈಡ್ಯೋ ಗೃಭೀತಸ್ತಪ್ತಂ ಘರ್ಮಂ ಪರಿಗೃಹ್ಯಾಯಜಂತ ॥**

**ಊರ್ಜಾ ಯದ್ಯಜ್ಞಮಶಮಂತ ದೇವಾ ದೈವ್ಯಾಯ ಧರ್ತ್ರೇ ಜೋಷ್ಟ್ರೇ ।**

---

ರಾಯಃ । ಪೋಷೇ । ಅಧೀತಿ । ಯಜ್ಞಃ । ಅಸ್ಥಾತ್ । ಸಮಿದ್ಧ ಇತಿ ಸಮ್–ಇದ್ಧೇ । ಅಗ್ನೌ । ಅಧೀತಿ । ಮಾಮಹಾನಃ ॥

ಉಕ್ಥಪತ್ರ ಇತ್ಯುಕ್ಥ–ಪತ್ರಃ । ಈಡ್ಯಃ । ಗೃಭೀತಃ । ತಪ್ತಮ್ । ಘರ್ಮಮ್ । ಪರಿಗೃಹ್ಯೇತಿ ಪರಿ–ಗೃಹ್ಯ । ಅಯಜಂತ ॥

ಊರ್ಜಾ । ಯತ್ । ಯಜ್ಞಮ್ । ಅಶಮಂತ । ದೇವಾಃ । ದೈವ್ಯಾಯ । ಧರ್ತ್ರೇ । ಜೋಷ್ಟ್ರೇ ॥

---

| ಮಂತ್ರ | ವಿನಿಯೋಗ |
|---|---|
| **ರಾಯಸ್ಪೋಷೇ...ಅಯಜಂತ ॥** | ಅಗ್ನಿಹರಣದ ಎರಡನೆಯ ಮಂತ್ರ. |
| **ಊರ್ಜಾ ಯತ್...ಅಯನ್ನ್ ॥** | ಅಗ್ನಿಹರಣದ ಮೂರನೆಯ ಮಂತ್ರ. |

---

▲ **ಸಮಿದ್ಧೇ**=ಪ್ರಜ್ವಲಿಸುತ್ತಿರುವ; **ಅಗ್ನೌ**=ಅಗ್ನಿಯಲ್ಲಿ; **ಅಧಿ**=ಅಧಿಕವಾಗಿ; **ಮಾಮಹಾನಃ**=ಮತ್ತೆ ಮತ್ತೆ ಪೂಜಿಸಲ್ಪಡುವ; **ಉಕ್ಥಪತ್ರಃ**=ಶಸ್ತ್ರಗಳೇ[ಋಙ್ಮಂತ್ರಸ್ತೋತ್ರಗಳೇ] ವಾಹನವಾಗಿರುವ; **ಈಡ್ಯಃ**=ಸಾಮ ಸ್ತೋತ್ರಗಳಿಂದ ಸ್ತುತಿಸಲ್ಪಡುವ; **ಗೃಭೀತಃ**=ಋತ್ವಿಜರಿಂದಲೂ, ಯಜಮಾನರಿಂದಲೂ ಪರಿಗೃಹೀತ ವಾಗಿರುವ; **ಯಜ್ಞಃ**= ಯಜ್ಞವು; **ರಾಯಃ ಪೋಷೇ**=ಧನಸಮೃದ್ಧಿಯಲ್ಲಿ; **ಅಧಿ ಅಸ್ಥಾತ್**=ಅಧಿಕವಾಗಿ ಇರುತ್ತದೆ. [ಆ ಋತ್ವಿಗ್ಯಜಮಾನರು] **ತಪ್ತಮ್**=ಉರಿಯುವ; **ಘರ್ಮಮ್**=ಅಗ್ನಿಯನ್ನು; **ಪರಿಗೃಹ್ಯ**= ಯಾವಾಗಲೂ ಆಶ್ರಯಿಸಿ; **ಅಯಜಂತ**= ಆರಾಧಿಸುತ್ತಾರೆ. ▲ **ದೇವಾಃ**=ವ್ಯವಹರಿಸುವ ಋತ್ವಿಗ್ಯಜಮಾನರು; **ಯತ್**=ಯಾವಾಗ; **ಊರ್ಜಾ**=ಹವಿಃಸ್ವರೂಪವಾದ ಅನ್ನದಿಂದ; **ದೈವ್ಯಾಯ**=ದೇವತೆಗಳಿಗೆ ಹಿತನಾದ; **ಧರ್ತ್ರೇ**=ಯಾಗಗಳಿಂದ ಜಗತ್ತನ್ನು ಧರಿಸುವ; **ಜೋಷ್ಟ್ರೇ**=[ನಾವು ಕೊಡುವ ಹವಿಸ್ಸನ್ನು] ಸ್ವೀಕರಿಸುವ; [ಅಗ್ನಿಗಾಗಿ] **ಯಜ್ಞಮ್**=ಯಜ್ಞವನ್ನು; **ಅಶಮಂತ**= ತುಷ್ಟಿಹೇತುವನ್ನಾಗಿ ಮಾಡಿದರೋ; [ಆಗ ಈ ಅಗ್ನಿಯು]

---

**ಹೇ! ಅಗ್ನಿದೇವನೇ! ಯಾವ ಯಜಮಾನನ ಮನೆಯಲ್ಲಿ ಋತ್ವಿಜರಾದ ನಾವು ಹವಿಸ್ಸನ್ನು ಸಮರ್ಪಿಸುವೆವೋ, ಆ ಯಜಮಾನನನ್ನು ದೇವತೆಗಳು ಅಧಿಕನೆಂದು ಪ್ರಶಂಸಿಸುವಂತೆಯೂ, ಅವನು ವೈದಿಕಕರ್ಮಗಳ ಪಾಲಕನಾಗುವಂತೆಯೂ ಅನುಗ್ರಹಿಸು.**

**ಶ್ರುತಿಯಲ್ಲಿ 'ಪ್ರಾಣಾ ವೈ ವಿಶ್ವೇದೇವಾಃ' ಎಂದು ಹೇಳಿದೆ. ಅದನ್ನು ಅನುಸರಿಸಿ ಈ ಮಂತ್ರಾರ್ಥವನ್ನು ವಿವರಿಸಲಾಗಿದೆ.**

ದೇವಶ್ರೀಶ್ಶ್ರೀಮಣಾಃ ಶತಪಯಾಃ [(೧೩)ಪರಿಗೃಹ್ಯ] ಪರಿಗೃಹ್ಯ ದೇವಾ ಯಜ್ಞಮಾಯನ್ ॥ ಸೂರ್ಯರಶ್ಮಿರ್ ಹರಿಕೇಶಃ ಪುರಸ್ತಾತ್ಸವಿತಾ ಜ್ಯೋತಿರುದಯಾಗ್‌ಂ ಅಜಸ್ರಮ್ । ತಸ್ಯ ಪೂಷಾ ಪ್ರಸವಂ ಯಾತಿ ದೇವಃ ಸಂಪಶ್ಯನ್ವಿಶ್ವಾ ಭುವನಾನಿ ಗೋಪಾಃ ॥

---

ದೇವಶ್ರೀರಿತಿ ದೇವ-ಶ್ರೀಃ । ಶ್ರೀಮಣಾ ಇತಿ ಶ್ರೀ-ಮನಾಃ । ಶತಪಯಾ ಇತಿ ಶತ-ಪಯಾಃ ।(೧೩)। ಪರಿಗೃಹ್ಯೇತಿ ಪರಿ-ಗೃಹ್ಯ । ದೇವಾಃ । ಯಜ್ಞಮ್ । ಆಯನ್ ॥ ಸೂರ್ಯರಶ್ಮಿರಿತಿ ಸೂರ್ಯ-ರಶ್ಮಿಃ । ಹರಿಕೇಶ ಇತಿ ಹರಿ-ಕೇಶಃ । ಪುರಸ್ತಾತ್ । ಸವಿತಾ । ಜ್ಯೋತಿಃ । ಉದಿತಿ । ಅಯಾನ್ । ಅಜಸ್ರಮ್ ॥ ತಸ್ಯ । ಪೂಷಾ । ಪ್ರಸವಮಿತಿ ಪ್ರ-ಸವಮ್ । ಯಾತಿ । ದೇವಃ । ಸಂಪಶ್ಯನ್ನಿತಿ ಸಮ್-ಪಶ್ಯನ್ । ವಿಶ್ವಾ । ಭುವನಾನಿ । ಗೋಪಾ ಇತಿ ಗೋ-ಪಾಃ ॥

---

| ಮಂತ್ರ | ವಿನಿಯೋಗ |
|---|---|
| **ಸೂರ್ಯರಶ್ಮಿಃ...ಗೋಪಾಃ ॥** | ಅಗ್ನಿಹರಣದ ನಾಲ್ಕನೆಯ ಮಂತ್ರ. |

---

**ದೇವಶ್ರೀಃ**=ಹವಿಸ್ಸನ್ನು ಒಯ್ಯುವುದರಿಂದ/ನೀಡುವುದರಿಂದ ದೇವತೆಗಳನ್ನು ಆಶ್ರಯಿಸುವವನೂ; **ಶ್ರೀಮಣಾಃ**=ಯಜಮಾನನಲ್ಲಿ ಅನುಗ್ರಹದಿಂದ ಕೂಡಿದ ಮನಸ್ಸುಳ್ಳವನೂ; **ಶತಪಯಾಃ**=ಪಯಸ್ಸೇ ಮುಂತಾದ ನೂರಾರು ಹವಿಸ್ಸುಗಳುಳ್ಳವನೂ [ಆಗುತ್ತಾನೆ]; **ದೇವಾಃ**=ಋತ್ವಿಗ್ಯಜಮಾನರು; **ಪರಿಗೃಹ್ಯ**=ಇಂತಹ ಅಗ್ನಿಯನ್ನು ಆಶ್ರಯಿಸಿ; **ಯಜ್ಞಮ್**=ಯಜ್ಞವನ್ನು; **ಆಯನ್**=ಅನುಷ್ಠಿಸುತ್ತಾರೆ. ▲ **ಹರಿಕೇಶಃ**=ಚಿನ್ನದ ಬಣ್ಣದ ಕೇಶಸ್ಥಾನೀಯವಾದ ಶಿಖೆಗಳುಳ್ಳ; **ಸೂರ್ಯರಶ್ಮಿಃ**=[ಅಗ್ನಿಯು] ಸೂರ್ಯರಶ್ಮಿಯಾಗಿ; **ಸವಿತಾ**=[ಎಲ್ಲಾ ಪ್ರಾಣಿಗಳಿಗೂ ಅವುಗಳ ವ್ಯವಹಾರದಲ್ಲಿ] ಪ್ರೇರಕನಾಗಿ; **ಜ್ಯೋತಿಃ**=ಜ್ಯೋತಿರ್ಮಂಡಲರೂಪನಾಗಿ; **ಪುರಸ್ತಾತ್**=ಪೂರ್ವದಿಕ್ಕಿನಲ್ಲಿ; **ಅಜಸ್ರಮ್**=ಪ್ರತಿದಿನವೂ; **ಉತ್ ಅಯಾನ್**=ಉದಯಿಸುತ್ತಾನೆ. **ಗೋಪಾಃ**=ರಕ್ಷಕನಾದ; **ದೇವಃ**=ಪ್ರಕಾಶಮಾನನಾದ; **ಪೂಷಾ**=ಪೋಷಕನಾದ ಆ ಸೂರ್ಯದೇವನು; **ವಿಶ್ವಾ**=ಎಲ್ಲ; **ಭುವನಾನಿ**=ಲೋಕಗಳನ್ನೂ; **ಸಂಪಶ್ಯನ್**=ನೋಡುತ್ತಾ; **ತಸ್ಯ**=ಆ ಲೋಕಗಳ; **ಪ್ರಸವಮ್**=ಪ್ರೇರಕತ್ವವನ್ನು; **ಯಾತಿ**=ಹೊಂದುತ್ತಾನೆ.

---

**ಹೇ! ಅಗ್ನಿದೇವನೇ! ಪ್ರಾಣರೂಪರಾದ ಸರ್ವದೇವತೆಗಳೂ ಇಂದ್ರಿಯವೃತ್ತಿಗಳಿಂದ ನಿನ್ನನ್ನು ಮೇಲೆತ್ತಲಿ. ನೀನು ನಮಗೆ ಶಾಂತನೂ, ಸುಮುಖನೂ ಆಗಿ ನಮ್ಮನ್ನು ಪ್ರಭಾವಿಗಳನ್ನಾಗಿ ಮಾಡು.**

**ದೇವಾ ದೇವೇಭ್ಯೋ ಅಧ್ವರ್ಯಂತೋ ಅಸ್ಥುರ್ವೀತಗ್ಂ ಶಮಿತ್ರೇ ಶಮಿತಾ ಯಜಧ್ಯೈ । ತುರೀಯೋ ಯಜ್ಞೋ ಯತ್ರ ಹವ್ಯಮೇತಿ ತತಃ ಪಾವಕಾ ಆಶಿಷೋ ನೋ ಜುಷಂತಾಮ್ ॥**

---

ದೇವಾಃ । ದೇವೇಭ್ಯಃ । ಅಧ್ವರ್ಯಂತಃ । ಅಸ್ಥುಃ । ವೀತಮ್ । ಶಮಿತ್ರೇ । ಶಮಿತಾ । ಯಜಧ್ಯೈ ॥ ತುರೀಯಃ । ಯಜ್ಞಃ । ಯತ್ರ । ಹವ್ಯಮ್ । ಏತಿ । ತತಃ । ಪಾವಕಾಃ । ಆಶಿಷ ಇತ್ಯಾ-ಶಿಷಃ । ನಃ । ಜುಷಂತಾಮ್ ॥

---

| ಮಂತ್ರ | ವಿನಿಯೋಗ |
|---|---|
| **ದೇವಾ...ಜುಷಂತಾಮ್ ॥** | ಅಗ್ನಿಹರಣದ ಐದನೆಯ ಮಂತ್ರ. |

---

▲ **ದೇವಾಃ**=ಋತ್ವಿಗ್ಯಜಮಾನರು; **ದೇವೇಭ್ಯಃ**=ಯಾಗದೇವತೆಗಳಿಗಾಗಿ; **ಅಧ್ವರ್ಯಂತಃ**=ಯಾಗ ಮಾಡುವ ಇಚ್ಛೆಯುಳ್ಳವರಾಗಿ; **ಅಸ್ಥುಃ**=ಪಶುವಿನ ಉಪಾಕರಣವನ್ನು ಮಾಡುತ್ತಾರೆ. **ಶಮಿತ್ರೇ ವೀತಮ್**=ಶಾಮಿತ್ರದೇಶಕ್ಕೆ ಒಯ್ದದ್ದು [ಪಶುರೂಪ ಹವಿಸ್ಸಾಗುತ್ತದೆ]; **ಶಮಿತಾ**=[ಬಳಿಕ] ಶಮಿತನು; **ಯಜಧ್ಯೈ**= ಯಾಗಕ್ಕಾಗಿ ಹವಿಸ್ಸನ್ನು ಸಂಸ್ಕರಿಸುತ್ತಾನೆ. **ಯತ್ರ**=ಯಾವ ಭಾಗದಲ್ಲಿ; **ಹವ್ಯಮ್**=[ದೇವತೆಯು] ಹವಿಸ್ಸನ್ನು; **ಏತಿ**=ಸ್ವೀಕರಿಸುತ್ತದೆಯೋ; [ಅದು] **ತುರೀಯಃ ಯಜ್ಞಃ**=ಯಜ್ಞದ ನಾಲ್ಕನೆಯ ಭಾಗವಾಗಿದೆ. **ತತಃ**= ಹೀಗೆ ಭಾಗಚತುಷ್ಟಯೋಪೇತವಾದ ಯಜ್ಞದಿಂದ; **ಪಾವಕಾಃ**=[ತೃಪ್ತರಾದ] ಆಹವನೀಯವೇ ಮೊದಲಾದ ಅಗ್ನಿಗಳು; **ನಃ**=ನಮ್ಮ; **ಆಶಿಷಃ**=ಅಪೇಕ್ಷಿತವಾದ ಫಲಗಳನ್ನು; **ಜುಷಂತಾಮ್**=ಸಂಪಾದಿಸಿ ಕೊಡಲಿ.

---

ಈ ಮಂತ್ರದಲ್ಲಿ ದಿಗ್ದೇವತೆಗಳ ಪ್ರಾರ್ಥನೆಯು ಇದೆ. ಇಂದ್ರ, ಅಗ್ನಿ, ಯಮ, ನಿರ್‌ಋತಿ, ವರುಣ, ವಾಯು, ಕುಬೇರ, ಈಶಾನ-ಈ ಎಂಟು ದೇವತೆಗಳಿಗೆ ಸಂಬಂಧಿಸಿದ ಎಂಟು ದಿಕ್ಕುಗಳೂ ತಾವೂ ದೇವತಾರೂಪವಾಗಿ ಇವೆ. ಅವು ನಮ್ಮ ಬುದ್ಧಿಯನ್ನು ಶುದ್ಧಿಗೊಳಿಸಲಿ. ಅವು ನಮ್ಮನ್ನು ಕಾಪಾಡಲಿ. ಯಜಮಾನನನ್ನು ರಕ್ಷಿಸಲಿ. ಯಜಮಾನ ನಿಗೆ ಧನಸಂಪತ್ತಿಯನ್ನು ಒದಗಿಸಲಿ.

ಸ್ತೋತ್ರ-ಶಸ್ತ್ರಗಳು ಯಜ್ಞದ ಸಾಧನಗಳು. ಋತ್ವಿಜರೂ ಮತ್ತು ಯಜಮಾನರೂ ಈ ಸಾಧನಗಳಿಂದ ಕೂಡಿದ ಯಜ್ಞಗಳನ್ನು ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಮಾಡುತ್ತಾರೆ. ಅಂತಹ ಅಗ್ನಿಯೂ, ಅಗ್ನಿಯಲ್ಲಿ ಮಾಡಿದ ಯಜ್ಞವೂ ನಮಗೆ ಧನಪ್ರದವಾಗಲಿ.

ಈ ಮಂತ್ರದಲ್ಲಿ ನಿರುಕ್ತವನ್ನೂ, ಅವಯವಾರ್ಥಗಳನ್ನೂ ಅನ್ವಯ ಮಾಡಿ ಮಂತ್ರಾರ್ಥವನ್ನು ವಿವರಿಸಿರುತ್ತಾರೆ. ಋತ್ವಿಜರು, ಯಜಮಾನರು ಅಗ್ನಿಯನ್ನು ಆಶ್ರಯಿಸಿ, ಯಜ್ಞವನ್ನು ಅನುಷ್ಠಿಸುತ್ತಾರೆ. ಅಂತಹ ಅಗ್ನಿಯು ನಮಗೆ ಪ್ರಸನ್ನನಾಗಲಿ. ಶಬ್ದಾರ್ಥಗಳು ಹೀಗಿವೆ: **ದೇವಾಃ**=ದೀವ್ಯಂತಿ=ವ್ಯವಹರಂತಿ ಇತಿ ದೇವಾಃ=ಋತ್ವಿಗ್ಯಜಮಾನಾಃ।

**ವಿಮಾನ ಏಷ ದಿವೋ ಮಧ್ಯ ಆಸ್ತ ಆಪಪ್ರಿವಾನ್ರೋದಸೀ ಅಂತರಿಕ್ಷಮ್ । ಸ ವಿಶ್ವಾಚೀರಭಿ [(೧೪)ಚಷ್ಟೇ]ಚಷ್ಟೇ ಘೃತಾಚೀರಂತರಾ ಪೂರ್ವಮಪರಂ ಚ ಕೇತುಮ್ ॥**

ವಿಮಾನ ಇತಿ ವಿ-ಮಾನಃ । ಏಷಃ । ದಿವಃ । ಮಧ್ಯೇ । ಆಸ್ತೇ । ಆಪಪ್ರಿವಾನಿತ್ಯಾ-ಪಪ್ರಿವಾನ್ । ರೋದಸೀ ಇತಿ । ಅಂತರಿಕ್ಷಮ್ ॥ ಸಃ । ವಿಶ್ವಾಚೀಃ । ಅಭೀತಿ ।(೧೪)। ಚಷ್ಟೇ । ಘೃತಾಚೀಃ । ಅಂತರಾ । ಪೂರ್ವಮ್ । ಅಪರಮ್ । ಚ । ಕೇತುಮ್ ॥

| ಮಂತ್ರ | ವಿನಿಯೋಗ |
|---|---|
| **ವಿಮಾನಃ...ಕೇತುಮ್ ॥** | ಆಗ್ನೀಧ್ರದಲ್ಲಿ ಕಲ್ಲನ್ನು ಇಡುವುದಕ್ಕಾಗಿ ಪ್ರಥಮಮಂತ್ರ. |

▲ **ರೋದಸೀ**=ದ್ಯಾವಾಪೃಥಿವಿಗಳನ್ನೂ; **ಅಂತರಿಕ್ಷಮ್**=ಅಂತರಿಕ್ಷವನ್ನೂ; **ಆಪಪ್ರಿವಾನ್**=ವ್ಯಾಪಿಸಿರುವ; **ವಿಮಾನಃ**=ವಿವಿಧವಾದ ಜಗತ್ತನ್ನು ನಿರ್ಮಾಣ ಮಾಡುವ; **ಏಷಃ**=ಈ ಅಶ್ಮವು [ಕಲ್ಲು]; **ದಿವಃ**=ಆಗ್ನೀಧ್ರ ಸ್ಥಾನರೂಪವಾದ ಆಕಾಶದ; **ಮಧ್ಯೇ**=ಮಧ್ಯದಲ್ಲಿ; **ಆಸ್ತೇ**=ಇದೆ. **ಸಃ**=ಆ ಅಶ್ಮವು; **ವಿಶ್ವಾಚೀಃ**=ವಿಶ್ವ ವ್ಯಾಪಿಯಾದ ದಿಕ್ಕುಗಳನ್ನೂ; **ಘೃತಾಚೀಃ ಚ**=ಆಜ್ಯಕ್ಕೆ ಕಾರಣವಾದ ಧೇನುಗಳನ್ನೂ; **ಅಭಿಚಷ್ಟೇ**= ಸರ್ವತ್ರ ಪ್ರಕಾಶಗೊಳಿಸುತ್ತದೆ. **ಅಂತರಾ**=ಬ್ರಹ್ಮಾಂಡದ; **ಪೂರ್ವಮ್ ಅಪರಮ್ ಕೇತುಮ್ ಚ**= [ಉದಯಾಸ್ತಗಳಿಂದ] ಪೂರ್ವಾಪರದಿಕ್ಕುಗಳಿಗೆ ಚಿಹ್ನೆಯಂತಿರುವ ಸೂರ್ಯನನ್ನೂ; ಅಭಿ ಚಷ್ಟೇ=ಪ್ರಕಾಶ ಗೊಳಿಸುತ್ತದೆ.

**ದೈವ್ಯಃ**=ದೇವಾನಾಂ ಹಿತಃ ದೈವ್ಯಃ=ಅಗ್ನಿಃ । **ಧರ್ತಾ**=ಯಾಗದ್ವಾರೇಣ ಜಗತೋ ಧಾರಯಿತಾ=ಅಗ್ನಿಃ । **ದೇವಶ್ರೀಃ**=ದೇವಾನ್ ಹವಿರ್ವಹನೇನ ಶ್ರಯತೀತಿ ದೇವಶ್ರೀಃ= ಅಗ್ನಿಃ । **ಶ್ರೀಃ**=ಶ್ರಯತೇ=ಸೇವತೇ ದೇವಾನ್ ಇತಿ ಶ್ರೀಃ=ಯಜಮಾನಃ । ತಸ್ಮಿನ್ ಅನುಗ್ರಹರೂಪಂ **ಮನಃ** ಯಸ್ಯ ಅಸೌ=**ಶ್ರೀಮಣಾಃ**=ಅಗ್ನಿಃ ।

ಈ ಮಂತ್ರದಲ್ಲಿ ಅಗ್ನಿಯನ್ನು ಸೂರ್ಯರೂಪನಾಗಿ ಸ್ತುತಿಸಲಾಗಿದೆ. ಅಗ್ನಿಯೇ ಸೂರ್ಯನಾಗಿ ಪೂರ್ವ ದಿಙ್ಮಂಡಲದಲ್ಲಿ ನಿತ್ಯವೂ ಉದಯಿಸಿ, ಎಲ್ಲ ಪ್ರಾಣಿಗಳ ವ್ಯವಹಾರಕ್ಕೂ ಪ್ರೇರಕನಾಗುತ್ತಾನೆ. ಅವನು ಎಲ್ಲ ಲೋಕ ಗಳನ್ನೂ ನೋಡುತ್ತಾ ಸಂಚರಿಸುವನು. ಅಂತಹ ಅಗ್ನಿಯು ಪ್ರಸನ್ನನಾಗಲಿ.

ಇಲ್ಲಿ ಪಶುಯಜ್ಞವನ್ನು ನಾಲ್ಕು ಭಾಗಗಳಿಂದ ಕೂಡಿರುತ್ತದೆಯೆಂದು ವರ್ಣಿಸಿರುತ್ತಾರೆ. ಮೊದಲು ಉಪಾಕರಣ, ಬಳಿಕ ಶಾಮಿತ್ರದೇಶಕ್ಕೆ ನಯನ, ಅನಂತರ ಸಂಜ್ಞಪನ, ಬಳಿಕ ದೇವತೆಗಳನ್ನುದ್ದೇಶಿಸಿ ಯಾಗ. ಇಂತಹ ಯಾಗದಿಂದ ತೃಪ್ತರಾದ ಆಹವನೀಯಾದಿ ಅಗ್ನಿಗಳು ನಮ್ಮ ಇಷ್ಟಾರ್ಥಗಳನ್ನು ಸಂಪಾದಿಸಿ ಕೊಡಲಿ ಎಂದು ಪ್ರಾರ್ಥನೆ.

**ಉಕ್ಷಾ ಸಮುದ್ರೋ ಅರುಣಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾವಿವೇಶ । ಮಧ್ಯೇ ದಿವೋ ನಿಹಿತಃ ಪೃಶ್ನಿರಶ್ಮಾ ವಿಚಕ್ರಮೇ ರಜಸಃ ಪಾತ್ಯಂತೌ ॥ ಇಂದ್ರಂ ವಿಶ್ವಾ ಅವೀವೃಧನ್ಸ್ಸಮುದ್ರವ್ಯಚಸಂ ಗಿರಃ । ರಥೀತಮಗ್ಂ ರಥೀನಾಂ ವಾಜಾನಾಗ್ಂ ಸತ್ಪತಿಂ ಪತಿಮ್ ॥**

---

ಉಕ್ಷಾ । ಸಮುದ್ರಃ । ಅರುಣಃ । ಸುಪರ್ಣ ಇತಿ ಸು–ಪರ್ಣಃ । ಪೂರ್ವಸ್ಯ । ಯೋನಿಮ್ । ಪಿತುಃ । ಆ । ವಿವೇಶ ॥ ಮಧ್ಯೇ । ದಿವಃ । ನಿಹಿತ ಇತಿ ನಿ–ಹಿತಃ । ಪೃಶ್ನಿಃ । ಅಶ್ಮಾ । ವೀತಿ । ಚಕ್ರಮೇ । ರಜಸಃ । ಪಾತಿ । ಅಂತೌ ॥ ಇಂದ್ರಮ್ । ವಿಶ್ವಾಃ । ಅವೀವೃಧನ್ನ್ । ಸಮುದ್ರವ್ಯಚಸಮಿತಿ ಸಮುದ್ರ–ವ್ಯಚಸಮ್ । ಗಿರಃ ॥ ರಥೀತಮಮಿತಿ ರಥಿ–ತಮಮ್ । ರಥೀನಾಮ್ । ವಾಜಾನಾಮ್ । ಸತ್ಪತಿಮಿತಿ ಸತ್–ಪತಿಮ್ । ಪತಿಮ್ ॥

---

| ಮಂತ್ರ | ವಿನಿಯೋಗ |
|---|---|
| **ಉಕ್ಷಾ ಸಮುದ್ರಃ...ಅಂತೌ ॥** | ಅಶ್ಮಸ್ಥಾಪನದ ಎರಡನೆಯ ಹಾಗೂ ಅಂತಿಮಮಂತ್ರ. |
| **ಇಂದ್ರಂ ವಿಶ್ವಾಃ...ಪತಿಮ್ ॥** | ಯಜಮಾನನು ಪಕ್ಷಿರೂಪಚಿತಿಯ ಪುಚ್ಛದವರೆಗೆ ಹೋಗಲು ಪ್ರಥಮಮಂತ್ರ. |

---

▲ **ಉಕ್ಷಾ**=ಮೇಘದಂತೆ ಯಾಗಫಲಗಳನ್ನು ಸುರಿಸುವ; **ಸಮುದ್ರಃ**=ಬಹುಫಲಪ್ರದವಾದುದರಿಂದ ಸಮುದ್ರದಂತಿರುವ; **ಅರುಣಃ**=ಸರ್ವಪ್ರಕಾಶಕವಾದುದರಿಂದ ಸೂರ್ಯಸದೃಶವಾದ; **ಸುಪರ್ಣಃ**=ಸ್ವರ್ಗಕ್ಕೆ ಹಾರುವುದರಿಂದ ಪಕ್ಷಿಸದೃಶವಾದ; **ಅಯಮ್ ಆತ್ಮಾ**=ಈ ಕಲ್ಲು; **ಪಿತುಃ**=ಪಾಲಕವಾದ; **ಪೂರ್ವಸ್ಯ**=ಪೂರ್ವದಿಕ್ಕಿನಲ್ಲಿರುವ ಆಹವನೀಯದ; **ಯೋನಿಮ್**=ಕಾರಣವಾದ ಆಗ್ನೀಧ್ರವನ್ನು; **ಆವಿವೇಶ**=ಪ್ರವೇಶಿಸಿದೆ. **ಅಯಮ್**=ಈ; **ಪೃಶ್ನಿಃ**=ಬಿಳುಪಾದ; **ಅಶ್ಮಾ**=ಕಲ್ಲು; **ದಿವಃ ಮಧ್ಯೇ**=ಆಕಾಶದಂತಿರುವ ಆಗ್ನೀಧ್ರದಲ್ಲಿ; **ವಿ ಚಕ್ರಮೇ**=ಮುಂದಡಿ ಇಡುತ್ತದೆ; **ನಿಹಿತಃ**=ಇಡಲ್ಪಟ್ಟುದಾಗಿ; **ರಜಸಃ**=ರಂಜನೀಯವಾದ ಜಗತ್ತಿನ; **ಅಂತೌ**=ಉತ್ಪತ್ತಿ–ಪ್ರಳಯಗಳೆಂಬ ಎರಡು ಅಂತಗಳನ್ನು; **ಪಾತಿ**=ಕಾಪಾಡುತ್ತದೆ. ▲ **ಸಮುದ್ರವ್ಯಚಸಮ್**=ಸಮುದ್ರದಂತೆ ವ್ಯಾಪಕನಾದ; **ರಥೀನಾಮ್**=ರಥವನ್ನು ಹೊಂದಿರುವ ರಾಜ–ಅಮಾತ್ಯಾದಿಗಳಿಗೂ; **ರಥೀತಮಮ್**= ಶ್ರೇಷ್ಠರಥಿಕನಾದ; **ವಾಜಾನಾಮ್**=ಅನ್ನಗಳಿಗೆ; **ಪತಿಮ್**=ಪಾಲಕನಾದ; **ಸತ್ಪತಿಮ್**=ಸನ್ಮಾರ್ಗವರ್ತಿಗಳಾದ ಯಜಮಾನರಿಗೆ ಪಾಲಕನಾದ; **ಇಂದ್ರಮ್**=ಪರಮೈಶ್ವರ್ಯಯುಕ್ತನಾದ ಅಗ್ನಿಯನ್ನು; **ವಿಶ್ವಾಃ ಗಿರಃ**=ಎಲ್ಲ ಸ್ತುತಿರೂಪವಾದ ವಚನಗಳೂ; **ಅವೀವೃಧನ್**=ವೃದ್ಧಿಗೊಳಿಸಿದವು/ವೃದ್ಧಿಗೊಳಿಸಲಿ.

**ಸುಮ್ನಹೂರ್ಯಜ್ಞೋ ದೇವಾಗ್ಂ ಆ ಚ ವಕ್ಷದ್ಯಕ್ಷದಗ್ನಿರ್ದೇವೋ ದೇವಾಗ್ಂ ಆ ಚ ವಕ್ಷತ್ ॥**

---

**ಸುಮ್ನಹೂರಿತಿ ಸುಮ್ನ-ಹೂಃ। ಯಜ್ಞಃ। ದೇವಾನ್। ಐತಿ। ಚ। ವಕ್ಷತ್। ಯಕ್ಷತ್। ಅಗ್ನಿಃ। ದೇವಃ। ದೇವಾನ್। ಐತಿ। ಚ। ವಕ್ಷತ್ ॥**

---

| ಮಂತ್ರ | ವಿನಿಯೋಗ |
|---|---|
| **ಸುಮ್ನಹೂಃ...ವಕ್ಷತ್ ॥** | ಚಿತಿಪುಚ್ಛಗಮನದ ಎರಡನೆಯ ಮಂತ್ರ. |

---

▲ **ಸುಮ್ನಹೂಃ**=ಪ್ರಜಾ-ಪಶುರೂಪವಾದ ಸುಖವನ್ನು ಸಂಪಾದಿಸಿಕೊಡುವ; **ಯಜ್ಞಃ ಚ**=ಯಜ್ಞವೂ; **ದೇವಾನ್**=ದೇವತೆಗಳನ್ನು; **ಆ ವಕ್ಷತ್**=ಆಹ್ವಾನಿಸಲಿ. **ಯಕ್ಷತ್**=ಯಾಗ ಮಾಡುವ/ಯಾಗಸಾಧಕನಾದ; **ಅಗ್ನಿಃ ಚ ದೇವಃ**=ಅಗ್ನಿದೇವನೂ; **ದೇವಾನ್**=ದೇವತೆಗಳನ್ನು; **ಆ ವಕ್ಷತ್**=[ಹವಿಃಸ್ವೀಕಾರಕ್ಕಾಗಿ] ಆಹ್ವಾನಿಸಲಿ.

---

ಇಲ್ಲಿ ಅಶ್ಮವನ್ನು ಹಲವು ವಿಧವಾಗಿ ಸ್ತುತಿಸಲಾಗಿದೆ. ಪರಮಾತ್ಮನು ಸರ್ವಸ್ವರೂಪನಾದುದರಿಂದ ಈ ಅಶ್ಮವೂ ಪರಮೇಶ್ವರಸ್ವರೂಪವೇ. ಪರಮೇಶ್ವರನು ಸರ್ವಶಕ್ತನಾದುದರಿಂದ ಅಶ್ಮವೂ ಸರ್ವಶಕ್ತವಾಗಿದೆಯೆಂದು ಹೊಗಳಲಾಗಿದೆಯೆಂದು ಭಾವಿಸಬೇಕು. ಇದು ಇಲ್ಲಿಯ ತಾತ್ಪರ್ಯ.

ಈ ಮಂತ್ರದಲ್ಲಿಯೂ ಅಶ್ಮವನ್ನು ಪರಮೇಶ್ವರರೂಪವಾಗಿ ವರ್ಣಿಸಲಾಗಿದೆ. **'ಯದಾಹವನೀಯ ಉದ್ವಾಯೇತ್। ಆಗ್ನೀಧ್ರಾದುದ್ಧರೇತ್'** ಎಂಬ ಶ್ರುತಿವಚನವನ್ನು ಅನುಸರಿಸಿ, ಆಗ್ನೀಧ್ರವು ಆಹವನೀಯದ ಕಾರಣವೆಂದು ಹೇಳಿದೆ.

ಅಶ್ಮವನ್ನು ಮೇಘ, ಸಮುದ್ರ, ಸೂರ್ಯ, ಪಕ್ಷಿಗಳಿಗೆ ಹೋಲಿಸಲಾಗಿದೆ. ಆಕಾಶದಂತಿರುವ ಆಗ್ನೀಧ್ರದಲ್ಲಿರುವ ಅಶ್ಮವು ಜಗತ್ತಿನ ಉತ್ಪತ್ತಿ-ಪ್ರಳಯವನ್ನು ಕಾಪಾಡುತ್ತದೆ. ಇಂತಹ ಅಶ್ಮವು ಅನುಗ್ರಹಿಸಲಿ.

**'ಚತಸೃಭಿರಾಪುಚ್ಛಾದೇತಿ'** ಎಂಬ ಶ್ರುತಿವಾಕ್ಯದಂತೆ ಯಜಮಾನನು ಪಕ್ಷಿರೂಪವಾದ ಚಿತಿಯ ಪುಚ್ಛದವರೆಗೂ ಹೋಗಬೇಕು. ಹೀಗೆ ವಿಹಿತವಾದ ಗಮನದಲ್ಲಿ ಈ ನಾಲ್ಕು ಮಂತ್ರಗಳಿಗೆ ವಿನಿಯೋಗವಿದೆ. **'ಇದಿ ಪರಮೈಶ್ವರ್ಯೇ'** ಎಂಬ ಧಾತುವಿನಿಂದ **'ಇಂದ್ರ'** ಶಬ್ದವು ನಿಷ್ಪನ್ನವಾಗಿದೆ. ಹೀಗಾಗಿ ಇಂದ್ರನೆಂದರೆ ಇಲ್ಲಿ ಅಗ್ನಿಯೆಂದು ಅರ್ಥ. ವ್ಯಾಪಕನೂ, ಶ್ರೇಷ್ಠನಾದ ರಥಿಕನೂ, ಅನ್ನದಾತೃವೂ, ಯಜಮಾನರನ್ನು ಕಾಪಾಡುವವನೂ ಆದ ಅಗ್ನಿಯನ್ನು ಎಲ್ಲ ಸ್ತುತಿವಚನಗಳೂ ವೃದ್ಧಿಗೊಳಿಸಲಿ. ಅಗ್ನಿಯು ಸ್ತುತ್ಯನು.

**'ಅಗ್ನಿರ್ವೈ ದೇವಾನಾಂ ಹೋತಾ'** ಎಂದು ಶ್ರುತಿವಚನವಿದೆ. ಅಗ್ನಿಯು ದೇವತೆಗಳನ್ನು ಆಹ್ವಾನಿಸುವವನು ಎಂದರ್ಥ.

ಪ್ರಜಾ-ಪಶುರೂಪವಾದ ಸುಖವನ್ನು ತಂದು ಕೊಡುವ ಯಜ್ಞವೂ, ಯಾಗಸಾಧಕನಾದ ಅಗ್ನಿದೇವನೂ ದೇವತೆಗಳನ್ನು ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಆಹ್ವಾನಿಸಲಿ.

ವಾಜಸ್ಯ ಮಾ ಪ್ರಸವೇನೋದ್ಗ್ರಾಭೇಣೋದಗ್ರಭೀತ್ । ಅಥಾ ಸಪತ್ನಾಗ್ಂ ಇಂದ್ರೋ ಮೇ ನಿಗ್ರಾಭೇಣಾಧರಾಗ್ಂ ಅಕಃ ॥ ಉದ್ಗ್ರಾಭಂ ಚ ನಿಗ್ರಾಭಂ ಚ ಬ್ರಹ್ಮ ದೇವಾ ಅವೀವೃಧನ್ನ್ ।

---

ವಾಜಸ್ಯ । ಮಾ । ಪ್ರಸವೇನೇತಿ ಪ್ರ–ಸವೇನ । ಉದ್ಗ್ರಾಭೇಣೇತ್ಯುತ್–ಗ್ರಾಭೇಣ । ಉದಿತಿ । ಅಗ್ರಭೀತ್ ॥ ಅಥ । ಸಪತ್ನಾನ್ । ಇಂದ್ರಃ । ಮೇ । ನಿಗ್ರಾಭೇಣೇತಿ ನಿ–ಗ್ರಾಭೇಣ । ಅಧರಾನ್ । ಅಕಃ ॥ ಉದ್ಗ್ರಾಭಮಿತ್ಯುತ್–ಗ್ರಾಭಮ್ । ಚ । ನಿಗ್ರಾಭಮಿತಿ ನಿ–ಗ್ರಾಭಮ್ । ಚ । ಬ್ರಹ್ಮ । ದೇವಾಃ । ಅವೀವೃಧನ್ನ್ ॥

---

| ಮಂತ್ರ | ವಿನಿಯೋಗ |
|---|---|
| **ವಾಜಸ್ಯ ಮಾ...ಅಕಃ ॥** | ಚಿತಿಪುಚ್ಛಗಮನದ ಮೂರನೆಯ ಮಂತ್ರ. |
| **ಉದ್ಗ್ರಾಭಂ ಚ...ವ್ಯಸ್ಯತಾಮ್ ॥** | ಚಿತಿಪುಚ್ಛಗಮನದ ನಾಲ್ಕನೆಯ ಹಾಗೂ ಕಡೆಯ ಮಂತ್ರ. |

---

▲ **ಇಂದ್ರಃ**=ಪರಮೈಶ್ವರ್ಯಯುಕ್ತನಾದ ಇಂದ್ರಶಬ್ದವಾಚ್ಯನಾದ ಅಗ್ನಿಯು; **ಮಾ**=ನನ್ನನ್ನು [ಯಜಮಾನನನ್ನು] **ವಾಜಸ್ಯ**=ಅನ್ನದ; **ಪ್ರಸವೇನ**=ಉತ್ಪತ್ತಿ ಮಾಡಬಲ್ಲ; **ಉದ್ಗ್ರಾಭೇಣ**=ಮೇಲೆತ್ತುವ ಶಕ್ತಿಯಿಂದ; **ಉತ್ ಅಗ್ರಭೀತ್**=ಮೇಲೆತ್ತಲಿ/ಅನ್ನಸಮೃದ್ಧಿಯನ್ನು ಪಡೆಯುವಂತೆ ಮಾಡಲಿ. **ಅಥ**=ಅನಂತರ; ಇಂದ್ರಃ=ಪರಮೈಶ್ವರ್ಯಯುಕ್ತನಾದ ಅಗ್ನಿಯು; **ಮೇ**=ನನ್ನ; **ಸಪತ್ನಾನ್**=ಹಗೆಗಳನ್ನು; **ನಿಗ್ರಾಭೇಣ**= ನಿಗ್ರಹಿಸುವ ಶಕ್ತಿಯಿಂದ; **ಅಧರಾನ್**=ನಿಕೃಷ್ಟರನ್ನಾಗಿ; **ಅಕಃ**=ಮಾಡಲಿ. ▲ **ದೇವಾಃ**=ದೇವತೆಗಳು; **ಬ್ರಹ್ಮ**=ಪ್ರೌಢವಾದ/ಸಮರ್ಥವಾದ; **ಉದ್ಗ್ರಾಭಮ್ ಚ**=ನಮ್ಮ ಶ್ರೇಷ್ಠತೆಯನ್ನೂ; **ನಿಗ್ರಾಭಮ್ ಚ**= [ನಮ್ಮ ವೈರಿಗಳ] ನಿಕೃಷ್ಟತೆಯನ್ನೂ; **ಅವೀವೃಧನ್**=ವೃದ್ಧಿಗೊಳಿಸಿದರು/ವೃದ್ಧಿಗೊಳಿಸಲಿ.

---

**ಈ ಮಂತ್ರದಲ್ಲಿಯೂ ಸಂದರ್ಭಕ್ಕೆ ತಕ್ಕಂತೆ ಇಂದ್ರ ಎಂಬ ಪದಕ್ಕೆ ಅಗ್ನಿಯೆಂಬ ಅರ್ಥವನ್ನು ವಿವರಿಸಿದ್ದಾರೆ. ಅಗ್ನಿಗೆ ಉದ್ಧರಿಸುವ ಮತ್ತು ನಿಗ್ರಹಿಸುವ ಶಕ್ತಿಯು ಇದೆ. ಅಗ್ನಿಯು ಅನ್ನಪತಿಯು. ಅವನು ಉದ್ಧರಿಸುವ ಶಕ್ತಿಯಿಂದ ನಮಗೆ ಅನ್ನಸಂಪತ್ತನ್ನು ಕೊಡಲಿ. ನಿಗ್ರಹಿಸುವ ಶಕ್ತಿಯಿಂದ ನಮ್ಮ ಶತ್ರುಗಳನ್ನು ನಿಕೃಷ್ಟರನ್ನಾಗಿ ಮಾಡಲಿ.**

ಅಥಾ ಸಪತ್ನಾನಿಂದ್ರಾಗ್ನೀ ಮೇ ವಿಷೂಚೀನಾನ್ವ್ಯಸ್ಯತಾಮ್ ॥ ೧೫-3 ॥

[ವಿಶ್ವೇ ದೇವಾಸ್ತ್ರತಪಯಾ ಅಭಿ ವಾಜಸ್ಯ ಷಡ್ವಿಗ್ಂಶತಿಶ್ಚ ॥]

---

ಅಥ । ಸಪತ್ನಾನ್ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ಮೇ । ವಿಷೂಚೀನಾನ್ । ವೀತಿ । ಅಸ್ಯತಾಮ್ ॥ (೧೫) ॥

---

**ಅಥ**=ಬಳಿಕ; **ಇಂದ್ರಾಗ್ನೀ**=ಇಂದ್ರಾಗ್ನಿದೇವತೆಗಳು/ಅಗ್ನಿಯೂ ಆತನ ಮಿತ್ರನಾದ ಇಂದ್ರನೂ; **ವಿಷೂಚೀನಾನ್ ಮೇ**=ಎಲ್ಲ ಕಡೆ ಓಡಿಹೋಗುತ್ತಿರುವ ನನ್ನ; **ಸಪತ್ನಾನ್**=ಶತ್ರುಗಳನ್ನು; **ವ್ಯಸ್ಯತಾಮ್**=ನಾಶಪಡಿಸಲಿ.

---

ದೇವತೆಗಳು ನಮಗೆ ಮೇಲ್ಮೈಯನ್ನೂ, ಶತ್ರುಗಳಿಗೆ ಅಪಜಯವನ್ನೂ ವೃದ್ಧಿಗೊಳಿಸಲಿ. ಇಂದ್ರ-ಅಗ್ನಿದೇವತೆಗಳು ಎಲ್ಲೆಡೆ ಓಡುತ್ತಿರುವ ನಮ್ಮ ವೈರಿಗಳನ್ನು ನಾಶಪಡಿಸಲಿ. ಇಲ್ಲಿ ಸರ್ವದೇವತೆಗಳ ವಿಶೇಷವಾಗಿ ಇಂದ್ರಾಗ್ನಿಗಳ ಪ್ರಾರ್ಥನೆಯಿದೆ.

---

## ವಿನಿಯೋಗಸಂಗ್ರಹ

1-3ಉತ್ತ್ರಿಭಿಃ ಸಮಿಧೋ ದಧ್ಯಾದುದು ತ್ವೋ ᐟ4ದ್ಯಚ್ಛ್ರತೇಽನಲಮ್ ।

5-9ಪಂಚೇತಿ ಪಂಚಭಿರ್ಹೃತ್ವಾ ವಿ 10-11ದ್ವಾಭ್ಯಾಮಶ್ಮನಃ ಸ್ಥಿತಿಃ ॥

12-15ಇಂದ್ರಂ ಚತುರ್ಭಿರಾಪುಚ್ಛಾದ್ಗಚ್ಛೇತ್ಪಂಚದಶೇರಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-15



## ॥ ಚತುರ್ಥೋಽನುವಾಕಃ ॥

ಆಶುಃ ಶಿಶಾನೋ ವೃಷಭೋ ನ ಯುಧ್ಮೋ ಘನಾಘನಃ

ಕ್ಷೋಭಣಶ್ಚರ್‌ಷಣೀನಾಮ್ । ಸಂಕ್ರಂದನೋಽನಿಮಿಷ

ಏಕವೀರಶ್ಶತಗ್ಂ ಸೇನಾ ಅಜಯತ್ಸಾಕಮಿಂದ್ರಃ ॥

---

ಆಶುಃ । ಶಿಶಾನಃ । ವೃಷಭಃ । ನ । ಯುಧ್ಮಃ । ಘನಾಘನಃ । ಕ್ಷೋಭಣಃ । ಚರ್‌ಷಣೀನಾಮ್ ॥ ಸಂಕ್ರಂದನ ಇತಿ ಸಮ್–ಕ್ರಂದನಃ । ಅನಿಮಿಷ ಇತ್ಯನಿ–ಮಿಷಃ । ಏಕವೀರ ಇತ್ಯೇಕ–ವೀರಃ । ಶತಮ್ । ಸೇನಾಃ । ಅಜಯತ್ । ಸಾಕಮ್ । ಇಂದ್ರಃ ॥

---

ಮೂರನೆಯ ಅನುವಾಕದಲ್ಲಿ ಅಗ್ನಿಪ್ರಣಯನವು ಹೇಳಲ್ಪಟ್ಟಿತು. ಈ ನಾಲ್ಕನೆಯ ಅನುವಾಕದಲ್ಲಿ ಅಪ್ರತಿರಥಸೂಕ್ತವು ಹೇಳಲ್ಪಡುತ್ತದೆ. ಬ್ರಹ್ಮನು, ಮೈತ್ರಾವರುಣನು ಅಥವಾ ಪ್ರತಿಪ್ರಸ್ಥಾತನು ಅಗ್ನಿಪ್ರಣಯನವನ್ನು ಅನುಸರಿಸಬೇಕು. ಈ ಅನುವಾಕದಲ್ಲಿ ಹದಿನೈದು ಮಂತ್ರಗಳಿವೆ. ಅಪ್ರತಿರಥಸೂಕ್ತವು ಹತ್ತು ಋಕ್‌ಗಳನ್ನು ಹೊಂದಿದೆ. **'ದಶರ್ಚಂ ಭವತಿ'** ಎಂಬ ಬ್ರಾಹ್ಮಣವಾಕ್ಯದಂತೆ ಇದು ಹತ್ತು ಋಕ್‌ಗಳುಳ್ಳದ್ದು. ಕಡೆಯ ಐದು ಮಂತ್ರಗಳು ಈ ಸೂಕ್ತದ ವೈಕಲ್ಪಿಕವಾದ ಮಂತ್ರಗಳಾಗಿವೆ.

---

| ಮಂತ್ರ | ವಿನಿಯೋಗ |
|---|---|
| **ಆಶುಃ...ಸಾಕಮಿಂದ್ರಃ ॥** | ಅಪ್ರತಿರಥಸೂಕ್ತದ ಪ್ರಥಮಮಂತ್ರ. |

---

▲ **ಆಶುಃ**=ಶೀಘ್ರವಾಗಿ ಕಾರ್ಯಗಳನ್ನು ಮಾಡುವ; **ವೃಷಭಃ ನ ಯುಧ್ಮಃ**=ಮತ್ತೊಂದು ಗೂಳಿಯೊಡನೆ ಹೋರಾಡಲು ಸಿದ್ಧವಾಗಿರುವ ಹೋರಿಯಂತಿರುವ; **ಶಿಶಾನಃ**=ತೀಕ್ಷ್ಣನಾಗಿರುವ; **ಘನಾಘನಃ**=ಶತ್ರುಗಳನ್ನು ಅತಿಶಯವಾಗಿ ಹಿಂಸಿಸುವ; **ಚರ್‌ಷಣೀನಾಮ್**=ಪರಸೇನೆಯಲ್ಲಿರುವ ಮನುಷ್ಯರಿಗೆ; **ಕ್ಷೋಭಣಃ**= ಮನಸ್ಸಿನಲ್ಲಿ ಕ್ಷೋಭವನ್ನುಂಟುಮಾಡುವ; **ಸಂಕ್ರಂದನಃ**=ಶತ್ರುಗಳಿಗೆ ಭಯವನ್ನುಂಟುಮಾಡುವ ಗರ್ಜನೆಯುಳ್ಳ; **ಅನಿಮಿಷಃ**=ರೆಪ್ಪೆಯನ್ನು ಹೊಡೆಯದೆ ಅತ್ಯಂತ ಸಾವಧಾನವುಳ್ಳ; **ಏಕವೀರಃ**=ಬೇರೆಯವರ ಬೆಂಬಲವಿಲ್ಲದೆಯೇ ವೈರಿಗಳನ್ನು ಸೋಲಿಸಬಲ್ಲ ವೀರನಾದ; **ಇಂದ್ರಃ**=ಪರಮೈಶ್ವರ್ಯಯುಕ್ತನಾದ ಇಂದ್ರದೇವನು; **ಶತಮ್**=ನೂರಾರು ಸಂಖ್ಯೆಯ; **ಸೇನಾಃ**=ಶತ್ರುಸೈನಿಕರನ್ನು; **ಸಾಕಮ್**=ಏಕಪ್ರಯತ್ನದಿಂದಲೇ; **ಅಜಯತ್**=ಜಯಿಸಿದನು.

**ಸಂಕ್ರಂದನೇನಾನಿಮಿಷೇಣ ಜಿಷ್ಣುನಾ ಯುತ್ಕಾರೇಣ ದುಶ್ಚ್ಯವನೇನ ಧೃಷ್ಣುನಾ । ತದಿಂದ್ರೇಣ ಜಯತ ತತ್ಸಹಧ್ವಂ ಯುಧೋ ನರ ಇಷುಹಸ್ತೇನ ವೃಷ್ಣಾ ॥ ಸ ಇಷುಹಸ್ತೈಸ್ಸನಿಷಂಗಿಭಿರ್ವಶೀ ಸಗ್ಂಸ್ರಷ್ಟಾ ಸ ಯುಧ ಇಂದ್ರೋ ಗಣೇನ ।**

---

ಸಂಕ್ರಂದನೇನೇತಿ ಸಮ್-ಕ್ರಂದನೇನ । ಅನಿಮಿಷೇಣೇತ್ಯನಿ-ಮಿಷೇಣ । ಜಿಷ್ಣುನಾ । ಯುತ್ಕಾರೇಣೇತಿ ಯುತ್-ಕಾರೇಣ । ದುಶ್ಚ್ಯವನೇನೇತಿ ದುಃ-ಚ್ಯವನೇನ । ಧೃಷ್ಣುನಾ ॥ ತತ್ । ಇಂದ್ರೇಣ । ಜಯತ । ತತ್ । ಸಹಧ್ವಮ್ । ಯುಧಃ । ನರಃ । ಇಷುಹಸ್ತೇನೇತೀಷು-ಹಸ್ತೇನ । ವೃಷ್ಣಾ ॥ ಸಃ । ಇಷುಹಸ್ತೈರಿತೀಷು-ಹಸ್ತೈಃ । ಸಃ । ನಿಷಂಗಿಭಿರಿತಿ ನಿಷಂಗಿ-ಭಿಃ । ವಶೀ । ಸಗ್ಂಸ್ರಷ್ಟೇತಿ ಸಮ್-ಸ್ರಷ್ಟಾ । ಸಃ । ಯುಧಃ । ಇಂದ್ರಃ । ಗಣೇನ ॥

---

| ಮಂತ್ರ | ವಿನಿಯೋಗ |
|---|---|
| **ಸಂಕ್ರಂದನೇನ...ವೃಷ್ಣಾ ॥** | ಸೂಕ್ತದ ಎರಡನೆಯ ಮಂತ್ರ. |
| **ಸ ಇಷುಹಸ್ತೈಃ...ಅಸ್ತಾ ॥** | ಸೂಕ್ತದ ಮೂರನೆಯ ಮಂತ್ರ. |

---

🔔 **ಯುಧಃ ನರಃ**=ಯುದ್ಧಾರ್ಥಿಗಳಾದ ಮಾನವರೇ! **ಸಂಕ್ರಂದನೇನ**=ಶತ್ರುಗಳನ್ನು ಗರ್ಜನೆಯಿಂದಲೇ ಭಯಪಡಿಸಬಲ್ಲ; **ಅನಿಮಿಷೇಣ**=ಅತಿಸಾವಧಾನನಾದ; **ಜಿಷ್ಣುನಾ**=ಜಯಶೀಲನಾದ; **ಯುತ್ಕಾರೇಣ**=ಯುದ್ಧವನ್ನು ಮಾಡುವ; **ದುಶ್ಚ್ಯವನೇನ**=ಸೋಲಿಸಲು ಅಶಕ್ಯನಾದ; **ಧೃಷ್ಣುನಾ**=ಭೀತಿರಹಿತನಾದ; **ಇಷುಹಸ್ತೇನ**=ಬಾಣವೇ ಮೊದಲಾದ ಆಯುಧಗಳನ್ನು ಕೈಯಲ್ಲಿ ಧರಿಸಿರುವ; **ವೃಷ್ಣಾ**=ಕಾಮನೆಗಳನ್ನು ಸುರಿಸುವ; **ಇಂದ್ರೇಣ**=ಇಂದ್ರನಿಂದ [ಅನುಗೃಹೀತರಾಗಿ]; **ತತ್**=ಆ ಪರಸೈನ್ಯವನ್ನು; **ಜಯತ**=ಸೋಲಿಸಿರಿ; **ತತ್**=ಆ ಶತ್ರುಸೈನ್ಯವನ್ನು; **ಸಹಧ್ವಮ್**=ನಾಶಗೊಳಿಸಿರಿ. 🔔 **ಇಷುಹಸ್ತೈಃ**=ಬಾಣಗಳನ್ನು/ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದಿರುವ ಬಿಲ್ಲುಗಾರರಿಂದ ಕೂಡಿರುವ; **ಸಃ**=ಆ ಇಂದ್ರನು; **ವಶೀ**=ಶತ್ರುಗಳನ್ನು ವಶಪಡಿಸಿಕೊಳ್ಳುತ್ತಾನೆ. **ನಿಷಂಗಿಭಿಃ**=ಖಡ್ಗಧಾರಿಗಳಿಂದ ಕೂಡಿದವನಾಗಿ; **ಸಃ**=ಆ ಇಂದ್ರನು; ವಶೀ =ಶತ್ರುಗಳನ್ನು ಅಧೀನ ಮಾಡಿಕೊಳ್ಳುತ್ತಾನೆ; [ಧನುರ್ಬಾಣ-ಖಡ್ಗಧಾರಿಸೈನ್ಯವನ್ನು ವಶಪಡಿಸಿಕೊಳ್ಳುವನು] **ಯುಧಃ**=ಯೋದ್ಧನಾದ; **ಸಃ ಇಂದ್ರಃ**=ಆ ಇಂದ್ರನು; **ಗಣೇನ**=ಶತ್ರುಭಟಸಮೂಹದೊಡನೆ;

---

**ತೀಕ್ಷ್ಣನೂ, ಗೂಳಿಯಂತೆ ಬಲಿಷ್ಠನೂ, ಶತ್ರುಹಿಂಸಕನೂ, ಶತ್ರುಗಳಿಗೆ ಭೀತಿಯನ್ನುಂಟುಮಾಡುವವನೂ, ತುಂಬ ಎಚ್ಚರದಿಂದ ಇರುವವನೂ ಆದ ಇಂದ್ರದೇವನು ನಮಗೆ ಜಯವನ್ನುಂಟುಮಾಡಲಿ.**

ಸಗ್ಂಸೃಷ್ಟಜಿತ್ಸೋಮಪಾ ಬಾಹುಶರ್ಧ್ಯೂರ್ಧ್ವಧನ್ವಾ ಪ್ರತಿಹಿತಾಭಿರಸ್ತಾ ॥

ಬೃಹಸ್ಪತೇ ಪರಿದೀಯಾ[ಪರಿದೀಯ(೧೬)]ರಥೇನ ರಕ್ಷೋಹಾಽಮಿತ್ರಾಗ್ಂ

ಅಪಬಾಧಮಾನಃ । ಪ್ರಭಂಜನ್ಥ್ಸೇನಾಃ ಪ್ರಮೃಣೋ ಯುಧಾ

ಜಯನ್ನಸ್ಮಾಕಮೇಧ್ಯವಿತಾ ರಥಾನಾಮ್ ॥

---

ಸಗ್ಂಸೃಷ್ಟಜಿದಿತಿ ಸಗ್ಂಸೃಷ್ಟ–ಜಿತ್ । ಸೋಮಪಾ ಇತಿ ಸೋಮ–ಪಾಃ । ಬಾಹುಶರ್ಧೀತಿ ಬಾಹು–ಶರ್ಧೀ । ಊರ್ಧ್ವಧನ್ವೇತ್ಯೂರ್ಧ್ವ–ಧನ್ವಾ । ಪ್ರತಿಹಿತಾಭಿರಿತಿ ಪ್ರತಿ–ಹಿತಾಭಿಃ । ಅಸ್ತಾ ॥ ಬೃಹಸ್ಪತೇ । ಪರೀತಿ । ದೀಯ । (೧೬) । ರಥೇನ । ರಕ್ಷೋಹೇತಿ ರಕ್ಷಃ–ಹಾ । ಅಮಿತ್ರಾನ್ । ಅಪಬಾಧಮಾನ ಇತ್ಯಪ–ಬಾಧಮಾನಃ ॥ ಪ್ರಭಂಜನ್ನಿತಿ ಪ್ರ–ಭಂಜನ್ನ್ । ಸೇನಾಃ । ಪ್ರಮೃಣ ಇತಿ ಪ್ರ–ಮೃಣಃ । ಯುಧಾ । ಜಯನ್ನ್ । ಅಸ್ಮಾಕಮ್ । ಏಧಿ । ಅವಿತಾ । ರಥಾನಾಮ್ ॥

---

| ಮಂತ್ರ | ವಿನಿಯೋಗ |
| --- | --- |
| **ಬೃಹಸ್ಪತೇ...ರಥಾನಾಮ್ ॥** | ಸೂಕ್ತದ ನಾಲ್ಕನೆಯ ಮಂತ್ರ. |

---

**ಸಗ್ಂಸ್ರಷ್ಟಾ**=ಸೇರುತ್ತಾನೆ. **ಸಗ್ಂಸೃಷ್ಟಜಿತ್**=ಶತ್ರುಸೈನ್ಯದೊಳಗೆ ನುಗ್ಗಿ ಜಯಿಸುವ; **ಸೋಮಪಾಃ**= ಯಜಮಾನರು ಅರ್ಪಿಸುವ ಸೋಮರಸವನ್ನು ಕುಡಿಯುವ ಆ ಇಂದ್ರನು; **ಬಾಹುಶರ್ಧೀ**=ಬಾಹುಬಲ ಯುಕ್ತನಾಗಿ; **ಊರ್ಧ್ವಧನ್ವಾ**=ಎತ್ತಿದ ಬಿಲ್ಲುಳ್ಳವನಾಗಿ; **ಪ್ರತಿಹಿತಾಭಿಃ**=ಬಿಲ್ಲಿನಿಂದ ಪ್ರಯೋಗಿಸಿದ ಬಾಣ ಗಳಿಂದ; **ಅಸ್ತಾ**=ಶತ್ರುಗಳನ್ನು ನಾಶಪಡಿಸುತ್ತಾನೆ. 🔔 **ಬೃಹಸ್ಪತೇ** = ಮಾತುಗಳ ಪಾಲಕನಾದ ಇಂದ್ರನೇ! **ರಥೇನ**=ರಥದಿಂದ; **ಪರಿದೀಯ**=ಸುತ್ತಲೂ ಸಂಚರಿಸು. **ರಕ್ಷೋಹಾ**=ರಾಕ್ಷಸರನ್ನು ನಾಶಪಡಿಸುವ; **ಅಮಿತ್ರಾನ್**=ವೈರಿಗಳನ್ನು; **ಅಪಬಾಧಮಾನಃ**=ಓಡಿಹೋಗುವಂತೆ ಹಿಂಸಿಸುವ ಆ ಇಂದ್ರನು; **ಸೇನಾಃ**= ವೈರಿಸೈನ್ಯಗಳನ್ನು; **ಪ್ರಭಂಜನ್**=ನಾಶಪಡಿಸುವವನಾಗಲಿ. [ಎಲೈ! ಇಂದ್ರನೇ!] **ಪ್ರಮೃಣಃ**=ಶತ್ರುಗಳನ್ನು ಅತಿಯಾಗಿ ಹಿಂಸಿಸುವವನಾಗಿ; **ಯುಧಾ**=ಯುದ್ಧದಿಂದ; **ಜಯನ್**=ಗೆಲ್ಲುತ್ತಾ; **ಅಸ್ಮಾಕಮ್**=ನಮ್ಮ; **ರಥಾನಾಮ್**=ರಥಗಳ; **ಅವಿತಾ**=ರಕ್ಷಕನಾಗಿ; **ಏಧಿ**=ಆಗು.

---

**ಹೇ! ಯುದ್ಧಾರ್ಥಿಗಳಾದ ಮಾನವರೇ! ಶತ್ರುಗಳನ್ನು ಹೆದರಿಸುವ, ಜಯಶೀಲನಾದ, ನಿರ್ಭೀತನಾದ, ಆಯುಧ**

ಗೋತ್ರಭಿದಂ ಗೋವಿದಂ ವಜ್ರಬಾಹುಂ ಜಯಂತಮಜ್ಮ ಪ್ರಮೃಣನ್ತಮೋಜಸಾ ।

ಇಮಗ್ಂ ಸಜಾತಾ ಅನುವೀರಯಧ್ವಮಿಂದ್ರಗ್ಂ ಸಖಾಯೋಽನು

ಸಗ್ಂರಭಧ್ವಮ್ ॥

---

ಗೋತ್ರಭಿದಮಿತಿ ಗೋತ್ರ-ಭಿದಮ್ । ಗೋವಿದಮಿತಿ ಗೋ-ವಿದಮ್ । ವಜ್ರಬಾಹುಮಿತಿ ವಜ್ರ-ಬಾಹುಮ್ । ಜಯಂತಮ್ । ಅಜ್ಮ । ಪ್ರಮೃಣಂತಮಿತಿ ಪ್ರ-ಮೃಣಂತಮ್ । ಓಜಸಾ ॥ ಇಮಮ್ । ಸಜಾತಾ ಇತಿ ಸ-ಜಾತಾಃ । ಅನ್ವಿತಿ । ವೀರಯಧ್ವಮ್ । ಇಂದ್ರಮ್ । ಸಖಾಯಃ । ಅನು । ಸಮಿತಿ । ರಭಧ್ವಮ್ ॥

---

| ಮಂತ್ರ | ವಿನಿಯೋಗ |
| --- | --- |
| ಗೋತ್ರಭಿದಂ...ರಭಧ್ವಮ್ ॥ | ಸೂಕ್ತದ ಐದನೆಯ ಮಂತ್ರ. |

---

▲ **ಸಜಾತಾಃ**=ಜೊತೆಯಲ್ಲಿ ಹುಟ್ಟಿದ ಜ್ಞಾತಿಗಳೇ! [ನೀವು] **ಗೋತ್ರಭಿದಮ್**=ಬೆಟ್ಟದ ರೆಕ್ಕೆಗಳನ್ನು ಕತ್ತರಿಸಿದ; **ಗೋವಿದಮ್**=ಭೂಮಿಯನ್ನು ಪಡೆದಿರುವ; **ವಜ್ರಬಾಹುಮ್**=ವಜ್ರಾಯುಧವನ್ನು ಕೈಯಲ್ಲಿ ಧರಿಸಿರುವ; **ಅಜ್ಮ ಜಯಂತಮ್**=ಶತ್ರುಗಳಿಗೆ ಭೂಮಿಯು ಇಲ್ಲದಂತೆ ಜಯಿಸುವ; **ಓಜಸಾ**=ಬಲದಿಂದ; **ಪ್ರಮೃಣಂತಮ್**=ಹೆಚ್ಚಾಗಿ ಹಿಂಸಿಸುವ; **ಇಮಮ್**=ಈ; **ಇಂದ್ರಮ್**=ಇಂದ್ರದೇವನನ್ನು; **ಅನು ವೀರಯಧ್ವಮ್**=ಹಿಂಬಾಲಿಸಿ ವೀರ್ಯವನ್ನು ತೋರಿಸಿರಿ; **ಸಖಾಯಃ**=ಸ್ನೇಹಿತರೇ! ಇಂದ್ರಮ್=ಇಂದ್ರನನ್ನು; **ಅನು ಸಮ್ ರಭಧ್ವಮ್**=ಅನುಸರಿಸಿ ನೀವು ಯುದ್ಧವನ್ನು ಆರಂಭಿಸಿರಿ.

---

ಧಾರಿಯಾದ ಇಂದ್ರನಿಂದ ಅನುಗ್ರಹ ಪಡೆದು ಶತ್ರುಗಳನ್ನು ಗೆಲ್ಲಿರಿ. ಈ ಮಂತ್ರದಲ್ಲಿಯೂ ಇಂದ್ರನನ್ನು ಬಗೆಬಗೆಯಾಗಿ ಹೊಗಳಲಾಗಿದೆ.

ಧನುರ್ಬಾಣಗಳನ್ನು ಹಿಡಿದಿರುವ ಬಿಲ್ಲುಗಾರರಿಂದ ಖಡ್ಗಧಾರಿಗಳಿಂದ ಕೂಡಿರುವ ಇಂದ್ರನು-ಅಥವಾ ಧನುರ್ಬಾಣಗಳನ್ನೂ ಖಡ್ಗವನ್ನೂ ಧರಿಸಿರುವ ಶತ್ರುಸೈನ್ಯವನ್ನು-ಇಂದ್ರನು ಸೋಲಿಸಿ ಅಧೀನ ಮಾಡಿಕೊಳ್ಳಬಲ್ಲನು. ಬಲಿಷ್ಠನಾದ ಇಂದ್ರನು ಶತ್ರುಭಟವನ್ನು ಸೇರಿ ಬಿಲ್ಲನ್ನು ಎತ್ತಿ ಶತ್ರುಗಳನ್ನು ನಾಶಪಡಿಸುವನು.

ಈ ಮಂತ್ರದಲ್ಲಿ ಇಂದ್ರನನ್ನು ವಾಕ್ಪತಿ ಎಂದು ಹೇಳಲಾಗಿದೆ. ಇಲ್ಲಿ **'ವಾಗ್ವೈ ಬೃಹತೀ ತಸ್ಯಾ ಏಷ ಪತಿಸ್ತಸ್ಮಾದ್ಬೃಹಸ್ಪತಿಃ' [ಶತಪಥಬ್ರಾಹ್ಮಣ 14.4.1.22]** ಎಂಬುದನ್ನೂ, **'ತೇ ದೇವಾ ಇಂದ್ರಮಬ್ರುವನ್ನಿಮಾಂ ನೋ ವಾಚಂ ವ್ಯಾಕುರ್ವಿತಿ'** ಎಂಬುದನ್ನೂ ಅನುಸರಿಸಿ, ಸಂದರ್ಭಕ್ಕೆ ತಕ್ಕಂತೆ ಬೃಹಸ್ಪತಿಶಬ್ದಕ್ಕೆ ಇಂದ್ರನೆಂದು ಅರ್ಥವನ್ನು ವರ್ಣಿಸಲಾಗಿದೆ.

ಬಲವಿಜ್ಞಾಯಃ ಸ್ಥವಿರಃ ಪ್ರವೀರಸ್ಸಹಸ್ವಾನ್, ವಾಜೀ ಸಹಮಾನ ಉಗ್ರಃ ।

ಅಭಿವೀರೋ ಅಭಿಸತ್ವಾ ಸಹೋಜಾ ಜೈತ್ರಮಿಂದ್ರ ರಥಮಾತಿಷ್ಠ ಗೋವಿತ್ ॥

ಅಭಿ ಗೋತ್ರಾಣಿ ಸಹಸಾ ಗಾಹಮಾನೋಽದಾಯೋ [ಅದಾಯಃ(೧೭)]

ವೀರಶ್ಶತಮನ್ಯುರಿಂದ್ರಃ ।

---

ಬಲವಿಜ್ಞಾಯ ಇತಿ ಬಲ–ವಿಜ್ಞಾಯಃ । ಸ್ಥವಿರಃ । ಪ್ರವೀರ ಇತಿ ಪ್ರ–ವೀರಃ । ಸಹಸ್ವಾನ್ । ವಾಜೀ । ಸಹಮಾನಃ । ಉಗ್ರಃ ॥ ಅಭಿವೀರ ಇತ್ಯಭಿ–ವೀರಃ । ಅಭಿಸತ್ವೇತ್ಯಭಿ–ಸತ್ವಾ । ಸಹೋಜಾ ಇತಿ ಸಹಃ–ಜಾಃ । ಜೈತ್ರಮ್ । ಇಂದ್ರ । ರಥಮ್ । ಏತಿ । ತಿಷ್ಠ । ಗೋವಿದಿತಿ ಗೋ–ವಿತ್ ॥ ಅಭೀತಿ । ಗೋತ್ರಾಣಿ । ಸಹಸಾ । ಗಾಹಮಾನಃ । ಅದಾಯಃ । (೧೭) । ವೀರಃ । ಶತಮನ್ಯುರಿತಿ ಶತ–ಮನ್ಯುಃ । ಇಂದ್ರಃ ॥

---

| ಮಂತ್ರ | ವಿನಿಯೋಗ |
|---|---|
| **ಬಲವಿಜ್ಞಾಯಃ...ಗೋವಿತ್ ॥** | ಸೂಕ್ತದ ಆರನೆಯ ಮಂತ್ರ. |
| **ಅಭಿ ಗೋತ್ರಾಣಿ...ಪ್ರ ಯುತ್ಸು ॥** | ಸೂಕ್ತದ ಏಳನೆಯ ಮಂತ್ರ. |

---

▲ ಇಂದ್ರ=ಇಂದ್ರನೇ! [ನೀನು]; **ಬಲವಿಜ್ಞಾಯಃ**=ಶತ್ರುಗಳ ಬಲವನ್ನು ತಿಳಿದಿರುವ; **ಸ್ಥವಿರಃ**=ಪುರಾತನನಾದ; **ಪ್ರವೀರಃ**=ಶ್ರೇಷ್ಠವೀರನಾದ; **ಸಹಸ್ವಾನ್**=ಬಲಿಷ್ಠನು; **ವಾಜೀ**=ಅನ್ನವಂತನು; **ಸಹಮಾನಃ**=ವೈರಿಗಳನ್ನು ಸೋಲಿಸುವವನು; **ಉಗ್ರಃ**=ಯುದ್ಧಗಳಲ್ಲಿ ಕ್ರೂರನಾದವನು; **ಅಭಿವೀರಃ**=ಸುತ್ತಲೂ ಶೂರರಿಂದ ಕೂಡಿದವನು; **ಅಭಿಸತ್ವಾ**=ಸುತ್ತಲೂ ಪರಿಚಾರಕರಿಂದಲೂ, ಗಜಾಶ್ವಾದಿ ಪ್ರಾಣಿಗಳಿಂದಲೂ ಯುಕ್ತನಾದವನು; **ಸಹೋಜಾಃ**=ಬಲದಿಂದ ಹುಟ್ಟಿದವನು/ಬಲಾಧಿಕನು; **ಗೋವಿತ್**=ಭೂಮಿಯನ್ನು ಪಡೆದವನು;[ಇಂತಹ ನೀನು] **ಜೈತ್ರಮ್**=ಜಯಶೀಲವಾಗಿರುವ; **ರಥಮ್**=ರಥವನ್ನು; **ಆ ತಿಷ್ಠ**=ಏರುವವನಾಗು; ▲ **ಅಭಿ ಗೋತ್ರಾಣಿ**=ಸುತ್ತಲೂ ಇರುವ ಯುದ್ಧಕ್ಷೇತ್ರಗಳನ್ನು; **ಸಹಸಾ**=ಒಡನೆಯೇ; **ಗಾಹಮಾನಃ**=ಪ್ರವೇಶಿಸುವ; **ಅದಾಯಃ**=ಜ್ಞಾತಿಗಳಿಲ್ಲದ/ಅದ್ವಿತೀಯನಾದ; **ವೀರಃ**=ಶೂರನಾದ; ***ಶತಮನ್ಯುಃ**=ನೂರಾರು ಬಗೆಯ ಕೋಪವುಳ್ಳ/ನೂರಾರು ಯಾಗಗಳನ್ನು ಮಾಡಿರುವ;

---

* ಮನ್ಯುರ್ದೈನ್ಯೇ ಕ್ರತೌ ಕ್ರುಧಿ । –ಅಮರಕೋಶ.

ದುಶ್ಚ್ಯವನಃ ಪೃತನಾಷಾಡಯುಧ್ಯೋಽಸ್ಮಾಕಗ್ಂ ಸೇನಾ ಅವತು ಪ್ರಯುಥ್ಸು ॥
ಇಂದ್ರ ಆಸಾಂ ನೇತಾ ಬೃಹಸ್ಪತಿರ್ದಕ್ಷಿಣಾ ಯಜ್ಞಃ ಪುರ ಏತು ಸೋಮಃ ।
ದೇವಸೇನಾನಾಮಭಿಭಂಜತೀನಾಂ ಜಯಂತೀನಾಂ ಮರುತೋ ಯನ್ತ್ವಗ್ರೇ ॥

---

ದುಶ್ಚ್ಯವನ ಇತಿ ದುಃ-ಚ್ಯವನಃ । ಪೃತನಾಷಾಟ್ । ಅಯುಧ್ಯಃ । ಅಸ್ಮಾಕಮ್ । ಸೇನಾಃ । ಅವತು । ಪ್ರೇತಿ । ಯುತ್ಸ್ವಿತಿ ಯುತ್-ಸು ॥ ಇಂದ್ರಃ । ಆಸಾಮ್ । ನೇತಾ । ಬೃಹಸ್ಪತಿಃ । ದಕ್ಷಿಣಾ । ಯಜ್ಞಃ । ಪುರಃ । ಏತು । ಸೋಮಃ । ದೇವಸೇನಾನಾಮಿತಿ ದೇವ-ಸೇನಾನಾಮ್ । ಅಭಿಭಂಜತೀನಾಮಿತ್ಯಭಿ-ಭಂಜತೀನಾಮ್ । ಜಯಂತೀನಾಮ್ । ಮರುತಃ । ಯಂತು । ಅಗ್ರೇ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಃ...ಯಂತ್ವಗ್ರೇ ॥ | ಸೂಕ್ತದ ಎಂಟನೆಯ ಮಂತ್ರ. |

---

**ದುಶ್ಚ್ಯವನಃ**=ಯಾರಿಂದಲೂ ಅಲುಗಾಡಿಸಲು ಸಾಧ್ಯವಿಲ್ಲದ; **ಪೃತನಾಷಾಟ್**=ಪರಕೀಯಸೈನ್ಯಗಳನ್ನು ಸೋಲಿಸಬಲ್ಲ; **ಅಯುಧ್ಯಃ**=ಯಾರಿಂದಲೂ ಎದುರಿಸಿ ಯುದ್ಧ ಮಾಡಲು ಸಾಧ್ಯವಿಲ್ಲದ; **ಇಂದ್ರಃ**=ಈ ಇಂದ್ರದೇವನು; **ಪ್ರ ಯುತ್ಸು**=ಮಹಾಯುದ್ಧಗಳಲ್ಲಿ; **ಅಸ್ಮಾಕಮ್**=ನಮ್ಮ; **ಸೇನಾಃ**=ಸೇನೆಗಳನ್ನು; **ಅವತು**=ರಕ್ಷಿಸಲಿ. ▲ **ಆಸಾಮ್**=[ನಮ್ಮ ಅನುಗ್ರಹಕ್ಕಾಗಿ ಶತ್ರುಗಳ ಮೇಲೆರಗುವ] ಸೇನೆಗಳಿಗೆ; **ಇಂದ್ರಃ**=ಇಂದ್ರನು; **ನೇತಾ**=ನಾಯಕನಾಗಲಿ. **ಬೃಹಸ್ಪತಿಃ**=ಬೃಹಸ್ಪತಿಯೂ; **ದಕ್ಷಿಣಾ**=ದಕ್ಷಿಣಾದೇವಿಯೂ; **ಯಜ್ಞಃ**=ಯಜ್ಞದೇವನೂ; **ಸೋಮಃ**=ಸೋಮದೇವನೂ; **ಪುರಃ ಏತು**=[ಇವರಲ್ಲಿ ಪ್ರತಿಯೊಬ್ಬರೂ ಸೇನೆಯ] ಮುಂದೆ ಹೋಗಲಿ; **ಅಭಿಭಂಜತೀನಾಮ್**=ಶತ್ರುಗಳನ್ನು ಧ್ವಂಸ ಮಾಡುವ; **ಜಯಂತೀನಾಮ್**=ಜಯಂತಿಗಳೆನಿಸಿಕೊಂಡಿರುವ; **ದೇವಸೇನಾನಾಮ್**=ದೇವಸೇನೆಗಳಿಗೆ; **ಮರುತಃ**=ಮರುದ್ದೇವತೆಗಳು; **ಅಗ್ರೇ**=ಮುಂಭಾಗದಲ್ಲಿ; **ಯಂತು**=ತೆರಳಲಿ [ನಮಗೆ ಜಯವನ್ನು ಒದಗಿಸಲಿ.]

---

ಹೇ! ವಾಕ್ಪತಿಯಾದ ಇಂದ್ರನೇ! ನೀನು ರಥದಲ್ಲಿ ಸಂಚರಿಸುವವನಾಗಿ, ವೈರಿಗಳನ್ನು ದೂರ ಮಾಡು. ನೀನು ಶತ್ರುಗಳನ್ನು ಗೆಲ್ಲುತ್ತಾ, ಯುದ್ಧದಲ್ಲಿ ಗೆಲ್ಲುತ್ತಾ, ನಮ್ಮ ರಥಗಳನ್ನು ರಕ್ಷಿಸುವವನಾಗು.

ಎಲೈ ಜ್ಞಾತಿಗಳೇ! ನೀವು ಇಂದ್ರನನ್ನು ಅನುಸರಿಸಿ ಪರಾಕ್ರಮವನ್ನು ಮೆರೆಸಿರಿ. ಇಂದ್ರನು ಬೆಟ್ಟದ ರೆಕ್ಕೆಗಳನ್ನು ಕತ್ತರಿಸಿದವನು. ಶತ್ರುಗಳನ್ನು ದೂರಮಾಡುವವನು. ವಜ್ರಾಯುಧವನ್ನು ಧರಿಸಿರುವವನು. ತನ್ನ ಬಲದಿಂದ ಶತ್ರುಗಳನ್ನು ಅಡಗಿಸುವವನು.

ಇಂದ್ರಸ್ಯ ವೃಷ್ಣೋ ವರುಣಸ್ಯ ರಾಜ್ಞ ಆದಿತ್ಯಾನಾಂ ಮರುತಾಗ್ಂ ಶರ್ಧ ಉಗ್ರಮ್ । ಮಹಾಮನಸಾಂ ಭುವನಚ್ಯವಾನಾಂ ಘೋಷೋ ದೇವಾನಾಂ ಜಯತಾಮುದಸ್ಥಾತ್ ॥

---

ಇಂದ್ರಸ್ಯ । ವೃಷ್ಣಃ । ವರುಣಸ್ಯ । ರಾಜ್ಞಃ । ಆದಿತ್ಯಾನಾಮ್ । ಮರುತಾಮ್ । ಶರ್ಧಃ । ಉಗ್ರಮ್ ॥ ಮಹಾಮನಸಾಮಿತಿ ಮಹಾ-ಮನಸಾಮ್ । ಭುವನಚ್ಯವಾನಾಮಿತಿ ಭುವನ-ಚ್ಯವಾನಾಮ್ । ಘೋಷಃ । ದೇವಾನಾಮ್ । ಜಯತಾಮ್ । ಉದಿತಿ । ಅಸ್ಥಾತ್ ॥

---

| ಮಂತ್ರ | ವಿನಿಯೋಗ |
|---|---|
| ಇಂದ್ರಸ್ಯ...ಉದಸ್ಥಾತ್ ॥ | ಸೂಕ್ತದ ಒಂಬತ್ತನೆಯ ಮಂತ್ರ. |

---

**ವೃಷ್ಣಃ**=ಇಷ್ಟಾರ್ಥಗಳನ್ನು ಸುರಿಸುವ; **ಇಂದ್ರಸ್ಯ**=ಇಂದ್ರನ; **ರಾಜ್ಞಃ**=ಪಶ್ಚಿಮದಿಕ್ಕಿನ ರಾಜನಾದ; **ವರುಣಸ್ಯ**=ವರುಣನ; **ಆದಿತ್ಯಾನಾಮ್**=ದ್ವಾದಶಸಂಖ್ಯೆಯ ಆದಿತ್ಯರ; **ಮರುತಾಮ್**=ಸಪ್ತ ಮರುದ್ದೇವತೆಗಳ; **ಶರ್ಧಃ**=ಬಲವು; **ಉಗ್ರಮ್**=[ಯುದ್ಧದಲ್ಲಿ] ಉಗ್ರವಾಗಿ [ಆಗಲಿ]; **ಮಹಾಮನಸಾಮ್**=ಯುದ್ಧದಲ್ಲಿ ಸ್ಥಿರವಾದ ಮನಸ್ಸುಳ್ಳ; **ಭುವನಚ್ಯವಾನಾಮ್**=[ಶತ್ರುಗಳನ್ನು] ಲೋಕಗಳಿಂದ ಓಡಿಸಬಲ್ಲ; **ಜಯತಾಮ್**=ಜಯಶೀಲರಾದ; **ದೇವಾನಾಮ್**=ದೇವತೆಗಳ; **ಘೋಷಃ**=ಜಯಘೋಷವು; **ಉತ್ ಅಸ್ಥಾತ್**=ಎಲ್ಲೆಡೆಗಳಲ್ಲಿಯೂ ಮೇಲೇರಲಿ.

---

ಹೇ! ಇಂದ್ರದೇವನೇ! ನೀನು ಜಯಶೀಲವಾದ ರಥವನ್ನು ಏರುವವನಾಗು. ನೀನು ಶತ್ರುಗಳ ಬಲವನ್ನು ಅರಿತವನು. ಬಲಿಷ್ಠನು. ಅನ್ನವಂತನು. ನಿನ್ನ ಸುತ್ತಲೂ ಪರಿಚಾರಕರೂ ಗಜಾಶ್ವಾದಿ ಪ್ರಾಣಿಗಳೂ ಇವೆ. ಇಂತಹ ಇಂದ್ರನು ಯುದ್ಧಗಳಲ್ಲಿ ಗೆಲುವನ್ನು ತಂದುಕೊಡಲಿ.

ಇಂದ್ರನು ಸುತ್ತಲಿನ ಯುದ್ಧಕ್ಷೇತ್ರಗಳಲ್ಲಿ ಒಮ್ಮೆಲೇ ನುಗ್ಗುವವನು. ನೂರಾರು ಯಾಗಗಳನ್ನು ಮಾಡಿರುವವನು. ನೂರಾರು ರೀತಿಯ ಕೋಪವುಳ್ಳವನು. ಪರಸೈನ್ಯವನ್ನು ಸೋಲಿಸುವವನು. ಇಂತಹ ಅದ್ವಿತೀಯನಾದ ಇಂದ್ರನು ನಮ್ಮ ಸೇನೆಯನ್ನು ಕಾಯಲಿ.

ನಮಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಶತ್ರುಗಳ ಮೇಲೆ ಎರಗುವ ಸೇನೆಗಳಿಗೆ ಇಂದ್ರನ ನಾಯಕತ್ವದಲ್ಲಿ ಬೃಹಸ್ಪತಿ, ದಕ್ಷಿಣಾದೇವಿ, ಯಜ್ಞದೇವ ಹಾಗೂ ಸೋಮದೇವನೂ ಈ ಒಬ್ಬೊಬ್ಬರೂ ಸೇನೆಯ ಮುಂದಿರಲಿ. ಮರುದ್ದೇವತೆಗಳೂ ಮುಂಭಾಗದಲ್ಲಿ ಹೋಗಿ ಯಾವಾಗಲೂ ಜಯವನ್ನು ಹೊಂದುವುದರಿಂದ ಜಯಂತಿಗಳೆನಿಸಿರುವ ದೇವಸೇನೆಗಳು ಮುನ್ನಡೆದು ನಮಗೆ ಜಯವುಂಟಾಗಲಿ.

**ಅಸ್ಮಾಕಮಿಂದ್ರಸ್ಸಮೃತೇಷು ಧ್ವಜೇಷ್ವಸ್ಮಾಕಂ ಯಾ ಇಷವಸ್ತಾ ಜಯಂತು ।**

**[(೧೮)] ಅಸ್ಮಾಕಂ ವೀರಾ ಉತ್ತರೇ ಭವಂತ್ವಸ್ಮಾನು ದೇವಾ ಅವತಾ ಹವೇಷು ॥**

**ಉದ್ಧರ್‌ಷಯ ಮಘವನ್ನಾಯುಧಾನ್ಯುತ್ಸತ್ತ್ವನಾಂ ಮಾಮಕಾನಾಂ ಮಹಾಗ್‌ಂಸಿ ।**

---

ಅಸ್ಮಾಕಮ್ । ಇಂದ್ರಃ । ಸಮೃತೇಷ್ವಿತಿ ಸಮ್-ಋತೇಷು । ಧ್ವಜೇಷು । ಅಸ್ಮಾಕಮ್ । ಯಾಃ । ಇಷವಃ । ತಾಃ । ಜಯಂತು ॥ (೧೮) । ಅಸ್ಮಾಕಮ್ । ವೀರಾಃ । ಉತ್ತರ ಇತ್ಯುತ್-ತರೇ । ಭವಂತು । ಅಸ್ಮಾನ್ । ಉ । ದೇವಾಃ । ಅವತ । ಹವೇಷು ॥ ಉದಿತಿ । ಹರ್‌ಷಯ । ಮಘವನ್ನಿತಿ ಮಘ-ವನ್ನ್ । ಆಯುಧಾನಿ । ಉದಿತಿ । ಸತ್ವನಾಮ್ । ಮಾಮಕಾನಾಮ್ । ಮಹಾಗ್‌ಂಸಿ ॥

---

| ಮಂತ್ರ | ವಿನಿಯೋಗ |
|---|---|
| **ಅಸ್ಮಾಕಂ...ಹವೇಷು ॥** | ಅಪ್ರತಿರಥಸೂಕ್ತದ ಹತ್ತನೆಯ ಹಾಗೂ ಕಡೆಯ ಮಂತ್ರ. |
| **ಉದ್ಧರ್‌ಷಯ...ಘೋಷಃ ॥** | ಈ ಅಪ್ರತಿರಥಸೂಕ್ತದಲ್ಲಿ ವೈಕಲ್ಪಿಕವಾದ ಐದು ಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

▲ **ಅಸ್ಮಾಕಮ್**=ನಮ್ಮ; **ಧ್ವಜೇಷು**=ಧ್ವಜಗಳುಳ್ಳ ಸೈನ್ಯಗಳು; **ಸಮೃತೇಷು** ಸತ್ಸು=ಶತ್ರುಗಳನ್ನು ಸರ್ವತ್ರ ವ್ಯಾಪಿಸಲಾಗಿ; **ಇಂದ್ರಃ**=ಇಂದ್ರನು; ರಕ್ಷಿತಾ ಭವತು=ರಕ್ಷಕನಾಗಲಿ; **ಅಸ್ಮಾಕಮ್**=ನಮ್ಮ; **ಯಾಃ**=ಯಾವ; **ಇಷವಃ**=ಬಾಣವೇ ಮೊದಲಾದ ಆಯುಧಗಳುಂಟೋ; **ತಾಃ**=ಅವುಗಳು; **ಜಯಂತು**=ಜಯವನ್ನು ತಂದು ಕೊಡಲಿ; **ಅಸ್ಮಾಕಮ್**=ನಮ್ಮ; **ವೀರಾಃ**=ವೀರರಾದ ಭಟರು; **ಉತ್ತರೇ ಭವಂತು**=ಶತ್ರುಭಟರಿಗಿಂತಲೂ ಉತ್ಕೃಷ್ಟರಾಗಲಿ; **ದೇವಾಃ**=ದೇವತೆಗಳೇ! **ಹವೇಷು**=ಯುದ್ಧಗಳಲ್ಲಿ; **ಅಸ್ಮಾನ್ ಉ**=ನಮ್ಮನ್ನು; **ಅವತ**= ರಕ್ಷಿಸಿರಿ. ▲ **ಮಘವನ್**=ಧನವಂತನಾದ ಇಂದ್ರನೇ! **ಆಯುಧಾನಿ**=ನಮ್ಮ ಆಯುಧಗಳನ್ನು; **ಉತ್ ಹರ್‌ಷಯ**=ಶತ್ರುಭಟರ ಆಯುಧಗಳಿಗಿಂತಲೂ ಉತ್ಕೃಷ್ಟವನ್ನಾಗಿ ಮಾಡಿ ನಮ್ಮನ್ನು ಸಂತೋಷಪಡಿಸು; **ಮಾಮಕಾನಾಮ್**=ನಮ್ಮದಾದ; **ಸತ್ವನಾಮ್**=ಗಜ-ಅಶ್ವಾದಿ ಪ್ರಾಣಿಗಳ; **ಮಹಾಗ್‌ಂಸಿ**=ತೇಜಸ್ಸುಗಳನ್ನು; **ಉತ್** ಹರ್‌ಷಯ=ಉತ್ಕೃಷ್ಟವಾಗಿ ಮಾಡಿ ಅವುಗಳನ್ನು ಸಂತೋಷವಾಗಿಡು.

---

ಇಲ್ಲಿ ದೇವತೆಗಳೂ, ದೇವೇಂದ್ರನೂ ನಮಗೆ ಜಯವನ್ನು ತರಲೆಂದು ಪ್ರಾರ್ಥನೆಯಿದೆ.

ಇಂದ್ರ, ವರುಣ, ಆದಿತ್ಯರು, ಮರುತರು ಮೊದಲಾದ ದೇವಮುಖ್ಯರು ನಮ್ಮ ಶತ್ರುಗಳ ಮೇಲೆ ತಮ್ಮ ಪರಾಕ್ರಮವನ್ನು ತೋರಿಸಲಿ. ದೇವತೆಗಳ ಜಯಘೋಷವು ಸರ್ವತ್ರ ವ್ಯಾಪಿಸಲಿ. ದೇವತೆಗಳ ಅನುಗ್ರಹದಿಂದ

ಉದ್ವೃತ್ರಹನ್ವಾಜಿನಾಂ ವಾಜಿನಾನ್ಯುದ್ರಥಾನಾಂ ಜಯತಾಮೇತು ಘೋಷಃ ॥

ಉಪಪ್ರೇತ ಜಯತಾನರಸ್ಸ್ಥಿರಾವಸ್ಸಂತು ಬಾಹವಃ । ಇಂದ್ರೋ ವಶ್ಶರ್ಮ

ಯಚ್ಛತ್ವನಾಧೃಷ್ಯಾ ಯಥಾಽಸಥ ॥

---

ಉದಿತಿ । ವೃತ್ರಹನ್ನಿತಿ ವೃತ್ರ-ಹನ್ । ವಾಜಿನಾಮ್ । ವಾಜಿನಾನಿ । ಉದಿತಿ । ರಥಾನಾಮ್ । ಜಯತಾಮ್ । ಏತು । ಘೋಷಃ ॥ ಉಪ । ಪ್ರೇತಿ । ಇತ । ಜಯತ । ನರಃ । ಸ್ಥಿರಾಃ । ವಃ । ಸಂತು । ಬಾಹವಃ ॥ ಇಂದ್ರಃ । ವಃ । ಶರ್ಮ । ಯಚ್ಛತು । ಅನಾಧೃಷ್ಯಾ ಇತ್ಯನಾ-ಧೃಷ್ಯಾಃ । ಯಥಾ । ಅಸಥ ॥

---

| ಮಂತ್ರ | ವಿನಿಯೋಗ |
|---|---|
| ಉಪ ಪ್ರೇತ...ಯಥಾಽಸಥ ॥ | ವೈಕಲ್ಪಿಕಮಂತ್ರಗಳಲ್ಲಿ ಎರಡನೆಯ ಮಂತ್ರ. |

---

**ವೃತ್ರಹನ್**=ವೃತ್ರನನ್ನು ಸಂಹರಿಸಿದ ಇಂದ್ರನೇ! **ವಾಜಿನಾಮ್**=ಕುದುರೆಗಳ; **ವಾಜಿನಾನಿ**=ಶೀಘ್ರಗಮನಗಳನ್ನು; **ಉತ್** ಹರ್ಷಯ=ಉತ್ಕೃಷ್ಟವನ್ನಾಗಿ ಮಾಡಿ ಸಂತೋಷದಿಂದಿರುವಂತೆ ಮಾಡು; **ಜಯತಾಮ್**=ಗೆಲ್ಲುವ; **ರಥಾನಾಮ್**=ನಮ್ಮ ರಥಗಳ; **ಘೋಷಃ**=ಧ್ವನಿಯು; **ಉತ್ ಏತು**=ಮೇಲಕ್ಕೆ ಹೋಗಲಿ. ▲ **ನರಃ**=ನಮ್ಮವರಾದ ಮಾನವರೇ! **ಉಪ ಪ್ರ ಇತ**=ಶತ್ರುಸೈನ್ಯಸಮೀಪಕ್ಕೆ ಚೆನ್ನಾಗಿ ಹೋಗಿರಿ; **ಜಯತ**=ಗೆಲ್ಲಿರಿ; **ವಃ**=ನಿಮ್ಮ; **ಬಾಹವಃ**=ತೋಳುಗಳು; **ಸ್ಥಿರಾಃ**=ಶತ್ರುಪ್ರಹರಣದಲ್ಲಿ ದೃಢವಾಗಿ; **ಸಂತು**=ಇರಲಿ; **ಯಥಾ**=ಹೇಗೆ; **ಅನಾಧೃಷ್ಯಾಃ**=ಯಾರಿಂದಲೂ ತಿರಸ್ಕರಿಸಲು ಸಾಧ್ಯವಿಲ್ಲದವರಾಗಿ; **ಅಸಥ**=ಆಗುತ್ತೀರೋ [ಹಾಗೆ]; **ಇಂದ್ರಃ**=ಇಂದ್ರನು; **ವಃ**=ನಿಮಗೆ; **ಶರ್ಮ**=ಸುಖವನ್ನು; **ಯಚ್ಛತು**=ಕೊಡಲಿ.

---

ನಮಗೆ ಶತ್ರುಗಳ ಮೇಲೆ ಜಯವುಂಟಾಗಲಿ.

ಧ್ವಜಗಳನ್ನು ಹೊಂದಿರುವ ನಮ್ಮ ಸೈನ್ಯಗಳು ಶತ್ರುಗಳನ್ನು ಸರ್ವತ್ರ ವ್ಯಾಪಿಸಲಿ. ಇಂದ್ರನು ನಮ್ಮನ್ನು ರಕ್ಷಿಸಲಿ. ನಮ್ಮ ಬಾಣವೇ ಮುಂತಾದ ಆಯುಧಗಳು ನಮಗೆ ಜಯವನ್ನು ತಂದುಕೊಡಲಿ. ನಮ್ಮ ಸೈನಿಕರು ಶತ್ರುಸೈನಿಕರಿಗಿಂತಲೂ ಹೆಚ್ಚಿನವರಾಗಲಿ. ಹೇ! ದೇವತೆಗಳೇ! ನೀವು ನಮ್ಮನ್ನು ಯುದ್ಧಗಳಲ್ಲಿ ರಕ್ಷಿಸಿರಿ.

ಹೇ! ಇಂದ್ರದೇವನೇ! ನಮ್ಮದಾದ ಆಯುಧಗಳನ್ನು ಶತ್ರುಗಳ ಆಯುಧಗಳಿಗಿಂತಲೂ ಉತ್ಕೃಷ್ಟಗೊಳಿಸು. ನಾವು ಹರ್ಷಿಸುವೆವು. ನಮ್ಮದಾದ ಪ್ರಾಣಿಗಳ ತೇಜಸ್ಸು ಹೆಚ್ಚಲಿ. ನಮ್ಮ ಕುದುರೆಗಳ ವೇಗವು ಇಮ್ಮಡಿಯಾಗಲಿ. ನಮ್ಮ ರಥಧ್ವನಿಯು ಮೇಲೇರಲಿ.

ಹೇ! ನಮ್ಮವರಾದ ವೀರಮಾನವರೇ! ದೃಢವಾದ ತೋಳುಗಳು ನಿಮ್ಮದಾಗಲಿ. ನೀವು ಶತ್ರುಸೈನ್ಯಕ್ಕೆ ನುಗ್ಗಿರಿ. ನಿಮ್ಮನ್ನು ಯಾರೂ ಎದುರಿಸಲಾಗದಂತೆ ಇಂದ್ರನು ಅನುಗ್ರಹಿಸಲಿ.

ಅವಸೃಷ್ಟಾ ಪರಾಪತ ಶರವ್ಯೇ ಬ್ರಹ್ಮಸಗ್ಂಶಿತಾ । ಗಚ್ಛಾಮಿತ್ರಾನ್ಪ್ರ [(೧೯) ವಿಶ ಮೈಷಾಂ] ವಿಶ ಮೈಷಾಂ ಕಂ ಚನೋಚ್ಛಿಷಃ ॥ ಮರ್ಮಾಣಿ ತೇ ವರ್ಮಭಿಶ್ಛಾದಯಾಮಿ ಸೋಮಸ್ತ್ವಾ ರಾಜಾಽಮೃತೇನಾಭಿವಸ್ತಾಮ್ ।

---

ಅವಸೃಷ್ಟೇತ್ಯವ-ಸೃಷ್ಟಾ । ಪರೇತಿ । ಪತ । ಶರವ್ಯೇ । ಬ್ರಹ್ಮಸಗ್ಂಶಿತೇತಿ ಬ್ರಹ್ಮ-ಸಗ್ಂಶಿತಾ ॥ ಗಚ್ಛ । ಅಮಿತ್ರಾನ್ । ಪ್ರೇತಿ । (೧೯) । ವಿಶ । ಮಾ । ಏಷಾಮ್ । ಕಮ್ । ಚನ । ಉದಿತಿ । ಶಿಷಃ ॥ ಮರ್ಮಾಣಿ । ತೇ । ವರ್ಮಭಿರಿತಿ ವರ್ಮ-ಭಿಃ । ಛಾದಯಾಮಿ । ಸೋಮಃ । ತ್ವಾ । ರಾಜಾ । ಅಮೃತೇನ । ಅಭೀತಿ । ವಸ್ತಾಮ್ ॥

---

| ಮಂತ್ರ | ವಿನಿಯೋಗ |
|---|---|
| **ಅವಸೃಷ್ಟಾ...ಕಂ ಚನೋಚ್ಛಿಷಃ ॥** | ವೈಕಲ್ಪಿಕಮಂತ್ರಗಳಲ್ಲಿ ಮೂರನೆಯ ಮಂತ್ರ. |
| **ಮರ್ಮಾಣಿ...ದೇವಾಃ ॥** | ವೈಕಲ್ಪಿಕಮಂತ್ರಗಳಲ್ಲಿ ನಾಲ್ಕನೆಯ ಮಂತ್ರ. |

---

▲ **ಶರವ್ಯೇ**=ಹಿಂಸಿಸುವ ಆಯುಧವಿಶೇಷವೇ! **ಬ್ರಹ್ಮಸಗ್ಂಶಿತಾ**=ಬ್ರಹ್ಮನಿಂದ/ಮಂತ್ರದಿಂದ ತೀಕ್ಷ್ಣಗೊಳಿಸಲ್ಪಟ್ಟು; **ಅವಸೃಷ್ಟಾ**=ನಮ್ಮಿಂದ ವೇಗವಾಗಿ ಪ್ರಯೋಗಿಸಲ್ಪಟ್ಟು; **ಪರಾಪತ**=ಶತ್ರುಗಳ ಮೇಲೆ ಬೀಳು; **ಅಮಿತ್ರಾನ್**=[ಬಿದ್ದು] ಶತ್ರುಗಳನ್ನು; **ಗಚ್ಛ**=ಸೇರು; **ಪ್ರ ವಿಶ**=[ಸೇರಿ] ಅವರ ಶರೀರಗಳನ್ನು ಪ್ರವೇಶಿಸು; **ಏಷಾಮ್**=[ಪ್ರವೇಶಿಸಿ] ಈ ಶತ್ರುಗಳ ನಡುವೆ; **ಕಮ್ ಚನ**=ಯಾವನೊಬ್ಬನನ್ನೂ; **ಮಾ ಉತ್ ಶಿಷಃ**=ಉಳಿಸಬೇಡ/ಎಲ್ಲರನ್ನೂ ಸಂಹರಿಸು. ▲ [ಯಜಮಾನನೇ!]**ತೇ**=ನಿನ್ನ; **ಮರ್ಮಾಣಿ**=ಮರ್ಮಸ್ಥಾನಗಳನ್ನು; **ವರ್ಮಭಿಃ**=ಕವಚಗಳಿಂದ; **ಛಾದಯಾಮಿ**=ಹೊದ್ದಿಸುತ್ತೇನೆ; **ತ್ವಾ**=ನಿನ್ನನ್ನು; **ಸೋಮಃ ರಾಜಾ**=ರಾಜನಾದ ಸೋಮನು; **ಅಮೃತೇನ**=ಮರಣವನ್ನು ತಡೆಯುವ ಕವಚವಿಶೇಷದಿಂದ; **ಅಭಿ ವಸ್ತಾಮ್**=ಸುತ್ತಲೂ ಆಚ್ಛಾದಿಸಲಿ.

---

ಎಲೈ! ಹಿಂಸಕವಾದ ಆಯುಧವೇ! ನೀನು ಮಂತ್ರದಿಂದ ಬಲಿಷ್ಠವಾಗಿ ಶತ್ರುಗಳನ್ನು ನಿಃಶೇಷರನ್ನಾಗಿಸು. ಈ ಮಂತ್ರದಲ್ಲಿ ನೇರವಾಗಿ ಇಂದ್ರನನ್ನು ಹೇಳದಿದ್ದರೂ ಇಂದ್ರಪ್ರಾರ್ಥನೆಯ ಪ್ರಕರಣವಾಗಿರುವುದರಿಂದ ಹೀಗೆ ಇಂದ್ರನು ಅನುಗ್ರಹಿಸಲೆಂದು ಪ್ರಾರ್ಥನೆಯೆಂದು ತಿಳಿಯಬೇಕು.

ಈ ಮಂತ್ರದಲ್ಲಿ ಇಂದ್ರ ಮತ್ತು ಸೋಮದೇವತೆಗಳ ಪ್ರಾರ್ಥನೆಯು ಇದೆ. ಹೇ! ಯಜಮಾನನೇ! ನಿನ್ನನ್ನು ಸೋಮನು ಕವಚದಿಂದ ಮುಚ್ಚಲಿ. ನಿನ್ನ ಸಂಪತ್ತು ಉಳಿದವರ ಹೆಚ್ಚಾದ ಸಂಪತ್ತಿಗಿಂತಲೂ ಮಿಗಿಲಾಗಿರಲಿ. ಗೆಲುವಿನಿಂದ ಕೂಡಿದ ನಿನ್ನನ್ನು ದೇವತೆಗಳು ಸಂತೋಷಗೊಳ್ಳುವಂತೆ ಮಾಡಲಿ.

ಉರೋರ್ವರೀಯೋ ವರಿವಸ್ತೇ ಅಸ್ತು ಜಯಂತಂ ತ್ವಾಮನುಮದಂತು ದೇವಾಃ ॥

ಯತ್ರ ಬಾಣಾಸ್ಸಪತಂತಿ ಕುಮಾರಾ ವಿಶಿಖಾ ಇವ । ಇಂದ್ರೋನಸ್ತತ್ರ ವೃತ್ರಹಾ

ವಿಶ್ವಾಹಾ ಶರ್ಮ ಯಚ್ಛತು ॥ ೨೦–4 ॥

[ದೀಯಾದಾಯೋ ಜಯಂತ್ವಮಿತ್ರಾನ್ಸ್ರ ಚತ್ವಾರಿಗ್ಂಶಚ್ಚ ॥]

---

ಉರೋಃ । ವರೀಯಃ । ವರಿವಃ । ತೇ । ಅಸ್ತು । ಜಯಂತಮ್ । ತ್ವಾಮ್ । ಅನ್ವಿತಿ । ಮದಂತು । ದೇವಾಃ ॥ ಯತ್ರ । ಬಾಣಾಃ । ಸಂಪತಂತೀತಿ ಸಮ್–ಪತಂತಿ । ಕುಮಾರಾಃ । ವಿಶಿಖಾ ಇತಿ ವಿ–ಶಿಖಾಃ । ಇವ ॥ ಇಂದ್ರಃ । ನಃ । ತತ್ರ । ವೃತ್ರಹೇತಿ ವೃತ್ರ–ಹಾ । ವಿಶ್ವಾಹೇತಿ ವಿಶ್ವ–ಹಾ । ಶರ್ಮ । ಯಚ್ಛತು ॥ (೨೦) ॥

---

| ಮಂತ್ರ | ವಿನಿಯೋಗ |
| --- | --- |
| ಯತ್ರ ಬಾಣಾಃ...ಯಚ್ಛತು ॥ | ವೈಕಲ್ಪಿಕಮಂತ್ರಗಳಲ್ಲಿ ಐದನೆಯ ಮಂತ್ರ. |

---

**ತೇ**=ನಿನ್ನ; **ವರಿವಃ**=ಧನವು; **ಉರೋಃ**=ಬೇರೆಯವರ ಅಧಿಕಧನಕ್ಕಿಂತಲೂ; **ವರೀಯಃ**=ಮತ್ತೂ ಹೆಚ್ಚಾಗಿ; **ಅಸ್ತು**=ಆಗಲಿ; **ಜಯಂತಮ್**=ಗೆಲ್ಲುತ್ತಿರುವ; **ತ್ವಾಮ್**=ನಿನ್ನನ್ನು;[ನೋಡಿ] **ದೇವಾಃ**=ದೇವತೆಗಳು; **ಅನು ಮದಂತು**=ಅನುಕೂಲರಾಗಿ ಸಂತೋಷಿಸಲಿ. 🔔 **ಯತ್ರ**=ಯಾವ ಯುದ್ಧದಲ್ಲಿ; **ಬಾಣಾಃ**=ಬಾಣಗಳು; **ವಿಶಿಖಾಃ**=ಮುಂಡನ ಮಾಡಿದ ತಲೆಯುಳ್ಳ/ಚದುರಿದ ಕೂದಲುಗಳುಳ್ಳ; **ಕುಮಾರಾಃ ಇವ**=ಬಾಲಕರಂತೆ; **ಸಂಪತಂತಿ**=ಎಲ್ಲ ಕಡೆಗಳಲ್ಲಿಯೂ ಬಂದು ಬೀಳುತ್ತವೆಯೋ; **ತತ್ರ**=ಆ ಯುದ್ಧದಲ್ಲಿ; **ವಿಶ್ವಾಹಾ**=ಪರಕೀಯವಾದ ಎಲ್ಲಾ ಪ್ರಾಣಿಗಳನ್ನೂ ಸಂಹರಿಸುವ; **ವೃತ್ರಹಾ**=ವಿಶೇಷವಾಗಿ ಬಲಿಷ್ಠರಾದ ವೃತ್ರರಂತಹ ಶತ್ರುಗಳನ್ನು ಕೊಲ್ಲುವ; **ಇಂದ್ರಃ**=ಇಂದ್ರನು; **ನಃ**=ನಮಗೆ; **ಶರ್ಮ**=ಸುಖವನ್ನು; **ಯಚ್ಛತು**=ಕೊಡಲಿ.

---

**ಯಾವ ಯುದ್ಧದಲ್ಲಿ ಚದುರಿದ ಕೂದಲಿನ ಬಾಲಕರಂತೆ ಬಾಣಗಳು ಎಲ್ಲೆಡೆ ಎರಗುತ್ತವೆಯೋ, ಅಂತಹ ಯುದ್ಧದಲ್ಲಿ ಶತ್ರುಸಂಹಾರಕನಾದ ಇಂದ್ರನು ನಮಗೆ ಸುಖವನ್ನು ಕೊಡಲಿ.**

---

## ವಿನಿಯೋಗಸಂಗ್ರಹ

1-10ಆಶುರಿತ್ಯಪ್ರತಿರಥಂ ಹೋತಾಽನ್ವಾಹ ದಶರ್ಚಕಮ್ ।

11-15ಉದ್ಧರ್ಷೇತಿ ವಿಕಲ್ಪಾರ್ಥಾ ಮಂತ್ರಾಃ ಪಂಚದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–15

ಊ❀ಣಊ❀ಣ

## ॥ ಪಂಚಮೋಽನುವಾಕಃ ॥

ಪ್ರಾಚೀಮನು ಪ್ರದಿಶಂ ಪ್ರೇಹಿ ವಿದ್ವಾನಗ್ನೇರಗ್ನೇ ಪುರೋ ಅಗ್ನಿರ್ಭವೇಹ । ವಿಶ್ವಾ ಆಶಾ ದೀದ್ಯಾನೋ ವಿ ಭಾಹ್ಯೂರ್ಜಂ ನೋ ಧೇಹಿ ದ್ವಿಪದೇ ಚತುಷ್ಪದೇ ॥

---

ಪ್ರಾಚೀಮ್ । ಅನ್ವಿತಿ । ಪ್ರದಿಶಮಿತಿ ಪ್ರ-ದಿಶಮ್ । ಪ್ರೇತಿ । ಇಹಿ । ವಿದ್ವಾನ್ । ಅಗ್ನೇಃ । ಅಗ್ನೇ । ಪುರೋಅಗ್ನಿರಿತಿ ಪುರಃ-ಅಗ್ನಿಃ । ಭವ । ಇಹ ॥ ವಿಶ್ವಾಃ । ಆಶಾಃ । ದೀದ್ಯಾನಃ । ವೀತಿ । ಭಾಹಿ । ಊರ್ಜಮ್ । ನಃ । ಧೇಹಿ । ದ್ವಿಪದ ಇತಿ ದ್ವಿ-ಪದೇ । ಚತುಷ್ಪದ ಇತಿ ಚತುಃ-ಪದೇ ॥

---

ನಾಲ್ಕನೆಯ ಅನುವಾಕದಲ್ಲಿ ಅಗ್ನಿಪ್ರಣಯನದ ಅಂಗವಾದ ಅಪ್ರತಿರಥಸೂಕ್ತವು ಉಕ್ತವಾಗಿದೆ. ಈ ಐದನೆಯ ಅನುವಾಕದಲ್ಲಿ ಅಗ್ನಿಸ್ಥಾಪನವು ಹೇಳಲ್ಪಡುತ್ತದೆ. **'ಪ್ರಾಚೀಮನು ಪ್ರದಿಶಮಿತಿ ಪಂಚಭಿರಗ್ನಿಮಧಿರುಹ್ಯ' [ಆಪ. ಶ್ರೌ. ಸೂ. 17.15.1]** ಎಂದು ಕಲ್ಪಸೂತ್ರವಿದೆ.

---

| ಮಂತ್ರ | ವಿನಿಯೋಗ |
|---|---|
| **ಪ್ರಾಚೀಮನು...ಚತುಷ್ಪದೇ ॥** | ಅಗ್ನ್ಯಧಿರೋಹದ ಪ್ರಥಮಮಂತ್ರ. |

---

▲ **ಅಗ್ನೇ**=ಈಗ ಇಲ್ಲಿ ತಂದಿರುವ ಅಗ್ನಿಯೇ! **ಪ್ರಾಚೀಮ್**=ಪೂರ್ವವೆಂಬ ಹೆಸರಿನ; **ಪ್ರದಿಶಮ್**=ಶ್ರೇಷ್ಠವಾದ ದಿಕ್ಕನ್ನು; **ವಿದ್ವಾನ್**=ಬಲ್ಲವನಾದ [ನೀನು]; **ಅನು ಪ್ರೇಹಿ**=ಅನುಕ್ರಮವಾಗಿ ಉತ್ಕೃಷ್ಟವಾಗುವಂತೆ ಹೋಗು. **ಅಗ್ನೇಃ**=[ನೀನು] ಇಷ್ಟಕಾನಿರ್ಮಿತವಾದ ಚಯನರೂಪಾಗ್ನಿಯ; **ಪುರೋಅಗ್ನಿಃ**=ಮುಂಭಾಗದಲ್ಲಿರುವ ಅಗ್ನಿಯಾಗಿ/ಮುಖ್ಯನಾದ ಅಗ್ನಿಯಾಗಿ; **ಇಹ**=ಈ ಕರ್ಮದಲ್ಲಿ; **ಭವ**=ಆಗು; **ವಿಶ್ವಾಃ**=ಎಲ್ಲ; **ಆಶಾಃ**=ದಿಕ್ಕುಗಳನ್ನೂ; **ದೀದ್ಯಾನಃ**=ಪ್ರಕಾಶಪಡಿಸುವವನಾಗಿ; **ವಿ ಭಾಹಿ**=ನೀನೂ ವಿಶೇಷವಾಗಿ ಪ್ರಕಾಶಿಸು. **ನಃ**=ನಮ್ಮವರಾದ; **ದ್ವಿಪದೇ**=ಎರಡು ಕಾಲಿನ ಮನುಷ್ಯರಿಗೂ; **ಚತುಷ್ಪದೇ**=ನಾಲ್ಕು ಕಾಲಿನ ಪ್ರಾಣಿಗಳಿಗೂ; **ಊರ್ಜಮ್**=ಅನ್ನವನ್ನು; **ಧೇಹಿ**=ಸಮೃದ್ಧಿಯಾಗಿ ಕೊಡು.

**ಕ್ರಮಧ್ವಮಗ್ನಿನಾ ನಾಕಮುಖ್ಯಗ್ಂ ಹಸ್ತೇಷು ಬಿಭ್ರತಃ । ದಿವಃ ಪೃಷ್ಠಗ್ಂ ಸುವರ್ಗತ್ವಾ ಮಿಶ್ರಾ ದೇವೇಭಿರಾಧ್ವಮ್ ॥ ಪೃಥಿವ್ಯಾ ಅಹಮುದಂತರಿಕ್ಷಮಾಽರುಹಮಂತರಿಕ್ಷಾದ್ದಿವಮಾಽರುಹಮ್ ।**

---

ಕ್ರಮಧ್ವಮ್ । ಅಗ್ನಿನಾ । ನಾಕಮ್ । ಉಖ್ಯಮ್ । ಹಸ್ತೇಷು । ಬಿಭ್ರತಃ ॥ ದಿವಃ । ಪೃಷ್ಠಮ್ । ಸುವಃ । ಗತ್ವಾ । ಮಿಶ್ರಾಃ । ದೇವೇಭಿಃ । ಆಧ್ವಮ್ ॥ ಪೃಥಿವ್ಯಾಃ । ಅಹಮ್ । ಉದಿತಿ । ಅಂತರಿಕ್ಷಮ್ । ಏತಿ । ಅರುಹಮ್ । ಅಂತರಿಕ್ಷಾತ್ । ದಿವಮ್ । ಏತಿ । ಅರುಹಮ್ ॥

---

| ಮಂತ್ರ | ವಿನಿಯೋಗ |
| --- | --- |
| **ಕ್ರಮಧ್ವಮ್...ಆಧ್ವಮ್ ॥** | ಅಗ್ನ್ಯಧಿರೋಹದ ಎರಡನೆಯ ಮಂತ್ರ. |
| **ಪೃಥಿವ್ಯಾ...ಅಹಮ್ ॥** | ಅಗ್ನ್ಯಧಿರೋಹದ ಮೂರನೆಯ ಮಂತ್ರ. |

---

▲ [ಋತ್ವಿಗ್ಯಜಮಾನರೇ!] **ನಾಕಮ್**=ಸ್ವರ್ಗಸಾಧನವಾದ; **ಉಖ್ಯಮ್**=ಉಖೆಯಲ್ಲಿ ಮೊದಲು ಸಂಪಾದಿಸಿರುವ ಅಗ್ನಿಯನ್ನು; **ಹಸ್ತೇಷು**= ಕೈಗಳಲ್ಲಿ; **ಬಿಭ್ರತಃ**=ಧರಿಸಿರುವವರಾಗಿ; **ಅಗ್ನಿನಾ**=ಆ ಅಗ್ನಿಯೊಡನೆ; **ಕ್ರಮಧ್ವಮ್**=ಚಯನರೂಪಾಗ್ನಿಯ ಮೇಲೆ ಹೆಜ್ಜೆಯನ್ನಿಡಿರಿ. [ಬಳಿಕ] **ದಿವಃ**=ಆಕಾಶದ; **ಪೃಷ್ಠಮ್**= ಮೇಲಿರುವ; **ಸುವಃ**=ಸ್ವರ್ಗಲೋಕಕ್ಕೆ; **ಗತ್ವಾ**=ಹೋಗಿ; **ದೇವೇಭಿಃ**=ದೇವತೆಗಳೊಡನೆ; **ಮಿಶ್ರಾಃ**=ಸೇರಿದವರಾಗಿ; **ಆಧ್ವಮ್**=ಕುಳಿತುಕೊಳ್ಳಿರಿ. ▲ **ಅಹಮ್**=ಯಜಮಾನನಾದ ನಾನು; **ಪೃಥಿವ್ಯಾಃ**=ಭೂಮಿಯಿಂದ; **ಉತ್**=ಮೇಲೆ ಹೋದವನಾಗಿ; **ಅಂತರಿಕ್ಷಮ್**=ಅಂತರಿಕ್ಷವನ್ನು; **ಆ ಅರುಹಮ್**=ಏರಿದೆನು; **ಅಂತರಿಕ್ಷಾತ್**=ಅಂತರಿಕ್ಷದಿಂದ; **ದಿವಮ್**=ದ್ಯುಲೋಕಕ್ಕೆ; **ಆ ಅರುಹಮ್**=ಏರಿದೆನು.

---

**ಈ ಪ್ರಕರಣದಲ್ಲಿ ಇಷ್ಟಕೆಗಳ ಚಿತಿಯನ್ನು ಅಗ್ನಿಯೆಂದು ಶ್ರುತಿಯು ಹೇಳುತ್ತದೆ. ಹೋಮಕ್ಕಾಗಿ ಅಲ್ಲಿ ಸ್ಥಾಪಿಸುವ ಉಖ್ಯಾಗ್ನಿಗೂ ಅಗ್ನಿಯೆಂದೇ ಹೆಸರು. ಅಗ್ನಿಯ ಮುಂಭಾಗದ ಅಗ್ನಿಯೆಂಬುದನ್ನು ಹೀಗೆ ತಿಳಿಯಬೇಕು.**

**ಹೇ! ಅಗ್ನಿಯೇ! ನೀನು ಪೂರ್ವದಿಕ್ಕನ್ನು ಕುರಿತು ತೆರಳುವವನಾಗು. ಎಲ್ಲ ದಿಕ್ಕುಗಳನ್ನೂ ಪ್ರಕಾಶಪಡಿಸುವವನಾಗು. ನಮ್ಮ ಎಲ್ಲ ಪ್ರಾಣಿಗಳನ್ನೂ ಅನ್ನವಿತ್ತು ಸಮೃದ್ಧರನ್ನಾಗಿಸು.**

**ಎಲೈ! ಋತ್ವಿಜರೇ! ಯಜಮಾನರೇ! ನೀವು ಕೈಯಲ್ಲಿ ಉಖ್ಯಾಗ್ನಿಯನ್ನು ಧರಿಸಿದವರಾಗಿ, ಅದರೊಡನೆ ಚಯನರೂಪವಾದ ಅಗ್ನಿಯ ಮೇಲೆ ಹೆಜ್ಜೆಯನ್ನಿಟ್ಟು, ಸ್ವರ್ಗವನ್ನು ಹೊಂದುವವರಾಗಿ ದೇವತೆಗಳೊಡನೆ ಸೇರಿ ಕುಳಿತುಕೊಳ್ಳಿರಿ. ಈ ಪಾದಕ್ಷೇಪವು ಸ್ವರ್ಗಪ್ರಾಪ್ತಿಯನ್ನು ಮಾಡಿಕೊಡಲಿ.**

**ದಿವೋ ನಾಕಸ್ಯ ಪೃಷ್ಠಾತ್ಸುವರ್ಜ್ಯೋತಿರಗಾ[ರಗಾಮ್(೨೧)ಅಹಮ್ ।]**

**ಮಹಮ್ ॥ ಸುವರ್ಯಂತೋ ನಾಪೇಕ್ಷಂತ ಆ ದ್ಯಾಗ್‍ಂ ರೋಹಂತಿ ರೋದಸೀ ।**

**ಯಜ್ಞಂ ಯೇ ವಿಶ್ವತೋಧಾರಗ್‍ಂ ಸುವಿದ್ವಾಗ್‍ಂಸೋ ವಿತೇನಿರೇ ॥**

---

ದಿವಃ । ನಾಕಸ್ಯ । ಪೃಷ್ಠಾತ್ । ಸುವಃ । ಜ್ಯೋತಿಃ । ಅಗಾಮ್ । (೨೧) । ಅಹಮ್ ॥ ಸುವಃ । ಯಂತಃ । ನ । ಅಪೇತಿ । ಈಕ್ಷಂತೇ । ಐತಿ । ದ್ಯಾಮ್ । ರೋಹಂತಿ । ರೋದಸೀ ಇತಿ ॥ ಯಜ್ಞಮ್ । ಯೇ । ವಿಶ್ವತೋಧಾರಮಿತಿ ವಿಶ್ವತಃ-ಧಾರಮ್ । ಸುವಿದ್ವಾಗ್‍ಂಸ ಇತಿ ಸು-ವಿದ್ವಾಗ್‍ಂಸಃ । ವಿತೇನಿರ ಇತಿ ವಿ-ತೇನಿರೇ ॥

---

| ಮಂತ್ರ | ವಿನಿಯೋಗ |
|---|---|
| **ಸುವರ್ಯಂತೋ...ವಿತೇನಿರೇ ॥** | ಅಗ್ನ್ಯಧಿರೋಹದ ನಾಲ್ಕನೆಯ ಮಂತ್ರ. |

---

**ದಿವಃ**=ದ್ಯುಲೋಕಸಂಬಂಧಿಯಾದ; **ನಾಕಸ್ಯ**=ದುಃಖರಹಿತವಾದ ಪ್ರದೇಶದ; **ಪೃಷ್ಠಾತ್**=ಮೇಲ್ಭಾಗದಿಂದ; **ಸುವಃ**=ಸ್ವರ್ಗಲೋಕದಲ್ಲಿರುವ; **ಜ್ಯೋತಿಃ**=ಆದಿತ್ಯರೂಪವಾದ ಜ್ಯೋತಿರ್ಮಂಡಲವನ್ನು; **ಅಹಮ್ ಅಗಾಮ್**=ನಾನು ಹೊಂದಿದವನಾಗಿದ್ದೇನೆ/ಹೊಂದುವೆನು; ▲ **ಯೇ**=ಯಾವ ಯಜಮಾನರು; **ಸುವಿದ್ವಾಗ್‍ಂಸಃ**=ಅನುಷ್ಠಾನಪ್ರಕಾರವನ್ನು ಚೆನ್ನಾಗಿ ತಿಳಿದವರಾಗಿ; **ವಿಶ್ವತೋಧಾರಮ್**=ಜಗತ್ತಿನ ಧಾರಣ ಹೇತುವಾದ; **ಯಜ್ಞಮ್**=ಯಾಗವನ್ನು; **ವಿತೇನಿರೇ**=ವಿಸ್ತಾರವಾಗಿ ಅನುಷ್ಠಿಸಿದರೋ; [ಆ ಯಜಮಾನರು] **ದ್ಯಾಮ್**=ಅಂತರಿಕ್ಷಕ್ಕೆ; **ಆ ರೋಹಂತಿ**=ಏರುತ್ತಾರೆ. **ರೋದಸೀ**=ದ್ಯಾವಾಪೃಥಿವಿಗಳನ್ನೂ; ಆರೋಹಂತಿ =ಏರುತ್ತಾರೆ. **ಸುವಃ**=ಸ್ವರ್ಗವಾಸಿಯಾದ ಆದಿತ್ಯರೂಪಜ್ಯೋತಿರ್ಮಂಡಲವನ್ನು; **ಯಂತಃ**=ಪಡೆಯುವ ಅವರು; **ನ ಅಪೇಕ್ಷಂತೇ**=[ಬೇರೆ ಯಾವ ಸ್ಥಾನವನ್ನೂ] ಬಯಸುವುದಿಲ್ಲ.

---

ಯಜಮಾನನಾದ ನಾನು ಭೂಮಿಯಿಂದ ಅಂತರಿಕ್ಷಕ್ಕೂ, ಅಲ್ಲಿಂದ ದ್ಯುಲೋಕಕ್ಕೆ ಏರಿದೆನು. ದ್ಯುಲೋಕದಲ್ಲಿರುವ *ನಾಕದಿಂದ ಸ್ವರ್ಗಲೋಕದ ಸೂರ್ಯರೂಪಜ್ಯೋತಿರ್ಮಂಡಲವನ್ನು ಸೇರುವೆನು.

ಯಜ್ಞವು ಜಗದಾಧಾರವೆಂದು ಈ ಮಂತ್ರಗಳಲ್ಲಿ ಹೆಚ್ಚಾಗಿ ಹೇಳಲಾಗಿದೆ.

---

* ನಾಕ=ದುಃಖವಿಲ್ಲದ ಪ್ರದೇಶ.

**ಯನ್ನ ದುಃಖೇನ ಸಂಭಿನ್ನಂ ನ ಚ ಗ್ರಸ್ತಮನಂತರಮ್ ।**

**ಅಭಿಲಾಷೋಪನೀತಂ ಚ ತತ್ಸುಖಂ ಸ್ವಃ ಪದಾಸ್ಪದಮ್ ॥**

ದುಃಖದಿಂದ ಮಿಶ್ರವಾಗದ, ನಾಶವಾಗದ, ಇಚ್ಛೆಯಂತೆ ಒದಗುವ ಸುಖವೇ ಸ್ವರ್ಗವೆನಿಸುವುದು.

**ಅಗ್ನೇ ಪ್ರೇಹಿ ಪ್ರಥಮೋ ದೇವಯತಾಂ ಚಕ್ಷುರ್ದೇವಾನಾಮುತ ಮರ್ತ್ಯಾನಾಮ್ ।**

**ಇಯಕ್ಷಮಾಣಾ ಭೃಗುಭಿಃ ಸಜೋಷಾಃ ಸುವರ್ಯಂತು ಯಜಮಾನಾಃ ಸ್ವಸ್ತಿ ॥**

**ನಕ್ತೋಷಾಸಾ ಸಮನಸಾ ವಿರೂಪೇ ಧಾಪಯೇತೇ ಶಿಶುಮೇಕಗ್ಂ ಸಮೀಚೀ ।**

---

ಅಗ್ನೇ । ಪ್ರೇತಿ । ಇಹಿ । ಪ್ರಥಮಃ । ದೇವಯತಾಮಿತಿ ದೇವ-ಯತಾಮ್ । ಚಕ್ಷುಃ । ದೇವಾನಾಮ್ । ಉತ । ಮರ್ತ್ಯಾನಾಮ್ ॥ ಇಯಕ್ಷಮಾಣಾಃ । ಭೃಗುಭಿರಿತಿ ಭೃಗು-ಭಿಃ । ಸಜೋಷಾ ಇತಿ ಸ-ಜೋಷಾಃ । ಸುವಃ । ಯಂತು । ಯಜಮಾನಾಃ । ಸ್ವಸ್ತಿ ॥ ನಕ್ತೋಷಾಸಾ । ಸಮನಸೇತಿ ಸ-ಮನಸಾ । ವಿರೂಪೇ ಇತಿ ವಿ-ರೂಪೇ । ಧಾಪಯೇತೇ ಇತಿ । ಶಿಶುಮ್ । ಏಕಮ್ । ಸಮೀಚೀ ಇತಿ ।

---

| ಮಂತ್ರ | ವಿನಿಯೋಗ |
|---|---|
| **ಅಗ್ನೇ ಪ್ರೇಹಿ...ಸ್ವಸ್ತಿ ॥** | ಅಗ್ನ್ಯಧಿರೋಹದ ಐದನೆಯ ಹಾಗೂ ಕಡೆಯ ಮಂತ್ರ. |
| **ನಕ್ತೋಷಾಸಾ...ದ್ರವಿಣೋದಾಃ ॥** | ಔದುಂಬರೀದರ್ವಿಯಿಂದ ಸ್ವಯಮಾತೃಣ್ಣೇಷ್ಟಕೆಯಲ್ಲಿ ದಧಿಹೋಮವನ್ನು ಮಾಡಲು ಪ್ರಥಮಮಂತ್ರ. |

---

▲ **ಅಗ್ನೇ**=ಹೇ! ಅಗ್ನಿದೇವನೇ! **ದೇವಯತಾಮ್**=ದೇವತೆಗಳನ್ನು ಪಡೆಯಲು ಅಪೇಕ್ಷಿಸುವ ಯಜಮಾನರಿಗೆ; **ಪ್ರಥಮಃ**=ಅಗ್ರಗಾಮಿಯಾಗಿ; **ಪ್ರೇಹಿ**=ಹೋಗು. [ನೀನು] **ದೇವಾನಾಮ್**=ದೇವತೆಗಳಿಗೂ; **ಉತ**=ಮತ್ತು; **ಮರ್ತ್ಯಾನಾಮ್**=ಮನುಷ್ಯರಿಗೂ; **ಚಕ್ಷುಃ**=ಕಣ್ಣಾಗಿರುವೆ. **ಇಯಕ್ಷಮಾಣಾಃ**=ಯಾಗವನ್ನು ಮಾಡಲು ಇಚ್ಛಿಸುವ; **ಯಜಮಾನಾಃ**=ಯಜಮಾನರು; **ಭೃಗುಭಿಃ**=ಅನುಷ್ಠಾನಪರರಾದ ಭೃಗುಮಹರ್ಷಿಗಳೊಡನೆ; **ಸಜೋಷಾಃ**=ಸಮಾನಪ್ರೀತಿಯುಳ್ಳವರಾಗಿ; **ಸ್ವಸ್ತಿ**=ಕರ್ಮಸಮರ್ಥರಾಗಿರುವಂತೆ; **ಸುವಃ**=ಸ್ವರ್ಗವನ್ನು; **ಯಂತು**=ಹೊಂದಲಿ. ▲ **ಸಮನಸಾ**=ಪರಸ್ಪರ ಐಕಮತ್ಯವುಳ್ಳ; **ವಿರೂಪೇ**=ಕಪ್ಪಾದ ರಾತ್ರಿ, ಬೆಳ್ಳಗಿನ ಹಗಲು-ಹೀಗೆ ವಿಲಕ್ಷಣವಾದ ರೂಪವುಳ್ಳ; **ನಕ್ತೋಷಾಸಾ**=ರಾತ್ರಿ-ಹಗಲುಗಳು; **ಸಮೀಚೀ**=ಅನುಕೂಲವಾಗಿದ್ದುಕೊಂಡು; **ಏಕಮ್**=ಒಂದು; **ಶಿಶುಮ್**=ಅಗ್ನಿರೂಪವಾದ ಮಗುವನ್ನು; **ಧಾಪಯೇತೇ**=ಯಜಮಾನನು ಧರಿಸುವಂತೆ ಮಾಡಿವೆ.

---

ಅನುಷ್ಠಾನಪ್ರಕಾರವನ್ನು ಚೆನ್ನಾಗಿ ಅರಿತ ಯಜಮಾನರು ಯಜ್ಞವನ್ನು ಅನುಷ್ಠಿಸಿ, ಅಂತರಿಕ್ಷಕ್ಕೆ ಏರಿ ಬಳಿಕ ಸ್ವರ್ಗದಲ್ಲಿರುವ ಆದಿತ್ಯರೂಪಜ್ಯೋತಿರ್ಮಂಡಲವನ್ನು ಸೇರಿ ಇನ್ನು ಯಾವ ಸ್ಥಾನವನ್ನೂ ಬಯಸರು.

**ದ್ಯಾವಾ ಕ್ಷಾಮಾ ರುಕ್ಮೋ ಅಂತರ್ವಿಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಃ ॥ ಅಗ್ನೇ ಸಹಸ್ರಾಕ್ಷ [(೨೨)ಶತಮೂರ್ಧನ್ಛತಂ] ಶತಮೂರ್ಧನ್ಛತಂ ತೇ ಪ್ರಾಣಾಃ ಸಹಸ್ರಮಪಾನಾಃ । ತ್ವಗ್ಂ ಸಾಹಸ್ರಸ್ಯ ರಾಯ ಈಶಿಷೇ ತಸ್ಮೈ ತೇ ವಿಧೇಮ ವಾಜಾಯ ಸ್ವಾಹಾ ॥**

---

ದ್ಯಾವಾ । ಕ್ಷಾಮ । ರುಕ್ಮಃ । ಅಂತಃ । ವೀತಿ । ಭಾತಿ । ದೇವಾಃ । ಅಗ್ನಿಮ್ । ಧಾರಯನ್ನ್ । ದ್ರವಿಣೋದಾ ಇತಿ ದ್ರವಿಣಃ-ದಾಃ ॥ ಅಗ್ನೇ । ಸಹಸ್ರಾಕ್ಷೇತಿ ಸಹಸ್ರ-ಅಕ್ಷ । (೨೨) । ಶತಮೂರ್ಧನ್ನಿತಿ ಶತ-ಮೂರ್ಧನ್ನ್ । ಶತಮ್ । ತೇ । ಪ್ರಾಣಾ ಇತಿ ಪ್ರ-ಅನಾಃ ॥ ಸಹಸ್ರಮ್ । ಅಪಾನಾ ಇತ್ಯಪ-ಅನಾಃ ॥ ತ್ವಮ್ । ಸಾಹಸ್ರಸ್ಯ । ರಾಯಃ । ಈಶಿಷೇ । ತಸ್ಮೈ । ತೇ । ವಿಧೇಮ । ವಾಜಾಯ । ಸ್ವಾಹಾ ॥

---

| ಮಂತ್ರ | ವಿನಿಯೋಗ |
|---|---|
| **ಅಗ್ನೇ ಸಹಸ್ರಾಕ್ಷ...ಸ್ವಾಹಾ ॥** | ದಧಿಹೋಮದ ಎರಡನೆಯ ಮಂತ್ರ. |

---

**ರುಕ್ಮಃ**=ಪ್ರಕಾಶಮಾನನಾದ ಅಗ್ನಿಯು; **ದ್ಯಾವಾ ಕ್ಷಾಮ**=ದ್ಯುಲೋಕ-ಭೂಲೋಕಗಳಲ್ಲಿಯೂ; **ಅಂತಃ**= ಮಧ್ಯದಲ್ಲಿರುವ ಅಂತರಿಕ್ಷದಲ್ಲಿಯೂ; **ವಿ ಭಾತಿ**=ವಿಶೇಷವಾಗಿ ಪ್ರಕಾಶಿಸುತ್ತಾನೆ. **ದ್ರವಿಣೋದಾಃ**= ಯಾಗದ ಮೂಲಕವಾಗಿ ಧನವನ್ನು ಕೊಡುವ; **ದೇವಾಃ**=ಯಜಮಾನನ ಪ್ರಾಣಗಳು; **ಅಗ್ನಿಮ್**=ಈ ಅಗ್ನಿಯನ್ನು; **ಧಾರಯನ್**=ಧರಿಸಿವೆ. ▲ **ಸಹಸ್ರಾಕ್ಷ**=ಅಪರಿಮಿತವಾದ ಕಣ್ಣುಗಳುಳ್ಳ; **ಶತಮೂರ್ಧನ್**= ನೂರಾರು ತಲೆಗಳುಳ್ಳ; **ಅಗ್ನೇ**=ಅಗ್ನಿದೇವನೇ! **ತೇ**=ನಿನ್ನ; **ಪ್ರಾಣಾಃ**=ಪ್ರಾಣಗಳೂ; **ಅಪಾನಾಃ**=ಅಪಾನಗಳೂ; **ಶತಮ್ ಸಹಸ್ರಮ್**=ನೂರಾರು ಸಾವಿರಾರು ಸಂಖ್ಯೆಯಲ್ಲಿವೆ. **ತ್ವಮ್**=ನೀನು; **ಸಾಹಸ್ರಸ್ಯ**=ಅಪರಿಮಿತವಾದ; **ರಾಯಃ**=ಧನಗಳ; **ಈಶಿಷೇ**=ಪ್ರಭುವಾಗಿರುವೆ. **ತಸ್ಮೈ**=ಅಂತಹ; **ತೇ**=ನಿನಗೆ; **ವಾಜಾಯ**=ಅನ್ನಸಿದ್ಧಿಗಾಗಿ; **ವಿಧೇಮ**=ಪರಿಚರ್ಯೆಯನ್ನು ಮಾಡುತ್ತೇವೆ. **ಸ್ವಾಹಾ**=ಈ ಹೋಮವು ಹುತವಾಗಲಿ.

---

ಭೃಗುಗಳು ಅನುಷ್ಠಾನಪರರು. ಅವರಂತೆ ಈ ಯಜಮಾನರೂ ಚೆನ್ನಾಗಿ ಯಾಗವನ್ನು ಅನುಷ್ಠಿಸಿ, ತೊಂದರೆಯಿಲ್ಲದೆ ಸ್ವರ್ಗವನ್ನು ಹೊಂದಲಿ ಎಂದು ಪ್ರಾರ್ಥನೆ. ಈ ಕಾರ್ಯದಲ್ಲಿ ಅಗ್ನಿಯು ಕಣ್ಣಿನಂತೆ ದಾರಿ ತೋರುತ್ತಾ ಮುಂದೆ ಹೋಗಲಿ ಎಂದು ಪ್ರಾರ್ಥನೆ.

ಸುಪರ್ಣೋಽಸಿ ಗರುತ್ಮಾನ್ಪೃಥಿವ್ಯಾಗ್ಂ ಸೀದ ಪೃಷ್ಠೇ ಪೃಥಿವ್ಯಾಃ ಸೀದ ಭಾಸಾಽಂತರಿಕ್ಷಮಾ ಪೃಣ ಜ್ಯೋತಿಷಾ ದಿವಮುತ್ತಭಾನ ತೇಜಸಾ ದಿಶ ಉದ್ದೃಗ್ಂಹ ॥ ಆಜುಹ್ವಾನಃ ಸುಪ್ರತೀಕಃ ಪುರಸ್ತಾದಗ್ನೇ ಸ್ವಾಂ ಯೋನಿಮಾ ಸೀದ ಸಾಧ್ಯಾ ।

---

ಸುಪರ್ಣ ಇತಿ ಸು-ಪರ್ಣಃ । ಅಸಿ । ಗರುತ್ಮಾನ್ । ಪೃಥಿವ್ಯಾಮ್ । ಸೀದ । ಪೃಷ್ಠೇ । ಪೃಥಿವ್ಯಾಃ । ಸೀದ । ಭಾಸಾ । ಅಂತರಿಕ್ಷಮ್ । ಏತಿ । ಪೃಣ । ಜ್ಯೋತಿಷಾ । ದಿವಮ್ । ಉದಿತಿ । ಸ್ತಭಾನ । ತೇಜಸಾ । ದಿಶಃ । ಉದಿತಿ । ದೃಗ್ಂಹ ॥ ಆಜುಹ್ವಾನ ಇತ್ಯಾ-ಜುಹ್ವಾನಃ । ಸುಪ್ರತೀಕ ಇತಿ ಸು-ಪ್ರತೀಕಃ । ಪುರಸ್ತಾತ್ । ಅಗ್ನೇ । ಸ್ವಾಮ್ । ಯೋನಿಮ್ । ಏತಿ । ಸೀದ । ಸಾಧ್ಯಾ ॥

---

| ಮಂತ್ರ | ವಿನಿಯೋಗ |
|---|---|
| **ಸುಪರ್ಣೋಽಸಿ...ಸೀದ ॥** | ಸ್ವಯಮಾತೃಣ್ಣೇಷ್ಟಕೆಯಲ್ಲಿ ಅಗ್ನಿಪ್ರತಿಷ್ಠಾಪನ ಮಾಡಲು ಪ್ರಥಮಮಂತ್ರ. |
| **ಭಾಸಾಽಂತರಿಕ್ಷಮ್...ದೃಗ್ಂಹ ॥** | ಅಗ್ನಿಪ್ರತಿಷ್ಠಾಪನದ ಎರಡನೆಯ ಮಂತ್ರ. |
| **ಆಜುಹ್ವಾನಃ...ಸೀದತ ॥** | ಅಗ್ನಿಪ್ರತಿಷ್ಠಾಪನದ ಮೂರನೆಯ ಮಂತ್ರ. |

---

♠ [ಚಿತಿರೂಪನಾದ ಅಗ್ನಿಯೇ! ನೀನು]**ಸುಪರ್ಣಃ**=ಪಕ್ಷಿರೂಪನಾಗಿ; **ಗರುತ್ಮಾನ್ ಅಸಿ**=ಗರುಡನಾಗಿರುವೆ. **ಪೃಥಿವ್ಯಾಮ್**=ಭೂಮಿಯಲ್ಲಿ; **ಸೀದ**=ಕುಳಿತಿರು; **ಪೃಥಿವ್ಯಾಃ**=[ಅದರಲ್ಲಿಯೂ] ಭೂಮಿಯ; **ಪೃಷ್ಠೇ**=ಮೇಲ್ಭಾಗದಲ್ಲಿ; **ಸೀದ**=ಕುಳಿತಿರು. ♠ [ಎಲೈ! ಅಗ್ನಿದೇವನೇ!] **ಭಾಸಾ**=ಸ್ವಕೀಯಪ್ರಕಾಶದಿಂದ; **ಅಂತರಿಕ್ಷಮ್**= ಅಂತರಿಕ್ಷವನ್ನು; **ಆ ಪೃಣ**=ತುಂಬಿ ಬಿಡು; **ಜ್ಯೋತಿಷಾ**=ನಿನ್ನ ತೇಜಸ್ಸಿನಿಂದ/ಸಾಮರ್ಥ್ಯದಿಂದ; **ದಿವಮ್**=ದ್ಯುಲೋಕವನ್ನು; **ಉತ್ತಭಾನ**=ಮೇಲೆ ನಿಶ್ಚಲವಾಗಿರುವಂತೆ ಮಾಡು; **ತೇಜಸಾ**=ಸ್ವಸಾಮರ್ಥ್ಯದಿಂದ; **ದಿಶಃ**=ಪೂರ್ವವೇ ಮೊದಲಾದ ದಿಕ್ಕುಗಳನ್ನು; **ಉದ್ದೃಗ್ಂಹ**=ದೃಢವಾಗಿರುವಂತೆ ಮಾಡು; ♠ **ಅಗ್ನೇ**= ಹೇ! ಅಗ್ನಿಯೇ! [ನೀನು]; **ಆಜುಹ್ವಾನಃ**=ಎದುರಾಗಿ ಆಹ್ವಾನಿಸಲ್ಪಡುವವನಾಗಿ; **ಸುಪ್ರತೀಕಃ**=ಸುಮುಖನಾಗಿ; **ಪುರಸ್ತಾತ್**=ಪೂರ್ವದಿಕ್ಕಿನಲ್ಲಿ; **ಸಾಧ್ಯಾ**=ಸಾಧುವಾದ/ಯೋಗ್ಯವಾದ; **ಸ್ವಾಮ್**=ಸ್ವಕೀಯವಾದ; **ಯೋನಿಮ್**=ಸ್ಥಾನವನ್ನು; **ಆ ಸೀದ**=ಹೊಂದುವವನಾಗು.

**ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ವಿಶ್ವೇ ದೇವಾ [ದೇವಾಃ(೨೩)] ಯಜಮಾನಶ್ಚ ಸೀದತ ॥ ಪ್ರೇದ್ಧೋ ಅಗ್ನೇ ದೀದಿಹಿ ಪುರೋ ನೋಽಜಸ್ರಯಾ ಸೂರ್ಮ್ಯಾ ಯವಿಷ್ಠ । ತ್ವಾಗ್ಂ ಶಶ್ವಂತ ಉಪಯಂತಿ ವಾಜಾಃ ॥**

---

ಅಸ್ಮಿನ್ನ್ । ಸಧಸ್ಥ ಇತಿ ಸಧ–ಸ್ಥೇ । ಅಧೀತಿ । ಉತ್ತರಸ್ಮಿನ್ನಿತ್ಯುತ್–ತರಸ್ಮಿನ್ನ್ । ವಿಶ್ವೇ । ದೇವಾಃ । (೨೩) । ಯಜಮಾನಃ । ಚ । ಸೀದತ ॥ ಪ್ರೇದ್ಧ ಇತಿ ಪ್ರ–ಇದ್ಧಃ । ಅಗ್ನೇ । ದೀದಿಹಿ । ಪುರಃ । ನಃ । ಅಜಸ್ರಯಾ । ಸೂರ್ಮ್ಯಾ । ಯವಿಷ್ಠ ॥ ತ್ವಾಮ್ । ಶಶ್ವಂತಃ । ಉಪೇತಿ । ಯಂತಿ । ವಾಜಾಃ ॥

---

| ಮಂತ್ರ | ವಿನಿಯೋಗ |
|---|---|
| **ಪ್ರೇದ್ಧೋ...ವಾಜಾಃ ॥** | ಔದುಂಬರೀಸಮಿತ್ತನ್ನು ಅಗ್ನಿಯಲ್ಲಿ ಹಾಕಲು. |

---

**ವಿಶ್ವೇ ದೇವಾಃ**=ಸಮಸ್ತದೇವತೆಗಳೇ! [ನೀವೂ] **ಚ**=ಮತ್ತು; **ಯಜಮಾನಃ**=ಯಜಮಾನನೂ; **ಅಸ್ಮಿನ್**=ಈ; **ಸಧಸ್ಥೇ**=ಅಗ್ನಿಯೊಡನೆ ಕುಳಿತುಕೊಳ್ಳಲು ಯೋಗ್ಯವಾದ ಸ್ಥಾನದಲ್ಲಿ; **ಅಧಿ ಉತ್ತರಸ್ಮಿನ್**=ಅಧಿಕವಾಗಿ ಉತ್ಕೃಷ್ಟವಾಗಿರುವ ಈ ಸ್ಥಾನದಲ್ಲಿ; **ಸೀದತ**=ಕುಳಿತುಕೊಳ್ಳಿರಿ. ▲ **ಅಗ್ನೇ**=ಅಗ್ನಿಯೇ! **ಪ್ರೇದ್ಧಃ**=ಮೊದಲೂ ಹೆಚ್ಚಾಗಿ ಜ್ವಲಿಸಿದ ನೀನು; **ನಃ**=ನಮ್ಮ; **ಪುರಃ**=ಮುಂಭಾಗದಲ್ಲಿ; **ಅಜಸ್ರಯಾ**=ನಿರಂತರವಾಗಿರುವ; **ಸೂರ್ಮ್ಯಾ**=ಚೆನ್ನಾಗಿ ಕಾದಿರುವ ಲೋಹದ ಮೂರ್ತಿಯಂತಿರುವ ಜ್ವಾಲೆಯಿಂದ; **ದೀದಿಹಿ**=ಮತ್ತೆಯೂ ಜ್ವಲಿಸು. **ಯವಿಷ್ಠ**=ಅತ್ಯಂತ ಯುವಕನೇ! **ತ್ವಾಮ್**=ನಿನ್ನನ್ನು; **ಶಶ್ವಂತಃ**=ಯಾವಾಗಲೂ ಇರುವ; **ವಾಜಾಃ**=ಅನ್ನಗಳು; **ಉಪ ಯಂತಿ**=ಸಮೀಪದಲ್ಲಿಯೇ ಹೊಂದಿರುತ್ತವೆ/ಹೊಂದಿರಲಿ.

---

ಔದುಂಬರಿಯ ದರ್ವಿಯಲ್ಲಿ ಮೊಸರನ್ನು ತುಂಬಿಕೊಂಡು ಸ್ವಯಮಾತೃಣ್ಣೇಷ್ಟಕೆಯಲ್ಲಿ ಹೋಮವನ್ನು ಮಾಡಬೇಕು. ಇಲ್ಲಿ ಎರಡು ಮಂತ್ರಗಳಿವೆ. ಪ್ರಥಮಮಂತ್ರದ ತಾತ್ಪರ್ಯವಿದು:–ಹಗಲು–ರಾತ್ರಿಗಳು ವಿಲಕ್ಷಣ ರೂಪಗಳುಳ್ಳವುಗಳಾದರೂ ಐಕಮತ್ಯದಿಂದ ಅನುಕೂಲವಾಗಿದ್ದುಕೊಂಡು ಅಗ್ನಿಯನ್ನು ಧರಿಸಿವೆ. ಅಗ್ನಿಯು ಭೂಲೋಕ–ದ್ಯುಲೋಕ–ಅಂತರಿಕ್ಷಗಳಲ್ಲಿ ಪ್ರಕಾಶಿಸುತ್ತಾನೆ. ಯಜಮಾನನ ಪ್ರಾಣಗಳು ಅಗ್ನಿಯನ್ನು ಧರಿಸಿವೆ. ಅವು ಯಾಗಫಲರೂಪವಾದ ಧನವನ್ನು ಕೊಡುತ್ತವೆ. ಅಂತಹ ಅಗ್ನಿಯು ಪ್ರಸನ್ನನಾಗಲಿ.

ಶತ–ಸಹಸ್ರಾದಿಶಬ್ದಗಳು ಅಪರಿಮಿತವಾಚಿಗಳಾಗಿವೆ. 'ವಿಶ್ವತಶ್ಚಕ್ಷುಃ' ಮೊದಲಾಗಿ ವೈಶ್ವಕರ್ಮಣಸೂಕ್ತದಲ್ಲಿ ಹೇಳಿರುವಂತೆ ಹೇ! ಅಗ್ನಿದೇವನೇ! ನೀನು ಅಪರಿಮಿತವಾದ ಕಣ್ಣು, ತಲೆ, ಪ್ರಾಣ, ಅಪಾನ ಮೊದಲಾದವುಗಳನ್ನು ಹೊಂದಿರುವೆ. ಅಗ್ನಿಯೇ! ನೀನು ಧನಪ್ರಭುವಾಗಿರುವೆ. ಅನ್ನಸಿದ್ಧಿಗಾಗಿ ನಿನಗೆ ಹೋಮದಿಂದ ಪರಿಚರ್ಯೆ

ವಿಧೇಮ ತೇ ಪರಮೇ ಜನ್ಮನ್ನಗ್ನೇ ವಿಧೇಮ ಸ್ತೋಮೈರವರೇ ಸಧಸ್ಥೇ ।
ಯಸ್ಮಾದ್ಯೋನೇರುದಾರಿಥಾ ಯಜೇ ತಂ ಪ್ರ ತ್ವೇ ಹವೀಗ್ಂಷಿ ಜುಹುರೇ
ಸಮಿದ್ಧೇ ॥

---

ವಿಧೇಮ । ತೇ । ಪರಮೇ । ಜನ್ಮನ್ । ಅಗ್ನೇ । ವಿಧೇಮ । ಸ್ತೋಮೈಃ । ಅವರೇ । ಸಧಸ್ಥ ಇತಿ ಸಧ-ಸ್ಥೇ ॥ ಯಸ್ಮಾತ್ । ಯೋನೇಃ । ಉದಾರಿಥೇತ್ಯುತ್-ಆರಿಥ । ಯಜೇ । ತಮ್ । ಪ್ರೇತಿ । ತ್ವೇ ಇತಿ । ಹವೀಗ್ಂಷಿ । ಜುಹುರೇ । ಸಮಿದ್ಧ ಇತಿ ಸಮ್-ಇದ್ಧೇ ॥

---

| ಮಂತ್ರ | ವಿನಿಯೋಗ |
|---|---|
| ವಿಧೇಮ ತೇ...ಸಮಿದ್ಧೇ ॥ | ವೈಕಂಕತ [ಹುಳಿಬೇಲ] ಸಮಿತ್ತಿನ ಆಧಾನವನ್ನು ಮಾಡಲು. |

---

▲ **ಅಗ್ನೇ**=ಹೇ! ಅಗ್ನಿದೇವನೇ! **ತೇ**=ನಿನ್ನ; **ಪರಮೇ**=ಶ್ರೇಷ್ಠವಾದ; **ಜನ್ಮನ್**=ಸ್ಥಾನವಾದ ಸ್ವರ್ಗದಲ್ಲಿ; **ವಿಧೇಮ**=ಜ್ಞಾನದಿಂದ ನಿನ್ನ ಪರಿಚರ್ಯೆಯನ್ನು ಮಾಡುತ್ತೇವೆ. **ಸಧಸ್ಥೇ**=ನಮ್ಮೊಡನೆ ಇರಲು ಯೋಗ್ಯವಾದ; **ಅವರೇ**=ನಿಕೃಷ್ಟವಾದ ಈ ಭೂಲೋಕದಲ್ಲಿ; **ಸ್ತೋಮೈಃ**=ಸ್ತೋತ್ರಗಳಿಂದ; **ವಿಧೇಮ**=[ನಿನ್ನ] ಪರಿಚರ್ಯೆಯನ್ನು ಮಾಡುತ್ತೇವೆ. **ಯಸ್ಮಾತ್**=ಯಾವ ಇಷ್ಟಕಾಚಿತಿರೂಪವಾದ; **ಯೋನೇಃ**=ಸ್ಥಾನದಿಂದ; **ಉದಾರಿಥ**=ಉತ್ಪನ್ನ/ಆವಿರ್ಭೂತ/ನಾಗಿರುವೆಯೋ; **ತಮ್**=ಆ ಸ್ಥಾನವನ್ನು/ನಿನ್ನನ್ನು; **ಯಜೇ**=ಪೂಜಿಸುವೆನು/ಯಾಗದಿಂದ ಆರಾಧಿಸುವೆನು. **ಸಮಿದ್ಧೇ**=ಜ್ವಲಿಸುವ; **ತ್ವೇ**=ನಿನ್ನಲ್ಲಿ; **ಹವೀಗ್ಂಷಿ**=[ಋತ್ವಿಜರು ಹೆಚ್ಚಾಗಿ] ಹವಿಸ್ಸುಗಳನ್ನು; **ಪ್ರ ಜುಹುರೇ**=ಹೋಮ ಮಾಡುತ್ತಾರೆ.

---

**ಮಾಡುತ್ತೇವೆ. ಈ ಹೋಮವು ಸುಹುತವಾಗಲಿ. ನೀನು ಪ್ರಸನ್ನನಾಗು.**

**ಎಲೈ! ಚಿತಿರೂಪನಾದ ಅಗ್ನಿಯೇ! ನೀನು ಪಕ್ಷಿರೂಪನಾಗಿ ಗರುಡನಾಗಿರುವೆ. ಭೂಮಿಯ ಮೇಲ್ಭಾಗದಲ್ಲಿ ಕುಳಿತುಕೋ. ನಿನ್ನ ಪ್ರಕಾಶದಿಂದ ಅಂತರಿಕ್ಷವನ್ನು ತುಂಬಿಬಿಡು. ದ್ಯುಲೋಕವನ್ನು ನಿಶ್ಚಲವಾಗಿರುವಂತೆ ಮಾಡಿ, ದಿಕ್ಕುಗಳನ್ನು ದೃಢಗೊಳಿಸು.**

**ಹೇ! ಅಗ್ನಿಯೇ! ನೀನು ಪೂರ್ವದಿಕ್ಕಿನಲ್ಲಿ ಯೋಗ್ಯವಾದ ಸ್ಥಾನವನ್ನು ಹೊಂದಿರು. ಎಲ್ಲ ದೇವತೆಗಳೇ! ನೀವು ಯಜಮಾನನೊಡನೆಯೂ, ಅಗ್ನಿಯೊಡನೆಯೂ ಈ ಉತ್ಕೃಷ್ಟವಾದ ಈ ಸ್ಥಾನದಲ್ಲಿ ಕುಳಿತುಕೊಳ್ಳಿರಿ.**

**ಇದು ಅಗ್ನಿಯ ಹಾಗೂ ಸರ್ವದೇವತೆಗಳ ಪ್ರಾರ್ಥನೆಯಾಗಿದೆ.**

**ಹೇ! ಅಗ್ನಿಯೇ! ಮೊದಲೇ ಹೆಚ್ಚಾಗಿ ಜ್ವಲಿಸುತ್ತಿರುವ ನೀನು ನಮ್ಮ ಮುಂಭಾಗದಲ್ಲಿ 'ಸೂರ್ಮಿ' ಎಂದು ಹೆಸರಿನ**

**ತಾಗ್ಂ ಸವಿತುರ್ವರೇಣ್ಯಸ್ಯ ಚಿತ್ರಾಮಾಽಹಂ ವೃಣೇ ಸುಮತಿಂ ವಿಶ್ವಜನ್ಯಾಮ್ ।**

**ಯಾಮಸ್ಯ ಕಣ್ವೋ ಅದುಹತ್ಪ್ರಪೀನಾಗ್ಂ ಸಹಸ್ರಧಾರಾಂ**

**[ಸಹಸ್ರಧಾರಾಮ್(೨೪)] ಪಯಸಾ ಮಹೀಂ ಗಾಮ್ ॥**

---

ತಾಮ್ । ಸವಿತುಃ । ವರೇಣ್ಯಸ್ಯ । ಚಿತ್ರಾಮ್ । ಏತಿ । ಅಹಮ್ । ವೃಣೇ । ಸುಮತಿಮಿತಿ ಸು-ಮತಿಮ್ । ವಿಶ್ವಜನ್ಯಾಮಿತಿ ವಿಶ್ವ-ಜನ್ಯಾಮ್ ॥ ಯಾಮ್ । ಅಸ್ಯ । ಕಣ್ವಃ । ಅದುಹತ್ । ಪ್ರಪೀನಾಮಿತಿ ಪ್ರ-ಪೀನಾಮ್ । ಸಹಸ್ರಧಾರಾಮಿತಿ ಸಹಸ್ರ-ಧಾರಾಮ್ । (೨೪) । ಪಯಸಾ । ಮಹೀಮ್ । ಗಾಮ್ ॥

---

| ಮಂತ್ರ | ವಿನಿಯೋಗ |
|---|---|
| **ತಾಗ್ಂ ಸವಿತುಃ...ಗಾಮ್ ॥** | ಶಮೀಸಮಿತ್ತನ್ನು ಆಧಾನ ಮಾಡಲು. |

---

▲ **ಅಸ್ಯ**=ಈ ಅಗ್ನಿಯ; **ಯಾಮ್**=ಯಾವ; **ಚಿತ್ರಾಮ್**=ಬಹುವಿಧವಾದ ಫಲಸಾಧಕವಾದ; **ವಿಶ್ವಜನ್ಯಾಮ್**=ಜಗತ್ತಿನ ಉತ್ಪಾದನೆಯಲ್ಲಿ ಸಮರ್ಥವಾದ; **ಸುಮತಿಮ್**=ಅನುಗ್ರಹಬುದ್ಧಿಯನ್ನು; **ಕಣ್ವಃ**=ಕಣ್ವ ಮಹರ್ಷಿಯು; **ಪ್ರಪೀನಾಮ್**=ತುಂಬಿದ ಕೆಚ್ಚಲುಗಳುಳ್ಳ; **ಸಹಸ್ರಧಾರಾಮ್**=ಸಾವಿರಾರು ಕ್ಷೀರಧಾರೆಗಳುಳ್ಳ; **ಪಯಸಾ**=ಹಾಲಿನಿಂದ; **ಮಹೀಮ್**=ತುಂಬಿರುವ; **ಗಾಮ್**=ಹಸುವನ್ನು [ಕರೆಯುವಂತೆ] **ಅದುಹತ್**=ಕರೆದುಕೊಂಡನೋ/ಉಪಯೋಗಿಸಿಕೊಂಡನೋ; **ವರೇಣ್ಯಸ್ಯ**=ಎಲ್ಲರಿಂದಲೂ ವರಿಸಲು ಯೋಗ್ಯನಾದ; **ಸವಿತುಃ**=ಪ್ರೇರಕನಾದ; ಅಸ್ಯ=ಈ ಅಗ್ನಿಯ; **ತಾಮ್**=ಅಂತಹ ಅನುಗ್ರಹಬುದ್ಧಿಯನ್ನು; **ಅಹಮ್**=ನಾನು; ಆ **ವೃಣೇ**=ಎಲ್ಲ ಕಡೆಗಳಲ್ಲಿಯೂ ಪ್ರಾರ್ಥಿಸುತ್ತೇನೆ.

---

ಚೆನ್ನಾಗಿ ಕಾಯ್ದಿರುವ ಲೋಹದ ಕಂಬದಂತೆ ಮತ್ತೂ ಚೆನ್ನಾಗಿ ಜ್ವಲಿಸು. ನೀನು ಅತ್ಯಂತ ಯುವಕನಾಗಿರುವೆ. ನಿನ್ನ ಅನುಗ್ರಹದಿಂದ ನಮಗೆ ಅನ್ನವನ್ನು ನೀಡು ಎಂದು ಪ್ರಾರ್ಥಿಸುವೆವು.

ಹೇ! ಅಗ್ನಿಯೇ! ನಿನ್ನನ್ನು ಸ್ವರ್ಗದಲ್ಲಿ ಜ್ಞಾನದಿಂದಲೂ, ಭೂಮಿಯಲ್ಲಿ ಸ್ತೋತ್ರಗಳಿಂದಲೂ ಪರಿಚರ್ಯೆಯನ್ನು ಮಾಡುವೆವು. ನೀನು ಪ್ರಸನ್ನನಾಗು.

ಅಗ್ನಿದೇವನು ಎಲ್ಲರಿಂದಲೂ ಆಶ್ರಯಿಸಲು ಯೋಗ್ಯನು. ಅವನು ಸರ್ವಪ್ರೇರಕನು. ಆತನ ಅನುಗ್ರಹಬುದ್ಧಿಯು ವಿವಿಧವಾದ ಫಲಗಳನ್ನು ಕೊಡಬಲ್ಲುದು. ಜಗತ್ತಿನ ಉತ್ಪತ್ತಿಗೆ ಕಾರಣವಾದುದು. ಹಿಂದೆ ಕಣ್ವಮಹರ್ಷಿಯು ಅಗ್ನಿಯ ಅನುಗ್ರಹದಿಂದ ಒಳ್ಳೆಯ ಹಸುವಿನಿಂದ ಹಾಲನ್ನು ಕರೆಯುವಂತೆ ಇಷ್ಟಾರ್ಥಗಳನ್ನು ಪಡೆದನು. ನಾನು ಆ ಅಗ್ನಿಯ ಅನುಗ್ರಹಬುದ್ಧಿಗಾಗಿ ಪ್ರಾರ್ಥಿಸುತ್ತೇನೆ.

ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಸಪ್ತರ್ಷಯಃ ಸಪ್ತ ಧಾಮ ಪ್ರಿಯಾಣಿ ।
ಸಪ್ತ ಹೋತ್ರಾಃ ಸಪ್ತಧಾ ತ್ವಾ ಯಜಂತಿ ಸಪ್ತ ಯೋನೀರಾ ಪೃಣಸ್ವಾ ಘೃತೇನ ॥

---

ಸಪ್ತ । ತೇ । ಅಗ್ನೇ । ಸಮಿಧ ಇತಿ ಸಮ್-ಇಧಃ । ಸಪ್ತ । ಜಿಹ್ವಾಃ । ಸಪ್ತ । ಋಷಯಃ । ಸಪ್ತ । ಧಾಮ । ಪ್ರಿಯಾಣಿ ॥
ಸಪ್ತ । ಹೋತ್ರಾಃ । ಸಪ್ತಧೇತಿ ಸಪ್ತ-ಧಾ । ತ್ವಾ । ಯಜಂತಿ । ಸಪ್ತ । ಯೋನೀಃ । ಆ । ಇತಿ । ಪೃಣಸ್ವ । ಘೃತೇನ ॥

---

| ಮಂತ್ರ | ವಿನಿಯೋಗ |
|---|---|
| **ಸಪ್ತ ತೇ...ಘೃತೇನ** ॥ | ಪೂರ್ಣಾಹುತಿಯನ್ನು ಅನುಷ್ಠಿಸಲು. |

▲ **ಅಗ್ನೇ**=ಅಗ್ನಿದೇವನೇ! **ತೇ**=ನಿನ್ನ; **ಸಮಿಧಃ**=ಸಮಿತ್ತುಗಳು; **ಸಪ್ತ**=ಏಳು; **ಜಿಹ್ವಾಃ**=ಜ್ವಾಲಾರೂಪವಾದ ನಾಲಿಗೆಗಳು; **ಸಪ್ತ**=ಏಳು; **ಋಷಯಃ**=ಮಂತ್ರಗಳು; **ಸಪ್ತ**=ಏಳು; **ಪ್ರಿಯಾಣಿ**=ಇಷ್ಟವಾದ; **ಧಾಮ**=ಸ್ಥಾನಗಳು; **ಸಪ್ತ**=ಏಳು; **ಹೋತ್ರಾಃ**=ಹೋತೃಪ್ರಮುಖರಾದ ವಷಟ್ಕರ್ತಾರರು; **ಸಪ್ತ**=ಏಳು ಮಂದಿ. [ಯಜಮಾನರು] **ತ್ವಾ**=ನಿನ್ನನ್ನು; **ಸಪ್ತಧಾ**=ಏಳು ವಿಧವಾಗಿ; **ಯಜಂತಿ**=ಆರಾಧಿಸುತ್ತಾರೆ. **ಸಪ್ತ ಯೋನೀಃ**=ಆಹವನೀಯವೇ ಮೊದಲಾದ ಏಳು ಉತ್ಪತ್ತಿಸ್ಥಾನಗಳನ್ನು; **ಘೃತೇನ**=ಆಜ್ಯದಿಂದ; **ಆ ಪೃಣಸ್ವ**=ಪೂರ್ಣಮಾಡು.

---

ಹೇ! ಅಗ್ನಿದೇವನೇ! ನಿನ್ನ ಸಮಿತ್ತುಗಳು ಏಳು ಅವು-**ಅಶ್ವತ್ಥ(ಅರಳಿ), ಉದುಂಬರ(ಅತ್ತಿ), ಪಲಾಶ(ಮುತ್ತುಗ), ಶಮೀ(ಬನ್ನಿ), ವಿಕಂಕತ(ಹುಳಿಬೇಲ), ಅಶನಿಹತವೃಕ್ಷ(ಸಿಡಿಲು ಬಡಿದಿರುವ ಮರ), ಪುಷ್ಕರಪರ್ಣ(ತಾವರೆಯ ಎಲೆ).**

**ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ,** ಮತ್ತು **ವಿಶ್ವರುಚಿ** ಎಂಬ ಏಳು ಜ್ವಾಲಾರೂಪವಾದ ಏಳು ನಾಲಿಗೆಗಳು ನಿನ್ನವು.

ಅಶ್ವತ್ಥವೇ ಮುಂತಾದ ಸಮಿಧೆಗಳನ್ನು ಆಧಾನ ಮಾಡುವ ನಿನ್ನ ಮಂತ್ರಗಳು ಏಳು. ಅವು ಹೀಗಿವೆ.

**೧) ಅಶ್ವೋ ರೂಪಂ...ಸವೀರಾಃ ॥ ೨) ಊರ್ಜಃ ಪೃಥಿವ್ಯಾಃ...ಮದೇಮ ॥ ೩) ಗಾಯತ್ರಿಯಾ...ಜಾತಃ ॥/ ದೇವಾನಾಂ...ಸಾಕ್ಷಾತ್ ॥ ೪) ಯಯಾ ತೇ...ಅಹಮ್ ॥ ೫) ಯತ್ತೇ ಸೃಷ್ಟಸ್ಯ...ಪ್ರಭಾಹಿ ॥ ೬) ಯತ್ತೇ ತಾಂ ತಸ್ಯ...ಭವೇಹ ॥ ೭) ಯತ್ಪರ್ಯಪಶ್ಯತ್...ಹರಾಮಿ ॥** -ತೈ. ಬ್ರಾ. 1.2.1

ನಿನ್ನ ಇಷ್ಟವಾದ ಅಗ್ನಿಧಾರಕವಾದ ಏಳು ಸ್ಥಾನಗಳು-**ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ, ಸಭ್ಯ, ಆವಸಥ್ಯ, ಪ್ರಾಜಹಿತ** ಹಾಗೂ **ಆಗ್ನೀಧ್ರೀಯ**ಗಳು.

ಹೋತೃವೇ ಮುಂತಾದ ವಷಟ್ಕರ್ತೃಗಳಾದವರು ಏಳು ಮಂದಿ. ಅವರು-**ಹೋತಾ, ಪ್ರಶಾಸ್ತಾ, ಬ್ರಾಹ್ಮಣಾಚ್ಛಂಸೀ, ಪೋತಾ, ನೇಷ್ಟಾ, ಆಗ್ನೀಧ್ರ, ಅಚ್ಛಾವಾಕ**-ಇವರು.

ಯಜಮಾನರು ನಿನ್ನನ್ನು **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೋರ್ಯಾಮ** ಹಾಗೂ **ವಾಜಪೇಯ**-ಹೀಗೆ ಏಳು ವಿಧವಾಗಿ ಆರಾಧಿಸುತ್ತಾರೆ.

ಇಂತಹ ನೀನು ಆಹವನೀಯವೇ ಮುಂತಾದ ಏಳು ಉತ್ಪತ್ತಿಸ್ಥಾನಗಳನ್ನು ಘೃತದಿಂದ ಪೂರ್ಣಮಾಡು.

ಈ ಮಂತ್ರವು ಸಪ್ತವತಿಯೆಂದು ಪ್ರಸಿದ್ಧವಾಗಿದೆ.

ಈದೃಙ್ಚಾನ್ಯಾದೃಙ್ಚೈತಾದೃಙ್ಚ ಪ್ರತಿದೃಙ್ಚ ಮಿತಶ್ಚ ಸಂಮಿತಶ್ಚ ಸಭರಾಃ । ಶುಕ್ರಜ್ಯೋತಿಶ್ಚ ಚಿತ್ರಜ್ಯೋತಿಶ್ಚ ಸತ್ಯಜ್ಯೋತಿಶ್ಚ ಜ್ಯೋತಿಷ್ಮಾಗ್ಂಶ್ಚ ಸತ್ಯಶ್ಚರ್ತಪಾಶ್ಚಾತ್ಯಗ್ಂಹಾಃ ॥ [(೨೫)] ॥

---

ಈದೃಙ್ । ಚ । ಅನ್ಯಾದೃಙ್ । ಚ । ಏತಾದೃಙ್ । ಚ । ಪ್ರತಿದೃಙ್ಙಿತಿ ಪ್ರತಿ-ದೃಙ್ । ಚ । ಮಿತಃ । ಚ । ಸಂಮಿತ ಇತಿ ಸಮ್-ಮಿತಃ । ಚ । ಸಭರಾ ಇತಿ ಸ-ಭರಾಃ ॥ ಶುಕ್ರಜ್ಯೋತಿರಿತಿ ಶುಕ್ರ-ಜ್ಯೋತಿಃ । ಚ । ಚಿತ್ರಜ್ಯೋತಿರಿತಿ ಚಿತ್ರ-ಜ್ಯೋತಿಃ । ಚ । ಸತ್ಯಜ್ಯೋತಿರಿತಿ ಸತ್ಯ-ಜ್ಯೋತಿಃ । ಚ । ಜ್ಯೋತಿಷ್ಮಾನ್ । ಚ । ಸತ್ಯಃ । ಚ । ಋತಪಾ ಇತ್ಯೃತ-ಪಾಃ । ಚ । ಅತ್ಯಗ್ಂಹಾ ಇತ್ಯತಿ-ಅಗ್ಂಹಾಃ ॥ (೨೫) ।

---

| ಮಂತ್ರ | ವಿನಿಯೋಗ |
|---|---|
| ಈದೃಙ್...ಭವಂತು ॥ | ಮಾರುತಹೋಮವನ್ನು ಮಾಡಲು |

---

[ಮಾರುತಹೋಮದ ದೇವತೆಗಳು ಏಳು ಗಣಗಳಲ್ಲಿವೆ. ಅವುಗಳಲ್ಲಿ ಐದು ಮಾರುತಗಣಗಳು ಇಲ್ಲಿ ಆಮ್ನಾತವಾಗಿವೆ. ಇನ್ನೆರಡು ಗಣಗಳು ಶ್ರೌತಸೂತ್ರದಲ್ಲಿ ಶಾಖಾಂತರೀಯವಾಗಿರುವುದು ಮತ್ತು ಆರಣ್ಯಕದಲ್ಲಿ ಪಠಿತವಾಗಿರುವುದೂ ಆಗಿದೆ. ಅವು **'ಈದೃಙ್'** ಎಂದು ಆರಂಭಗೊಂಡಿವೆ. ಈ ಮಂತ್ರಗಳಲ್ಲಿರುವ ಚ ಎಂಬ ಅವ್ಯಯವು ಸಮುಚ್ಚಯದ ಅರ್ಥದಲ್ಲಿದೆ]

**ಈದೃಙ್ ಮುಂತಾದವು ಏಳು ಹೆಸರು. [ಮರುದ್ಗಣಗಳು]**

**ಪ್ರಥಮಗಣ:- ೧) ಈದೃಙ್ ೨) ಅನ್ಯಾದೃಙ್ ೩) ಏತಾದೃಙ್ ೪)ಪ್ರತಿದೃಙ್ ೫) ಮಿತಃ ೬) ಸಂಮಿತಃ ೭) ಸಭರಾಃ.**

**ದ್ವಿತೀಯಗಣ:- ೧) ಶುಕ್ರಜ್ಯೋತಿಃ ೨) ಚಿತ್ರಜ್ಯೋತಿಃ ೩) ಸತ್ಯಜ್ಯೋತಿಃ ೪) ಜ್ಯೋತಿಷ್ಮಾನ್ ೫) ಸತ್ಯಃ ೬) ಋತಪಾಃ ೭) ಅತ್ಯಗ್ಂಹಾಃ**

---

**ಈದೃಙ್...ಭವಂತು** ಎಂಬ ಈ ಮಂತ್ರವು ಮಾರುತಹೋಮದಲ್ಲಿ ವಿನಿಯುಕ್ತವಾಗಿದೆ. ಇದಕ್ಕೆ ಸಂಬಂಧಿಸಿದ ಕಲ್ಪಸೂತ್ರವು ಹೀಗಿದೆ:-**'ಉಪಾಂಶು ಮಾರುತಾನ್ ಜುಹೋತಿ, ಈದೃಙ್ಚಾನ್ಯಾದೃಙ್ಙೇತಿ ಸಪ್ತಭಿರ್ಗಣೈಃ ಆಸೀನೋ ಹಸ್ತೇನ, ಗಣೇನ ಗಣಮನುದ್ರುತ್ಯ ಮಾರುತಾನ್ ಜುಹೋತಿ, ಮಧ್ಯೇಽರಣ್ಯೇಽನುವಾಕ್ಯೇನ ಗಣೇನ ಜುಹೋತೀತ್ಯೇಕೇ, ಮಾರುತ್ಯೈಃ ಸರ್ವತೋ ವೈಶ್ವಾನರಂ ಪರಿಚಿನೋತೀತ್ಯೇಕೇ, ಸ್ವತವಾಂಶ್ಚ ಪ್ರಘಾಸೀ ಚ, ಸಾಂತಪನಶ್ಚ, ಗೃಹಮೇಧೀ ಚ ಸಾಕೀ ಚ ಊರ್ಜಿಷೀ ಚ ಇತ್ಯೇಷ ಷಷ್ಠ ಆಮ್ನಾತಃ, ಮಿತಾಸಶ್ಚ ಸಂಮಿತಾಸಶ್ಚ ನ**

ಋತಜಿಚ್ಚ ಸತ್ಯಜಿಚ್ಚ ಸೇನಜಿಚ್ಚ ಸುಷೇಣಶ್ಚಾಂತ್ಯಮಿತ್ರಶ್ಚ ದೂರೇಅಮಿತ್ರಶ್ಚ ಗಣಃ। ಋತಶ್ಚ ಸತ್ಯಶ್ಚ ಧ್ರುವಶ್ಚ ಧರುಣಶ್ಚ ಧರ್ತಾ ಚ ವಿಧರ್ತಾ ಚ ವಿಧಾರಯಃ। ಈದೃಕ್ಷಾಸ ಏತಾದೃಕ್ಷಾಸ ಊ ಷು ಣಃ ಸದೃಕ್ಷಾಸಃ ಪ್ರತಿಸದೃಕ್ಷಾಸ ಏತನ।

ಋತಜಿದಿತ್ಯೃತ-ಜಿತ್। ಚ। ಸತ್ಯಜಿದಿತಿ ಸತ್ಯ-ಜಿತ್। ಚ। ಸೇನಜಿದಿತಿ ಸೇನ-ಜಿತ್। ಚ। ಸುಷೇಣ ಇತಿ ಸು-ಸೇನಃ। ಚ। ಅಂತ್ಯಮಿತ್ರ ಇತ್ಯಂತಿ-ಅಮಿತ್ರಃ। ಚ। ದೂರೇ ಅಮಿತ್ರ ಇತಿ ದೂರೇ-ಅಮಿತ್ರಃ। ಚ। ಗಣಃ॥ ಋತಃ। ಚ। ಸತ್ಯಃ। ಚ। ಧ್ರುವಃ। ಚ। ಧರುಣಃ। ಚ। ಧರ್ತಾ। ಚ। ವಿಧರ್ತೇತಿ ವಿ-ಧರ್ತಾ। ಚ। ವಿಧಾರಯ ಇತಿ ವಿ-ಧಾರಯಃ। ಈದೃಕ್ಷಾಸಃ। ಏತಾದೃಕ್ಷಾಸಃ। ಉ। ಸ್ವಿತಿ। ನಃ। ಸದೃಕ್ಷಾಸಃ। ಪ್ರತಿಸದೃಕ್ಷಾಸ ಇತಿ ಪ್ರತಿ-ಸದೃಕ್ಷಾಸಃ। ಏತಿ। ಇತನ॥

**ತೃತೀಯಗಣಃ:–** ೧) ಋತಜಿತ್ ೨) ಸತ್ಯಜಿತ್ ೩) ಸೇನಜಿತ್ ೪) ಸುಷೇಣಃ ೫) ಅಂತ್ಯಮಿತ್ರಃ ೬) ದೂರೇಅಮಿತ್ರಃ ೭) ಗಣಃ.

**ಚತುರ್ಥಗಣಃ:–** ೧) ಋತಃ ೨) ಸತ್ಯಃ ೩) ಧ್ರುವಃ ೪) ಧರುಣಃ ೫) ಧರ್ತಾ ೬) ವಿಧರ್ತಾ ೭) ವಿಧಾರಯಃ.

**ಪಂಚಮಗಣಃ:–** ೧) ಈದೃಕ್ಷಾಸಃ ೨) ಏತಾದೃಕ್ಷಾಸಃ ೩) ಸದೃಕ್ಷಾಸಃ ೪) ಪ್ರತಿಸದೃಕ್ಷಾಸಃ.

***ಷಷ್ಠಗಣಃ:–** ೧) ಸ್ವತವಾನ್ ೨) ಪ್ರಘಾಸೀ ೩) ಸಾಂತಪನ ೪) ಗೃಹಮೇಧೀ ೫) ಕ್ರೀಡೀ ೬) ಸಾಕೀ ೭) ಊರ್ಜಿಷೀ,

***ಸಪ್ತಮಗಣಃ:–** ೧) ಧುನಿಃ ೨) ಧ್ವಾಂತಃ ೩) ಧ್ವನಃ ೪) ಧ್ವನಯನ್ ೫) ನಿಲಿಂಪಃ ೬) ವಿಲಿಂಪಃ ೭) ವಿಕ್ಷಿಪಃ,

▲ [ಈದೃಙ್ ಎಂದು ಆರಂಭವಾಗಿ **'ಪ್ರತಿಸದೃಕ್ಷಾಸ'** ಎಂಬಲ್ಲಿಯವರೆಗಿನ] ಈ ಐದು ಗಣಗಳಲ್ಲಿರುವ ಮರುತರೇ! [ನೀವು] **ಉ**=ಕೂಡಿಕೊಂಡವರಾಗಿ; **ಸು**=ಚೆನ್ನಾಗಿ; **ನಃ**=ನಮ್ಮ[ಯಾಗವನ್ನು ಕುರಿತಾಗಿ] **ಏತನ**=ಬನ್ನಿರಿ.

**ಇತಿ ಸರ್ವತ್ರಾನುಷಜತಿ'** [ಆಪ. ಶ್ರೌ. ಸೂ. 17.16.14.19]

* ಆಪಸ್ತಂಬಶ್ರೌತಸೂತ್ರೋಕ್ತವಾಗಿರುವ ಶಾಖಾಂತರೋಕ್ತಗಣ.
* ಆರಣ್ಯಕಾನುವಾಕದಲ್ಲಿ ಹೇಳಿರುವ ಗಣ.

ಮಿತಾಸಶ್ಚ ಸಂಮಿತಾಸಶ್ಚ ನ ಊತಯೇ ಸಭರಸೋ ಮರುತೋ ಯಜ್ಞೇ ಅಸ್ಮಿನ್ನಿಂದ್ರಂ ದೈವೀರ್ವಿಶೋ ಮರುತೋಽನುವರ್ತ್ಮಾನೋ ಯಥೇಂದ್ರಂ ದೈವೀರ್ವಿಶೋ ಮರುತೋಽನುವರ್ತ್ಮಾನ ಏವಮಿಮಂ ಯಜಮಾನಂ ದೈವೀಶ್ಚ ವಿಶೋ

---

ಮಿತಾಸಃ । ಚ । ಸಂಮಿತಾಸ ಇತಿ ಸಮ್–ಮಿತಾಸಃ । ಚ । ನಃ । ಊತಯೇ । ಸಭರಸ ಇತಿ ಸ–ಭರಸಃ । ಮರುತಃ । ಯಜ್ಞೇ । ಅಸ್ಮಿನ್ । ಇಂದ್ರಮ್ । ದೈವೀಃ । ವಿಶಃ । ಮರುತಃ । ಅನುವರ್ತ್ಮಾನ ಇತ್ಯನು–ವರ್ತ್ಮಾನಃ । ಯಥಾ । ಇಂದ್ರಮ್ । ದೈವೀಃ । ವಿಶಃ । ಮರುತಃ । ಅನುವರ್ತ್ಮಾನ ಇತ್ಯನು–ವರ್ತ್ಮಾನಃ । ಏವಮ್ । ಇಮಮ್ । ಯಜಮಾನಮ್ । ದೈವೀಃ । ಚ । ವಿಶಃ ।

---

**ಮಿತಾಸಃ**=ನಾಲ್ಕು ಗಣಗಳಲ್ಲಿ ಸಪ್ತಸಂಖ್ಯೆಯಿಂದ ತಿಳಿಸಲ್ಪಟ್ಟಿರುವ; **ಚ**=ಮತ್ತು; **ಸಂಮಿತಾಸಃ**=ಐದನೆಯ ಗಣದಲ್ಲಿ ಚತುಃಸಂಖ್ಯೆಯಿಂದ ಸಂಕ್ಷೇಪಿಸಿ ತಿಳಿಸಲ್ಪಟ್ಟಿರುವ; **ನಃ**=ನಮ್ಮ; **ಊತಯೇ**=ರಕ್ಷಣೆಯಲ್ಲಿ; **ಸಭರಸಃ**=ಆದರವುಳ್ಳ; **ಮರುತಃ**=ಮರುದ್ದೇವತೆಗಳೇ! **ಅಸ್ಮಿನ್**=ಈ; **ಯಜ್ಞೇ**=ಯಾಗದಲ್ಲಿ; ಆ ಇತನ=ಆಗಮಿಸಿರಿ. **ಮರುತಃ**=ಮರುತರು; **ದೈವೀಃ ವಿಶಃ**=ದೇವತೆಗಳಿಗೆ ಸಂಬಂಧಿಸಿದ ಪ್ರಜೆಗಳಾಗಿ; **ಇಂದ್ರಮ್**=ಇಂದ್ರನನ್ನು; **ಅನುವರ್ತ್ಮಾನಃ**=ಅನುಸರಿಸಿ ನಡೆಯುವವರಾಗಿರುತ್ತಾರೆ. **ಯಥಾ**=ಯಾವ ರೀತಿಯಲ್ಲಿ; **ದೈವೀಃ ವಿಶಃ**=ದೇವಪ್ರಜೆಗಳಾದ; **ಮರುತಃ**=ಮರುತರು; **ಇಂದ್ರಮ್**=ಇಂದ್ರನನ್ನು; **ಅನುವರ್ತ್ಮಾನಃ**=ಅನುಸರಿಸುತ್ತಾರೆಯೋ; **ಏವಮ್**=ಆ ರೀತಿಯಲ್ಲಿಯೇ; **ಇಮಮ್ ಯಜಮಾನಮ್**=ಈ ಯಜಮಾನನನ್ನು; **ದೈವೀಃ**=ದೇವಸಂಬಂಧಿಯಾದ; **ವಿಶಃ**=ಪ್ರಜೆಗಳೂ; **ಚ**=ಮತ್ತು;

---

ಮಾರುತಹೋಮವನ್ನು ಉಪಾಂಶುಸ್ವರದಲ್ಲಿ ಮಾಡಬೇಕು. ಈಳಿತು ಈದೃಙ್ ಎಂದು ಆರಂಭವಾಗುವ ಏಳು ಗಣಗಳ ಮಂತ್ರಗಳಿಂದ ಕೈಗಳಿಂದ ಹೋಮ ಮಾಡಬೇಕು. ಪ್ರಥಮಾದಿಗಣಗಳಿಂದ ಹೋಮ ಮಾಡುವಾಗ ಹಿಂದಿನ ಗಣದ ಮಂತ್ರಗಳನ್ನು ಹೇಳಿ ಮುಂದಿನ ಗಣದ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಮಧ್ಯದಲ್ಲಿ ಆರಣ್ಯಕದಲ್ಲಿ ಪಠಿತವಾದ **'ಧುನಿಶ್ಚ...ವಿಕ್ಷಿಪಃ'** ಎಂಬ ಮಂತ್ರದಿಂದ ಹವನ ಮಾಡಬೇಕೆಂದು ಕೆಲವರು ಹೇಳುತ್ತಾರೆ. ಅಗ್ನಿಯನ್ನು ಒಗ್ಗೂಡಿಸಲು ಮಾರುತಮಂತ್ರಗಳೆಂದು ಕೆಲವರು ಹೇಳುತ್ತಾರೆ. ಆರನೆಯ ಗಣವು ಶ್ರೌತಸೂತ್ರದಲ್ಲಿ ಉಕ್ತವಾಗಿದೆ. **ಮಿತಾಸಶ್ಚ...ಭವಂತು** ಎಂಬ ಮಂತ್ರವು ಎಲ್ಲ ಮಂತ್ರಗಳಲ್ಲಿಯೂ ಅನುಷಂಗವಾಗಿ ಸೇರುತ್ತದೆ.

ಇಲ್ಲಿ ಪಠಿತವಾಗಿರುವ ಐದು ಗಣಗಳು, ಶ್ರೌತಸೂತ್ರದಲ್ಲಿ ಹೇಳಿರುವ ಶಾಖಾಂತರೀಯವಾದ ಒಂದು ಗಣ, ಆರಣ್ಯಕದಲ್ಲಿ **'ನಮೋ ವಾಚೇ'** ಎಂಬ ಪ್ರಶ್ನದಲ್ಲಿರುವ ಒಂದು ಗಣ– ಹೀಗೆ **'ಸಪ್ತಗಣಾ ವೈ ಮರುತಃ'** ಎಂದು ಹೇಳಲ್ಪಟ್ಟಿದೆ.

## ಮಾನುಷೀಶ್ಚಾನುವರ್ತ್ಮಾನೋ ಭವಂತು ॥ ೨೬-5 ॥

[ಅಗಾಗ್ಂಸಹಸ್ರಾಕ್ಷ ದೇವಾಃ ಸಹಸ್ರಧಾರಾಮತ್ಯಗ್ಂಹಾ ಅನುವರ್ತ್ಮಾನಃ ಷೋಡಶ ಚ ॥]

---

ಮಾನುಷೀಃ। ಚ। ಅನುವರ್ತ್ಮಾನ ಇತ್ಯನು-ವರ್ತ್ಮಾನಃ। ಭವಂತು ॥ (೨೬) ॥

---

**ಮಾನುಷೀಃ**=ಮಾನವರಾದ; ವಿಶಃ=ಪ್ರಜೆಗಳೂ; **ಅನುವರ್ತ್ಮಾನಃ**=ಅನುಸರಿಸುವವರಾಗಿ; **ಭವಂತು**= ಆಗಲಿ.

---

ನಾಲ್ಕು ಗಣಗಳಲ್ಲಿ ಸಪ್ತಸಂಖ್ಯೆಯಿಂದಲೂ, ಐದನೆಯ ಗಣದಲ್ಲಿ ಸಂಕ್ಷೇಪಿಸಿ ನಾಲ್ಕು ಸಂಖ್ಯೆಯಿಂದ ಹೇಳಲ್ಪಟ್ಟಿರುವ, ನಮ್ಮನ್ನು ಕಾಪಾಡುವುದರಲ್ಲಿ ಆದರವುಳ್ಳ ಮರುದ್ದೇವತೆಗಳೇ! ನೀವು ಈ ಯಾಗಕ್ಕೆ ಬನ್ನಿರಿ. ದೇವ ಪ್ರಜೆಗಳಾದ ಮರುತರು ಇಂದ್ರನನ್ನು ಅನುಸರಿಸುವವರು.

ದೇವಪ್ರಜೆಗಳು ಇಂದ್ರನನ್ನು ಅನುಸರಿಸುವಂತೆ ಈ ಯಜಮಾನನನ್ನು ದೇವಪ್ರಜೆಗಳೂ, ಮಾನವಪ್ರಜೆಗಳೂ ಅನುಸರಿಸಿ ನಡೆಯಲಿ.

---

### ವಿನಿಯೋಗಸಂಗ್ರಹ

1-5ಪ್ರಾಚೀತಿ ಪಂಚಭಿಃ ಸಾಗ್ನಿರಾರೋಹೇನ್ನಿರ್ಮಿತಾಂ ಚಿತಿಮ್।
ಪೂರ್ಣಾಮೌದುಂಬರೀಂ ದಧ್ನಾ ಜುಹೋತ್ಯೇತೇ ಋಚೌ ತದಾ ॥
ಯಾಜ್ಯಾನುವಾಕ್ಯೇ 6-7ನಕ್ತೇತಿ 8-10ಸುಪರ್ಣೋಽಸ್ಯಾದಿಭಿಸ್ತ್ರಿಭಿಃ।
ಸ್ವಯಮಾತೃಣ್ಣಕಾಯಾಂ ತಮುಖ್ಯಾಗ್ನಿಂ ಸ್ಥಾಪಯೇತ್ತತಃ ॥
11ಪ್ರೇದ್ಧ ಔದುಂಬರೀಂ ದಧ್ಯಾದ್ವಿಧೇ12 ವೈಕಂಕತೀಂ ತಥಾ।
ಶಮೀಮಯೀಂ ತು 13ತಾಂ ಸೇತಿ 14ಸಪ್ತಾಜ್ಯಂ ಹೂಯತೇ ಸ್ರುಚಾ ॥
ಮಾರುತೇಷು ತು ಯಾಗೇಷು ಪ್ರೋಕ್ತಾಃ ಪಂಚ ಮರುದ್ಗಣಾಃ।
15-19 ಈದೃಙ್ ಚೇತ್ಯಾದಯಶ್ಚೈಷೋ ಮಿತಾಸಶ್ಚೇತ್ಯುದೀರಿತಃ ॥
ಅನುವಾಕೇ ಪಂಚಮೇಽಸ್ಮಿನ್ನುಕ್ತಾ ಏಕೋನವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-19

## ॥ ಷಷ್ಠೋಽನುವಾಕಃ ॥

**ಜೀಮೂತಸ್ಯೇವ ಭವತಿ ಪ್ರತೀಕಂ ಯದ್ವರ್ಮೀ ಯಾತಿ ಸಮದಾಮುಪಸ್ಥೇ ।**

**ಅನಾವಿದ್ಧಯಾ ತನುವಾ ಜಯ ತ್ವಗ್ಂ ಸ ತ್ವಾ ವರ್ಮಣೋ ಮಹಿಮಾ ಪಿಪರ್ತು ॥**

---

ಜೀಮೂತಸ್ಯ । ಇವ । ಭವತಿ । ಪ್ರತೀಕಮ್ । ಯತ್ । ವರ್ಮೀ । ಯಾತಿ । ಸಮದಾಮಿತಿ ಸ–ಮದಾಮ್ । ಉಪಸ್ಥ ಇತ್ಯುಪ–ಸ್ಥೇ ॥ ಅನಾವಿದ್ಧಯೇತ್ಯನಾ–ವಿದ್ಧಯಾ । ತನುವಾ । ಜಯ । ತ್ವಮ್ । ಸಃ । ತ್ವಾ । ವರ್ಮಣಃ । ಮಹಿಮಾ । ಪಿಪರ್ತು ॥

---

ಐದನೆಯ ಅನುವಾಕದಲ್ಲಿ ಚಯನಕ್ಕೆ ಸಂಬಂಧಿಸಿದ ಚಿತ್ಯಾರೋಹಣಾದಿಗಳು ಹೇಳಲ್ಪಟ್ಟವು. ಈ ಆರನೆಯ ಅನುವಾಕದಲ್ಲಿ ಅಶ್ವಮೇಧಕರ್ತೃವಿಗೆ ಸಂಬಂಧಿಸಿದ ರಥಸಜ್ಜೀಕರಣ ಮುಂತಾದವು ಹೇಳಲ್ಪಟ್ಟಿವೆ. ಇಲ್ಲಿ ಕವಚಸ್ವೀಕರಣ ಮುಂತಾದವೂ ಹೇಳಲ್ಪಟ್ಟಿವೆ. ಇವು ಅಗ್ನಿಚಯನಕ್ಕೆ ಸಂಬಂಧಿಸಿಲ್ಲ. ಆದರೂ ಪಾಠಕ್ರಮದಿಂದ ಇಲ್ಲಿ ವಿವರಿಸಲಾಗಿದೆ.

---

| ಮಂತ್ರ | ವಿನಿಯೋಗ |
|---|---|
| **ಜೀಮೂತಸ್ಯೇವ...ಪಿಪರ್ತು ॥** | ಕವಚಧಾರಣೆಯನ್ನು ಮಾಡಲು. |

---

🔔 **ಯತ್**=ಯಾವಾಗ; **ವರ್ಮೀ**=ಕವಚಯುಕ್ತನಾದ ರಾಜನು; **ಸಮದಾಮ್**=ಮಾತ್ಸರ್ಯಯುಕ್ತರಾದ ಶತ್ರುಗಳ; **ಉಪಸ್ಥೇ**=ಸಮೀಪದಲ್ಲಿ; **ಯಾತಿ**=ಹೋಗುತ್ತಾನೆಯೋ (ಆಗ) ಆ ಎರಡು ಸೈನ್ಯಗಳ ಮುಖಗಳೂ; **ಜೀಮೂತಸ್ಯ**=[ಎಲ್ಲೆಲ್ಲಿಂದಲೋ ಬಂದು ಮಳೆಯನ್ನು ಸುರಿಸಲು ಸಿದ್ಧವಾದ] ಮೋಡದ; **ಪ್ರತೀಕಮ್ ಇವ**=ಮುಖದಂತೆ; **ಭವತಿ**=ತೋರುತ್ತವೆ. (ಹೇ! ರಾಜನೇ!) **ಅನಾವಿದ್ಧಯಾ**=ಶತ್ರುಪ್ರಹಾರರಹಿತವಾದ; **ತನುವಾ**=ಶರೀರದಿಂದ; **ತ್ವಮ್**=ನೀನು; **ಜಯ**=[ವೈರಿಗಳನ್ನು] ಜಯಿಸು. **ವರ್ಮಣಃ**=ಕವಚದ; **ಸಃ**= ಅಂತಹ; **ಮಹಿಮಾ**=ಪ್ರಭಾವವು; **ತ್ವಾ**=ನಿನ್ನನ್ನು; **ಪಿಪರ್ತು**=ರಕ್ಷಿಸಲಿ.

ಧನ್ವನಾ ಗಾ ಧನ್ವನಾಽಽಜಿಂ ಜಯೇಮ ಧನ್ವನಾ ತೀವ್ರಾಃ ಸಮದೋ ಜಯೇಮ । ಧನುಃ ಶತ್ರೋರಪಕಾಮಂ ಕೃಣೋತಿ ಧನ್ವನಾ ಸರ್ವಾಃ ಪ್ರದಿಶೋ ಜಯೇಮ ॥

---

ಧನ್ವನಾ । ಗಾಃ । ಧನ್ವನಾ । ಆಜಿಮ್ । ಜಯೇಮ । ಧನ್ವನಾ । ತೀವ್ರಾಃ । ಸಮದ ಇತಿ ಸ-ಮದಃ । ಜಯೇಮ ॥ ಧನುಃ । ಶತ್ರೋಃ । ಅಪಕಾಮಮಿತ್ಯಪ-ಕಾಮಮ್ । ಕೃಣೋತಿ । ಧನ್ವನಾ । ಸರ್ವಾಃ । ಪ್ರದಿಶ ಇತಿ ಪ್ರ-ದಿಶಃ । ಜಯೇಮ ॥

---

| ಮಂತ್ರ | ವಿನಿಯೋಗ |
|---|---|
| ಧನ್ವನಾ...ಜಯೇಮ ॥ | ಧನುರ್ಧಾರಣೆಯನ್ನು ಮಾಡಲು. |

---

▲ [ನಾವು] **ಧನ್ವನಾ**=ಬಿಲ್ಲಿನಿಂದ; **ಗಾಃ**=[ಶತ್ರುಗಳ] ಗವಾದಿಧನಗಳನ್ನು; **ಜಯೇಮ**=ಗೆಲ್ಲುವೆವು. **ಧನ್ವನಾ**=ಧನುಸ್ಸಿನಿಂದ; **ಆಜಿಮ್**=ಯುದ್ಧವನ್ನು; ಜಯೇಮ=ಗೆಲ್ಲುವೆವು; **ಧನ್ವನಾ**=ಧನುಸ್ಸಿನಿಂದ; **ತೀವ್ರಾಃ**=ಶೂರರಾದ ಭಟರುಳ್ಳ; **ಸಮದಃ**=ಮದಸಹಿತವಾದ ಶತ್ರುಗಳ ಸೈನ್ಯಗಳನ್ನು; **ಜಯೇಮ**=ಗೆಲ್ಲುತ್ತೇವೆ; **ಧನುಃ**=ಧನುಸ್ಸು; **ಶತ್ರೋಃ**=ಹಗೆಯನ್ನು; **ಅಪಕಾಮಮ್**=ಕಳೆದುಹೋದ ಕಾಮನೆಗಳುಳ್ಳವನನ್ನಾಗಿ; **ಕೃಣೋತಿ**=ಮಾಡುತ್ತದೆ. **ಧನ್ವನಾ**=ಬಿಲ್ಲಿನಿಂದ; **ಸರ್ವಾಃ**=ಎಲ್ಲ; **ಪ್ರದಿಶಃ**=ದಿಕ್ಕುಗಳಲ್ಲಿರುವ ಉತ್ಕೃಷ್ಟವಾದ ಶತ್ರುಗಳನ್ನು; **ಜಯೇಮ**=ಗೆಲ್ಲುತ್ತೇವೆ.

---

ಭಯಂಕರವಾದ ಮೇಘಸದೃಶವಾದ ಸೇನೆಗಳ ನಡುವೆ ಸಂಭವಿಸುವ ಮಹಾಯುದ್ಧದಲ್ಲಿ ಶರೀರವನ್ನು ಆಚ್ಛಾದಿಸಿ, ಶತ್ರುಗಳ ಪ್ರಹಾರದಿಂದ ತಪ್ಪಿಸುವ ಕವಚವು ನಿನ್ನನ್ನು ರಕ್ಷಿಸಲಿ.

ನಾವು ಬಿಲ್ಲಿನಿಂದ ಶತ್ರುಗಳ ಗವಾದಿಧನಗಳನ್ನು ಗೆಲ್ಲುವೆವು. ಇಲ್ಲಿ 'ನಾವು' ಎಂಬುದು 'ನಾನು' ಎಂಬ ಅರ್ಥದಲ್ಲಿದೆ. 'ಆತ್ಮನಿ ಬಹುವಚನ'ವು ಪ್ರಯೋಗಿಸಲ್ಪಟ್ಟಿದೆ. ನಾವು ಬಿಲ್ಲಿನಿಂದ ಯುದ್ಧವನ್ನೂ, ಮದಿಸಿದ ಶತ್ರುಗಳನ್ನೂ ಗೆದ್ದು ಶತ್ರುಗಳು ತಮ್ಮ ಕಾಮನೆಗಳನ್ನು ಕಳೆದುಕೊಳ್ಳುವಂತೆ ಮಾಡುತ್ತೇವೆ.

ಈ ಮಂತ್ರದಲ್ಲಿ ವಿಭಕ್ತಿ-ವಚನಗಳ ವ್ಯತ್ಯಯಗಳಿವೆ. 'ಸಮದಾಃ' ಎಂಬ ದ್ವಿತೀಯಾಬಹುವಚನಕ್ಕೆ 'ಸಮದಃ' ಎಂಬ ಏಕವಚನವು ಪ್ರಯುಕ್ತವಾಗಿದೆ. 'ಶತ್ರೋಃ ಅಪಕಾಮಮ್' ಎಂಬುದಕ್ಕೆ 'ಶತ್ರುಮ್ ಅಪಕಾಮಮ್' ಎಂಬ ವಿವರಣೆಯು ಇದೆ.

**ವಕ್ಷ್ಯಂತೀವೇದಾ ಗನೀಗಂತಿ ಕರ್ಣಂ ಪ್ರಿಯಗ್ಂ ಸಖಾಯಂ ಪರಿಷಸ್ವಜಾನಾ ।**

**ಯೋಷೇವ ಶಿಙ್ಕ್ತೇ ವಿತತಾಽಧಿ ಧನ್ವ[ಧನ್ವನ್ನ್(೨೭)ಜ್ಯಾ]ನ್ಜ್ಯಾ ಇಯಗ್ಂ**

**ಸಮನೇ ಪಾರಯಂತೀ ॥ ತೇ ಆಚರಂತೀ ಸಮನೇವ ಯೋಷಾ**

---

ವಕ್ಷ್ಯಂತೀ । ಇವ । ಇತ್ । ಏತಿ । ಗನೀಗಂತಿ । ಕರ್ಣಮ್ । ಪ್ರಿಯಮ್ । ಸಖಾಯಮ್ । ಪರಿಷಸ್ವಜಾನೇತಿ ಪರಿ–ಸಸ್ವಜಾನಾ ॥ ಯೋಷಾ । ಇವ । ಶಿಙ್ಕ್ತೇ । ವಿತತೇತಿ ವಿ–ತತಾ । ಅಧೀತಿ । ಧನ್ವನ್ನ್ । (೨೭) । ಜ್ಯಾ । ಇಯಮ್ । ಸಮನೇ । ಪಾರಯಂತೀ ॥ ತೇ ಇತಿ । ಆಚರಂತೀ ಇತ್ಯಾ–ಚರಂತೀ । ಸಮನಾ । ಇವ । ಯೋಷಾ ।

---

| ಮಂತ್ರ | ವಿನಿಯೋಗ |
| --- | --- |
| **ವಕ್ಷ್ಯಂತೀ...ಪಾರಯಂತೀ ॥** | ಹೆದೆ/ಬಿಲ್ಲಿನ ಹಗ್ಗವನ್ನು ಸ್ಪರ್ಶಿಸಲು. |
| **ತೇ ಆಚರಂತೀ...ಅಮಿತ್ರಾನ್ ॥** | ಬಿಲ್ಲಿನ ತುದಿಗಳನ್ನು ಸ್ಪರ್ಶಿಸಲು. |

---

▲ **ಅಧಿ ಧನ್ವನ್**=ಬಿಲ್ಲಿನ ಮೇಲೆ; **ವಿತತಾ** =ಪ್ರಸರಿಸಿರುವ; **ಇಯಮ್ ಜ್ಯಾ**=ಈ ಬಿಲ್ಲಿನ ಹಗ್ಗವು; **ಸಖಾಯಮ್**=ಮಿತ್ರನಾದ; **ಪ್ರಿಯಮ್**=ಪತಿಯನ್ನು; **ಪರಿಷಸ್ವಜಾನಾ**=ಆಲಿಂಗಿಸಿರುವ; **ಯೋಷಾ ಇವ**=ಪತ್ನಿಯಂತೆ; **ವಕ್ಷ್ಯಂತೀ ಇವ**=ರಹಸ್ಯವನ್ನು ಹೇಳುವಂತಿದ್ದು; **ಕರ್ಣಮ್ ಇತ್**=ಕಿವಿಯ ಸಮೀಪವನ್ನು; **ಆ ಗನೀಗಂತಿ**=ಹೊಂದುತ್ತದೆ. [ಈ ಹೆದೆಯು]; **ಸಮನೇ**=ಯುದ್ಧದಲ್ಲಿ/ಯುದ್ಧವನ್ನು; **ಪಾರಯಂತೀ**=ಸಮಾಪ್ತಿಗೊಳಿಸುವುದಾಗಿದೆ. ಯೋಷಾ ಇವ **ಶಿಂಕ್ತೇ**=ಇದು ಪತ್ನಿಯಂತೆ ಅವ್ಯಕ್ತಶಬ್ದವನ್ನು ಮಾಡುತ್ತದೆ. ▲ **ಸಮನಾ**=ಯುದ್ಧದಲ್ಲಿ; **ಯೋಷಾ ಇವ**=ಸ್ತ್ರೀಯಂತೆ; **ಆಚರಂತೀ**=ಮಧುರವಾಗಿ ಶಬ್ದ ಮಾಡುವ;

---

ಬಿಲ್ಲಿನಲ್ಲಿ ಹೂಡಿರುವ ಹೆದೆಯು ಯುದ್ಧದಲ್ಲಿ ಜಯವನ್ನು ತಂದುಕೊಡುತ್ತದೆ. ಪ್ರಿಯಳಾದವಳು ತನ್ನ ಪ್ರಿಯನನ್ನು ಆಲಂಗಿಸಿ ಕಿವಿಯಲ್ಲಿ ಗುಟ್ಟನ್ನು ಹೇಳುತ್ತಾಳೆ. ಹಾಗೆ ಈ ಬಿಲ್ಲಿನ ಹಗ್ಗವು ಬಾಣವನ್ನು ಬಿಡಲು ಕಿವಿಯ ವರೆಗೆ ಎಳೆದಾಗ ಅವ್ಯಕ್ತಶಬ್ದವನ್ನು ಮಾಡುತ್ತದೆ. ಅಂತಹ ಈ ಹೆದೆಯು ಯುದ್ಧದಲ್ಲಿ ಜಯವನ್ನುಂಟು ಮಾಡುತ್ತದೆ.

ಬಿಲ್ಲಿನ ಈ ಎರಡು ತುದಿಗಳು ಯುದ್ಧದಲ್ಲಿ ಮಧುರವಾಗಿ ಶಬ್ದ ಮಾಡುತ್ತವೆ. ಅದು ಸ್ತ್ರೀಯರ ಮಧುರ ಧ್ವನಿಯಂತೆ ಇದೆ.

ಈ ಮಂತ್ರದಲ್ಲಿಯೂ ವಿಭಕ್ತಿ–ವಚನವ್ಯತ್ಯಯಗಳು ಇವೆ. **'ಯೋಷೇ'** ಎಂಬ ದ್ವಿವಚನದ ಸ್ಥಾನದಲ್ಲಿ **'ಯೋಷಾ'**

ಮಾತೇವ ಪುತ್ರಂ ಬಿಭೃತಾಮುಪಸ್ಥೇ । ಅಪ ಶತ್ರೂನ್, ವಿಧ್ಯತಾಗ್ಂ ಸಂವಿದಾನೇ ಆರ್ತ್ನೀ ಇಮೇ ವಿಷ್ಫುರಂತೀ ಅಮಿತ್ರಾನ್ ॥ ಬಹ್ವೀನಾಂ ಪಿತಾ ಬಹುರಸ್ಯ ಪುತ್ರಶ್ಚಿಶ್ಚಾ ಕೃಣೋತಿ ಸಮನಾಽವಗತ್ಯ । ಇಷುಧಿಃ ಸಙ್ಕಾಃ ಪೃತನಾಶ್ಚ ಸರ್ವಾಃ ಪೃಷ್ಠೇ ನಿನದ್ಧೋ ಜಯತಿ ಪ್ರಸೂತಃ ॥

---

ಮಾತಾ । ಇವ । ಪುತ್ರಮ್ । ಬಿಭೃತಾಮ್ । ಉಪಸ್ಥ ಇತ್ಯುಪ-ಸ್ಥೇ ॥ ಅಪೇತಿ । ಶತ್ರೂನ್ । ವಿಧ್ಯತಾಮ್ । ಸಂವಿದಾನೇ ಇತಿ ಸಮ್-ವಿದಾನೇ । ಆರ್ತ್ನೀ ಇತಿ । ಇಮೇ ಇತಿ । ವಿಷ್ಫುರಂತೀ ಇತಿ ವಿ-ಸ್ಫುರಂತೀ । ಅಮಿತ್ರಾನ್ ॥ ಬಹ್ವೀನಾಮ್ । ಪಿತಾ । ಬಹುಃ । ಅಸ್ಯ । ಪುತ್ರಃ । ಚಿಶ್ಚಾ । ಕೃಣೋತಿ । ಸಮನಾ । ಅವಗತ್ಯೇತ್ಯವ-ಗತ್ಯ ॥ ಇಷುಧಿರಿತೀಷು-ಧಿಃ । ಸಙ್ಕಾಃ । ಪೃತನಾಃ । ಚ । ಸರ್ವಾಃ । ಪೃಷ್ಠೇ । ನಿನದ್ಧ ಇತಿ ನಿ-ನದ್ಧಃ । ಜಯತಿ । ಪ್ರಸೂತ ಇತಿ ಪ್ರ-ಸೂತಃ ॥

---

| ಮಂತ್ರ | ವಿನಿಯೋಗ |
|---|---|
| ಬಹ್ವೀನಾಂ...ಪ್ರಸೂತಃ ॥ | ಬಾಣದ ಚೀಲವನ್ನು ಕಟ್ಟಿಕೊಳ್ಳಲು. |

---

**ಸಂವಿದಾನೇ**=ಅನ್ಯೋನ್ಯವಾಗಿ ಐಕಮತ್ಯವನ್ನು ಹೊಂದಿರುವ; **ತೇ ಇಮೇ**=ಅಂತಹ ಈ ಎರಡು; **ಆರ್ತ್ನೀ**=ಬಿಲ್ಲಿನ ಕೋಟಿಗಳು; **ವಿಷ್ಫುರಂತೀ**=ಪುನಃ ಪುನಃ ಪ್ರವೃತ್ತವಾಗಿ; **ಮಾತಾ ಇವ**=ಹಿತಕಾರಿಣಿಯಾದ ತಾಯಿಯಂತೆ; **ಪುತ್ರಮ್**=ಮಗನನ್ನು; **ಉಪಸ್ಥೇ**=ತೊಡೆಯ ಮೇಲೆ ಇಟ್ಟುಕೊಂಡು [ಯಜಮಾನನನ್ನು ಸಮೀಪದಲ್ಲಿ ಇಟ್ಟುಕೊಂಡು] **ಬಿಭೃತಾಮ್**=ರಕ್ಷಿಸಲಿ. **ಅಮಿತ್ರಾನ್ ಶತ್ರೂನ್**=ಅತ್ಯಂತ ವಿರೋಧಿಗಳಾದ ಶತ್ರುಗಳನ್ನು; **ಅಪ ವಿಧ್ಯತಾಮ್**=ನಾಶಪಡಿಸಲಿ. 🔔 **ಬಹ್ವೀನಾಮ್**=ಹಲವು ಬಾಣಗಳಿಗೆ; **ಪಿತಾ**=ಪಾಲಕನಾದ ಈ ಬಾಣಗಳ ಚೀಲವು; **ಸಮನಾ**=ಯುದ್ಧದಲ್ಲಿ; **ಅವಗತ್ಯ**=ಪ್ರಾಪ್ತವಾಗಿ; **ಚಿಶ್ಚಾ**=[ಬಾಣಗಳನ್ನು ಹೊರಕ್ಕೆ ತೆಗೆಯುವಾಗ] 'ಚಿಶ್ಚಾ' ಎಂಬುದಾಗಿ ಧ್ವನಿಯನ್ನು; **ಕೃಣೋತಿ**=ಮಾಡುತ್ತದೆ; **ಅಸ್ಯ ಪುತ್ರಃ**=ಇದರ ಪುತ್ರಸ್ಥಾನೀಯವಾದ ಬಾಣಸಂಘವು; **ಬಹುಃ**=ಬಹುವಿಧವಾಗಿದೆ. **ಇಷುಧಿಃ**=ಇಂತಹ ಇಷುಧಿಯು; **ಪೃಷ್ಠೇ**=ಬೆನ್ನಿನಲ್ಲಿ; **ನಿನದ್ಧಃ**=ಚೆನ್ನಾಗಿ ಕಟ್ಟಲ್ಪಟ್ಟು; **ಪ್ರಸೂತಃ**=ಬಿಲ್ಗಾರನಿಂದ ಪ್ರೇರಿತವಾಗಿ; **ಸಙ್ಕಾಃ**=ಯುದ್ಧಕ್ಕೆ ಬಂದಿರುವ; **ಸರ್ವಾಃ ಪೃತನಾಃ ಚ**=ಶತ್ರುಸೇನೆಗಳೆಲ್ಲವನ್ನೂ; **ಜಯತಿ**=ಜಯಿಸುತ್ತದೆ.

ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರಯತ್ರ ಕಾಮಯತೇ ಸುಷಾರಥಿಃ ।
ಅಭೀಶೂನಾಂ ಮಹಿಮಾನಂ [..ಮಾನಮ್(೨೮)ಪನಾಯತ] ಪನಾಯತ
ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥ ತೀವ್ರಾನ್ಘೋಷಾನ್ಕೃಣ್ವತೇ
ವೃಷಪಾಣಯೋಽಶ್ವಾ ರಥೇಭಿಃ ಸಹ ವಾಜಯಂತಃ ।

---

ರಥೇ । ತಿಷ್ಠನ್ । ನಯತಿ । ವಾಜಿನಃ । ಪುರಃ । ಯತ್ರಯತ್ರೇತಿ ಯತ್ರ–ಯತ್ರ । ಕಾಮಯತೇ । ಸುಷಾರಥಿರಿತಿ ಸು–ಸಾರಥಿಃ ॥ ಅಭೀಶೂನಾಮ್ । ಮಹಿಮಾನಮ್ । (೨೮) । ಪನಾಯತ । ಮನಃ । ಪಶ್ಚಾತ್ । ಅನ್ವಿತಿ । ಯಚ್ಛಂತಿ । ರಶ್ಮಯಃ ॥ ತೀವ್ರಾನ್ । ಘೋಷಾನ್ । ಕೃಣ್ವತೇ । ವೃಷಪಾಣಯ ಇತಿ ವೃಷ–ಪಾಣಯಃ । ಅಶ್ವಾಃ । ರಥೇಭಿಃ । ಸಹ । ವಾಜಯಂತಃ ॥

---

| ಮಂತ್ರ | ವಿನಿಯೋಗ |
| --- | --- |
| ರಥೇ...ರಶ್ಮಯಃ ॥ | ಸಾರಥಿಯ ಅಭಿಮಂತ್ರಣವನ್ನು ಮಾಡಲು. |
| ತೀವ್ರಾನ್ಘೋಷಾನ್...ವ್ಯಯಂತಃ ॥ | ಅಶ್ವಾಭಿಮಂತ್ರಣವನ್ನು ಮಾಡಲು. |

---

▲ **ರಥೇ**=ರಥದಲ್ಲಿ; **ತಿಷ್ಠನ್**=ಕುಳಿತವನಾಗಿ; **ಸುಷಾರಥಿಃ**=ಒಳ್ಳೆಯ ಶಿಕ್ಷಿತನಾದ ಸಾರಥಿಯು; **ಯತ್ರ ಯತ್ರ**=[ರಥಿಕನು] ಎಲ್ಲೆಲ್ಲಿ; **ಕಾಮಯತೇ**=ಹೋಗಲು ಇಚ್ಛಿಸುವನೋ; [ಅಲ್ಲಲ್ಲಿಗೆ] **ವಾಜಿನಃ**=ಕುದುರೆಗಳನ್ನು; **ಪುರಃ**=ಮುಂದಕ್ಕೆ; **ನಯತಿ**=ಒಯ್ಯುತ್ತಾನೆ/ನಡೆಸುತ್ತಾನೆ; [ಹೇ! ಋತ್ವಿಗ್ಯಜಮಾನರೇ!] **ಅಭೀಶೂನಾಮ್**=ರಥದ ಕುದುರೆಗಳಿಗೆ ಕಟ್ಟಿರುವ ಹಗ್ಗಗಳ; **ಮಹಿಮಾನಮ್ ಪನಾಯತ**=[ಮಹತ್ತ್ವವನ್ನು ಮಾತಿನಿಂದ] ಸ್ತುತಿಸಿರಿ. **ರಶ್ಮಯಃ**=ಈ ಹಗ್ಗಗಳು; **ಮನಃ**=[ಸಾರಥಿಯ] ಮನಸ್ಸು; [ಎಲ್ಲಿ ಮುಂದೆ ಹೋಗುತ್ತದೆಯೋ] [ಅಲ್ಲಿಗೆ]; **ಪಶ್ಚಾತ್ ಅನು ಯಚ್ಛಂತಿ**=ಅನುಸರಿಸಿ ಕುದುರೆಗಳನ್ನು ನಿಯಂತ್ರಿಸುತ್ತವೆ.
▲ **ವೃಷಪಾಣಯಃ**=ಗಮನಶಕ್ತವಾದ ಪಾದಗಳುಳ್ಳ; **ರಥೇಭಿಃ ಸಹ**=ರಥಗಳೊಡನೆ; **ವಾಜಯಂತಃ**=ಶೀಘ್ರವಾಗಿ ಹೋಗುವ; **ಅಶ್ವಾಃ**=ಕುದುರೆಗಳು; **ತೀವ್ರಾನ್ ಘೋಷಾನ್**=ಹೇಷಾರವವನ್ನು; **ಕೃಣ್ವತೇ**=ಮಾಡುತ್ತವೆ; [ಜೋರಾಗಿ ಕೆನೆಯುತ್ತವೆ]

---

ಎಂಬುದಾಗಿ ಏಕವಚನವು ಇದೆ. **'ಮಾತೇವ ಪುತ್ರಂ ಬಿಭೃತಾಮ್, ಶತ್ರೂನ್ ಅಪವಿಧ್ಯತಾಮ್'** ಎಂಬ ವಾಕ್ಯದ್ವಯಕ್ಕೆ ಅನುಗುಣವಾಗಿ ಅನ್ವಯವಿದೆ.

**ಅವಕ್ರಾಮಂತಃ ಪ್ರಪದ್ಯೈರಮಿತ್ರಾನ್ಕ್ಷಿಣಂತಿ ಶತ್ರೂಗ್‍ಂರನಪವ್ಯಯಂತಃ ॥**

**ರಥವಾಹನಗ್‍ಂ ಹವಿರಸ್ಯ ನಾಮ ಯತ್ರಾಽಽಯುಧಂ ನಿಹಿತಮಸ್ಯ ವರ್ಮ ।**

**ತತ್ರಾ ರಥಮುಪ ಶಗ್ಮಗ್‍ಂ ಸದೇಮ ವಿಶ್ವಾಹಾ ವಯಗ್‍ಂ ಸುಮನಸ್ಯಮಾನಾಃ ॥**

---

ಅವಕ್ರಾಮಂತ ಇತ್ಯವ-ಕ್ರಾಮಂತಃ । ಪ್ರಪದ್ಯೈರಿತಿ ಪ್ರ-ಪದ್ಯೈಃ । ಅಮಿತ್ರಾನ್ । ಕ್ಷಿಣಂತಿ । ಶತ್ರೂನ್ । ಅನಪವ್ಯಯಂತ ಇತ್ಯನಪ-ವ್ಯಯಂತಃ ॥ ರಥವಾಹನಮಿತಿ ರಥ-ವಾಹನಮ್ । ಹವಿಃ । ಅಸ್ಯ । ನಾಮ । ಯತ್ರ । ಆಯುಧಮ್ । ನಿಹಿತಮಿತಿ ನಿ-ಹಿತಮ್ । ಅಸ್ಯ । ವರ್ಮ ॥ ತತ್ರ । ರಥಮ್ । ಉಪೇತಿ । ಶಗ್ಮಮ್ । ಸದೇಮ । ವಿಶ್ವಾಹೇತಿ ವಿಶ್ವಾ-ಅಹಾ । ವಯಮ್ । ಸುಮನಸ್ಯಮಾನಾ ಇತಿ ಸು-ಮನಸ್ಯಮಾನಾಃ ॥

---

| ಮಂತ್ರ | ವಿನಿಯೋಗ |
|---|---|
| **ರಥವಾಹನಗ್‍ಂ...ಸುಮನಸ್ಯಮಾನಾಃ ॥** | ರಥವಾಹನದಲ್ಲಿ ರಥವನ್ನು ಅತ್ಯಾಧಾನ ಮಾಡಲು/ಏರಿಸಲು. |

---

[ಈ ಅಶ್ವಗಳು] **ಪ್ರಪದ್ಯೈಃ**=ಪಾದಾಗ್ರಗಳಿಂದ; **ಅಮಿತ್ರಾನ್**=ಹಗೆಗಳನ್ನು; **ಅವಕ್ರಾಮಂತಃ**=ತುಳಿಯುತ್ತಾ; **ಅನಪವ್ಯಯಂತಃ**=ಹಿಂದಿರುಗದವುಗಳಾಗಿ; **ಶತ್ರೂನ್**=ವೈರಿಗಳನ್ನು; **ಕ್ಷಿಣಂತಿ**=ಹಿಂಸಿಸುತ್ತವೆ; ♠ **ಯತ್ರ** =ಯಾವ ಸಣ್ಣ ಶಕಟದಲ್ಲಿ; **ಅಸ್ಯ**=ಈ ಯಜಮಾನನ; **ಆಯುಧಮ್**=ಧನುಸ್ಸೇ ಮುಂತಾದ ಆಯುಧವೂ; **ವರ್ಮ**=ಕವಚವೇ ಮುಂತಾದವು; **ನಿಹಿತಮ್**=ಇಡಲ್ಪಟ್ಟಿದೆಯೋ; **ಅಸ್ಯ**=ಈ ಅಲ್ಪಶಕಟಕ್ಕೆ; **ಹವಿಃ**= [ಹವಿಸ್ಸಿನಂತೆ ಉಪಕಾರಕವಾದುದರಿಂದ] ಹವಿಸ್ಸೆನಿಸಿರುವ; **ರಥವಾಹನಮ್ ನಾಮ**=ರಥವಾಹನವೆಂದು ಹೆಸರು; **ತತ್ರ**=ಆ ಶಕಟದಲ್ಲಿ; **ವಯಮ್**=ನಾವು; **ವಿಶ್ವಾಹಾ**=ಎಲ್ಲಾ ದಿನಗಳಲ್ಲಿಯೂ; **ಸುಮನಸ್ಯ ಮಾನಾಃ**=ಒಳ್ಳೆಯ ಮನಸ್ಸುಳ್ಳವರಾಗಿ; **ಶಗ್ಮಮ್**=ಸುಖವಾದ ಗಮನಕ್ಕೆ ಕಾರಣವಾದ; **ರಥಮ್**=ರಥ ವನ್ನು; **ಉಪ ಸದೇಮ**=ಸಮೀಪಕ್ಕೆ ಬಂದು ಸ್ಥಾಪಿಸುವೆವು.

---

ಯುದ್ಧದಲ್ಲಿ ಮಧುರವಾಗಿ ಶಬ್ದ ಮಾಡುವ ಬಿಲ್ಲಿನ ಎರಡು ಕೋಟಿಗಳು ತಾಯಿಯು ಮಗನನ್ನು ರಕ್ಷಿಸುವಂತೆ ರಕ್ಷಿಸಲಿ. ಅವು ಶತ್ರುಗಳನ್ನೂ ನಾಶಮಾಡಲಿ.

ಬಾಣಗಳನ್ನು ಹೊಂದಿರುವ ಈ ಚೀಲವು ಪಿತೃವಿನಂತೆ ಬಾಣಗಳ ಪಾಲಕವಾಗಿದೆ. ಬಗೆಬಗೆಯ ಬಾಣಗಳು ಇದರ ಮಕ್ಕಳಂತೆ ಇವೆ. ಬಾಣಗಳನ್ನು ಪ್ರಯೋಗಿಸಲು ಎಳೆಯುವಾಗ ಆ ಚೀಲವು **'ಚಿಶ್ಚಾ'** ಎಂದು ಶಬ್ದ ಮಾಡು ತ್ತದೆ. ಇದು ಬೆನ್ನಿನಲ್ಲಿ ಕಟ್ಟಲ್ಪಟ್ಟು ಯುದ್ಧದಲ್ಲಿ ಶತ್ರುಸೇನೆಗಳನ್ನು ಬಾಣಪ್ರಯೋಗದ ಮೂಲಕ ಜಯಿಸುತ್ತದೆ. ಇದನ್ನು ನಾನು ಕಟ್ಟಿಕೊಳ್ಳುತ್ತೇನೆ.

**ಸ್ವಾದುಷಗ್‌ಂಸದಃ ಪಿತರೋ ವಯೋಧಾಃ ಕೃಚ್ಛ್ರೇಶ್ರಿತಃ ಶಕ್ತೀವಂತೋ ಗಭೀರಾಃ। ಚಿತ್ರಸೇನಾ ಇಷುಬಲಾ ಅಮೃಧ್ರಾಃ ಸತೋವೀರಾ ಉರವೋ ವ್ರಾತಸಾಹಾಃ॥**

---

ಸ್ವಾದುಷಗ್‌ಂಸದ ಇತಿ ಸ್ವಾದು-ಸಗ್‌ಂಸದಃ। ಪಿತರಃ। ವಯೋಧಾ ಇತಿ ವಯಃ-ಧಾಃ। ಕೃಚ್ಛ್ರೇಶ್ರಿತ ಇತಿ ಕೃಚ್ಛ್ರೇ-ಶ್ರಿತಃ। ಶಕ್ತೀವಂತ ಇತಿ ಶಕ್ತಿ-ವಂತಃ। ಗಭೀರಾಃ॥ ಚಿತ್ರಸೇನಾ ಇತಿ ಚಿತ್ರ-ಸೇನಾಃ। ಇಷುಬಲಾ ಇತೀಷು-ಬಲಾಃ। ಅಮೃಧ್ರಾಃ। ಸತೋವೀರಾ ಇತಿ ಸತಃ-ವೀರಾಃ। ಉರವಃ। ವ್ರಾತಸಾಹಾ ಇತಿ ವ್ರಾತ-ಸಾಹಾಃ॥

---

| ಮಂತ್ರ | ವಿನಿಯೋಗ |
|---|---|
| **ಸ್ವಾದುಷಗ್‌ಂಸದಃ...ಸಾಹಾಃ॥** | ಪಿತೃಗಳ ಉಪಸ್ಥಾನವನ್ನು ಮಾಡಲು ವಿಹಿತವಾದ ಮೂರು ಮಂತ್ರಗಳಲ್ಲಿ ಮೊದಲನೆಯದು. |

---

**ಪಿತರಃ**=ಪಿತೃದೇವತೆಗಳು; **ಸ್ವಾದುಷಗ್‌ಂಸದಃ**=[ನಾವು ಸಮರ್ಪಿಸುವ] ರುಚಿಕರವಾದ ಅನ್ನದಿಂದ ತೃಪ್ತರಾಗತಕ್ಕವರು; **ವಯೋಧಾಃ**=ನಮ್ಮ ಆಯುಸ್ಸನ್ನು ಸ್ಥಾಪಿಸತಕ್ಕವರು; **ಕೃಚ್ಛ್ರೇ**=ಕಷ್ಟಗಳಲ್ಲಿ; **ಶ್ರಿತಃ**=ಪ್ರಾಣಿಗಳಿಂದ ಆಶ್ರಯಿಸಲ್ಪಡತಕ್ಕವರು; **ಶಕ್ತೀವಂತಃ**=ಶಕ್ತಿಯುಳ್ಳವರು; **ಗಭೀರಾಃ**=ಅಗಾಧವಾದ ಬುದ್ಧಿಯುಳ್ಳವರು; **ಚಿತ್ರಸೇನಾಃ**=ಗಜಾಶ್ವಾದಿ ವಿವಿಧ ಸೇನೆಯುಳ್ಳವರು; **ಇಷುಬಲಾಃ**=ಬಾಣಗಳಿಂದ ಎದುರಿಸಲ್ಪಡದ ಬಲವುಳ್ಳವರು; **ಅಮೃಧ್ರಾಃ**=ಶತ್ರುಗಳು ಸೋಲಿಸಲು ಅಶಕ್ಯರಾದವರು; **ಸತೋವೀರಾಃ**=ಲೋಕದಲ್ಲಿರುವ ಮಹಾವೀರರಿಗಿಂತಲೂ ಅತಿವೀರರು; **ಉರವಃ**=ಧನಾದಿಗಳಿಂದ ಸಮೃದ್ಧರು/ವಿಸ್ತೀರ್ಣರಾದವರು; **ವ್ರಾತಸಾಹಾಃ**=ಶತ್ರುಸೈನ್ಯಸಮೂಹವನ್ನು ಸೋಲಿಸತಕ್ಕವರು.

---

ಒಳ್ಳೆಯ ಸಾರಥಿಯು ರಥಿಕನ ಮನಸ್ಸಿನಂತೆ, ಅವನಿಗೆ ಹಿತವಾಗುವಂತೆ ಯುದ್ಧರಂಗದಲ್ಲಿ ಕುದುರೆಗಳನ್ನು ನಡೆಸುತ್ತಾನೆ. ಕುದುರೆಗಳ ಹಗ್ಗಗಳೂ ಮಹತ್ತ್ವವನ್ನು ಪಡೆದಿವೆ. ಸಾರಥಿಯ ಮನಸ್ಸನ್ನು ಅನುಸರಿಸಿ, ಮುಂದೆ ಹೋಗಲು ಕುದುರೆಗಳನ್ನು ನಿಯಂತ್ರಿಸುತ್ತವೆ. ಹೀಗೆ ಈ ಮಂತ್ರದಲ್ಲಿ ಸಾರಥಿಯನ್ನೂ ಕುದುರೆಗಳ ಹಗ್ಗಗಳನ್ನೂ ಸ್ತುತಿಸಲಾಗಿದೆ.

ಸಮರ್ಥವಾದ ಪಾದಗಳುಳ್ಳ, ರಥದೊಡನೆ ವೇಗವಾಗಿ ಹೋಗುವ ಕುದುರೆಗಳು ಕೆನೆಯುತ್ತಾ, ಶತ್ರುಗಳನ್ನು ಪಾದಾಗ್ರಗಳಿಂದ ತುಳಿಯುತ್ತಾ ಹಿಂಸಿಸುತ್ತವೆ.

ಈ ಮಂತ್ರದಲ್ಲಿ ಕುದುರೆಗಳ ಸ್ವಭಾವವನ್ನು ವಿವರಿಸಲಾಗಿದೆ.

ದೃಢವಾದ ಪಾದಗಳುಳ್ಳ ಕುದುರೆಗಳು ಜೋರಾಗಿ ಕೆನೆಯುತ್ತಾ ಪಾದಾಗ್ರಗಳಿಂದ ಶತ್ರುಗಳನ್ನು ಯುದ್ಧದಲ್ಲಿ ತುಳಿಯುತ್ತವೆ. ಇಂತಹ ಕುದುರೆಗಳನ್ನು ಅಭಿಮಂತ್ರಿಸುತ್ತೇವೆ.

ಬ್ರಾಹ್ಮಣಾಸಃ [ಬ್ರಾಹ್ಮಣಾಸಃ(೨೯)] ಪಿತರಃ ಸೋಮ್ಯಾಸಃ ಶಿವೇ ನೋ ದ್ಯಾವಾಪೃಥಿವೀ ಅನೇಹಸಾ । ಪೂಷಾ ನಃ ಪಾತು ದುರಿತಾದೃತಾವೃಧೋ ರಕ್ಷಾ ಮಾಕಿರ್ನೋ ಅಘಶಗ್ಂಸ ಈಶತ ॥ ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸನ್ನದ್ಧಾ ಪತತಿ ಪ್ರಸೂತಾ ।

---

ಬ್ರಾಹ್ಮಣಾಸಃ । (೨೯) । ಪಿತರಃ । ಸೋಮ್ಯಾಸಃ । ಶಿವೇ ಇತಿ । ನಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಅನೇಹಸಾ ॥ ಪೂಷಾ । ನಃ । ಪಾತು । ದುರಿತಾದಿತಿ ದುಃ-ಇತಾತ್ । ಋತಾವೃಧ ಇತ್ಯೃತ-ವೃಧಃ । ರಕ್ಷ । ಮಾಕಿಃ । ನಃ । ಅಘಶಗ್ಂಸ ಇತ್ಯಘ-ಶಗ್ಂಸಃ । ಈಶತ ॥ ಸುಪರ್ಣಮಿತಿ ಸು-ಪರ್ಣಮ್ । ವಸ್ತೇ । ಮೃಗಃ । ಅಸ್ಯಾಃ । ದಂತಃ । ಗೋಭಿಃ । ಸನ್ನದ್ಧೇತಿ ಸಮ್-ನದ್ಧಾ । ಪತತಿ । ಪ್ರಸೂತೇತಿ ಪ್ರ-ಸೂತಾ ॥

---

| ಮಂತ್ರ | ವಿನಿಯೋಗ |
|---|---|
| **ಬ್ರಾಹ್ಮಣಾಸಃ...ಈಶತ ॥** | ಪಿತೃಗಳ ಉಪಸ್ಥಾನದ ಎರಡನೆಯ ಮಂತ್ರ. |
| **ಸುಪರ್ಣಂ...ಯಗ್ಂಸನ್ ॥** | ಪಿತೃಗಳ ಉಪಸ್ಥಾನದ ಮೂರನೆಯ ಹಾಗೂ ಕಡೆಯ ಮಂತ್ರ. |

---

▲ [ನಮಗೆ ಸಂಬಂಧಿಸಿದ] **ಪಿತರಃ**=ಪಿತೃಗಳು; **ಬ್ರಾಹ್ಮಣಾಸಃ**=ವೇದಾರ್ಥನಿಷ್ಠರಾಗಿರುವರು [ಅದರಿಂದ] [ನಮ್ಮ ವಿಷಯದಲ್ಲಿ] **ಸೋಮ್ಯಾಸಃ**=ಅನುಗ್ರಹಪರರಾಗಿರುವರು; **ನಃ**=ನಮಗೆ; **ಅನೇಹಸಾ**=ಸರ್ವಕಾಲ ಗಳಲ್ಲಿಯೂ; **ದ್ಯಾವಾಪೃಥಿವೀ**=ಭೂಲೋಕ-ಸ್ವರ್ಗಲೋಕಗಳೂ; **ಶಿವೇ**=ಮಂಗಳಕರವಾದವುಗಳಾಗಿ [ಆಗಲಿ]; **ಋತಾವೃಧಃ**=ಯಜ್ಞವನ್ನು ವೃದ್ಧಿಗೊಳಿಸುವ; **ಪೂಷಾ**=ಪೋಷಕನಾದ ದೇವನು; **ನಃ**= ನಮ್ಮನ್ನು; **ದುರಿತಾತ್**=ಪಾಪದಿಂದ; **ಪಾತು**=ರಕ್ಷಿಸಲಿ. [ಎಲೈ! ಪಿತೃಸಮೂಹವೇ!] **ರಕ್ಷ**=[ನಮ್ಮನ್ನು] ರಕ್ಷಿಸು. **ನಃ**=ನಮ್ಮ; **ಅಘಶಗ್ಂಸಃ**=ನಿಂದಕರು; **ಮಾಕಿಃ ಈಶತ**=ನಿಂದಿಸಲು ಸಮರ್ಥರಾಗದಿರಲಿ. ▲ **ಸುಪರ್ಣಮ್**=ಪಿತೃಗಳ ಬಾಣದ ರೆಕ್ಕೆಯು; **ವಸ್ತೇ**=[ಬೀಳುವ ಭಾಗವನ್ನು] ಆಚ್ಛಾದಿಸುತ್ತದೆ. **ಅಸ್ಯಾಃ** =ಈ ಬಾಣದ; **ದಂತಃ**=ಹಲ್ಲಿನಂತೆ ತೀಕ್ಷ್ಣವಾದ ಅಗ್ರಭಾಗವು; **ಮೃಗಃ**=ಮೃಗದ ಹಲ್ಲಿನಂತೆ ತೀಕ್ಷ್ಣ ವಾಗಿದೆ; **ಗೋಭಿಃ**=ಗೋವುಗಳಿಗೆ ಸಂಬಂಧಿಸಿದ ಚರ್ಮಗಳಿಂದ; **ಸನ್ನದ್ಧಾ**=ಚೆನ್ನಾಗಿ ಕಟ್ಟಲ್ಪಟ್ಟಿದೆ. [ಇಂತಹ ಬಾಣವು]; **ಪ್ರಸೂತಾ**=ಪಿತೃಗಳಿಂದ ಪ್ರೇರಿತವಾಗಿ; **ಪತತಿ**=ಶತ್ರುಗಳ ಮೇಲೆ ಬೀಳುತ್ತದೆ.

**ಯತ್ರಾ ನರಸ್ಸಂ ಚ ವಿ ಚ ದ್ರವಂತಿ ತತ್ರಾಸ್ಮಭ್ಯಮಿಷವಃ ಶರ್ಮ ಯಗ್ಂಸನ್ ॥ ಋಜೀತೇ ಪರಿ ವೃಙ್ಗ್ಧಿ ನೋಽಶ್ಮಾ ಭವತು ನಸ್ತನೂಃ । ಸೋಮೋ ಅಧಿ ಬ್ರವೀತು ನೋಽದಿತಿಃ [ನೋಽದಿತಿಃ(೩೦)] ಶರ್ಮ ಯಚ್ಛತು ॥**

---

ಯತ್ರ । ನರಃ । ಸಮಿತಿ । ಚ । ವೀತಿ । ಚ । ದ್ರವಂತಿ । ತತ್ರ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಇಷವಃ । ಶರ್ಮ । ಯಗ್ಂಸನ್ ॥ ಋಜೀತೇ । ಪರೀತಿ । ವೃಙ್ಗ್ಧಿ । ನಃ । ಅಶ್ಮಾ । ಭವತು । ನಃ । ತನೂಃ ॥ ಸೋಮಃ । ಅಧೀತಿ । ಬ್ರವೀತು । ನಃ । ಅದಿತಿಃ । (೩೦) । ಶರ್ಮ । ಯಚ್ಛತು ॥

---

| ಮಂತ್ರ | ವಿನಿಯೋಗ |
|---|---|
| **ಋಜೀತೇ...ಯಚ್ಛತು ॥** | ಆತ್ಮಾಭಿಮರ್ಶನವನ್ನು ಮಾಡಲು. |

---

**ಯತ್ರ**=ಎಲ್ಲಿ; **ನರಃ**=ಯೋಧರು; **ಸಮ್ ದ್ರವಂತಿ ಚ**=ಮೊದಲು ಉತ್ಸಾಹದಿಂದ ಬರುತ್ತಾರೆಯೋ; **ವಿ ಚ** ದ್ರವಂತಿ=ಆಮೇಲೆ ಹೆದರಿ ಓಡುತ್ತಾರೆಯೋ; **ತತ್ರ**=ಅಲ್ಲಿ/ಪರಸೈನ್ಯದಲ್ಲಿ [ಪಿತೃಬಾಣವು ಬೀಳುತ್ತದೆ]**ಇಷವಃ**=ಇಂತಹ ಪಿತೃಗಳ ಬಾಣಗಳು; **ಅಸ್ಮಭ್ಯಮ್**=ನಮಗೆ; **ಶರ್ಮ**=ಸುಖವನ್ನು; **ಯಗ್ಂಸನ್**=ಉಂಟು ಮಾಡಲಿ. ▲ **ಋಜೀತೇ**=ಹೇ! ಬಾಣವೇ! **ನಃ**=ನಮ್ಮನ್ನು; **ಪರಿವೃಂಗ್ಧಿ**=ಎಲ್ಲ ಕಡೆಗಳಿಂದಲೂ ಬಿಟ್ಟುಬಿಡು/ಹಿಂಸಿಸಬೇಡ; **ನಃ**=ನಮ್ಮ; **ತನೂಃ**=ಶರೀರವು; **ಅಶ್ಮಾ ಭವತು**=ಕಲ್ಲಿನಂತೆ ಗಟ್ಟಿಯಾಗಲಿ; **ಸೋಮಃ**=ಸೋಮದೇವನು; **ಅಧಿ ಬ್ರವೀತು**=ನಮ್ಮನ್ನು ಅಧಿಕರೆಂದು ಪ್ರಸಿದ್ಧಿಪಡಿಸಲಿ; **ಅದಿತಿಃ**=ಅದಿತಿ ದೇವಿಯು; **ನಃ**=ನಮಗೆ; **ಶರ್ಮ**=ಸುಖವನ್ನು; **ಯಚ್ಛತು**=ಕೊಡಲಿ.

---

ಈ ಮಂತ್ರದಲ್ಲಿ '**ವೃಷಪಾಣಯಃ**' ಎಂಬ ಶಬ್ದಕ್ಕೆ ಬಲಿಷ್ಠವಾದ ಪಾದಗಳುಳ್ಳ ಎಂದು ಅರ್ಥವನ್ನು ವಿವರಿಸಲಾಗಿದೆ. '**ಪಾಣಿ**' ಎಂಬುದಕ್ಕೆ ಪಾದ ಎಂಬುದು ಲಾಕ್ಷಣಿಕವಾದ ಅರ್ಥ. ಅಥವಾ ಮುಂದಿನ ಕಾಲುಗಳನ್ನು ಕೈಗಳೆಂದು ಭಾವಿಸಬಹುದು.

ಯಜಮಾನನ ಆಯುಧ, ಕವಚಗಳನ್ನು ಇಟ್ಟಿರುವ ಶಕಟವು ರಥವಾಹನ. ಇದರಲ್ಲಿ ನಾವು ರಥವನ್ನು ಸಮೀಪಕ್ಕೆ ಬಂದು ಸ್ಥಾಪಿಸುವೆವು.

ರಥವಾಹನಶಬ್ದದ ವಿವರಣೆಯು ಶ್ರುತಿಯಲ್ಲಿಯೇ ಇದೆ. ರಥವಾಹನದಲ್ಲಿ ರಥವನ್ನು ಇಡುವ ಕಾರ್ಯವು ಬಳಿಕ ನಡೆಯುತ್ತದೆ. ಆಮೇಲೆ ಇರಬೇಕಾದ ಮಂತ್ರವು ಅಧ್ಯಯನಸಂಪ್ರದಾಯದಂತೆ ಇಲ್ಲಿ ಪಠಿತವಾಗಿರುವುದರಿಂದ ಇಲ್ಲಿಯೇ ಹೇಳಲಾಗಿದೆ.

ನಮ್ಮ ಪಿತೃದೇವತೆಗಳು ಈ ವಿಶೇಷಣಗಳಿಂದ ಕೂಡಿರುವವರು. ಅವರು ನಾವು ಸಮರ್ಪಿಸುವ ರುಚಿಕರವಾದ

ಆ ಜಙ್ಘಂತಿ ಸಾನ್ವೇಷಾಂ ಜಘನಾಗ್ಂ ಉಪ ಜಿಘ್ನತೇ । ಅಶ್ವಾಜನಿ

ಪ್ರಚೇತಸೋಽಶ್ವಾನ್ತ್ಸಮಥ್ಸು ಚೋದಯ ॥

---

ಐತಿ । ಜಂಘಂತಿ । ಸಾನು । ಏಷಾಮ್ । ಜಘನಾನ್ । ಉಪೇತಿ । ಜಿಘ್ನತೇ ॥ ಅಶ್ವಾಜನೀತ್ಯಶ್ವ-ಅಜನಿ । ಪ್ರಚೇತಸ ಇತಿ ಪ್ರ-ಚೇತಸಃ । ಅಶ್ವಾನ್ । ಸಮತ್ಸ್ವಿತಿ ಸಮತ್-ಸು । ಚೋದಯ ॥

---

| ಮಂತ್ರ | ವಿನಿಯೋಗ |
|---|---|
| **ಆಜಂಘಂತಿ...ಚೋದಯ ॥** | ಕುದುರೆಗಳ ಚಾವಟಿಯನ್ನು ತೆಗೆದುಕೊಳ್ಳುವಾಗ ಅಭಿಮಂತ್ರಣಕ್ಕಾಗಿ. |

---

▲ [ಚಾಟಿಯನ್ನು ಹಿಡಿದು ಕುದುರೆಗಳನ್ನು ನಡೆಸುವ ಸಾರಥಿಗಳು] **ಏಷಾಮ್**=ಈ ಕುದುರೆಗಳ; **ಸಾನು**= ಪರ್ವತಸಾನುಗಳಂತಿರುವ ಪಕ್ಕೆಗಳನ್ನು; **ಆ ಜಂಘಂತಿ**=ಪ್ರಹರಿಸುತ್ತಾರೆ. **ಜಘನಾನ್**=ಬೆನ್ನುಗಳನ್ನು; **ಉಪ ಜಿಘ್ನತೇ**=ಸಮೀಪದಿಂದ ಪ್ರಹರಿಸುತ್ತಾರೆ. **ಅಶ್ವಾಜನಿ**=ಕುದುರೆಗಳ ಚಾವಟಿಯೇ! **ಪ್ರಚೇತಸಃ**= ಓಡುವುದರಲ್ಲಿ ಮನಸ್ಸುಳ್ಳ; **ಅಶ್ವಾನ್**=ಕುದುರೆಗಳನ್ನು; **ಸಮತ್ಸು**=ಯುದ್ಧಗಳಲ್ಲಿ; **ಚೋದಯ**= ಪ್ರೇರಿಸು.

---

ಅನ್ನದಿಂದ ತೃಪ್ತರಾಗುತ್ತಾರೆ. ಅವರು ನಮ್ಮ ಆಯುರ್ವರ್ಧಕರು. ನಮ್ಮ ಕಷ್ಟವನ್ನು ನೀಗುವವರು. ಸಮರ್ಥರು. ಸಮೃದ್ಧಿಯುಳ್ಳವರು. ಇಂತಹ ಪಿತೃಗಳು ಪ್ರಸನ್ನರಾಗಲಿ.

ಈ ಮಂತ್ರದಲ್ಲಿ ಪಿತೃಗಳ ಜೊತೆಗೆ ದ್ಯಾವಾಪೃಥಿವಿಗಳು, ಪೂಷ-ಇವರ ಸ್ತುತಿಯೂ ಇದೆ. ಪಿತೃಗಳು ವೇದಾರ್ಥ ನಿಷ್ಠರು. ಅಂತೆಯೇ ನಮ್ಮನ್ನು ಅನುಗ್ರಹಿಸುವವರು. ಅವರೂ ದ್ಯಾವಾಪೃಥಿವಿಗಳೂ ಪೂಷದೇವನೂ ಪಾಪದಿಂದ ನಮ್ಮನ್ನು ದೂರಮಾಡಿ, ಮಂಗಳವನ್ನುಂಟುಮಾಡಲಿ. ಹೇ! ಪಿತೃಗಳ ಸಮೂಹವೇ! ನಮ್ಮನ್ನು ಕಾಪಾಡು/ ಕಾಪಾಡಿರಿ.

ಈ ಮಂತ್ರದಲ್ಲಿ ಪಿತೃಸಂಬಂಧಿಯಾದ ಬಾಣವನ್ನು ಪ್ರಶಂಸಿಸಲಾಗಿದೆ. ಬಾಣದ ಪೃಷ್ಠಭಾಗವು ರೆಕ್ಕೆಯಿಂದ ಆಚ್ಛಾದಿತವಾಗಿದೆ. ಬಾಣದ ಅಗ್ರಭಾಗವು ತೀಕ್ಷ್ಣವಾಗಿದೆ. ಗೋಚರ್ಮದಿಂದ ಚೆನ್ನಾಗಿ ಕಟ್ಟಲ್ಪಟ್ಟಿದೆ. ಇಲ್ಲಿ **'ಗೋಭಿಃ ಸನ್ನದ್ಧಾ'** ಎಂಬ ಶ್ರುತ್ಯಂಶಕ್ಕೆ ಎತ್ತಿನ ಚರ್ಮದಿಂದ ಹರಿತ ಮಾಡಲ್ಪಟ್ಟ ಅಥವಾ ಎತ್ತಿನ ಚರ್ಮದಲ್ಲಿ ಇಡಲ್ಪಟ್ಟ ಎಂದು ಅರ್ಥವನ್ನು ಹೇಳಬಹುದು. **'ಸ್ವರ್ಗೇಷುಪಶುವಾಗ್ವಜ್ರದಿಙ್ನೇತ್ರಘೃಣಿಭೂಜಲೇ ಗೌಃ'** ಎಂದು ಗೋಶಬ್ದಕ್ಕೆ ನಾನಾರ್ಥಗಳಿವೆ.

ಈ ರೀತಿಯ ಬಾಣವು ಶತ್ರುಗಳ ಮೇಲೆ ಎರಗುತ್ತದೆ. ಅವು ನಮಗೆ ಸುಖವನ್ನೀಯಲಿ.

ಋಜೀತಿ ಎಂಬ ಶಬ್ದವು ಬಾಣವಾಚಿಯಾಗಿದೆ. ಹೇ! ಬಾಣವೇ! ನಮ್ಮನ್ನು ನೀನು ಹಿಂಸಿಸಬೇಡ. ನಮ್ಮ ಶರೀರವು ಕಲ್ಲಿನಂತೆ ಗಟ್ಟಿಯಾಗಲಿ. ಸೋಮದೇವನು ನಮ್ಮನ್ನು ಮಾನ್ಯರೆಂದು ಹೇಳಲಿ. ಅದಿತಿಯು ಸುಖವನ್ನು ಕೊಡಲಿ.

ಈ ಮಂತ್ರದಲ್ಲಿ ಅಶ್ವಗಳನ್ನು ಮುನ್ನಡೆಸುವ ಸಾಧನವಾದ ಚಾವಟಿಯ ಪ್ರಶಂಸೆಯು ಇದೆ. ಸಾರಥಿಗಳು

**ಅಹಿರಿವ ಭೋಗೈಃ ಪರ್ಯೇತಿ ಬಾಹುಂ ಜ್ಯಾಯಾ ಹೇತಿಂ ಪರಿಬಾಧಮಾನಃ।**

**ಹಸ್ತಘ್ನೋ ವಿಶ್ವಾ ವಯುನಾನಿ ವಿದ್ವಾನ್ಪುಮಾನ್ಪುಮಾಗ್ಂಸಂ ಪರಿ ಪಾತು ವಿಶ್ವತಃ॥**

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ।**

---

ಅಹಿಃ। ಇವ। ಭೋಗೈಃ। ಪರೀತಿ। ಏತಿ। ಬಾಹುಮ್। ಜ್ಯಾಯಾಃ। ಹೇತಿಮ್। ಪರಿಬಾಧಮಾನ ಇತಿ ಪರಿ–ಬಾಧಮಾನಃ। ಹಸ್ತಘ್ನ ಇತಿ ಹಸ್ತ–ಘ್ನಃ। ವಿಶ್ವಾ। ವಯುನಾನಿ। ವಿದ್ವಾನ್। ಪುಮಾನ್। ಪುಮಾಗ್ಂಸಮ್। ಪರೀತಿ। ಪಾತು। ವಿಶ್ವತಃ॥ ವನಸ್ಪತೇ। ವೀಡ್ವಂಗ ಇತಿ ವೀಡು–ಅಂಗಃ। ಹಿ। ಭೂಯಾಃ। ಅಸ್ಮತ್ಸಖೇತ್ಯಸ್ಮತ್–ಸಖಾ। ಪ್ರತರಣ ಇತಿ ಪ್ರ–ತರಣಃ। ಸುವೀರ ಇತಿ ಸು–ವೀರಃ॥

---

| ಮಂತ್ರ | ವಿನಿಯೋಗ |
|---|---|
| **ಅಹಿರಿವ...ವಿಶ್ವತಃ॥** | *ಹಸ್ತಘ್ನದ ಅಭಿಮಂತ್ರಣಕ್ಕಾಗಿ. |
| **ವನಸ್ಪತೇ...ಜೇತ್ವಾನಿ॥** | ರಥಾಭಿಮಂತ್ರಣದ ಐದು ಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

▲ **ಜ್ಯಾಯಾಃ**=ಬಿಲ್ಲಿನ ಹಗ್ಗದ[ನಾಣೆನಿಂದ] ದೆಸೆಯಿಂದ [ಹೊರಬಿದ್ದ]; **ಹೇತಿಮ್**=ಬಾಣವೇ ಮೊದಲಾದ ಆಯುಧವನ್ನು; **ಪರಿಬಾಧಮಾನಃ**=ಸುತ್ತಲೂ ನಿವಾರಿಸುತ್ತಾ; **ಭೋಗೈಃ**=ತನ್ನ ದೇಹಗಳಿಂದ; **ಅಹಿಃ ಇವ**=[ಕೈಕಾಲುಗಳನ್ನು ಸುತ್ತಿಕೊಳ್ಳುವ] ಸರ್ಪದಂತೆ; **ಹಸ್ತಘ್ನಃ**=ಹಸ್ತತ್ರಾಣವು; **ಬಾಹುಮ್**=ಕೈಯನ್ನು; **ಪರ್ಯೇತಿ**=ಆಚ್ಛಾದಿಸಿರುತ್ತದೆ. **ವಿಶ್ವಾ**=ಎಲ್ಲ; **ವಯುನಾನಿ**=ಮಾರ್ಗಗಳನ್ನು; **ವಿದ್ವಾನ್**=ಅರಿತವನಾದ; **ಪುಮಾನ್**=ಪುರುಷನು; **ಪುಮಾಗ್ಂಸಮ್**=[ರಕ್ಷಣೋಪಾಯಗಳನ್ನರಿಯದ] [ಬೇರೆಯ] ಪುರುಷನನ್ನು [ಹೇಗೋ ಹಾಗೆ] ಹಸ್ತಘ್ನಃ=ಹಸ್ತತ್ರಾಣವಾದ ಹಸ್ತಘ್ನವು; **ವಿಶ್ವತಃ**= [ನಮ್ಮನ್ನು] ಎಲ್ಲಾ [ಉಪದ್ರವಗಳಿಂದಲೂ] **ಪರಿ ಪಾತು**=ಕಾಪಾಡಲಿ. ▲ **ವನಸ್ಪತೇ**=ವೃಕ್ಷನಿರ್ಮಿತವಾದ ರಥವೇ!; **ವೀಡ್ವಂಗಃ ಹಿ**=[ನೀನು] ಗಟ್ಟಿಯಾಗಿರುವ ಅಂಗವುಳ್ಳವನೇ; **ಭೂಯಾಃ**=ಆಗಿರುತ್ತೀಯೆ; **ಅಸ್ಮತ್ಸಖಾ**=[ನೀನು] ನಮ್ಮ ಗೆಳೆಯನಂತಿರುವೆ; **ಪ್ರತರಣಃ**=ಶೀಘ್ರವಾಗಿ ಹೋಗಲು ಸಾಧನವಾಗಿರುವೆ; **ಸುವೀರಃ**=ಶೂರರಾದ ಭಟರಿಂದ ರಕ್ಷಿತನಾಗಿರುವೆ.

---

**ಚಾಟಿಯಿಂದ ಕುದುರೆಗಳ ಪಕ್ಕೆಗಳಿಗೆ ಹೊಡೆಯುತ್ತಾರೆ. ಬೆನ್ನುಗಳನ್ನು ಪ್ರಹರಿಸುತ್ತಾರೆ. ಹೇ! ಚಾವಟಿಯೇ! ನೀನು**

---

*** ಕೈಯನ್ನು ರಕ್ಷಿಸಿಕೊಳ್ಳಲು ಬಿಲ್ಗಾರರು ಎಡಗೈಗೆ ಕಟ್ಟಿಕೊಳ್ಳುವ ಚರ್ಮಮಯವಾದ ಸಾಧನ.**

**ಗೋಭಿಃ ಸನ್ನದ್ಧೋ ಅಸಿ ವೀಡಯಸ್ವಾಽಽಸ್ಥಾತಾ ತೇ ಜಯತು ಜೇತ್ವಾನಿ ॥**

**ದಿವಃ ಪೃಥಿವ್ಯಾಃ ಪರ್ಯೋ[ಪರಿ(೩೧)ಓಜ]ಜ ಉದ್ಭೃತಂ ವನಸ್ಪತಿಭ್ಯಃ**

**ಪರ್ಯಾಭೃತಗ್ಂ ಸಹಃ । ಅಪಾಮೋಜ್ಮಾನಂ ಪರಿ ಗೋಭಿರಾವೃತಮಿಂದ್ರಸ್ಯ**

**ವಜ್ರಗ್ಂ ಹವಿಷಾ ರಥಂ ಯಜ ॥**

---

ಗೋಭಿಃ । ಸನ್ನದ್ಧ ಇತಿ ಸಮ್-ನದ್ಧಃ । ಅಸಿ । ವೀಡಯಸ್ವ । ಆಸ್ಥಾತೇತ್ಯಾ-ಸ್ಥಾತಾ । ತೇ । ಜಯತು । ಜೇತ್ವಾನಿ ॥

ದಿವಃ । ಪೃಥಿವ್ಯಾಃ । ಪರೀತಿ ।(೩೧)। ಓಜಃ । ಉದ್ಭೃತಮಿತ್ಯುತ್-ಭೃತಮ್ । ವನಸ್ಪತಿಭ್ಯ ಇತಿ ವನಸ್ಪತಿ-ಭ್ಯಃ ।

ಪರೀತಿ । ಆಭೃತಮಿತ್ಯಾ-ಭೃತಮ್ । ಸಹಃ ॥ ಅಪಾಮ್ । ಓಜ್ಮಾನಮ್ । ಪರೀತಿ । ಗೋಭಿಃ । ಆವೃತಮಿತ್ಯಾ-

ವೃತಮ್ । ಇಂದ್ರಸ್ಯ । ವಜ್ರಮ್ । ಹವಿಷಾ । ರಥಮ್ । ಯಜ ॥

---

| ಮಂತ್ರ | ವಿನಿಯೋಗ |
|---|---|
| **ದಿವಃ ಪೃಥಿವ್ಯಾಃ...ಯಜ ॥** | ರಥಾಭಿಮಂತ್ರಣದ ಎರಡನೆಯ ಮಂತ್ರ. |

---

**ಗೋಭಿಃ**=ಗೋವಿನ ಚರ್ಮದ ಹಗ್ಗದಿಂದ; **ಸನ್ನದ್ಧಃ ಅಸಿ**=ಚೆನ್ನಾಗಿ ಕಟ್ಟಲ್ಪಟ್ಟವನಾಗಿರುವೆ. **ವೀಡಯಸ್ವ**=[ನೀನು] ಅತ್ಯಂತ ದೃಢನಾಗಿರು; **ತೇ ಆಸ್ಥಾತಾ**=ನಿನ್ನಲ್ಲಿ ಕುಳಿತ ರಥಿಕನು; **ಜೇತ್ವಾನಿ**=ಗೆಲ್ಲಬೇಕಾದವರನ್ನು; **ಜಯತು**=ಗೆಲ್ಲಲಿ. ▲ [ಹೇ! ಯಜಮಾನನೇ!] **ದಿವಃ**=ದ್ಯುಲೋಕದಿಂದಲೂ; **ಪೃಥಿವ್ಯಾಃ**=ಭೂಲೋಕದಿಂದಲೂ; **ಪರಿ ಓಜಃ**=ಎಲ್ಲ ಕಡೆಗಳಿಂದಲೂ ಬಲವನ್ನು; **ಉದ್ಭೃತಮ್**=ತಂದು ನಿರ್ಮಿಸಿರುವ; **ವನಸ್ಪತಿಭ್ಯಃ ಪರಿ**= ವನಸ್ಪತಿಗಳೆಲ್ಲದರಿಂದಲೂ [ವೃಕ್ಷಗಳೆಲ್ಲದರಿಂದಲೂ] **ಸಹಃ**=ಬಲವನ್ನು; **ಆಭೃತಮ್**=ತಂದು ಸಂಪಾದಿಸಿರುವ/ನಿರ್ಮಿಸಿರುವ; **ಅಪಾಮ್**=ನೀರಿನ; **ಓಜ್ಮಾನಮ್**=ಬಲವನ್ನು ಸಂಗ್ರಹಿಸಿ ಸಿದ್ಧಪಡಿಸಿರುವ; **ಗೋಭಿಃ**=ಪ್ರಾಣಿಗಳ ನರಮಂಡಲಗಳಿಂದಲೂ; ಗವಾದಿಚರ್ಮರಜ್ಜುಗಳಿಂದಲೂ; **ಪರಿ ಆವೃತಮ್**=ಬಲವಾಗಿ ಬಿಗಿದು ಕಟ್ಟಿರುವ; **ಇಂದ್ರಸ್ಯ**=ಇಂದ್ರದೇವನ; **ವಜ್ರಮ್**=ವಜ್ರಾಯುಧದಂತೆ ದೃಢವಾಗಿರುವ; **ರಥಮ್**=ರಥವನ್ನು; **ಹವಿಷಾ**=ಹವಿಸ್ಸುಗಳಿಂದ/ಬಲಿಗಳಿಂದ; **ಯಜ**=ಆರಾಧಿಸು.

---

ಯುದ್ಧಗಳಲ್ಲಿ ಕುದುರೆಗಳನ್ನು ಪ್ರೇರಣೆಗೊಳಿಸು.

**ಇಂದ್ರಸ್ಯ ವಜ್ರೋ ಮರುತಾಮನೀಕಂ ಮಿತ್ರಸ್ಯ ಗರ್ಭೋ ವರುಣಸ್ಯ ನಾಭಿಃ ।**

**ಸೇಮಾಂ ನೋ ಹವ್ಯದಾತಿಂ ಜುಷಾಣೋ ದೇವ ರಥ ಪ್ರತಿ ಹವ್ಯಾ ಗೃಭಾಯ ॥**

---

ಇಂದ್ರಸ್ಯ । ವಜ್ರಃ । ಮರುತಾಮ್ । ಅನೀಕಮ್ । ಮಿತ್ರಸ್ಯ । ಗರ್ಭಃ । ವರುಣಸ್ಯ । ನಾಭಿಃ ॥ ಸಃ । ಇಮಾಮ್ । ನಃ । ಹವ್ಯದಾತಿಮಿತಿ ಹವ್ಯ-ದಾತಿಮ್ । ಜುಷಾಣಃ । ದೇವ । ರಥ । ಪ್ರತೀತಿ । ಹವ್ಯಾ । ಗೃಭಾಯ ॥

---

| ಮಂತ್ರ | ವಿನಿಯೋಗ |
|---|---|
| **ಇಂದ್ರಸ್ಯ...ಗೃಭಾಯ ॥** | ರಥಾಭಿಮಂತ್ರಣದ ಮೂರನೆಯ ಮಂತ್ರ. |

---

♟ **ದೇವ ರಥ**=ದೇವಸ್ವರೂಪವಾದ ರಥವೇ! [ನೀನು] **ಇಂದ್ರಸ್ಯ**=ಇಂದ್ರನ; **ವಜ್ರಃ**=ವಜ್ರಾಯುಧದಂತೆ [ದೃಢವಾಗಿರುವೆ]. **ಮರುತಾಮ್**=ಮರುತರ; **ಅನೀಕಮ್**=ಸೈನ್ಯದಂತೆ [ಶೂರರಿಂದ ರಕ್ಷಿತವಾಗಿರುವೆ] **ಮಿತ್ರಸ್ಯ**=ಮಿತ್ರದೇವನ; **ಗರ್ಭಃ**=ಗರ್ಭದಂತಿರುವೆ. **ವರುಣಸ್ಯ**=ವರುಣದೇವನ; **ನಾಭಿಃ**=ನಾಭಿಯಂತೆ [ತಿರಸ್ಕರಿಸಲು ಅಸಾಧ್ಯನಾಗಿರುವೆ] **ಸಃ**=ಅಂತಹ ನೀನು; **ನಃ**=ನಮ್ಮ; **ಇಮಾಮ್**=ಈ; **ಹವ್ಯದಾತಿಮ್**=ಕೊಡುವ ಹವಿಸ್ಸುಗಳನ್ನು; **ಜುಷಾಣಃ**=ಸೇವಿಸುವವನಾಗಿ; **ಹವ್ಯಾ**=ಹವಿಸ್ಸುಗಳನ್ನು; **ಪ್ರತಿ ಗೃಭಾಯ**=ಪ್ರತ್ಯೇಕವಾಗಿ ಸ್ವೀಕರಿಸು.

---

ಚರ್ಮಮಯವಾದ ಹಸ್ತಘ್ನವು ಹೇಗೆ ಕೈಗೆ ರಕ್ಷಣೆಯನ್ನು ಒದಗಿಸುತ್ತದೆಯೆಂಬುದನ್ನು ದೃಷ್ಟಾಂತದ ಮೂಲಕ ಈ ಮಂತ್ರದಲ್ಲಿ ಹೇಳಲಾಗಿದೆ.

ಹಾವು ತನ್ನ ದೇಹದಿಂದ ಪುರುಷನ ಕೈಕಾಲುಗಳನ್ನು ಸುತ್ತಿಕೊಳ್ಳುವಂತೆ ಈ ಹಸ್ತಘ್ನವು ಕೈಯನ್ನು ಆಚ್ಛಾದಿಸುತ್ತದೆ. ಆಯುಧದ ಹೊಡೆತದ ಪೀಡೆಯು ಹಸ್ತಘ್ನಕ್ಕೇ ಹೊರತು ಕೈಗೆ ಆಗುವುದಿಲ್ಲ. ರಕ್ಷಣೋಪಾಯಗಳನ್ನು ಅರಿತ ಮನುಷ್ಯನು ಅದನ್ನು ಅರಿಯದ ಮನುಷ್ಯನನ್ನು ರಕ್ಷಿಸುವಂತೆ ಈ ಹಸ್ತಘ್ನವು ನಮ್ಮನ್ನು ರಕ್ಷಿಸಲಿ.

ಈ ಮಂತ್ರದಲ್ಲಿ ವನಸ್ಪತಿನಿರ್ಮಿತವಾದ ರಥವನ್ನು ವನಸ್ಪತಿಯೆಂದು ಸಂಬೋಧಿಸಲಾಗಿದೆ. ರಥದ ಸುಂದರವಾದ ವರ್ಣನೆಯಿದು.

ಹೇ! ರಥವೇ! ನೀನು ಗಟ್ಟಿಯಾದ ಭಾಗಗಳುಳ್ಳವನಾಗಿರುವೆ. ನೀನು ನಮ್ಮ ಗೆಳೆಯನು. ಶೀಘ್ರಗಮನಸಾಧನನು. ಸೈನಿಕರಿಂದ ರಕ್ಷಿತನು. ನಿನ್ನಲ್ಲಿ ಕುಳಿತ ರಥಿಕನು ಗೆಲ್ಲಬೇಕಾದವರನ್ನು ಜಯಿಸಲಿ.

ರಥವು ಅಸಾಧಾರಣವಾದುದಾಗಿದೆ. ಎಲ್ಲ ಲೋಕಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಇರುವ ಬಲವನ್ನು ಸಂಗ್ರಹಿಸಿ ನಿರ್ಮಿಸಲಾಗಿದೆ. ಗವಾದಿಚರ್ಮರಜ್ಜುಗಳಿಂದ ಬಿಗಿಯಾಗಿ ಬಿಗಿಯಲ್ಪಟ್ಟಿದೆ. ಇದು ಇಂದ್ರದೇವನ ವಜ್ರಾಯುಧದಂತೆ ದೃಢವಾಗಿದೆ. ಎಲೈ! ಯಜಮಾನನೇ! ನೀನು ರಥಕ್ಕೆ ಬಲಿಗಳನ್ನು ಸಮರ್ಪಿಸಿ, ಪೂಜಿಸು.

ಹೇ! ದೇವಸ್ವರೂಪವಾದ ರಥವೇ! ನೀನು ಅತ್ಯಂತ ದೃಢನಾಗಿರುವೆ. ನಿನ್ನನ್ನು ಶೂರರು ರಕ್ಷಿಸುವರು. ಮಿತ್ರದೇವನ ಗರ್ಭದಂತೆ ಸುರಕ್ಷಿತನಾಗಿರುವೆ.

ಉಪ ಶ್ವಾಸಯ ಪೃಥಿವೀಮುತ ದ್ಯಾಂ ಪುರುತ್ರಾ ತೇ ಮನುತಾಂ ವಿಷ್ಠಿತಂ ಜಗತ್ । ಸ ದುಂದುಭೇ ಸಜೂರಿಂದ್ರೇಣ ದೇವೈರ್ದೂರಾ[ದ್ದೂರಾತ್(೩೨) ದವೀಯೋ]ದ್ದವೀಯೋ ಅಪ ಸೇಧ ಶತ್ರೂನ್ ॥ ಆ ಕ್ರಂದಯ ಬಲಮೋಜೋ ನ ಆ ಧಾ ನಿಷ್ಟನಿಹಿ ದುರಿತಾ ಬಾಧಮಾನಃ ।

---

ಉಪೇತಿ । ಶ್ವಾಸಯ । ಪೃಥಿವೀಮ್ । ಉತ । ದ್ಯಾಮ್ । ಪುರುತ್ರೇತಿ ಪುರು-ತ್ರಾ । ತೇ । ಮನುತಾಮ್ । ವಿಷ್ಠಿತಮಿತಿ ವಿ-ಸ್ಥಿತಮ್ । ಜಗತ್ ॥ ಸಃ । ದುಂದುಭೇ । ಸಜೂರಿತಿ ಸ-ಜೂಃ । ಇಂದ್ರೇಣ । ದೇವೈಃ । ದೂರಾತ್ । (೩೨) । ದವೀಯಃ । ಅಪೇತಿ । ಸೇಧ । ಶತ್ರೂನ್ ॥ ಏತಿ । ಕ್ರಂದಯ । ಬಲಮ್ । ಓಜಃ । ನಃ । ಏತಿ । ಧಾಃ । ನಿರಿತಿ । ಸ್ತನಿಹಿ । ದುರಿತೇತಿ ದುಃ-ಇತಾ । ಬಾಧಮಾನಃ ॥

---

| ಮಂತ್ರ | ವಿನಿಯೋಗ |
| --- | --- |
| **ಉಪ ಶ್ವಾಸಯ...ಶತ್ರೂನ್ ॥** | ರಥಾಭಿಮಂತ್ರಣದ ನಾಲ್ಕನೆಯ ಮಂತ್ರ. |
| **ಆ ಕ್ರಂದಯ...ವೀಡಯಸ್ವ ॥** | ರಥಾಭಿಮಂತ್ರಣದ ಐದನೆಯ ಹಾಗೂ ಕೊನೆಯ ಮಂತ್ರ. |

---

▲ **ದುಂದುಭೇ**=ರಥದ ಸಮೀಪದಲ್ಲಿರುವ ನಗಾರಿಯೇ! **ಪೃಥಿವೀಮ್**=ಭೂಮಿಯನ್ನು; **ಉಪ ಶ್ವಾಸಯ**=[ನಿನ್ನ ಶಬ್ದದಿಂದ] ತುಂಬಿಬಿಡು; **ಉತ**=ಮತ್ತು; **ದ್ಯಾಮ್**=ದ್ಯುಲೋಕವನ್ನೂ; ಉಪ ಶ್ವಾಸಯ =[ನಿನ್ನ ಶಬ್ದದಿಂದ] ಪೂರಿತವಾಗುವಂತೆ ಮಾಡು. **ಪುರುತ್ರಾ**=ದ್ಯುಲೋಕ-ಭೂಲೋಕಾದಿಯಾದ ಹಲವು ಸ್ಥಾನಗಳಲ್ಲಿ; **ವಿಷ್ಠಿತಮ್**=ಚೆನ್ನಾಗಿ ಸ್ಥಿತವಾಗಿರುವ; **ಜಗತ್**=[ಸಮಸ್ತ] ಪ್ರಪಂಚವೂ; **ತೇ**=ನಿನ್ನ; [ಶಬ್ದವನ್ನು] **ಮನುತಾಮ್**=ತಿಳಿಯಲಿ. **ಸಃ**=ಅಂತಹ; [ದುಂದುಭಿಯಾದ ನೀನು] **ಇಂದ್ರೇಣ**=ಇಂದ್ರನಿಂದಲೂ; **ದೇವೈಃ**=ಬೇರೆಯ ದೇವತೆಗಳಿಂದಲೂ; **ಸಜೂಃ**=ಸಮಾನಪ್ರೀತಿಯುಳ್ಳವನಾಗಿ; **ಶತ್ರೂನ್**=ನಮ್ಮ ಹಗೆಗಳನ್ನು; **ದೂರಾತ್**=ದೂರಕ್ಕಿಂತಲೂ; **ದವೀಯಃ**=ಅತ್ಯಂತ ದೂರದೇಶವನ್ನು ಕುರಿತು: **ಅಪ ಸೇಧ**=ಓಡಿಸಿಬಿಡು. ▲ **ದುಂದುಭೇ**=ಹೇ! ದುಂದುಭಿಯೇ! **ಬಲಮ್**=ಶತ್ರುಸೈನ್ಯವನ್ನು; **ಆ ಕ್ರಂದಯ**=ಭಯಪಡಿಸುವಂತೆ ಶಬ್ದ ಮಾಡು; **ನಃ**=ನಮಗೆ; **ಓಜಃ**=ಬಲವನ್ನು; **ಆ ಧಾಃ**=ವೃದ್ಧಿಗೊಳಿಸು. **ದುರಿತಾ**=[ನಮ್ಮ] ಪಾಪಗಳನ್ನು; **ಬಾಧಮಾನಃ**=ಹೋಗಲಾಡಿಸುತ್ತಾ; **ನಿಷ್ಟನಿಹಿ**=ಉತ್ಸಾಹವರ್ಧಕವಾದ ಶಬ್ದವನ್ನು ಮಾಡು.

**ಅಪ ಪ್ರೋಥ ದುಂದುಭೇ ದುಚ್ಛುನಾಗ್ಂ ಇತ ಇಂದ್ರಸ್ಯ ಮುಷ್ಟಿರಸಿ ವೀಡಯಸ್ವ ॥**

**ಆಽಮೂರಜ ಪ್ರತ್ಯಾವರ್ತಯೇಮಾಃ ಕೇತುಮದ್ದುಂದುಭಿರ್ವಾವದೀತಿ ।**

---

ಅಪೇತಿ । ಪ್ರೋಥ । ದುಂದುಭೇ । ದುಚ್ಛುನಾನ್ । ಇತಃ । ಇಂದ್ರಸ್ಯ । ಮುಷ್ಟಿಃ । ಅಸಿ । ವೀಡಯಸ್ವ ॥ ಏತಿ । ಅಮೂಃ । ಅಜ । ಪ್ರತ್ಯಾವರ್ತಯೇತಿ ಪ್ರತಿ-ಆವರ್ತಯ । ಇಮಾಃ । ಕೇತುಮದಿತಿ ಕೇತು-ಮತ್ । ದುಂದುಭಿಃ । ವಾವದೀತಿ ॥

---

| ಮಂತ್ರ | ವಿನಿಯೋಗ |
|---|---|
| **ಆಽಮೂರಜ...ಜಯಂತು ॥** | ಜಯದ ದುಂದುಭಿಯ ವಾದನವನ್ನು ಮಾಡಲು. |

---

**ದುಚ್ಛುನಾನ್**=ದುಷ್ಟಚಿತ್ತರಾದ ಪುರುಷರನ್ನು; **ಇತಃ**=ಈ ಪ್ರದೇಶದಿಂದ; **ಅಪ ಪ್ರೋಥ**=ದೂರ ಮಾಡು; **ಇಂದ್ರಸ್ಯ**=ವಜ್ರವನ್ನು ಧರಿಸಿರುವ ಇಂದ್ರನ; **ಮುಷ್ಟಿಃ ಅಸಿ**=ಮುಷ್ಟಿಯಂತೆ ಇರುವೆ. **ವೀಡಯಸ್ವ**= ಮತ್ತಷ್ಟು ದೃಢನಾಗು. ▲ **ಇಂದ್ರ**=ಇಂದ್ರದೇವನೇ! **ಅಮೂಃ**=ಈ ಪರಕೀಯಸೈನ್ಯಗಳನ್ನು; **ಆ ಅಜ**= ಸುತ್ತಲೂ ಓಡಿಹೋಗುವಂತೆ ಮಾಡು; **ಇಮಾಃ**=ಈ ನಮ್ಮ ಸೈನ್ಯಗಳನ್ನು; **ಪ್ರತ್ಯಾವರ್ತಯ**=[ಗೆದ್ದು] ಹಿಂದಿರುಗುವಂತೆ ಮಾಡು. **ದುಂದುಭಿಃ**=ಜಯದುಂದುಭಿಯು; **ಕೇತುಮತ್**=ಹೇಗೆ ನಮ್ಮ ಜಯವು ಎಲ್ಲರಿಗೂ ತಿಳಿಯುವುದೋ ಹಾಗೆ; **ವಾವದೀತಿ**=ಉಚ್ಚಧ್ವನಿಯನ್ನು ಮಾಡುತ್ತದೆ.

---

ವರುಣನ ನಾಭಿಯಂತೆ ಯಾರಿಂದಲೂ ತಿರಸ್ಕರಿಸಲು ಅಸಾಧ್ಯನಾಗಿರುವೆ. ನೀನು ನಾವು ಅರ್ಪಿಸುವ ಹವಿಸ್ಸುಗಳನ್ನು ಪ್ರತ್ಯೇಕವಾಗಿ ಸ್ವೀಕರಿಸು.

ರಥದ ಮುಂದೆ ಶಬ್ದವನ್ನು ಮಾಡುತ್ತಾ ಮಾಡುತ್ತಾ ಹೋಗುವ ದುಂದುಭಿಯ ಮಹಿಮೆಯನ್ನು ಈ ಮಂತ್ರದಲ್ಲಿ ವರ್ಣಿಸಲಾಗಿದೆ. ದುಂದುಭಿಯ ಮಹಿಮೆಯೇ ಹೀಗಿರುವಾಗ ರಥದ ಮಹಿಮೆಯನ್ನು ವರ್ಣಿಸುವುದೇನಿದೆ? ಎಂಬುದಾಗಿ ಕೈಮುತಿಕನ್ಯಾಯದಿಂದ ರಥಸ್ತುತಿ.

ಹೇ! ದುಂದುಭಿಯೇ! ನೀನು ನಿನ್ನ ಧ್ವನಿಯಿಂದ ಭೂಮಿಯನ್ನೂ ದ್ಯುಲೋಕವನ್ನೂ ತುಂಬಿಬಿಡು. ನೀನು ಇಂದ್ರಾದಿ ದೇವತೆಗಳೊಡನೆ ಸಮಾನವಾದ ಪ್ರೀತಿಯುಳ್ಳವನಾಗಿ ನಮ್ಮ ಶತ್ರುಗಳನ್ನು ದೂರಕ್ಕೆ ಓಡಿಸಿಬಿಡು. ಇಂತಹ ನಗಾರಿಯೊಡನೆ ಇರುವ ರಥವೇ! ನಮಗೆ ಸುಖವನ್ನು ಕೊಡು.

ಹಿಂದಿನ ಮಂತ್ರದಂತೆಯೇ ಇಲ್ಲಿಯೂ ರಥದ ಸ್ತುತಿಯು ಇದೆ. ಎಲೈ! ದುಂದುಭಿಯೇ! ನೀನು ಶತ್ರುಗಳನ್ನು ನಿನ್ನ ಶಬ್ದದಿಂದ ಭಯಪಡಿಸು. ಉತ್ಸಾಹವರ್ಧಕವಾದ ಶಬ್ದವನ್ನು ಮಾಡು. ದುಷ್ಟರನ್ನು ದೂರ ಮಾಡಿ ನೀನು ದೃಢನಾಗು.

ದುಂದುಭಿಯು ಯುದ್ಧೋತ್ಸಾಹವನ್ನು ಹೆಚ್ಚಿಸುತ್ತದೆ. ಈಗಲೂ ರಣವಾದ್ಯಗಳನ್ನು ಬಾರಿಸುವುದನ್ನು ಗಮನಿಸ ಬಹುದು.

## ಸಮಶ್ವಪರ್ಣಾಶ್ಚರಂತಿ ನೋ ನರೋಽಸ್ಮಾಕಮಿಂದ್ರ ರಥಿನೋ ಜಯಂತು ॥ ೩೩-6 ॥

[ಧನ್ವನ್ಮಹಿಮಾನಂ ಬ್ರಾಹ್ಮಣಾಸೋಽದಿತಿಃ ಪೃಥಿವ್ಯಾಃ ಪರಿ ದೂರಾದೇಕಚತ್ವಾರಿಗ್ಂಶಚ್ಚ ॥]

---

ಸಮಿತಿ । ಅಶ್ವಪರ್ಣಾ ಇತ್ಯಶ್ವ-ಪರ್ಣಾಃ । ಚರಂತಿ । ನಃ । ನರಃ । ಅಸ್ಮಾಕಮ್ । ಇಂದ್ರ । ರಥಿನಃ । ಜಯಂತು ॥ (೩೩) ॥

---

**ನಃ**=ನಮ್ಮ; **ಅಶ್ವಪರ್ಣಾಃ**=ಕುದುರೆಯೇ ವಾಹನವಾಗಿರುವ; **ನರಃ**=ಸವಾರರು; **ಸಂಚರಂತಿ**= ಎಲ್ಲೆಲ್ಲಿಯೂ ಸಂಚರಿಸಲಿ. **ಅಸ್ಮಾಕಮ್**=ನಮ್ಮ; **ರಥಿನಃ**=ರಥಿಕರಾದ ಮುಖ್ಯಪುರುಷರು; **ಜಯಂತು**= [ನಿನ್ನ ಅನುಗ್ರಹದಿಂದ] ಜಯಶೀಲರಾಗಲಿ.

---

ಇಂದ್ರದೇವನ ಅನುಗ್ರಹದಿಂದ ಶತ್ರುಗಳು ಸೋತು ಪಲಾಯನವನ್ನು ಮಾಡಲಿ. ನಮ್ಮ ಸೇನೆಗಳು ಗೆದ್ದು ಹಿಂದಿರುಗಲಿ. ಜಯದುಂದುಭಿಯು ಮೊಳಗಲಿ. ನಮ್ಮ ಸವಾರರು ಎಲ್ಲೆಡೆ ನಿರ್ಭೀತರಾಗಿ ಸಂಚರಿಸಲಿ. ರಥಿಕರು ಜಯಶೀಲರಾಗಲಿ. ಹೀಗೆ ಇಂದ್ರನು ಅನುಗ್ರಹಿಸಲಿ.

---

### ವಿನಿಯೋಗಸಂಗ್ರಹ

**ಅಥಾಶ್ವಮೇಧೇ 1ಜೀಮೂತ ಕವಚಂ ಪ್ರತಿಮುಂಚತಿ ।**
**2ಧನ್ವನಾ ಧನುರಾದತ್ತೇ 3ವಕ್ಷ್ಯಂತೀ ಜ್ಯಾಮಭಿಸ್ಪೃಶೇತ್ ॥**
**4ತೇ ಸಂಮೃಶೇದ್ಧನುಷ್ಕೋಟ್ಯೌ 5ಬಹ್ವೀತೀಷುಧಿಬಂಧನಮ್ ।**
**6ರಥೇತಿ ಸಾರಥಿಂ 7ತೀವ್ರಾನಶ್ವಾನಪ್ಯಭಿಮಂತ್ರಯೇತ್ ॥**
**8ರಥ ಕಾಲೇ ರಥಃ ಸ್ಥಾಪ್ಯೋ ಭಜೇ9-11ತ್ಸ್ವಾದುತ್ರಯಾತ್ಪಿತ್ರ್ಯಾನ್ ।**
**12ಋಜ್ರ್ಯಾತ್ಮಾನಮಭಿಸ್ಪೃಶ್ಯ ಹ್ಯಾ 13ಜಂಘೇತ್ಯಾಹರೇತ್ಕಶಾಮ್ ॥**
**ಹಸ್ತಘ್ನಂ ಮಂತ್ರಯತೇಽಹೀತಿ14 ರಥಂತ 15-19ವನ ಪಂಚಭಿಃ ।**
**ದುಂದುಭಿಂ ವಾದಯೇ20ದಾಮೂರತ್ರ ಮಂತ್ರಾಸ್ತು ವಿಂಶತಿಃ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-20

ಐ❀ಐಐ❀ಐ

## ॥ ಸಪ್ತಮೋಽನುವಾಕಃ ॥

**ಯದಕ್ರಂದಃ ಪ್ರಥಮಂ ಜಾಯಮಾನ ಉದ್ಯನ್ತ್ಸಮುದ್ರಾದುತ ವಾ ಪುರೀಷಾತ್ ।**
**ಶ್ಯೇನಸ್ಯ ಪಕ್ಷಾ ಹರಿಣಸ್ಯ ಬಾಹೂ ಉಪಸ್ತುತ್ಯಂ ಮಹಿ ಜಾತಂ ತೇ ಅರ್ವನ್ ॥**

---

ಯತ್ । ಅಕ್ರಂದಃ । ಪ್ರಥಮಮ್ । ಜಾಯಮಾನಃ । ಉದ್ಯನ್ನಿತ್ಯುತ್-ಯನ್ । ಸಮುದ್ರಾತ್ । ಉತ । ವಾ । ಪುರೀಷಾತ್ ॥ ಶ್ಯೇನಸ್ಯ । ಪಕ್ಷಾ । ಹರಿಣಸ್ಯ । ಬಾಹೂ ಇತಿ । ಉಪಸ್ತುತ್ಯಮಿತ್ಯುಪ-ಸ್ತುತ್ಯಮ್ । ಮಹಿ । ಜಾತಮ್ । ತೇ । ಅರ್ವನ್ ॥

---

ಆರನೆಯ ಅನುವಾಕದಲ್ಲಿ ಕವಚಧಾರಣೆ ಮುಂತಾದ ವಿಷಯಗಳು ಹೇಳಲ್ಪಟ್ಟವು. ಮುಂದಿನ ಏಳು, ಎಂಟು ಮತ್ತು ಒಂಬತ್ತನೆಯ ಅನುವಾಕಗಳಲ್ಲಿ ಅಶ್ವಮೇಧಾಂಗವಾದ ಅಶ್ವಸ್ತೋಮೀಯಹೋಮಗಳು ಹೇಳಲ್ಪಟ್ಟಿವೆ. ಇವು ಮೂವತ್ತಾರು ಹೋಮಗಳು.

---

| ಮಂತ್ರ | ವಿನಿಯೋಗ |
|---|---|
| **ಯದಕ್ರಂದಃ...ಅರ್ವನ್ ॥** | ಅಶ್ವಸ್ತೋಮೀಯಹೋಮಗಳ ಅನುಷ್ಠಾನಕ್ಕಾಗಿ ಪ್ರಥಮಮಂತ್ರ. |

---

▲ **ಅರ್ವನ್**=ಕುದುರೆಯೇ! **ಸಮುದ್ರಾತ್**=ನೀರಿನಿಂದ; **ಉದ್ಯನ್**=ಹುಟ್ಟುವಾಗ; **ಉತ ವಾ**=ಅಥವಾ [ಲೌಕಿಕದೃಷ್ಟಿಯಿಂದ ನೋಡುವಾಗ]; **ಪುರೀಷಾತ್**=ಪುಂಸ್ತ್ವಶಕ್ತಿಯುಳ್ಳ ದೊಡ್ಡ ಕುದುರೆಯಿಂದಾಗಲೀ [ಹುಟ್ಟುವಾಗ]; **ಯತ್**=ಯಾವ ಕಾರಣದಿಂದ; **ಪ್ರಥಮಮ್**=ಮೊದಲು; **ಜಾಯಮಾನಃ**=ಹುಟ್ಟುತ್ತಿರುವಾಗಲೇ; **ಅಕ್ರಂದಃ**=ಜೋರಾಗಿ ಹೇಷಾರವವನ್ನು ಮಾಡಿದೆಯೋ;[ಆ ಕಾರಣದಿಂದ] **ತೇ**=ನಿನ್ನ; **ಜಾತಮ್**=ಜನ್ಮವು; **ಮಹಿ**=ಹೆಚ್ಚಾಗಿ; **ಉಪಸ್ತುತ್ಯಮ್**=ಪ್ರಶಂಸಿಸಲು ಯೋಗ್ಯವಾಗಿದೆ. [ನೀನು] **ಶ್ಯೇನಸ್ಯ**=ಗಿಡಗಪಕ್ಷಿಯ; **ಪಕ್ಷಾ**=ರೆಕ್ಕೆಯಂತೆಯೂ; **ಹರಿಣಸ್ಯ**=ಜಿಂಕೆಯ; **ಬಾಹೂ**=ಕಾಲುಗಳಂತೆಯೂ; [ಶೀಘ್ರಗಾಮಿಯಾಗಿರುವೆ].

---

**'ಅಶ್ವಃ ಅಪ್ಸುಯೋನಿಃ'** ಎಂದು ಶ್ರುತ್ಯಂತರವಿದೆ. ನೀರು ಅಶ್ವದ ಉತ್ಪತ್ತಿಸ್ಥಾನ. ಅದನ್ನು ಇಲ್ಲಿ ಸಮುದ್ರದಲ್ಲಿ ಅಶ್ವದ ಜನ್ಮವೆಂದು ವಿವರಿಸಿದೆ. ಅಶ್ವವು ಜನಿಸುವಾಗ ಮಾಡುವ ಹೇಷಾರವವನ್ನು-'ಆಹಾ! ನಾನು ಅಗ್ನ್ಯಾದಿಗಳಿಗೆ ಸಾಧನನು' ಎಂದು ಭಾವಿಸುತ್ತದೆ ಎಂಬುದಾಗಿ-ವರ್ಣಿಸಲಾಗಿದೆ.

**ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯತಿಷ್ಠತ್ । ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ॥ ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ । ಅಸಿ ಸೋಮೇನ ಸಮಯಾ ವಿಪೃಕ್ತ [ವಿಪೃಕ್ತಃ(೩೪)]**

---

ಯಮೇನ । ದತ್ತಮ್ । ತ್ರಿತಃ । ಏನಮ್ । ಆಯುನಕ್ । ಇಂದ್ರಃ । ಏನಮ್ । ಪ್ರಥಮಃ । ಅಧೀತಿ । ಅತಿಷ್ಠತ್ ॥ ಗಂಧರ್ವಃ । ಅಸ್ಯ । ರಶನಾಮ್ । ಅಗೃಭ್ಣಾತ್ । ಸೂರಾತ್ । ಅಶ್ವಮ್ । ವಸವಃ । ನಿರಿತಿ । ಅತಷ್ಟ ॥ ಅಸಿ । ಯಮಃ । ಅಸಿ । ಆದಿತ್ಯಃ । ಅರ್ವನ್ । ಅಸಿ । ತ್ರಿತಃ । ಗುಹ್ಯೇನ । ವ್ರತೇನ ॥ ಅಸಿ । ಸೋಮೇನ । ಸಮಯಾ । ವಿಪೃಕ್ತ ಇತಿ ವಿ-ಪೃಕ್ತಃ । (೩೪) ।

---

| ಮಂತ್ರ | ವಿನಿಯೋಗ |
| --- | --- |
| **ಯಮೇನ...ನಿರತಷ್ಟ ॥** | ಅಶ್ವಸ್ತೋಮೀಯಹೋಮದ ಎರಡನೆಯ ಮಂತ್ರ. |
| **ಅಸಿ ಯಮೋ...ಬಂಧನಾನಿ ॥** | ಅಶ್ವಸ್ತೋಮೀಯಹೋಮದ ಮೂರನೆಯ ಮಂತ್ರ. |

---

▲ **ಯಮೇನ**=ಅಗ್ನಿಯಿಂದ; **ದತ್ತಮ್**=ಕೊಡಲ್ಪಟ್ಟ; **ಏನಮ್**=ಈ ಕುದುರೆಯನ್ನು; **ತ್ರಿತಃ**=ಮೂರು ಲೋಕಗಳಲ್ಲಿಯೂ ಸಂಚರಿಸುವ ವಾಯುವು; **ಆಯುನಕ್**=[ರಥದಲ್ಲಿ] ಕಟ್ಟಿದನು. **ಇಂದ್ರಃ**=ಇಂದ್ರನು; **ಪ್ರಥಮಃ**= ಎಲ್ಲ ದೇವತೆಗಳಿಗಿಂತಲೂ ಮೊದಲು ಪ್ರವೃತ್ತನಾದವನಾಗಿ; **ಏನಮ್**=ಈ ಅಶ್ವವನ್ನು; **ಅಧಿ ಅತಿಷ್ಠತ್**= ಯೋಗಕ್ಷೇಮಸಂಪಾದನೆಯಿಂದ ಆಶ್ರಯಿಸಿದನು. **ಗಂಧರ್ವಃ**=ಗಂಧರ್ವನು; **ಅಸ್ಯ**=ಈ ಕುದುರೆಯ; **ರಶನಾಮ್**=ಹಗ್ಗವನ್ನು; **ಅಗೃಭ್ಣಾತ್**=ಹಿಡಿದನು. **ವಸವಃ**=ವಸುದೇವತೆಗಳೇ! [ನೀವು]; **ಸೂರಾತ್**=ಆದಿತ್ಯನಿಂದ; **ಅಶ್ವಮ್**=ಈ ಕುದುರೆಯನ್ನು; **ನಿರತಷ್ಟ**=ಚೆನ್ನಾಗಿ ಪ್ರಕಾಶಪಡಿಸಿರಿ. ▲ **ಅರ್ವನ್**=ಎಲೈ! ಅಶ್ವವೇ! [ನೀನು] **ಯಮಃ ಅಸಿ**=ಯಮಶಬ್ದವಾಚ್ಯ[ಅಗ್ನಿ]ನಾಗಿರುವೆ; **ಆದಿತ್ಯಃ ಅಸಿ**=ಆದಿತ್ಯಾನುಗ್ರಹವುಳ್ಳ ನೀನು ಆದಿತ್ಯನು; **ತ್ರಿತಃ ಅಸಿ**=ವಾಯುವಿನ ಅನುಗ್ರಹದಿಂದ ತ್ರಿತನಾಗಿರುವೆ. **ಗುಹ್ಯೇನ**=ಗೋಪ್ಯವಾದ; **ವ್ರತೇನ**=ಅಶ್ವಮೇಧರೂಪವಾದ ಕರ್ಮದಿಂದಲೂ; **ಸೋಮೇನ**=ಅಲ್ಲಿರುವ ಸೋಮದಿಂದಲೂ; **ಸಮಯಾ**=ತಕ್ಕ ಸಮಯದಲ್ಲಿ/ಸಮೀಪದಲ್ಲಿ; **ವಿಪೃಕ್ತಃ ಅಸಿ**=ವಿಶೇಷವಾಗಿ ಯುಕ್ತನಾಗಿರುವೆ.

ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥ ತ್ರೀಣಿ ತ ಆಹುರ್ದಿವಿ ಬಂಧನಾನಿ
ತ್ರೀಣ್ಯಪ್ಸು ತ್ರೀಣ್ಯಂತಃ ಸಮುದ್ರೇ । ಉತೇವ ಮೇ ವರುಣಶ್ಛನ್ತ್ಸ್ಯರ್ವನ್,
ಯತ್ರಾ ತ ಆಹುಃ ಪರಮಂ ಜನಿತ್ರಮ್ ॥

---

ಆಹುಃ । ತೇ । ತ್ರೀಣಿ । ದಿವಿ । ಬಂಧನಾನಿ ॥ ತ್ರೀಣಿ । ತೇ । ಆಹುಃ । ದಿವಿ । ಬಂಧನಾನಿ । ತ್ರೀಣಿ । ಅಪ್ಸ್ವಿತ್ಯಪ್–ಸು । ತ್ರೀಣಿ । ಅಂತಃ । ಸಮುದ್ರೇ ॥ ಉತ । ಇವ । ಮೇ । ವರುಣಃ । ಛನ್ತ್ಸಿ । ಅರ್ವನ್ । ಯತ್ರ । ತೇ । ಆಹುಃ । ಪರಮಮ್ । ಜನಿತ್ರಮ್ ॥

---

| ಮಂತ್ರ | ವಿನಿಯೋಗ |
|---|---|
| **ತ್ರೀಣಿ ತ...ಜನಿತ್ರಮ್ ॥** | ಅಶ್ವಸ್ತೋಮೀಯಹೋಮದ ನಾಲ್ಕನೆಯ ಮಂತ್ರ. |

---

**ತೇ**=ನಿನಗೆ; **ದಿವಿ**=ದ್ಯುಲೋಕದಲ್ಲಿ; **ಬಂಧನಾನಿ**=ಬಂಧಿಸುವ ರಜ್ಜುಗಳು; **ತ್ರೀಣಿ**=ಮೂರು [ಎಂದು]; **ಆಹುಃ**=ಹೇಳುತ್ತಾರೆ. ತ್ರೀಣಿ ಬಂಧನಾನಿ ಆಹುಃ=ಶಾಸ್ತ್ರಸಿದ್ಧವಾದ ಬಂಧನತ್ರಯವನ್ನು ಹೇಳುತ್ತಾರೆ. ▲ **ಅರ್ವನ್**=ಹೇ! ಅಶ್ವವೇ! [ಹೇಗೆ] **ದಿವಿ**=ದ್ಯುಲೋಕದಲ್ಲಿ; **ತೇ**=[ಉಚ್ಚೈಃಶ್ರವೋರೂಪನಾದ] ನಿನಗೆ; **ತ್ರೀಣಿ**=ಮೂರು; **ಬಂಧನಾನಿ**=ಬಂಧನಗಳೆಂದು; **ಆಹುಃ**=ಹೇಳುತ್ತಾರೆಯೋ; [ಹೇಗೆ] **ಅಪ್ಸು**=[ವಾಜಪೇಯದಲ್ಲಿ] ಸ್ನಾನ ಮಾಡಿಸುವಾಗ; **ತ್ರೀಣಿ**=ಮೂರು [ಬಂಧನಗಳೆನ್ನುತ್ತಾರೆಯೋ] [ಹಾಗೆಯೇ] **ಅಂತಃ ಸಮುದ್ರೇ**=ಸಮುದ್ರಮಧ್ಯದಲ್ಲಿ ಬಡಬಾಗ್ನಿರೂಪದಿಂದ ಇರುವ ನಿನಗೆ; **ತ್ರೀಣಿ**=ಮೂರು [ಬಂಧನಗಳೆನ್ನುತ್ತಾರೆ] **ಉತ**=ಮತ್ತು; **ತೇ**=ನಿನಗೆ; **ಯತ್ರ**=ಎಲ್ಲಿ/ಪಿತೃವೀರ್ಯದಲ್ಲಿ; **ಪರಮಮ್**=ಶ್ರೇಷ್ಠವಾದ; **ಜನಿತ್ರಮ್**=ಜನ್ಮವೆಂದು; **ಆಹುಃ**=ಹೇಳುತ್ತಾರೆಯೋ; **ವರುಣಃ**=ಪಾಪನಿವಾರಕನಾಗಿ ವರುಣ ರೂಪನಾದ ನೀನು; **ಮೇ**=ನನಗೆ; **ಛನ್ತ್ಸಿ ಇವ**=[ನೀನು ಮಹಾಬಲಶಾಲಿಯೆಂದು] ಹೇಳುವಂತಿರುವೆ.

---

ಕುದುರೆಯು ಶೀಘ್ರಗಾಮಿಯಾಗಿದೆ. ಹಲವು ಕುದುರೆಗಳಲ್ಲಿ ಯಾಗಸಾಧನವಾದ ಕುದುರೆಯ ಜನ್ಮವು ಸಾರ್ಥಕವೂ, ಸ್ತುತ್ಯವೂ ಆಗಿದೆ.

ಯಮ ಎಂಬ ಪದಕ್ಕೆ **'ಅಗ್ನಿರ್ವಾವ ಯಮಃ'** ಎಂಬ ಶ್ರುತಿಯನ್ನು ಅನುಸರಿಸಿ ಅಗ್ನಿ ಎಂಬ ಅರ್ಥವನ್ನು ತಿಳಿಸಿರುತ್ತಾರೆ. **'ತ್ರಿಷು ಲೋಕೇಷು ತ್ರಾಯತೇ=ವಿಸ್ತಾರ್ಯತೇ'** [ಮೂರು ಲೋಕಗಳಲ್ಲಿಯೂ ಹರಡುತ್ತದೆ] ಎಂಬ ಶಬ್ದ ವ್ಯುತ್ಪತ್ತಿಯಿಂದ ತ್ರಿತ ಎಂಬ ಶಬ್ದಕ್ಕೆ ವಾಯು ಎಂದು ಅರ್ಥವೆಂದೂ ತಿಳಿಸುತ್ತಾರೆ.

ಯಾವ ಅಶ್ವವನ್ನು ಅಗ್ನಿಯು ತರುವನೋ, ವಾಯುವು ಜೋಡಿಸುವನೋ, ಇಂದ್ರನು ಮೊದಲು ಪ್ರವೃತ್ತನಾಗುವನೋ, ಗಂಧರ್ವನು ಹಗ್ಗವನ್ನು ಹಿಡಿಯುವನೋ, ವಸುಗಳು ಸೂರ್ಯಪ್ರಕಾಶದಿಂದ ಬೆಳಗುವಂತೆ ಮಾಡುವರೋ ಅಂತಹ ಅಶ್ವವು ಇದಾಗಿದೆ ಎಂಬ ಅಶ್ವದ ಸ್ತುತಿಯು ಇದಾಗಿದೆ.

ಇಮಾ ತೇ ವಾಜಿನ್ನವಮಾರ್ಜನಾನೀಮಾ ಶಫಾನಾಗ್ಂ ಸನಿತುರ್ನಿಧಾನಾ । ಅತ್ರಾ ತೇ ಭದ್ರಾ ರಶನಾ ಅಪಶ್ಯಮೃತಸ್ಯ ಯಾ ಅಭಿರಕ್ಷಂತಿ ಗೋಪಾಃ ॥ ಆತ್ಮಾನಂ ತೇ ಮನಸಾಽಽರಾದಜಾನಾಮವೋ ದಿವಾ [(೩೫)] ಪತಯಂತಂ ಪತಂಗಮ್ ।

---

ಇಮಾ । ತೇ । ವಾಜಿನ್ನ್ । ಅವಮಾರ್ಜನಾನೀತ್ಯವ-ಮಾರ್ಜನಾನಿ । ಇಮಾ । ಶಫಾನಾಮ್ । ಸನಿತುಃ । ನಿಧಾನೇತಿ ನಿ-ಧಾನಾ ॥ ಅತ್ರ । ತೇ । ಭದ್ರಾಃ । ರಶನಾಃ । ಅಪಶ್ಯಮ್ । ಋತಸ್ಯ । ಯಾಃ । ಅಭಿರಕ್ಷಂತೀತ್ಯಭಿ-ರಕ್ಷಂತಿ । ಗೋಪಾ ಇತಿ ಗೋ-ಪಾಃ ॥ ಆತ್ಮಾನಮ್ । ತೇ । ಮನಸಾ । ಆರಾತ್ । ಅಜಾನಾಮ್ । ಅವಃ । ದಿವಾ । (೩೫) । ಪತಯಂತಮ್ । ಪತಂಗಮ್ ॥

---

| ಮಂತ್ರ | ವಿನಿಯೋಗ |
|---|---|
| ಇಮಾ ತೇ...ಗೋಪಾಃ ॥ | ಅಶ್ವಸ್ತೋಮೀಯಹೋಮದ ಐದನೆಯ ಮಂತ್ರ. |
| ಆತ್ಮಾನಂ ತೇ...ಪತತ್ರಿ ॥ | ಅಶ್ವಸ್ತೋಮೀಯಹೋಮದ ಆರನೆಯ ಮಂತ್ರ. |

---

▲ **ವಾಜಿನ್**=ಹೇ! ಅಶ್ವವೇ! **ಇಮಾ**=ಇವುಗಳು; **ತೇ**=ನಿನ್ನ; **ಅವಮಾರ್ಜನಾನಿ**=ಮೈಯನ್ನು ಉಜ್ಜುವ ಲೋಹದ ಸಾಧನಗಳು. **ಇಮಾ**=ಇವುಗಳು; **ಶಫಾನಾಮ್**=ಗೊರಸುಗಳನ್ನು; **ಸನಿತುಃ**=ಒಡೆಯುವುದನ್ನು [ತಪ್ಪಿಸುವ] [ಕಲ್ಲಿನ ಮಾರ್ಗದಲ್ಲಿ ರಕ್ಷಿಸುವ]; **ನಿಧಾನಾ**=ಲೋಹಮಯವಾದ ಲಾಳಗಳಾಗಿವೆ. [ಮತ್ತು] **ತೇ**=ನಿನ್ನ; **ಭದ್ರಾಃ**=ಮಂಗಲಕರವಾದ; **ರಶನಾಃ**=ಜೀನುಗಳನ್ನು; **ಯಾಃ**=ಯಾವ ಜೀನುಗಳು; **ಋತಸ್ಯ**=ಬಹುಮೂಲ್ಯಾರ್ಹವಾದ [ನಿನ್ನ]; **ಗೋಪಾಃ**=ರಕ್ಷಕಗಳಾಗಿ; **ಅಭಿರಕ್ಷಂತಿ**=[ಅಶ್ವಾರೋಹಿಯನ್ನು] ರಕ್ಷಿಸುತ್ತವೆಯೋ; [ಅಂತಹ ರಶನೆಗಳನ್ನು] **ಅತ್ರ**=ಇಲ್ಲಿ; **ಅಪಶ್ಯಮ್**=ಕಂಡೆನು; ▲ [ಎಲೈ! ಆಶ್ವವೇ!] **ಅವಃ**=ಅಶ್ವಾರೋಹಿಯನ್ನು ಶತ್ರುಗಳಿಂದ ರಕ್ಷಿಸುವ; **ದಿವಾ**=ಅಂತರಿಕ್ಷದಲ್ಲಿ; **ಪತಯಂತಮ್**=ಹಾರುವ; **ಪತಂಗಮ್**=ಹಕ್ಕಿಯಂತೆ ಇರುವ; **ತೇ**=ನಿನ್ನ; **ಆತ್ಮಾನಮ್**=ಶರೀರವನ್ನು; **ಮನಸಾ**=ಮನಸ್ಸಿನಿಂದ; **ಆರಾತ್**=ಸಮೀಪದಲ್ಲಿಯೇ; **ಅಜಾನಾಮ್**=ತಿಳಿದವನಾಗಿರುತ್ತೇನೆ.

---

ಲೋಕದಲ್ಲಿ ಅತಿಶಕ್ತಿಶಾಲಿಯಾಗಿರುವ ಹೋರಿಗಳನ್ನೂ ಕುದುರೆಗಳನ್ನೂ ಹತೋಟಿಯಲ್ಲಿಡಲು ಮೂರು ಮೂರು [ಎಡ, ಬಲ, ಹಿಂದೆ] ಹಗ್ಗಗಳನ್ನು ಉಪಯೋಗಿಸುವಷ್ಟು ಮಹಾಬಲಶಾಲಿಯಾದ ಹೇ! ಅಶ್ವವೇ! ನಿನಗೆ ದ್ಯುಲೋಕದಲ್ಲಿ ಮೂರು ಬಂಧನಗಳಿವೆ. ಅಥವಾ ಶಾಸ್ತ್ರಸಿದ್ಧವಾದ ಮೂರು ಬಂಧನಗಳು ಅಥವಾ ಕಾರಣಗಳು

**ಶಿರೋ ಅಪಶ್ಯಂ ಪಥಿಭಿಃ ಸುಗೇಭಿರರೇಣುಭಿರ್ಜೇಹಮಾನಂ ಪತತ್ರಿ ॥ ಅತ್ರಾ ತೇ ರೂಪಮುತ್ತಮಮಪಶ್ಯಂ ಜಿಗೀಷಮಾಣಮಿಷ ಆ ಪದೇ ಗೋಃ । ಯದಾ ತೇ ಮರ್ತೋ ಅನು ಭೋಗಮಾನಡಾದಿದ್ಗ್ರಸಿಷ್ಠ ಓಷಧೀರಜೀಗಃ ॥**

---

ಶಿರಃ । ಅಪಶ್ಯಮ್ । ಪಥಿಭಿರಿತಿ ಪಥಿ-ಭಿಃ । ಸುಗೇಭಿರಿತಿ ಸು-ಗೇಭಿಃ । ಅರೇಣುಭಿರಿತ್ಯರೇಣು-ಭಿಃ । ಜೇಹಮಾನಮ್ । ಪತತ್ರಿ ॥ ಅತ್ರ । ತೇ । ರೂಪಮ್ । ಉತ್ತಮಮಿತ್ಯುತ್-ತಮಮ್ । ಅಪಶ್ಯಮ್ । ಜಿಗೀಷಮಾಣಮ್ । ಇಷಃ । ಏತಿ । ಪದೇ । ಗೋಃ ॥ ಯದಾ । ತೇ । ಮರ್ತಃ । ಅನ್ವಿತಿ । ಭೋಗಮ್ । ಆನಟ್ । ಆತ್ । ಇತ್ । ಗ್ರಸಿಷ್ಠಃ । ಓಷಧೀಃ । ಅಜೀಗಃ ॥

---

| ಮಂತ್ರ | ವಿನಿಯೋಗ |
|---|---|
| **ಅತ್ರಾ ತೇ...ಅಜೀಗಃ ॥** | ಅಶ್ವಸ್ತೋಮೀಯಹೋಮದ ಏಳನೆಯ ಮಂತ್ರ. |

---

[ಹಾಗೆಯೇ]; **ಸುಗೇಭಿಃ**=ಸುಲಭವಾಗಿ ಸಂಚರಿಸಬಹುದಾದ; **ಅರೇಣುಭಿಃ**=ಧೂಳಿಯಿಲ್ಲದ; **ಪಥಿಭಿಃ**=ಮಾರ್ಗಗಳಿಂದ; **ಜೇಹಮಾನಮ್**=ಶೀಘ್ರಗಮನವುಳ್ಳ; **ಪತತ್ರಿ**=ಹಕ್ಕಿಯಂತಿರುವ; **ತೇ**=ನಿನ್ನ; **ಶಿರಃ**=ತಲೆಯನ್ನು; **ಅಪಶ್ಯಮ್**=ನೋಡಿದೆನು; ▲ [ಎಲೈ! ಅಶ್ವವೇ!] **ಯದಾ**=ಯಾವಾಗ; **ತೇ**=ನಿನ್ನ; **ಭೋಗಮ್**=ತುಪ್ಪ-ಹೆಸರು ಮುಂತಾದ ಭಕ್ಷಣವನ್ನು; **ಅನು**=ಅನುಸರಿಸಿ; **ಮರ್ತಃ**=ಪರಿಚಾರಕನಾದ ಮನುಷ್ಯನು; ಭೋಗಮ್ **ಆನಟ್**=ಭಕ್ಷಣವಸ್ತುಗಳನ್ನು ಹೊಂದಿದನೋ; **ಆತ್ ಇತ್**=ಅನಂತರವೇ; **ಗ್ರಸಿಷ್ಠಃ**=ಅತಿಶಯವಾಗಿ ತಿನ್ನಲು ಇಚ್ಛೆಯುಳ್ಳ ನೀನು; **ಓಷಧೀಃ**=[ಕಡಲೆ ಮೊದಲಾದ] ಧಾನ್ಯಗಳನ್ನು; **ಅಜೀಗಃ**=ಹೊಂದಿಸಿದವನಾಗಿರುತ್ತೀಯೆ; **ಅತ್ರ**=ಈ ಸಮಯದಲ್ಲಿ; **ಇಷಃ**=ಅನ್ನಗಳನ್ನು; **ಆ ಪದೇ**=ಸುತ್ತಲೂ ಹೊಂದಲು; **ಗೋಃ**=ಹೋಗುತ್ತಿರುವ; **ತೇ**=ನಿನ್ನ; **ಜಿಗೀಷಮಾಣಮ್**=ಜಯಿಸಲು ಇಚ್ಛೆಯುಳ್ಳ; **ರೂಪಮ್**=ರೂಪವನ್ನು; **ಉತ್ತಮಮ್**=ಸರ್ವೋತ್ಕೃಷ್ಟವೆಂದು; **ಅಪಶ್ಯಮ್**=ತಿಳಿದೆನು.

---

ಇರುತ್ತವೆಯೆಂದು ಹೇಳುತ್ತಾರೆ. ನೀನು ಸರ್ವದೇವತಾಸ್ವರೂಪನು ಎಂಬುದು ಅಶ್ವದ ಸ್ತುತಿ.

ಮಂತ್ರದಲ್ಲಿರುವ **'ಸಮಯಾ'** ಎಂಬ ಶಬ್ದಕ್ಕೆ **'ಸಮಯೇ'** [ತಕ್ಕ ಸಮಯದಲ್ಲಿ] ಎಂಬ ಅರ್ಥವನ್ನು ತಿಳಿಸಿದ್ದಾರೆ. **'ಸಮಯಾ ನಿಕಷಾ ಹಿರುಕ್'** ಎಂಬ ಕೋಶವಾಕ್ಯದಂತೆ ಸಮೀಪ ಎಂಬ ಅರ್ಥವನ್ನೂ ಹೇಳಬಹುದು.

ಕುದುರೆಯನ್ನು ದ್ಯುಲೋಕ, ಜಲ-ಸಮುದ್ರಾದಿಗಳಲ್ಲಿ ಪ್ರಸಿದ್ಧನೆಂದು ಹೇಳಲಾಗಿದೆ. ಅದು ಮಹಾಬಲಶಾಲಿಯಾಗಿದೆ. ಪಾಪನಿವಾರಕನಾಗಿ ವರುಣರೂಪನಾಗಿದೆ. **'ವಾರುಣೋ ವಾ ಅಶ್ವಃ'** ಎಂಬ ಇನ್ನೊಂದು ಶ್ರುತಿವಚನವೂ ಇದೆ.

ಅನು ತ್ವಾ ರಥೋ ಅನು ಮರ್ಯೋ ಅರ್ವನ್ನನು ಗಾವೋಽನು ಭಗಃ ಕನೀನಾಮ್ । ಅನು ವ್ರಾತಾಸಸ್ತವ ಸಖ್ಯಮೀಯುರನು ದೇವಾ ಮಮಿರೇ ವೀರ್ಯಂ [ವೀರ್ಯಮ್(೩೬) ತೇ ।] ತೇ ॥

ಅನ್ವಿತಿ । ತ್ವಾ । ರಥಃ । ಅನ್ವಿತಿ । ಮರ್ಯಃ । ಅರ್ವನ್ । ಅನ್ವಿತಿ । ಗಾವಃ । ಅನ್ವಿತಿ । ಭಗಃ । ಕನೀನಾಮ್ ॥ ಅನ್ವಿತಿ । ವ್ರಾತಾಸಃ । ತವ । ಸಖ್ಯಮ್ । ಈಯುಃ । ಅನ್ವಿತಿ । ದೇವಾಃ । ಮಮಿರೇ । ವೀರ್ಯಮ್ । (೩೬) । ತೇ ॥

| ಮಂತ್ರ | ವಿನಿಯೋಗ |
|---|---|
| ಅನು ತ್ವಾ...ತೇ ॥ | ಅಶ್ವಸ್ತೋಮೀಯಹೋಮದ ಎಂಟನೆಯ ಮಂತ್ರ. |

▲ **ಅರ್ವನ್**=ಹೇ! ಅಶ್ವವೇ! **ತ್ವಾ ಅನು**=ನಿನ್ನನ್ನು ಅನುಸರಿಸಿ; **ರಥಃ**=ರಥವು [ಚಲಿಸುತ್ತದೆ] **ಗಾವಃ**=ಗೋವುಗಳು; ತ್ವಾ **ಅನು**=ನಿನ್ನನ್ನು ಅನುಸರಿಸಿ/ನಿನ್ನ ಪೋಷಣೆಗಾಗಿ; [ಪೋಷಿಸಲ್ಪಡುತ್ತವೆ] **ಕನೀನಾಮ್**=ದಾಸೀಕನ್ನಿಕೆಯರ; **ಭಗಃ**=ಸೌಭಾಗ್ಯವೂ; ತ್ವಾ **ಅನು**=ನಿನ್ನನ್ನು ಆಶ್ರಯಿಸಿಯೇ [ಇದೆ] **ಮರ್ಯಃ**=[ಕುದುರೆಗಳ ಪರಿಚಾರಕರಾದ] ಮನುಷ್ಯರು; ತ್ವಾ **ಅನು**=ನಿನ್ನ [ಆಹಾರವನ್ನು] ಅನುಸರಿಸಿ ಜೀವಿಸುವರು. **ವ್ರಾತಾಸಃ**=ಸೇನಾಸಮೂಹಗಳೂ; **ತವ**=ನಿನ್ನ; **ಸಖ್ಯಮ್**=ಸ್ನೇಹವನ್ನು; **ಅನು**=ಅನುಸರಿಸಿಯೇ; **ಈಯುಃ**=ಯುದ್ಧದಲ್ಲಿ ಗೆಲ್ಲುತ್ತವೆ. **ದೇವಾಃ**=ಪ್ರಜಾಪತಿಯೇ ಮೊದಲಾದ ದೇವತೆಗಳೂ; **ತೇ**=ನಿನ್ನ; **ವೀರ್ಯಮ್**=ಸಾಮರ್ಥ್ಯವನ್ನು; **ಅನು**=ಗಮನಿಸಿಯೇ; **ಮಮಿರೇ**=ಹವಿಸ್ಸನ್ನಾಗಿ ಕಲ್ಪಿಸಿಕೊಂಡಿರುತ್ತಾರೆ.

**ಇದೆಲ್ಲವೂ ಅಶ್ವದ ಸ್ತುತಿಯಾಗಿದೆ.**

**ಹೇ! ಅಶ್ವವೇ! ಇವು ನಿನ್ನ ಮೈಯನ್ನು ಶುದ್ಧಿ ಮಾಡಲು ಉಜ್ಜುವುದಕ್ಕೆ ಉಪಯೋಗಿಸುವ ಲೋಹಸಾಧನಗಳು. ಈ ಲಾಳಗಳು ನಿನ್ನ ಗೊರಸಿನ ರಕ್ಷಕಗಳು. ಬಂಗಾರದಿಂದ ಕೂಡಿದುದರಿಂದ ಮಂಗಲರೂಪಗಳಾದ ಈ ಜೀನುಗಳು ನಿನ್ನ ಬೆನ್ನಿನಲ್ಲಿ ನೋವು ಉಂಟಾಗದಂತೆ ತಡೆಯುವುವು. ಸವಾರನನ್ನು ಜಾರಿ ಬೀಳದಂತೆಯೂ ರಕ್ಷಿಸುತ್ತವೆ.**

**ಅಶ್ವದ ಸ್ತುತಿಯು ಮುಂದುವರೆಯುತ್ತದೆ. ಓಡುತ್ತಿರುವ ಕುದುರೆಯು ಶತ್ರುಸೈನ್ಯವನ್ನು ಹಿಮ್ಮೆಟ್ಟಿಸಿ ಯಜಮಾನನನ್ನು ರಕ್ಷಿಸುತ್ತದೆ. ಅಶ್ವವು ಓಡುತ್ತಿರುವಾಗ ಹಾರುತ್ತಿರುವ ಹಕ್ಕಿಯಂತೆ ಇರುವುದರಿಂದ ಅದರ ಭೂಮಿಸ್ಪರ್ಶವನ್ನು ಯಾರೂ ಕಾಣಲು ಶಕ್ಯವಿಲ್ಲ. ಮನಸ್ಸಿನಿಂದಲೇ ತಿಳಿಯಬೇಕು. ಅಶ್ವವು ನೆಲದ ಮೇಲೆ ಕಾಲಿಡುವುದಕ್ಕಿಂತಲೂ ಹೆಚ್ಚಾಗಿ ಅಂತರಿಕ್ಷದಲ್ಲಿಯೇ ಚಲಿಸುವುದರಿಂದ ಅದು ಮುಳ್ಳುಗಳನ್ನು ತುಳಿಯಬೇಕಾಗಿಲ್ಲ. ಧೂಳೂ ಏಳುವುದಿಲ್ಲ.**

**ಹೀಗೆ ಕುದುರೆಯ ವೇಗವನ್ನು ವರ್ಣಿಸಲಾಗಿದೆ.**

ಹಿರಣ್ಯಶೃಂಗೋಽಯೋ ಅಸ್ಯ ಪಾದಾ ಮನೋಜವಾ ಅವರ ಇಂದ್ರ ಆಸೀತ್ ।
ದೇವಾ ಇದಸ್ಯ ಹವಿರದ್ಯಮಾಯನ್, ಯೋ ಅರ್ವಂತಂ ಪ್ರಥಮೋ ಅಧ್ಯತಿಷ್ಠತ್ ॥
ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಗ್ಂ ಶೂರಣಾಸೋ ದಿವ್ಯಾಸೋ ಅತ್ಯಾಃ ।

---

ಹಿರಣ್ಯಶೃಂಗ ಇತಿ ಹಿರಣ್ಯ-ಶೃಂಗಃ । ಅಯಃ । ಅಸ್ಯ । ಪಾದಾಃ । ಮನೋಜವಾ ಇತಿ ಮನಃ-ಜವಾಃ । ಅವರಃ । ಇಂದ್ರಃ । ಆಸೀತ್ ॥ ದೇವಾಃ । ಇತ್ । ಅಸ್ಯ । ಹವಿರದ್ಯಮಿತಿ ಹವಿಃ-ಅದ್ಯಮ್ । ಆಯನ್ನ್ । ಯಃ । ಅರ್ವಂತಮ್ । ಪ್ರಥಮಃ । ಅಧ್ಯತಿಷ್ಠದಿತ್ಯಧಿ-ಅತಿಷ್ಠತ್ ॥ ಈರ್ಮಾಂತಾಸ ಇತೀರ್ಮ-ಅಂತಾಸಃ । ಸಿಲಿಕಮಧ್ಯಮಾಸ ಇತಿ ಸಿಲಿಕ-ಮಧ್ಯಮಾಸಃ । ಸಮಿತಿ । ಶೂರಣಾಸಃ । ದಿವ್ಯಾಸಃ । ಅತ್ಯಾಃ ॥

---

| ಮಂತ್ರ | ವಿನಿಯೋಗ |
| --- | --- |
| **ಹಿರಣ್ಯಶೃಂಗೋಽಯೋ...ಅಧ್ಯತಿಷ್ಠತ್ ॥** | ಅಶ್ವಸ್ತೋಮೀಯಹೋಮದ ಒಂಬತ್ತನೆಯ ಮಂತ್ರ. |
| **ಈರ್ಮಾಂತಾಸಃ...ಅತ್ಯಾಃ ॥** | ಅಶ್ವಸ್ತೋಮೀಯಹೋಮದ ಹತ್ತನೆಯ ಮಂತ್ರ. |

---

▲ [ಈ ಅಶ್ವವು]**ಹಿರಣ್ಯಶೃಂಗಃ**=ಚಿನ್ನದ ಬಣ್ಣದ ತಲೆಯುಳ್ಳದ್ದು; **ಅಯಃ**=ಕಬ್ಬಿಣದಂತೆ ದೃಢವಾದುದು; **ಅಸ್ಯ**=ಈ ಕುದುರೆಯ; **ಪಾದಾಃ**=ಕಾಲುಗಳು; **ಮನೋಜವಾಃ**=ಮನಸ್ಸಿನಂತಹ ಶೀಘ್ರಗತಿಯುಳ್ಳವುಗಳು. [ಈ ಉಚ್ಚೈಃಶ್ರವಸ್ಸೆಂಬ ಕುದುರೆಯು ಇಲ್ಲದಿದ್ದರೆ] **ಇಂದ್ರಃ**=ಇಂದ್ರನು; **ಅವರಃ**=ನಿಕೃಷ್ಟನಾಗಿ; **ಆಸೀತ್**=ಆಗುತ್ತಿದ್ದನು. **ದೇವಾಃ ಇತ್**=ಎಲ್ಲ ದೇವತೆಗಳೂ; [ತಾವಾಗಿಯೇ] **ಅಸ್ಯ**=ಈ ಕುದುರೆಯ; **ಹವಿಃ**=ಹವಿಸ್ಸನ್ನು; **ಅದ್ಯಮ್**=ಸ್ವೀಕರಿಸಲು ಉತ್ತಮವೆಂದು; **ಆಯನ್**=ಹೊಂದಿದರು. **ಯಃ**=ಯಾವ; **ಪ್ರಥಮಃ**=ಪ್ರಥಮದೇವನಾದ ಪ್ರಜಾಪತಿಯೋ [ಆತನೂ] **ಅರ್ವಂತಮ್**=ಅಶ್ವವನ್ನು; **ಅಧ್ಯತಿಷ್ಠತ್**=ಹವಿಸ್ಸೆಂದು ಸ್ವೀಕರಿಸಿದನು; ▲ [ಕುದುರೆಗಳೆಲ್ಲವೂ] **ಈರ್ಮಾಂತಾಸಃ**=ಕುತ್ತಿಗೆಯ ಭಾಗ, ಹಿಂಭಾಗ ಎಂಬ ಎರಡು ಕೊನೆಗಳಲ್ಲಿ ಉನ್ನತವಾಗಿವೆ. **ಸಿಲಿಕಮಧ್ಯಮಾಸಃ**=ಸವಾರರು ಕುಳಿತುಕೊಳ್ಳುವ ಬೆನ್ನಿನ ಭಾಗದಲ್ಲಿ ತಗ್ಗಾಗಿವೆ. **ಸಮ್ ಶೂರಣಾಸಃ**=ಯುದ್ಧದಲ್ಲಿ ಗೆಲುವನ್ನು ತಂದುಕೊಡುವ ಅತಿಶೌರ್ಯವುಳ್ಳವುಗಳಾಗಿವೆ; **ದಿವ್ಯಾಸಃ**=ಗ್ರಾಮಗಮನ-ಕ್ರೀಡಾ ಮೊದಲಾದ ವ್ಯವಹಾರಗಳನ್ನು ನೆರವೇರಿಸತಕ್ಕವುಗಳಾಗಿವೆ. **ಅತ್ಯಾಃ**=ಯಾವಾಗಲೂ ಗಮನಶೀಲಗಳಾಗಿವೆ.

**ಹಗ್ಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ ॥ ತವ ಶರೀರಂ ಪತಯಿಷ್ಣ್ವರ್ವನ್ತವ ಚಿತ್ತಂ ವಾತ ಇವ ಧ್ರಜೀಮಾನ್ । ತವ ಶೃಂಗಾಣಿ ವಿಷ್ಠಿತಾ ಪುರುತ್ರಾಽರಣ್ಯೇಷು ಜರ್ಭುರಾಣಾ ಚರಂತಿ ॥**

---

ಹಗ್ಂಸಾಃ । ಇವ । ಶ್ರೇಣಿಶ ಇತಿ ಶ್ರೇಣಿ–ಶಃ । ಯತಂತೇ । ಯತ್ । ಆಕ್ಷಿಷುಃ । ದಿವ್ಯಮ್ । ಅಜ್ಮಮ್ । ಅಶ್ವಾಃ ॥ ತವ । ಶರೀರಮ್ । ಪತಯಿಷ್ಣು । ಅರ್ವನ್ನ್ । ತವ । ಚಿತ್ತಮ್ । ವಾತಃ । ಇವ । ಧ್ರಜೀಮಾನ್ ॥ ತವ । ಶೃಂಗಾಣಿ । ವಿಷ್ಠಿತೇತಿ ವಿ–ಸ್ಥಿತಾ । ಪುರುತ್ರೇತಿ ಪುರು–ತ್ರಾ । ಅರಣ್ಯೇಷು । ಜರ್ಭುರಾಣಾ । ಚರಂತಿ ॥

---

| ಮಂತ್ರ | ವಿನಿಯೋಗ |
|---|---|
| **ತವ ಶರೀರಂ...ಚರಂತಿ ॥** | ಅಶ್ವಸ್ತೋಮೀಯಹೋಮದ ಹನ್ನೊಂದನೆಯ ಮಂತ್ರ. |

---

**ಹಗ್ಂಸಾಃ ಇವ**=ಹಂಸಪಕ್ಷಿಗಳಂತೆ; **ಶ್ರೇಣಿಶಃ**=ಸಾಲುಸಾಲಾಗಿ ಯುದ್ಧಕ್ಕಾಗಿ; **ಯತಂತೇ**=ಹೋಗುತ್ತವೆ. **ಯತ್**=ಯಾವ ಕಾರಣದಿಂದ; **ಅಶ್ವಾಃ**=ಕುದುರೆಗಳೆಲ್ಲವೂ; **ದಿವ್ಯಮ್**=ಕ್ರೀಡಾದಿವ್ಯವಹಾರಕ್ಕಾಗಿ; **ಅಜ್ಮಮ್**=ಗಮನವನ್ನು; **ಆಕ್ಷಿಷುಃ**=ಮಾಡುತ್ತಾ ಇವೆಯೋ; [ಆದುದರಿಂದ ಪ್ರಶಸ್ತವಾದವುಗಳು] ▲ **ಅರ್ವನ್**=ಅಶ್ವವೇ! **ತವ**=ನಿನ್ನ; **ಶರೀರಮ್**=ದೇಹವು; **ಪತಯಿಷ್ಣು**=ಶೀಘ್ರವಾಗಿ ಹೋಗತಕ್ಕದ್ದು. **ತವ ಚಿತ್ತಮ್**=ನಿನ್ನ ಮನಸ್ಸು; **ವಾತಃ ಇವ**=ವಾಯುವಿನಂತೆ; **ಧ್ರಜೀಮಾನ್**=ವೇಗವುಳ್ಳದುದು; **ತವ ಶೃಂಗಾಣಿ**=ನಿನಗೆ ಕೊಂಬುಗಳಂತೆ; [ಆಯುಧಗಳು] **ಪುರುತ್ರಾ**=ಹಲವು ಕಡೆಗಳಲ್ಲಿ; **ವಿಷ್ಠಿತಾ**=ಅಲ್ಲಲ್ಲಿ ಮೇಲುಗಡೆ ಇಡಲ್ಪಟ್ಟಿವೆ. [ಇಂತಹ ಆಯುಧಗಳು/ಆಯುಧಗಳನ್ನು ಹೊತ್ತ ಕುದುರೆಗಳು] **ಅರಣ್ಯೇಷು**=ಗ್ರಾಮದಿಂದ ಹೊರಗಿರುವ ಯುದ್ಧಭೂಮಿಗಳಲ್ಲಿ; **ಜರ್ಭುರಾಣಾ**=ಶತ್ರುಗಳನ್ನು ಹಿಂಸಿಸುತ್ತಾ; **ಚರಂತಿ**=ಪ್ರವರ್ತಿಸುತ್ತವೆ.

---

ಕಾಳಿದಾಸನು ತನ್ನ ಶಾಕುಂತಲನಾಟಕದಲ್ಲಿ ಜಿಂಕೆಯ ಓಟವನ್ನು ವರ್ಣಿಸುವಾಗ **'ಪಶ್ಯ ಉದಗ್ರಪ್ಲುತತ್ವಾತ್ ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ'** ಎಂದು ಹೇಳಿರುವುದನ್ನು ಗಮನಿಸಬಹುದು [ನೋಡು, ಎತ್ತರದಲ್ಲಿ ಜಿಗಿದು ಜಿಂಕೆಯು ಓಡುತ್ತಿರುವುದರಿಂದ ಅದು ಆಕಾಶದಲ್ಲಿಯೇ ಹೆಚ್ಚಾಗಿ ಭೂಮಿಯ ಮೇಲೆ ಕೊಂಚ ಓಡುತ್ತಿದೆ.] **[ಅಭಿಜ್ಞಾನಶಾಕುಂತಲ..1.7]**

ಈ ಮಂತ್ರದಲ್ಲಿ ಅರಮನೆಗಳಲ್ಲಿ ಉತ್ತಮಾಶ್ವಗಳನ್ನು ಸಾಕುವ ರೀತಿಯನ್ನು ವರ್ಣಿಸಲಾಗಿದೆ. ಕುದುರೆಗಳನ್ನು ನೋಡಿಕೊಳ್ಳಲು ನೇಮಿಸಿರುವ ಪರಿಚಾರಕರು ಅವುಗಳಿಗೆ ಒದಗಿಸುವ ಆಹಾರದಿಂದಲೇ ಜೀವಿಸುತ್ತಾರೆ. ಹೀಗಾಗಿ ಕುದುರೆಗಳು ಬೇರೆಯ ಧಾನ್ಯಾದಿಗಳನ್ನು ಅಡ್ಡಿಯಿಲ್ಲದೆ ಭಕ್ಷಿಸಬಹುದು. ಹೀಗೆ ತೃಪ್ತಿಹೊಂದಿದ ಕುದುರೆಗಳು

ಉಪ [ಉಪ(೩೭)] ಪ್ರಾಗಾಚ್ಛಸನಂ ವಾಜ್ಯರ್ವಾ ದೇವದ್ರೀಚಾ ಮನಸಾ ದೀಧ್ಯಾನಃ । ಅಜಃ ಪುರೋ ನೀಯತೇ ನಾಭಿರಸ್ಯಾನು ಪಶ್ಚಾತ್ಕವಯೋ ಯಂತಿ ರೇಭಾಃ ॥

---

ಉಪ ।(೩೭)। ಪ್ರೇತಿ । ಅಗಾತ್ । ಶಸನಮ್ । ವಾಜೀ । ಅರ್ವಾ । ದೇವದ್ರೀಚೇತಿ ದೇವ-ದ್ರೀಚಾ । ಮನಸಾ । ದೀಧ್ಯಾನಃ ॥ ಅಜಃ । ಪುರಃ । ನೀಯತೇ । ನಾಭಿಃ । ಅಸ್ಯ । ಅನ್ವಿತಿ । ಪಶ್ಚಾತ್ । ಕವಯಃ । ಯಂತಿ । ರೇಭಾಃ ॥

---

| ಮಂತ್ರ | ವಿನಿಯೋಗ |
|---|---|
| **ಉಪ ಪ್ರಾಗಾಚ್ಛಸನಂ...ರೇಭಾಃ ॥** | ಅಶ್ವಸ್ತೋಮೀಯಹೋಮದ ಹನ್ನೆರಡನೆಯ ಮಂತ್ರ. |

---

**ವಾಜೀ**=[ಯಾಗದ ಮೂಲಕವಾಗಿ]ಅನ್ನಕ್ಕೆ ಕಾರಣವಾದ; **ಅರ್ವಾ**=ಈ ಕುದುರೆಯು; **ದೇವದ್ರೀಚಾ**=ದೇವತೆಗಳನ್ನು ಹೊಂದಬೇಕೆಂಬ; **ಮನಸಾ**=ಮನಸ್ಸಿನಿಂದ; **ದೀಧ್ಯಾನಃ**=ನಿರಂತರ ಧ್ಯಾನ ಮಾಡುವುದಾಗಿ; **ಶಸನಮ್**=ವಿಶಸನಪ್ರದೇಶದ; **ಉಪ ಪ್ರ ಅಗಾತ್**=ಸಮೀಪವನ್ನು ಹೊಂದುತ್ತದೆ/ಹೊಂದಿರುತ್ತದೆ. **ಅಜಃ**=ಪ್ರಜಾಪತಿದೇವನು; **ಪುರಃ**=ಅಶ್ವಕ್ಕಿಂತಲೂ ಮೊದಲೇ; **ನೀಯತೇ**=ಋತ್ವಿಜರಿಂದ ಒಯ್ಯಲ್ಪಡುತ್ತಾನೆ/ಧ್ಯಾನಿಸಲ್ಪಡುತ್ತಾನೆ. **ಪಶ್ಚಾತ್**=ಬಳಿಕ; **ಅಸ್ಯ**=ಈ ಕುದುರೆಯ; **ನಾಭಿಃ**=ನಾಭಿಯು/ಶರೀರವು; **ಅನು** ನೀಯತೇ=ಒಯ್ಯಲ್ಪಡುತ್ತದೆ; ಅಸ್ಯ ಪಶ್ಚಾತ್=ಅಶ್ವದ ಹಿಂದೆ; **ಕವಯಃ**=ವಿದ್ವಾಂಸರಾದ ಋತ್ವಿಜರು; **ರೇಭಾಃ**=ಸ್ತುತಿಸುತ್ತಾ; **ಯಂತಿ**=ಹೋಗುತ್ತಾರೆ.

---

ಯುದ್ಧದಲ್ಲಿ ಜಯವನ್ನು ತಂದುಕೊಡುತ್ತವೆ. ಇಂತಹ ಉತ್ತಮಾಶ್ವವು ನೀನಾಗಿರುವೆ. ಹೀಗೆ ಅಶ್ವವನ್ನು ಸ್ತುತಿಸಲಾಗಿದೆ.

ಹೇ! ಅಶ್ವವೇ! ನಿನ್ನನ್ನು ಅನುಸರಿಸಿ ರಥವು ಚಲಿಸುತ್ತದೆ. ಪರಿಚಾರಕರು ನಿನ್ನಿಂದ ಜೀವಿಸುವರು. ನಿನಗಾಗಿ ಗೋವುಗಳನ್ನು ಪೋಷಿಸುವರು. ದಾಸೀಕನ್ಯೆಯರೂ ನಿನ್ನನ್ನು ಆಶ್ರಯಿಸುವರು. ಸೇನೆಯ ಸಮೂಹವು ನಿನ್ನಿಂದ ಗೆಲುವನ್ನು ಪಡೆಯುತ್ತದೆ. ದೇವತೆಗಳು ನಿನ್ನ ಈ ಸಾಮರ್ಥ್ಯವನ್ನು ಕಂಡು ನಿನ್ನನ್ನು ಅಶ್ವಮೇಧದಲ್ಲಿ ಹವಿಸ್ಸನ್ನಾಗಿ ಮಾಡಿಕೊಂಡಿದ್ದಾರೆ.

ಈ ಅಶ್ವವು ಬಂಗಾರದ ಬಣ್ಣದ ತಲೆಯುಳ್ಳದ್ದು. ಇದರಿಂದಲೇ ಇಂದ್ರನು ಗೌರವಾಸ್ಪದನು. **'ಪ್ರಾಜಾಪತ್ಯೋ ವಾ ಅಶ್ವಃ' 'ವೈಶ್ವದೇವ್ಯೋ ವಾ ಅಶ್ವಃ'** ಎಂಬ ಶ್ರುತಿವಾಕ್ಯಗಳಂತೆ ಪ್ರಥಮದೇವನಾದ ಪ್ರಜಾಪತಿಯೂ, ಎಲ್ಲ ದೇವತೆಗಳೂ ಈ ಅಶ್ವವನ್ನು ಹವಿಸ್ಸೆಂದು ಸ್ವೀಕರಿಸಿದ್ದಾರೆ. ಇಂತಹ ಅಶ್ವವು ಸ್ತುತ್ಯವಾಗಿದೆ.

ಕುದುರೆಗಳ ಲಕ್ಷಣವನ್ನು ಹೇಳಲಾಗಿದೆ. ಅವುಗಳ ಹಿಂಭಾಗ-ಮುಂಭಾಗಗಳು ಎತ್ತರವಾಗಿವೆ. ಬೆನ್ನಿನ ಭಾಗವು ತಗ್ಗಿದೆ. ಯುದ್ಧದಲ್ಲಿ ಅವು ಗೆಲುವನ್ನು ತರುತ್ತವೆ. ಹಂಸಗಳು ಆಕಾಶದಲ್ಲಿ ಸಾಲುಸಾಲಾಗಿ ಹಾರುವಂತೆ ಯುದ್ಧಕ್ಕೆ

ಉಪ ಪ್ರಾಗಾತ್ಪರಮಂ ಯತ್ಸಧಸ್ಥಮರ್ವಾಗ್ಂ ಅಚ್ಛಾ ಪಿತರಂ ಮಾತರಂ ಚ ।
ಅದ್ಯಾ ದೇವಾಞ್ಜುಷ್ಟತಮೋ ಹಿ ಗಮ್ಯಾ ಅಥಾऽऽಶಾಸ್ತೇ
ದಾಶುಷೇ ವಾರ್ಯಾಣಿ ॥ ೩೮-7 ॥

[ವಿಷ್ಟಕ್ತೋ ದಿವಾ ವೀರ್ಯಮುಷ್ಯೈಕಾನ್ನಚತ್ವಾರಿಗ್ಂಶಚ್ಚ ॥]

---

ಉಪ । ಪ್ರೇತಿ । ಅಗಾತ್ । ಪರಮಮ್ । ಯತ್ । ಸಧಸ್ಥಮಿತಿ ಸಧ-ಸ್ಥಮ್ । ಅರ್ವಾನ್ । ಅಚ್ಛ । ಪಿತರಮ್ । ಮಾತರಮ್ । ಚ ॥ ಅದ್ಯ । ದೇವಾನ್ । ಜುಷ್ಟತಮ ಇತಿ ಜುಷ್ಟ-ತಮಃ । ಹಿ । ಗಮ್ಯಾಃ । ಅಥ । ಏತಿ । ಶಾಸ್ತೇ । ದಾಶುಷೇ । ವಾರ್ಯಾಣಿ ॥ (೩೮) ॥

---

| ಮಂತ್ರ | ವಿನಿಯೋಗ |
|---|---|
| ಉಪ ಪ್ರಾಗಾತ್ಪರಮಂ...ವಾರ್ಯಾಣಿ ॥ | ಅಶ್ವಸ್ತೋಮೀಯಹೋಮದ ಹದಿಮೂರನೆಯ ಮಂತ್ರ. |

---

**ಅರ್ವಾನ್**=ಶೀಘ್ರಗಾಮಿಯಾದ ಅಶ್ವವು; **ಪಿತರಮ್**=[ದೇವಲೋಕದಲ್ಲಿರುವ] ತಂದೆಯನ್ನೂ; **ಚ**=ಮತ್ತು; **ಮಾತರಮ್**=ತಾಯಿಯನ್ನೂ; **ಅಚ್ಛ**=ಹೊಂದುವುದಕ್ಕಾಗಿ; **ಪರಮಮ್**=ಉತ್ಕೃಷ್ಟವಾದ; **ಯತ್**=ಯಾವ; **ಸಧಸ್ಥಮ್**=ವಿಶಸನಸ್ಥಾನವಿದೆಯೋ; [ಅದನ್ನು] **ಉಪ ಪ್ರಾಗಾತ್**=ಸಮೀಪಿಸಿಕೊಂಡಿತು. [ಎಲೈ! ಅಶ್ವವೇ!] **ಅದ್ಯ**=ಈ ದಿನದಲ್ಲಿ; **ಜುಷ್ಟತಮಃ**=ಅತ್ಯಂತಪ್ರೀತನಾಗಿ; **ದೇವಾನ್**=ದೇವತೆಗಳನ್ನು; **ಗಮ್ಯಾಃ ಹಿ**=ನಿಶ್ಚಯವಾಗಿ ಹೊಂದು. **ಅಥ**=ಅನಂತರ; **ದಾಶುಷೇ**=ಹವಿಸ್ಸುಗಳನ್ನು ಸಮರ್ಪಿಸುವ ಯಜಮಾನನಿಗೆ; **ವಾರ್ಯಾಣಿ**=ಅವನು ಕೇಳಿಕೊಳ್ಳುವ ಫಲಗಳನ್ನು; [ಈ ಋತ್ವಿಕ್ಸಮೂಹವು] **ಆ ಶಾಸ್ತೇ**=ಪ್ರಾರ್ಥಿಸಿಕೊಳ್ಳುತ್ತದೆ.

---

ಕುದುರೆಗಳು ಸಾಲುಸಾಲಾಗಿ ಹೋಗುತ್ತವೆ. ಹೀಗೆ ಅಶ್ವಸಾಮಾನ್ಯವೇ ಪ್ರಶಸ್ತವಾಗಿರುವಾಗ ಯಾಗಕ್ಕೆ ಸಾಧನವಾದ ಉತ್ತಮಾಶ್ವವು ಅತಿಪ್ರಶಸ್ತವಾದುದೆಂದು ಹೇಳುವುದೇನಿದೆ?

ಈ ಮಂತ್ರದಲ್ಲಿ ಅಶ್ವದ ಸ್ತುತಿಯು ಇದೆ. ಹೇ! ಅಶ್ವವೇ! ನಿನ್ನ ದೇಹವು ಶೀಘ್ರಗಾಮಿಯಾದುದು. ನಿನ್ನ ಮನಸ್ಸು ವಾಯುವೇಗದ್ದಾಗಿದೆ. ನಿನ್ನ ಮೇಲೆ ನಿನ್ನ ಕೊಂಬುಗಳೋ ಎಂಬಂತೆ ಒಂದೆಡೆ ಕತ್ತಿ, ಮತ್ತೊಂದು ಕಡೆ ಬಾಣದ ಚೀಲ-ಹೀಗೆ ಇಡಲ್ಪಟ್ಟಿದೆ. ಈ ರೀತಿ ಆಯುಧೋಪೇತವಾದ ಅಶ್ವಗಳು ಯುದ್ಧಭೂಮಿಗಳಲ್ಲಿ ಶತ್ರುಗಳನ್ನು ನಾಶ ಮಾಡುತ್ತವೆ.

ಯಾಗವು ಅನ್ನಪ್ರದವಾದುದು. ಕುದುರೆಯು ಯಾಗಸಾಧನವಾಗಿದೆ. ಹೀಗಾಗಿ ಅಶ್ವವು ವಾಜಿ ಎನಿಸಿದೆ.

ವಾಜ ಎಂದರೆ ಅನ್ನ.

ಅಶ್ವವು ದೇವತ್ವವನ್ನು ಪಡೆಯುವ ಧ್ಯಾನದಿಂದ ವಿಶಸನಪ್ರದೇಶಕ್ಕೆ ಬಂದಿದೆ. ಅಶ್ವಕ್ಕಿಂತಲೂ ಮೊದಲು ಹೋಗುತ್ತಿರುವ ಪ್ರಜಾಪತಿಯನ್ನು ಋತ್ವಿಜರು ಧ್ಯಾನಿಸುವರು. ಅಶ್ವಕ್ಕಿಂತಲೂ ಮೊದಲು ಅಜ(ಆಡು)ವನ್ನು ಒಯ್ಯುತ್ತಾರೆ. ಅಶ್ವದ ಹಿಂದೆ ವಿದ್ವಾಂಸರಾದ ಋತ್ವಿಜರು ಸ್ತುತಿಸುತ್ತಾ ಹೋಗುತ್ತಾರೆ. ವಿಶಸನ ಮಾಡಿದ ಪ್ರಾಣಿಯು ದೇವತ್ವವನ್ನು ಪಡೆಯುತ್ತದೆ. ವಿಶಸನಗೊಳ್ಳುವ ಅಶ್ವವು ಮಾತ್ರವಲ್ಲದೆ ಅದರ ತಾಯಿ–ತಂದೆಗಳಿಗೂ ಸ್ವರ್ಗವು ಲಭಿಸುತ್ತದೆ. ಈ ಯಾಗದಿಂದ ಯಜಮಾನನ ಇಷ್ಟಾರ್ಥಗಳು ದೇವತಾನುಗ್ರಹದಿಂದ ಕೈಗೂಡುತ್ತವೆ. ಆ ಪ್ರಾರ್ಥನೆಯನ್ನು ಋತ್ವಿಜರ ಸಮೂಹವು ಮಾಡುತ್ತದೆ.

## ॥ ಅಷ್ಟಮೋಽನುವಾಕಃ ॥

**ಮಾ ನೋ ಮಿತ್ರೋ ವರುಣೋ ಅರ್ಯಮಾಽಽಯುರಿಂದ್ರ ಋಭುಕ್ಷಾ**

**ಮರುತಃ ಪರಿಖ್ಯನ್ ।**

---

ಮಾ । ನಃ । ಮಿತ್ರಃ । ವರುಣಃ । ಅರ್ಯಮಾ । ಆಯುಃ । ಇಂದ್ರಃ । ಋಭುಕ್ಷಾ ಇತ್ಯೃಭು–ಕ್ಷಾಃ । ಮರುತಃ । ಪರೀತಿ । ಖ್ಯನ್ ॥

---

ಹಿಂದಿನ ಏಳನೆಯ ಅನುವಾಕದಲ್ಲಿ ಕೆಲವು ಅಶ್ವಸ್ತೋಮೀಯಮಂತ್ರಗಳು ಹೇಳಲ್ಪಟ್ಟವು. ಅಶ್ವಸ್ತೋಮವೆಂದರೆ ಅಶ್ವದ ಸ್ತೋತ್ರ. ಆ ಸ್ತೋತ್ರವನ್ನು ಪ್ರತಿಪಾದಿಸುವ ಮಂತ್ರಗಳು ಅಶ್ವಸ್ತೋಮೀಯಗಳೆನಿಸಿಕೊಳ್ಳುತ್ತವೆ. ಈ ಎಂಟನೆಯ ಅನುವಾಕದಲ್ಲಿಯೂ ಕೆಲವು ಅಶ್ವಸ್ತೋಮೀಯಹೋಮಮಂತ್ರಗಳು ಇವೆ. ಒಂದೇ ಅನುವಾಕದಲ್ಲಿ ಎಲ್ಲವನ್ನೂ ಹೇಳಬಹುದಾಗಿತ್ತಾದರೂ ಈ ರೀತಿ ಅನುವಾಕದ ಭೇದವು ಉಂಟಾಗಿರುವುದು ಸಾಂಪ್ರದಾಯಿಕವಾದ ಅಧ್ಯಯನಕ್ರಮದಿಂದ ಎಂದು ಹೇಳಬಹುದು. ಅಥವಾ ಅಯಜ್ಞಸಂಯುಕ್ತಕಲ್ಪದಂತೆ ಅಂದರೆ ಯಜ್ಞಕ್ಕೆ ಸಂಬಂಧಿಸದೆ ಇರುವ ಪ್ರಯೋಗಗಳಲ್ಲಿ ಈ ಮಂತ್ರಗಳು ಹಿಂದಿನ ಮಂತ್ರಗಳಿಂದ ಬೇರೆಯಾದವು ಎಂದು ತಿಳಿಸುವ ಸಲುವಾಗಿಯೂ ಇರಬಹುದು.

---

| ಮಂತ್ರ | ವಿನಿಯೋಗ |
|---|---|
| **ಮಾ ನೋ...ವೀರ್ಯಾಣಿ ॥** | ಎಂಟನೆಯ ಅನುವಾಕದಲ್ಲಿರುವ ಅಶ್ವಸ್ತೋಮೀಯ ಹೋಮದ ಮೊದಲನೆಯ ಮಂತ್ರ. |

---

▲ **ಮಿತ್ರಃ**=ಮಿತ್ರದೇವನೂ; **ವರುಣಃ**=ವರುಣನೂ; **ಅರ್ಯಮಾ**=ಅರ್ಯಮನೂ; **ಆಯುಃ**=ಸಂಚಾರಶೀಲನಾದ ವಾಯುವೂ; **ಇಂದ್ರಃ**=ಇಂದ್ರನೂ; **ಋಭುಕ್ಷಾಃ**=ಋಭುಗಳ=ದೇವತೆಗಳ ನಿವಾಸಸ್ಥಾನನಾದ ಪ್ರಜಾಪತಿಯೂ; **ಮರುತಃ**=ಮರುದ್ದೇವತೆಗಳೂ; **ನಃ**=ನಮ್ಮನ್ನು; **ಮಾ ಪರಿ ಖ್ಯನ್**=ನಿಂದಿಸದಿರಲಿ.

**ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ॥**

**ಯನ್ನಿರ್ಣಿಜಾ ರೇಕ್ಣಸಾ ಪ್ರಾವೃತಸ್ಯ ರಾತಿಂ ಗೃಭೀತಾಂ ಮುಖತೋ ನಯಂತಿ ।**

**ಸುಪ್ರಾಙಜೋ ಮೇಮ್ಯದ್ವಿಶ್ವರೂಪ ಇಂದ್ರಾಪೂಷ್ಣೋಃ ಪ್ರಿಯಮಪ್ಯೇತಿ ಪಾಥಃ ॥**

---

ಯತ್ । ವಾಜಿನಃ । ದೇವಜಾತಸ್ಯೇತಿ ದೇವ-ಜಾತಸ್ಯ । ಸಪ್ತೇಃ । ಪ್ರವಕ್ಷ್ಯಾಮ ಇತಿ ಪ್ರ-ವಕ್ಷ್ಯಾಮಃ । ವಿದಥೇ । ವೀರ್ಯಾಣಿ ॥ ಯತ್ । ನಿರ್ಣಿಜೇತಿ ನಿಃ-ನಿಜಾ । ರೇಕ್ಣಸಾ । ಪ್ರಾವೃತಸ್ಯ । ರಾತಿಮ್ । ಗೃಭೀತಾಮ್ । ಮುಖತಃ । ನಯಂತಿ ॥ ಸುಪ್ರಾಙಿತಿ ಸು-ಪ್ರಾಙ್ । ಅಜಃ । ಮೇಮ್ಯತ್ । ವಿಶ್ವರೂಪ ಇತಿ ವಿಶ್ವ-ರೂಪಃ । ಇಂದ್ರಾಪೂಷ್ಣೋರಿತೀಂದ್ರಾ-ಪೂಷ್ಣೋಃ । ಪ್ರಿಯಮ್ । ಅಪೀತಿ । ಏತಿ । ಪಾಥಃ ॥

---

| ಮಂತ್ರ | ವಿನಿಯೋಗ |
|---|---|
| **ಯನ್ನಿರ್ಣಿಜಾ...ಪಾಥಃ ॥** | ಅಶ್ವಸ್ತೋಮೀಯಹೋಮದ ಎರಡನೆಯ ಮಂತ್ರ. |

---

**ಯತ್**=ಯಾವ ಕಾರಣದಿಂದ/ಏತಕ್ಕೆಂದರೆ; **ವಾಜಿನಃ**=ಯಾಗದ ಮೂಲಕವಾಗಿ ಅನ್ನಸಾಧನವಾದ; **ದೇವಜಾತಸ್ಯ**=ದೇವತೆಗಳಿಗಾಗಿ ಜನಿಸಿರುವ; **ಸಪ್ತೇಃ**=ಕುದುರೆಯ; **ವೀರ್ಯಾಣಿ**=ಸಾಮರ್ಥ್ಯಗಳನ್ನು; **ವಿದಥೇ**=ಈ ಯಜ್ಞದಲ್ಲಿ; **ಪ್ರವಕ್ಷ್ಯಾಮಃ**=ನಾವು ಅತಿಶಯವಾಗಿ ಹೇಳುತ್ತಿರುವೆವೋ; [ಆ ಕಾರಣದಿಂದ ನಮ್ಮನ್ನು ನಿಂದಿಸದಿರಲಿ]. ♠ **ನಿರ್ಣಿಜಾ**=ಪ್ರೋಕ್ಷಣಾದಿಗಳಿಂದ ಶುದ್ಧಿಗೊಳಿಸಲ್ಪಟ್ಟಿರುವ; **ರೇಕ್ಣಸಾ**=ಸುವರ್ಣಮಣಿ ಮುಂತಾದ ಆಭರಣದಿಂದ; **ಪ್ರಾವೃತಸ್ಯ**=ಆವೃತವಾದ; [ಅಶ್ವಕ್ಕೆ ಸಂಬಂಧಿಸಿದ] **ಗೃಭೀತಾಮ್**=ಕೈಯಲ್ಲಿ ಸ್ವೀಕರಿಸಿರುವ; **ರಾತಿಮ್**=ಹವಿಸ್ಸಿನ ದಾನವನ್ನು; **ಮುಖತಃ**=ಮೊದಲು; **ಯತ್**= ಯಾವಾಗ; **ನಯಂತಿ**=ಋತ್ವಿಜರು ಸಂಪಾದಿಸುತ್ತಾರೆಯೋ; [ಆಗ] **ಅಜಃ**=ಗಮನಶೀಲವಾದ ಅಶ್ವವು; **ಸುಪ್ರಾಙ್**=ಶ್ರೇಷ್ಠರಾದ ದೇವತೆಗಳನ್ನು ಚೆನ್ನಾಗಿ ಹೊಂದುತ್ತಾ; **ಮೇಮ್ಯತ್**=ಹೇಷಾಧ್ವನಿಯನ್ನು ಮಾಡುತ್ತಾ; **ವಿಶ್ವರೂಪಃ**=ನಾನಾರೂಪಗಳನ್ನು ಹೊಂದಿದ್ದಾಗಿ; **ಇಂದ್ರಾಪೂಷ್ಣೋಃ**=ಇಂದ್ರ-ಪೂಷಾ ಮೊದಲಾದ ದೇವತೆಗಳಿಗೆ; **ಪ್ರಿಯಮ್**=ಇಷ್ಟವಾದ; **ಪಾಥಃ**=ಅನ್ನಭಾವವನ್ನು; **ಅಪಿ ಏತಿ**=ಹೊಂದುತ್ತದೆ.

---

**ಯಾಗದ ಮೂಲಕವಾಗಿ ಅನ್ನಸಾಧನವಾಗಿರುವ, ದೇವತೆಗಳಿಗಾಗಿ ಜನಿಸಿರುವ, ಕುದುರೆಯ ಸಾಮರ್ಥ್ಯಗಳನ್ನು ಈ ಯಜ್ಞದಲ್ಲಿ ನಾವು ಅತಿಶಯವಾಗಿ ಹೇಳುತ್ತಿರುವ ಕಾರಣ ನಮ್ಮನ್ನು ಮಿತ್ರಾದಿದೇವತೆಗಳು ನಿಂದಿಸದಿರಲಿ.**

ಏಷಚ್ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ । ಅಭಿಪ್ರಿಯಂ ಯತ್ಪುರೋಡಾಶಮರ್ವತಾ ತ್ವಷ್ಟೇ[ತ್ವಷ್ಟೇತ್ (೩೯) ಏನಗ್ಂ ಸೌಶ್ರವಸಾಯ] ದೇನಗ್ಂ ಸೌಶ್ರವಸಾಯ ಜಿನ್ವತಿ ॥

---

ಏಷಃ । ಛಾಗಃ । ಪುರಃ । ಅಶ್ವೇನ । ವಾಜಿನಾ । ಪೂಷ್ಣಃ । ಭಾಗಃ । ನೀಯತೇ । ವಿಶ್ವದೇವ್ಯ ಇತಿ ವಿಶ್ವ-ದೇವ್ಯಃ ॥ ಅಭಿಪ್ರಿಯಮಿತ್ಯಭಿ-ಪ್ರಿಯಮ್ । ಯತ್ । ಪುರೋಡಾಶಮ್ । ಅರ್ವತಾ । ತ್ವಷ್ಟಾ । ಇತ್ । (೩೯) । ಏನಮ್ । ಸೌಶ್ರವಸಾಯ । ಜಿನ್ವತಿ ॥

---

| ಮಂತ್ರ | ವಿನಿಯೋಗ |
|---|---|
| ಏಷಚ್ಛಾಗಃ...ಜಿನ್ವತಿ ॥ | ಅಶ್ವಸ್ತೋಮೀಯಹೋಮದ ಮೂರನೆಯ ಮಂತ್ರ. |

---

▲ **ಅಭಿಪ್ರಿಯಮ್**=ಎಲ್ಲರಿಗೂ ಪ್ರೀತಿಕರವಾದ; **ಪುರೋಡಾಶಮ್**=ಪುರೋಡಾಶದಂತೆ ರುಚಿಕರವಾದ **ಏನಮ್**=ಈ ಮೇಕೆಯನ್ನು; **ಅರ್ವತಾ**=ಕುದುರೆಯೊಡನೆ; **ತ್ವಷ್ಟಾ ಇತ್**=ತ್ವಷ್ಟೃದೇವನೇ; **ಸೌಶ್ರವಸಾಯ**=ಒಳ್ಳೆಯ ಅನ್ನಕ್ಕಾಗಿ; **ಯತ್**=ಯಾವ ಕಾರಣಕ್ಕಾಗಿ; **ಜಿನ್ವತಿ**=ತೃಪ್ತಿ ಹೊಂದುತ್ತಾನೆಯೋ; [ಆ ಕಾರಣದಿಂದ] **ಪೂಷ್ಣಃ**=ಪೂಷದೇವತೆಯ; **ಭಾಗಃ**=ಭಾಗವಾದ; **ವಿಶ್ವದೇವ್ಯಃ**=ಸರ್ವದೇವರಿಗೂ ಹಿತವಾದ; **ಏಷಃ**=ಈ; **ಛಾಗಃ**=ಮೇಕೆಯು; **ವಾಜಿನಾ**=ಅನ್ನಸಾಧನವಾದ; **ಅಶ್ವೇನ**=ಕುದುರೆಯೊಡನೆ; **ಪುರಃ**=ಮುಂದೆ; **ನೀಯತೇ**=ಒಯ್ಯಲ್ಪಡುತ್ತದೆ.

---

ಈ ಮಂತ್ರದಲ್ಲಿ **ಆಯುಃ**=ಏತಿ-ಸರ್ವದಾ ಗಚ್ಛತಿ ಇತಿ=ವಾಯುಃ । ಸಂಚಾರಶೀಲನಾದುದರಿಂದ ವಾಯುವಿಗೆ ಆಯು ಎಂಬ ಹೆಸರು. ಋಭುಕ್ಷಾಃ ಎಂಬ ಶಬ್ದಕ್ಕೆ ಇಂದ್ರನೆಂಬ ಅರ್ಥವಿದ್ದರೂ ಈ ಮಂತ್ರದಲ್ಲಿ ಇಂದ್ರನನ್ನು ಬೇರೆಯಾಗಿ ಹೇಳಿರುವುದರಿಂದ ಋಭವಃ=ದೇವಾಃ ಕ್ಷಿಯಂತಿ=ನಿವಸಂತಿ ಅಸ್ಮಿನ್=ದೇವತೆಗಳು ಇವನಲ್ಲಿ ನಿವಾಸ ಮಾಡುವುದರಿಂದ ಋಭುಕ್ಷಾಃ=ಪ್ರಜಾಪತಿ ಎಂದು ಹೇಳಿದ್ದಾರೆ. **'ಪ್ರಜಾಪತಿಸ್ಸರ್ವಾ ದೇವತಾಃ'** ಎಂಬ ಶ್ರುತಿಯೂ ಇದೆ.

ಪ್ರೋಕ್ಷಣಾದಿಗಳಿಂದ ಶುದ್ಧವಾದ, ಆಭರಣವನ್ನು ಧರಿಸಿರುವ ಅಶ್ವವನ್ನು ಋತ್ವಿಜರು ಹವಿಸ್ಸನ್ನಾಗಿ ಮುನ್ನಡೆಸುವಾಗ, ಅದು ಹೇಷಾರವದೊಡನೆ ದೇವತೆಗಳಿಗೆ ಸಲ್ಲುವ ಅನ್ನಭಾಗವಾಗುತ್ತದೆ.

ಅಶ್ವಮೇಧಪ್ರಕರಣದಲ್ಲಿ **'ಚತ್ವಾರ ಋತ್ವಿಜಃ ಸಮುಕ್ಷಂತಿ'** (ತೈ. ಬ್ರಾ. 3.8) ಎಂದು ಶುದ್ಧಿಯನ್ನೂ **'ಹಿರಣ್ಯಯಾಃ ಕಾಚಾ ಭವಂತಿ'** (ತೈ. ಬ್ರಾ. 3.9) ಎಂದು ಆಭರಣಗಳನ್ನು ಹಾಕುವುದನ್ನೂ ಹೇಳಲಾಗಿದೆ.

ಅಶ್ವದೊಡನೆ ಅಜವು ಮುಂದೆ ಒಯ್ಯಲ್ಪಡುತ್ತದೆ. ಈ ಅಜವು ಪೂಷದೇವತೆಯ ಹವಿರ್ಭಾಗವಾಗಿದೆ. ಅಶ್ವಮೇಧಪ್ರಕರಣದಲ್ಲಿ **'ಪೌಷ್ಣಮನ್ವಂಚಮ್'** [ತೈ. ಬ್ರಾ. 3.8.23.2] ಎಂದು ಪೂಷದೇವತಾಕವಾದ ಅಜವು

ಯದ್ಧವಿಷ್ಯಮೃತುಶೋ ದೇವಯಾನಂ ತ್ರಿರ್ಮಾನುಷಾಃ ಪರ್ಯಶ್ವಂ ನಯಂತಿ ।
ಅತ್ರಾ ಪೂಷ್ಣಃ ಪ್ರಥಮೋ ಭಾಗ ಏತಿ ಯಜ್ಞಂ ದೇವೇಭ್ಯಃ
ಪ್ರತಿವೇದಯನ್ನಜಃ ॥ ಹೋತಾಽಧ್ವರ್ಯುರಾವಯಾ ಅಗ್ನಿಮಿಂಧೋ
ಗ್ರಾವಗ್ರಾಭ ಉತ ಶಗ್ಂಸ್ತಾ ಸುವಿಪ್ರಃ ।

---

ಯತ್ । ಹವಿಷ್ಯಮ್ । ಋತುಶ ಇತ್ಯೃತು-ಶಃ । ದೇವಯಾನಮಿತಿ ದೇವ-ಯಾನಮ್ । ತ್ರಿಃ । ಮಾನುಷಾಃ । ಪರೀತಿ । ಅಶ್ವಮ್ । ನಯಂತಿ ॥ ಅತ್ರ । ಪೂಷ್ಣಃ । ಪ್ರಥಮಃ । ಭಾಗಃ । ಏತಿ । ಯಜ್ಞಮ್ । ದೇವೇಭ್ಯಃ । ಪ್ರತಿವೇದಯನ್ನಿತಿ ಪ್ರತಿ-ವೇದಯನ್ । ಅಜಃ ॥ ಹೋತಾ । ಅಧ್ವರ್ಯುಃ । ಆವಯಾ ಇತ್ಯಾ-ವಯಾಃ । ಅಗ್ನಿಮಿಂಧ ಇತ್ಯಗ್ನಿಮ್-ಇಂಧಃ । ಗ್ರಾವಗ್ರಾಭ ಇತಿ ಗ್ರಾವ-ಗ್ರಾಭಃ । ಉತ । ಶಗ್ಂಸ್ತಾ । ಸುವಿಪ್ರ ಇತಿ ಸು-ವಿಪ್ರಃ ॥

---

| ಮಂತ್ರ | ವಿನಿಯೋಗ |
|---|---|
| **ಯದ್ಧವಿಷ್ಯಂ...ಅಜಃ ॥** | ಅಶ್ವಸ್ತೋಮೀಯಹೋಮದ ನಾಲ್ಕನೆಯ ಮಂತ್ರ. |
| **ಹೋತಾ...ಆ ಪೃಣಧ್ವಮ್ ॥** | ಅಶ್ವಸ್ತೋಮೀಯಹೋಮದ ಐದನೆಯ ಮಂತ್ರ. |

---

▲ **ಯತ್**=ಎಲ್ಲಿ; **ಮಾನುಷಾಃ**=ಮಾನವರಾದ ಋತ್ವಿಜರು; **ಹವಿಷ್ಯಮ್**=ಹವಿಸ್ಸಾಗಲು ಯೋಗ್ಯವಾದ; **ಋತುಶಃ**=ಋತುಕಾಲಗಳಲ್ಲಿ; **ದೇವಯಾನಮ್**=ದೇವತೆಗಳನ್ನು ಹೊಂದುವ; **ಅಶ್ವಮ್**=ಕುದುರೆಯನ್ನು; **ತ್ರಿಃ**=ಮೂರು ಬಾರಿ; **ಪರಿ ನಯಂತಿ**=ಪ್ರದಕ್ಷಿಣೆ ಮಾಡುತ್ತಾರೆಯೋ; **ಅತ್ರ**=ಈ ಪ್ರದೇಶದಲ್ಲಿ; **ಪೂಷ್ಣಃ**=ಪೂಷದೇವತೆಯ; **ಭಾಗಃ**=ಭಾಗವಾಗಿರುವ; **ಅಜಃ**=ಮೇಕೆಯು; **ದೇವೇಭ್ಯಃ**=ದೇವತೆಗಳಿಗೆ; **ಯಜ್ಞಮ್ ಪ್ರತಿವೇದಯನ್**=ಯಜ್ಞವು ನಡೆಯುತ್ತದೆಯೆಂದು ತಿಳಿಸುತ್ತಾ; **ಪ್ರಥಮಃ**=ಮೊದಲನೆಯದಾಗಿ; **ಏತಿ**=ಹೋಗುತ್ತದೆ. ▲ [ಈ ಯಜ್ಞದಲ್ಲಿ ಯಾರು] **ಹೋತಾ**=ಹೋತೃವೋ; **ಆವಯಾಃ**=ಯಾಗಾನುಷ್ಠಾನಕ್ಕಾಗಿ ಎಲ್ಲೆಲ್ಲಿಯೂ ಬೇಗನೆ ಸಂಚರಿಸುವ; **ಅಧ್ವರ್ಯುಃ**=ಅಧ್ವರ್ಯುವೋ; **ಅಗ್ನಿಮಿಂಧಃ**=ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಆಗ್ನೀಧ್ರನೋ; **ಗ್ರಾವಗ್ರಾಭಃ**=ಗ್ರಾವಸ್ತುತನೋ; **ಉತ**=ಮತ್ತು; **ಶಗ್ಂಸ್ತಾ**=ಪ್ರಶಾಸ್ತನೋ; **ಸುವಿಪ್ರಃ**=ಪ್ರಸ್ತೋತನೋ; [ಈ ಋತ್ವಿಜರೆಲ್ಲರೂ]

---

ಹವಿಸ್ಸಾಗಿ ವಿಹಿತವಾಗಿದೆ. ಈ ಹಿಂದಿನ ಮಂತ್ರವನ್ನೂ ಅಜದ ವಿಷಯಕ್ಕೆ ಅನ್ವಯಿಸಬಹುದು. ಅಜ ಶಬ್ದಕ್ಕೆ ಮೇಕೆಯೆಂಬ ಅರ್ಥವನ್ನು ಇಟ್ಟುಕೊಳ್ಳಬಹುದು. ಅಶ್ವಮೇಧಪ್ರಕರಣದಲ್ಲಿ **'ಐಂದ್ರಾಪೌಷ್ಣಮುಪರಿಷ್ಟಾತ್'** ಎಂಬ

**ತೇನ ಯಜ್ಞೇನ ಸ್ವರಂಕೃತೇನ ಸ್ವಿಷ್ಟೇನ ವಕ್ಷಣಾ ಆ ಪೃಣಧ್ವಮ್ ॥**

**ಯೂಪವ್ರಸ್ಕಾ ಉತ ಯೇ ಯೂಪವಾಹಾಶ್ಚಷಾಲಂ ಯೇ ಅಶ್ವಯೂಪಾಯ**

**ತಕ್ಷತಿ । ಯೇ ಚಾರ್ವತೇ ಪಚನಗ್ಂ ಸಂಭರನ್ತ್ಯುತೋ [(೪೦)]**

**ತೇಷಾಮಭಿಗೂರ್ತಿರ್ನ ಇನ್ವತು ॥**

---

ತೇನ । ಯಜ್ಞೇನ । ಸ್ವರಂಕೃತೇನೇತಿ ಸು-ಅರಙ್ಕೃತೇನ । ಸ್ವಿಷ್ಟೇನೇತಿ ಸು-ಇಷ್ಟೇನ । ವಕ್ಷಣಾಃ । ಏತಿ । ಪೃಣಧ್ವಮ್ ॥ ಯೂಪವ್ರಸ್ಕಾ ಇತಿ ಯೂಪ-ವ್ರಸ್ಕಾಃ । ಉತ । ಯೇ । ಯೂಪವಾಹಾ ಇತಿ ಯೂಪ-ವಾಹಾಃ । ಚಷಾಲಮ್ । ಯೇ । ಅಶ್ವಯೂಪಾಯೇತ್ಯಶ್ವ-ಯೂಪಾಯ । ತಕ್ಷತಿ ॥ ಯೇ । ಚ । ಅರ್ವತೇ । ಪಚನಮ್ । ಸಂಭರಂತೀತಿ ಸಮ್-ಭರಂತಿ । ಉತೋ ಇತಿ । (೪೦) । ತೇಷಾಮ್ । ಅಭಿಗೂರ್ತಿರಿತ್ಯಭಿ-ಗೂರ್ತಿಃ । ನಃ । ಇನ್ವತು ॥

---

| ಮಂತ್ರ | ವಿನಿಯೋಗ |
|---|---|
| ಯೂಪವ್ರಸ್ಕಾ...ನ ಇನ್ವತು ॥ | ಅಶ್ವಸ್ತೋಮೀಯಹೋಮದ ಆರನೆಯ ಮಂತ್ರ. |

---

**ಸ್ವರಂಕೃತೇನ**=ಅಪೇಕ್ಷಿತವಾದ ಎಲ್ಲ ವಸ್ತುಗಳಿಂದಲೂ ಪೂರ್ಣವಾಗಿ ಚೆನ್ನಾಗಿ ಅಲಂಕರಿಸಲ್ಪಟ್ಟಂತೆ ಇರುವ; **ಸ್ವಿಷ್ಟೇನ**=ಚೆನ್ನಾಗಿ ಅನುಷ್ಠಾನ ಮಾಡಿದ; **ತೇನ**=ಆ; **ಯಜ್ಞೇನ**=ಅಶ್ವಮೇಧಯಾಗದಿಂದ; **ವಕ್ಷಣಾಃ**=ಫಲವಾಹಿನಿಗಳಂತಿರುವ ತುಪ್ಪದ ಕಾಲುವೆಗಳನ್ನು; **ಆ ಪೃಣಧ್ವಮ್**=ತುಂಬಿರಿ. ▲ **ಯೇ**=ಯಾರು; **ಯೂಪವ್ರಸ್ಕಾಃ**=ಯೂಪಕ್ಕಾಗಿ ಮರವನ್ನು ಕಡಿಯುವರೋ; **ಉತ**=ಮತ್ತು; ಯೇ=ಯಾರು; **ಯೂಪವಾಹಾಃ**=ಯಾಗಭೂಮಿಗೆ ಯೂಪವನ್ನು ಹೊತ್ತು ತರುತ್ತಾರೆಯೋ; **ಯೇ**=ಯಾರು; **ಅಶ್ವ ಯೂಪಾಯ**=ಅಶ್ವವನ್ನು ಬಂಧಿಸುವ ಯೂಪಕ್ಕಾಗಿ; **ಚಷಾಲಮ್**=ಯೂಪದ ಮೇಲಿಡುವ ಬಳೆಯನ್ನು; **ತಕ್ಷತಿ**=ಹತ್ತಿರ ಹಿಡಿದು ಸಂಸ್ಕರಿಸುವರೋ; **ಉತೋ**=ಮತ್ತು; **ಯೇ ಚ**=ಯಾರು; **ಅರ್ವತೇ**=ಕುದುರೆಗಾಗಿ/ಪಾಕಸಾಧನಕ್ಕಾಗಿ; **ಪಚನಮ್**=ಕಾಷ್ಠಾದಿಗಳನ್ನು; **ಸಂಭರಂತಿ**=ಸಂಗ್ರಹಿಸುತ್ತಾರೆಯೋ; **ತೇಷಾಮ್**=ಅವರೆಲ್ಲರ; **ಅಭಿಗೂರ್ತಿಃ**=ಸಂಕಲ್ಪವು; ನಃ=ನಮ್ಮನ್ನು; **ಇನ್ವತು**=ಸಂತೋಷಪಡಿಸಲಿ.

---

ವಚನದಿಂದ ಅಜವು ದೇವತಾದ್ವಯಹವಿಸ್ಸಾಗಿದೆ. ಶ್ರುತಿಯಲ್ಲಿರುವ '**ಮೇಮ್ಯತ್**' ಎಂಬ ಅನುಕರಣವು ಅಜದ ಧ್ವನಿಯ ಯೋಗ್ಯಾನುಕರಣವಾಗಿದೆ.

ಎಲ್ಲಿ ಋತ್ವಿಜರು ಹವಿಸ್ಸಿಗೆ ಅರ್ಹವಾದ-ಯಜ್ಞಾನುಷ್ಠಾನ ಮಾಡುವ ಋತುಕಾಲದಲ್ಲಿ ದೇವತೆಗಳನ್ನು ಸೇರುವ

**ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ। ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಮ್॥ ಯದ್ವಾಜಿನೋ ದಾಮ ಸಂದಾನಮರ್ವತೋ ಯಾ ಶೀರ್‌ಷಣ್ಯಾ ರಶನಾ ರಜ್ಜುರಸ್ಯ।**

---

ಉಪ। ಪ್ರೇತಿ। ಅಗಾತ್। ಸುಮದಿತಿ ಸು-ಮತ್। ಮೇ। ಅಧಾಯಿ। ಮನ್ಮ। ದೇವಾನಾಮ್। ಆಶಾಃ। ಉಪೇತಿ। ವೀತಪೃಷ್ಠ ಇತಿ ವೀತ-ಪೃಷ್ಠಃ॥ ಅನ್ವಿತಿ। ಏನಮ್। ವಿಪ್ರಾಃ। ಋಷಯಃ। ಮದಂತಿ। ದೇವಾನಾಮ್। ಪುಷ್ಟೇ। ಚಕೃಮ। ಸುಬಂಧುಮಿತಿ ಸು-ಬಂಧುಮ್॥ ಯತ್। ವಾಜಿನಃ। ದಾಮ। ಸಂದಾನಮಿತಿ ಸಮ್-ದಾನಮ್। ಅರ್ವತಃ। ಯಾ। ಶೀರ್‌ಷಣ್ಯಾ। ರಶನಾ। ರಜ್ಜುಃ। ಅಸ್ಯ॥

---

| ಮಂತ್ರ | ವಿನಿಯೋಗ |
|---|---|
| **ಉಪ ಪ್ರಾಗಾತ್ಸುಮನ್ಮೇ...ಸುಬಂಧುಮ್॥** | ಅಶ್ವಸ್ತೋಮೀಯಹೋಮದ ಏಳನೆಯ ಮಂತ್ರ. |
| **ಯದ್ವಾಜಿನೋ...ಅಸ್ತು॥** | ಅಶ್ವಸ್ತೋಮೀಯಹೋಮದ ಎಂಟನೆಯ ಮಂತ್ರ. |

---

▲ **ಸುಮತ್**=ಅತ್ಯಂತಸಂತೋಷಕಾರಣವಾದ ಫಲವು; **ಉಪ**=ನಮ್ಮ ಸಮೀಪವನ್ನು; **ಪ್ರ ಅಗಾತ್**=ಹೊಂದುತ್ತದೆ. **ಮನ್ಮ**=ಗಮನಿಸಬೇಕಾದ/ಫಲವು; **ಮೇ**=ನನಗಾಗಿ; **ಅಧಾಯಿ**=[ದೇವತೆಗಳಿಂದ] ಸಂಪಾದಿಸಲ್ಪಟ್ಟಿತು. **ವೀತಪೃಷ್ಠಃ**=ಮನೋಹರವಾದ ಬೆನ್ನಿನ ಭಾಗವುಳ್ಳ ಈ ಅಶ್ವವು; **ದೇವಾನಾಮ್ ಆಶಾಃ**=ದೇವತೆಗಳು ಆಶಿಸುವ ಹವಿಸ್ಸಾಗುವಿಕೆಯನ್ನು; **ಉಪ** ಪ್ರಾಗಾತ್=ಹೊಂದುವುದು; **ಋಷಯಃ**= ವಿದ್ವಾಂಸರಾದ; **ವಿಪ್ರಾಃ**=ಋತ್ವಿಜರು; **ಏನಮ್**=ಈ ಅಶ್ವವನ್ನು; **ಅನು ಮದಂತಿ**=ಅನುಕೂಲವಾದ ಸ್ತೋತ್ರಗಳಿಂದ ಸಂತೋಷಪಡಿಸಲಿ. **ದೇವಾನಾಮ್**=ದೇವತೆಗಳ; **ಪುಷ್ಟೇ**=ಪುಷ್ಟಿಗಾಗಿ; ಏನಮ್=ಈ ಅಶ್ವವನ್ನು; **ಸುಬಂಧುಮ್**=ಬಂಧುವಿನಂತೆ ಪ್ರಿಯವಾದುದನ್ನಾಗಿ; **ಚಕೃಮ**=ಮಾಡುವೆವು; ▲ **ವಾಜಿನಃ**=ಕುದುರೆಯ; **ಯತ್**=ಯಾವ; **ದಾಮ**=ಕಂಠಬಂಧನವಾದ ಹಗ್ಗವಿದೆಯೋ; ಯತ್=ಯಾವ; **ಸಂದಾನಮ್**=ಹಿಂದಿನ ಕಾಲುಗಳನ್ನು ಕಟ್ಟುವ ಹಗ್ಗವಿದೆಯೋ; **ಅಸ್ಯ**=ಈ; **ಅರ್ವತಃ**=ಕುದುರೆಯ; **ಯಾ**=ಯಾವ; **ಶೀರ್‌ಷಣ್ಯಾ**=ತಲೆಯಲ್ಲಿ ಕಟ್ಟುವ; **ರಶನಾ**=ಹಗ್ಗವಿದೆಯೋ; ಅಸ್ಯ=ಈ ಕುದುರೆಯ; **ರಜ್ಜುಃ**=ಬಾಲದಲ್ಲಿ ಸೇರಿಸಿರುವ ಹಗ್ಗವಿದೆಯೋ; **ಅಸ್ಯ**=ಈ ಕುದುರೆಯ;

ಯದ್ವಾ ಘಾಸ್ಯ ಪ್ರಭೃತಮಾಸ್ಯೇ ತೃಣಗ್ಂ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ಯದಶ್ವಸ್ಯ ಕ್ರವಿಷೋ[ಕ್ರವಿಷಃ(೪೧)] ಮಕ್ಷಿಕಾಽಽಶ ಯದ್ವಾ ಸ್ವರೌ ಸ್ವಧಿತೌ ರಿಪ್ತಮಸ್ತಿ ।

---

ಯತ್ । ವಾ । ಘ । ಅಸ್ಯ । ಪ್ರಭೃತಮಿತಿ ಪ್ರ-ಭೃತಮ್ । ಆಸ್ಯೇ । ತೃಣಮ್ । ಸರ್ವಾ । ತಾ । ತೇ । ಅಪೀತಿ । ದೇವೇಷು । ಅಸ್ತು ॥ ಯತ್ । ಅಶ್ವಸ್ಯ । ಕ್ರವಿಷಃ । (೪೧) । ಮಕ್ಷಿಕಾ । ಆಶ । ಯತ್ । ವಾ । ಸ್ವರೌ । ಸ್ವಧಿತಾವಿತಿ ಸ್ವ-ಧಿತೌ । ರಿಪ್ತಮ್ । ಅಸ್ತಿ ॥

---

| ಮಂತ್ರ | ವಿನಿಯೋಗ |
|---|---|
| ಯದಶ್ವಸ್ಯ...ದೇವೇಷ್ವಸ್ತು ॥ | ಅಶ್ವಸ್ತೋಮೀಯಹೋಮದ ಒಂಬತ್ತನೆಯ ಮಂತ್ರ. |

---

**ಆಸ್ಯೇ**=ಬಾಯಿಯಲ್ಲಿ; **ಪ್ರಭೃತಮ್**=ಸೇರಿರುವ; **ಯತ್ ವಾ ಘ***=ಯಾವ; **ತೃಣಮ್**=ಹುಲ್ಲಿದೆಯೋ; **ತಾ ಸರ್ವಾ**=ಅದೆಲ್ಲವೂ; **ದೇವೇಷು ಅಪಿ**=ದೇವತೆಗಳಿಗೆ ಅರ್ಪಿತವಾದದ್ದಾಗಿ/ದೇವತ್ವವನ್ನು ಪಡೆದ; **ತೇ**=ನಿನಗೆ [ದೇವಲೋಕದಲ್ಲಿಯೂ] **ಅಸ್ತು**=ಆಗಲಿ/ಉಂಟಾಗಲಿ. ▲ **ಅಶ್ವಸ್ಯ**=ಈ ಕುದುರೆಯ; **ಕ್ರವಿಷಃ**=ಮಾಂಸದ; **ಯತ್**=ಯಾವ ಅಂಶವನ್ನು; **ಮಕ್ಷಿಕಾ**=ನೊಣವು; **ಆಶ**=ಭಕ್ಷಿಸಿದೆಯೋ; **ಸ್ವರೌ**=ಅಂಜನವನ್ನು ಮಾಡುವ ಮರದ ಸಾಧನದಲ್ಲಿ; **ಯತ್ ವಾ**=ಯಾವ ರಕ್ತದ ಅಂಶವು; **ರಿಪ್ತಮ್ ಅಸ್ತಿ**=ಲೇಪಿಸಿದೆಯೋ; **ಸ್ವಧಿತೌ**=ಕತ್ತರಿಸುವ ಸಾಧನದಲ್ಲಿ; ಯತ್ ವಾ ರಿಪ್ತಮ್ ಅಸ್ತಿ=ಯಾವ ರಕ್ತದ ಅಂಶವು ಲೇಪಿಸಿದೆಯೋ;

---

-ಅಶ್ವವನ್ನು ಮೂರು ಬಾರಿ ಪ್ರದಕ್ಷಿಣೆ ಮಾಡುತ್ತಾರೆಯೋ, ಅಲ್ಲಿ ಪೂಷದೇವತೆಯ ಹವಿರ್ಭಾಗವಾದ ಆಜವು ದೇವತೆಗಳಿಗೆ ಅಶ್ವಮೇಧಯಾಗವು ನಡೆಯುವುದನ್ನು ತಿಳಿಸುತ್ತಾ ಮುಂದೆ ಹೋಗುತ್ತದೆ. ಹೇ! ದೇವತೆಗಳೇ! ಯಜ್ಞವು ನಡೆಯುತ್ತಿದೆ ಎಂದು ತಿಳಿಸುತ್ತದೆ.

ಈ ಅಶ್ವಮೇಧಯಜ್ಞದಲ್ಲಿ ಹೋತೃವೂ, ಅನುಷ್ಠಾನಕ್ಕಾಗಿ ಶೀಘ್ರವಾಗಿ ಸಂಚರಿಸುತ್ತಿರುವ ಅಧ್ವರ್ಯುವೂ, ಆಗ್ನೀಧ್ರನೂ, ಗ್ರಾವಸ್ತುತನೂ, ಪ್ರಶಾಸ್ತ್ರ-ಪ್ರಸ್ತೋತೃಗಳೂ ಸರ್ವಾಂಗಸಂಪೂರ್ಣವಾಗಿ ಚೆನ್ನಾಗಿ ಈ ಯಾಗವನ್ನು ನೆರವೇರಿಸಿ, ಯಜಮಾನನ ಫಲಕಾಮನೆಗಳನ್ನು ಪೂರ್ಣಗೊಳಿಸಲಿ. ಹೋತೃವೇ ಮೊದಲಾದ ಋತ್ವಿಜರೇ! ನೀವು ಪೂರ್ಣಗೊಳಿಸಿಕೊಡಿರಿ.

ಈ ಯಾಗದಲ್ಲಿ ಅಶ್ವಬಂಧನದ ಯೂಪಕ್ಕಾಗಿ ಬೇಕಾದ ಮರವನ್ನು ಕಡಿಯುವವರು, ತರುವವರು ಮುಂತಾದ ಯೂಪಕ್ಕೆ ಸಂಬಂಧಿಸಿದ ಕೆಲಸಗಳನ್ನು ಮಾಡುವವರ ಒಳ್ಳೆಯ ಸಂಕಲ್ಪವು ನಮ್ಮನ್ನು ಸಂತೋಷಪಡಿಸಲಿ ಎಂಬ

---

* ಪಾದಪೂರಣಾರ್ಥಕ.

**ಯದ್ಧಸ್ತಯೋಃ ಶಮಿತುರ್ಯನ್ನಖೇಷು ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥**

**ಯದೂವಧ್ಯಮುದರಸ್ಯಾಪವಾತಿ ಯ ಆಮಸ್ಯ ಕ್ರವಿಷೋ ಗಂಧೋ ಅಸ್ತಿ ।**

**ಸುಕೃತಾ ತಚ್ಛಮಿತಾರಃ ಕೃಣ್ವಂತೂತ ಮೇಧಗ್ಂ ಶೃತಪಾಕಂ ಪಚಂತು ॥**

---

**ಯತ್ । ಹಸ್ತಯೋಃ । ಶಮಿತುಃ । ಯತ್ । ನಖೇಷು । ಸರ್ವಾ । ತಾ । ತೇ । ಅಪೀತಿ । ದೇವೇಷು । ಅಸ್ತು ॥ ಯತ್ । ಊವಧ್ಯಮ್ । ಉದರಸ್ಯ । ಅಪವಾತೀತ್ಯಪ-ವಾತಿ । ಯಃ । ಆಮಸ್ಯ । ಕ್ರವಿಷಃ । ಗಂಧಃ । ಅಸ್ತಿ ॥ ಸುಕೃತೇತಿ ಸು-ಕೃತಾ । ತತ್ । ಶಮಿತಾರಃ । ಕೃಣ್ವನ್ತು । ಉತ । ಮೇಧಮ್ । ಶೃತಪಾಕಮಿತಿ ಶೃತ-ಪಾಕಮ್ । ಪಚಂತು ॥**

---

| ಮಂತ್ರ | ವಿನಿಯೋಗ |
|---|---|
| **ಯದೂವಧ್ಯಂ...ಪಚಂತು ॥** | ಅಶ್ವಸ್ತೋಮೀಯಹೋಮದ ಹತ್ತನೆಯ ಮಂತ್ರ. |

---

**ಯತ್**=ಯಾವ ರಕ್ತದ ಅಂಶವು; **ಶಮಿತುಃ**=ವಿಶಸನವನ್ನು ಮಾಡುವವನ; **ಹಸ್ತಯೋಃ**=ಕೈಗಳಲ್ಲಿ; **ಯತ್**=ಯಾವ ರಕ್ತಾಂಶವು; ಶಮಿತುಃ **ನಖೇಷು**=ಶಮಿತನ ಉಗುರುಗಳಲ್ಲಿ; ರಿಪ್ತಮ್ ಅಸ್ತಿ= ಲೇಪಿಸಿದ್ದಾಗಿದೆಯೋ; [ಎಲೈ! ಕುದುರೆಯೇ!] **ತೇ**=ನಿನ್ನ; **ಸರ್ವಾ ತಾ ಅಪಿ**=ಆ ಎಲ್ಲ ರಕ್ತ-ಮಾಂಸ ಲೇಶಗಳೆಲ್ಲವೂ; **ದೇವೇಷು**=ದೇವತೆಗಳಲ್ಲಿ; **ಅಸ್ತು**=ಹುತವಾಗಲಿ. 🔔 **ಉದರಸ್ಯ**=ಕುದುರೆಯ ಹೊಟ್ಟೆಯ [ಮಧ್ಯದಲ್ಲಿ]; **ಯತ್**=ಯಾವ; **ಊವಧ್ಯಮ್**=ಅರ್ಧಜೀರ್ಣವಾದ ಭಾಗವು [ದುರ್ಗಂಧರೂಪವಾದ ವಾಯುವಿನೊಡನೆ] **ಅಪವಾತಿ**=ಹೊರಬರುತ್ತದೆಯೋ; **ಯಃ**=ಯಾವ; **ಆಮಸ್ಯ**=ಜೀರ್ಣವಾಗದ; **ಕ್ರವಿಷಃ**=ಮಾಂಸದ; **ಗಂಧಃ ಅಸ್ತಿ**=ಅಂಶವಿದೆಯೋ; **ಶಮಿತಾರಃ**=ವಿಶಸನ ಮಾಡುವವರು; **ತತ್**=ಅದೆಲ್ಲವನ್ನೂ; **ಸುಕೃತಾ**=ಒಳ್ಳೆಯದನ್ನಾಗಿ; **ಕೃಣ್ವನ್ತು**=ಮಾಡಲಿ. **ಉತ**=ಮತ್ತು; **ಮೇಧಮ್**= ಯಜ್ಞಾರ್ಹವನ್ನಾಗಿ; **ಶೃತಪಾಕಮ್**=ಚೆನ್ನಾಗಿ ಪಕ್ವವಾಗುವಂತೆ; **ಪಚಂತು**=ಮಾಡಲಿ.

---

ಪ್ರಾರ್ಥನೆಯು ಇದೆ.

ಅತಿಯಾದ ಹರ್ಷಕ್ಕೆ ಕಾರಣವಾದ ಯಜ್ಞಫಲವು ನಮ್ಮನ್ನು ಹೊಂದುವುದು. ಅದು ದೇವತೆಗಳಿಂದ ನಮಗೆ ದೊರೆಯುವುದು. ಈ ಅಶ್ವವು ಯಜ್ಞದ ಹವಿಸ್ಸಾಗಿದೆ. ಅದನ್ನು ಋತ್ವಿಜರು ಸ್ತುತಿಸುವರು.

ಈ ಅಶ್ವವನ್ನು ದೇವತೆಗಳಿಗೆ ಅವರ ಪುಷ್ಟಿಗಾಗಿ ಬಂಧುವನ್ನಾಗಿ ಮಾಡುವೆವು.

ಅಶ್ವವನ್ನು ಕಂಠದಲ್ಲಿಯೂ, ಹಿಂದಿನ ಕಾಲುಗಳಲ್ಲಿಯೂ, ತಲೆಯಲ್ಲಿಯೂ, ಬಾಲದಲ್ಲಿಯೂ ಹಗ್ಗದಿಂದ ಕಟ್ಟುತ್ತಾರೆ. ಈ ರೀತಿಯ ಬಗೆ ಬಗೆಯ ಹಗ್ಗವನ್ನೂ, ಬಾಯಿಯಲ್ಲಿ ಹುಲ್ಲನ್ನೂ ಹೊಂದಿರುವ ಕುದುರೆಯು ಅಶ್ವಮೇಧಯಾಗದ ಸರ್ವಪರಿಪೂರ್ಣವೆನಿಸುತ್ತದೆ. ಇದೆಲ್ಲವೂ ದೇವತೆಗಳಿಗೆ ಅರ್ಪಿತವಾಗಲಿ. ಅಶ್ವಮೇಧಯಾಗ

ಯತ್ತೇ ಗಾತ್ರಾದಗ್ನಿನಾ ಪಚ್ಯಮಾನಾದಭಿ ಶೂಲಂ ನಿಹತಸ್ಯಾವಧಾವತಿ । ಮಾ ತದ್ಭೂಮ್ಯಾಮಾ ಶ್ರಿಷನ್ಮಾ ತೃಣೇಷು ದೇವೇಭ್ಯಸ್ತದುಶದ್ಭ್ಯೋ ರಾತಮಸ್ತು

॥ ೪೨-೪ ॥

[ಇದುತೋ ಕ್ರವಿಷಃ ಶ್ರಿಷತ್ಸಪ್ತ ಚ ॥]

---

ಯತ್ । ತೇ । ಗಾತ್ರಾತ್ । ಅಗ್ನಿನಾ । ಪಚ್ಯಮಾನಾತ್ । ಅಭೀತಿ । ಶೂಲಮ್ । ನಿಹತಸ್ಯೇತಿ ನಿ-ಹತಸ್ಯ । ಅವಧಾವತೀತ್ಯವ-ಧಾವತಿ ॥ ಮಾ । ತತ್ । ಭೂಮ್ಯಾಮ್ । ಏತಿ । ಶ್ರಿಷತ್ । ಮಾ । ತೃಣೇಷು । ದೇವೇಭ್ಯಃ । ತತ್ । ಉಶದ್ಭ್ಯ ಇತ್ಯುಶತ್-ಭ್ಯಃ । ರಾತಮ್ । ಅಸ್ತು ॥ (೪೨) ॥

---

| ಮಂತ್ರ | ವಿನಿಯೋಗ |
|---|---|
| ಯತ್ತೇ ಗಾತ್ರಾತ್...ರಾತಮಸ್ತು ॥ | ಅಶ್ವಸ್ತೋಮೀಯಹೋಮದ ಹನ್ನೊಂದನೆಯ ಹಾಗೂ ಅನುವಾಕದ ಕೊನೆಯ ಮಂತ್ರ. |

---

▲ [ಎಲೈ! ಅಶ್ವವೇ!] **ಅಗ್ನಿನಾ**=ಅಗ್ನಿಯಿಂದ; **ಪಚ್ಯಮಾನಾತ್**=ಪಕ್ವವಾಗುತ್ತಿರುವ; **ತೇ**=ನಿನ್ನ; **ಗಾತ್ರಾತ್**=ಶರೀರದ ಅವಯವದಿಂದ; **ಯತ್**=ಯಾವ ಅಂಶವು; **ಅವಧಾವತಿ**=ಅಪಕ್ವವಾಗಿ ನೆಲದಲ್ಲಿ ಬೀಳುತ್ತದೆಯೋ; **ನಿಹತಸ್ಯ**=ಹನನ ಮಾಡಲ್ಪಡುತ್ತಿರುವ; [ನಿನ್ನ] **ಅಭಿಶೂಲಮ್**=ಶೂಲದಲ್ಲಿ ಸೇರಿ ಕೊಂಡಿರುವ; [ಯಾವ ಭಾಗವು] ಅವಧಾವತಿ=ನೆಲದಲ್ಲಿ ಬೀಳುತ್ತದೆಯೋ; **ತತ್**=ಆ ಭಾಗವು; **ಭೂಮ್ಯಾಮ್**=ಭೂಮಿಯಲ್ಲಿ; **ಮಾ ಆ ಶ್ರಿಷತ್**=ಸೇರದಿರಲಿ. **ತೃಣೇಷು**=ಬರ್ಹಿಸ್ಸುಗಳಲ್ಲಿ/ಹುಲ್ಲುಗಳಲ್ಲಿ; **ಮಾ** ಆ ಶ್ರಿಷತ್=ಸೇರದಿರಲಿ. **ತತ್**=ಅದು; **ಉಶದ್ಭ್ಯಃ**=ಹವಿಸ್ಸನ್ನು ಬಯಸುವ; **ದೇವೇಭ್ಯಃ**=ದೇವತೆಗಳಿಗೆ; **ರಾತಮ್**=ಕೊಡಲ್ಪಟ್ಟದ್ದಾಗಿ; **ಅಸ್ತು**=ಇರಲಿ.

---

ವನ್ನು ಅನುಷ್ಠಿಸಿದ ಫಲವಾಗಿ ಯಜಮಾನನು ದೇವತ್ವವನ್ನು ಪಡೆಯುವನು. ಅವನಿಗೆ ಈ ಲೋಕದಲ್ಲಿ ಸರ್ವ ಸಾಧನಪರಿಪೂರ್ಣವಾದ ಅಶ್ವವು ಲಭಿಸಿರುವಂತೆ ಸ್ವರ್ಗಲೋಕದಲ್ಲಿಯೂ ದೊರೆಯಲಿ. ಅದರಿಂದ ಸರ್ವಸುಖಗಳೂ ಒದಗಲಿ ಎಂಬ ಪ್ರಾರ್ಥನೆಯು ಇದಾಗಿದೆ.

ಅಶ್ವವನ್ನು ನಿಯೋಜನ ಮಾಡುವ ಸಮಯದಲ್ಲಿ ಹಗ್ಗ ಮೊದಲಾದವುಗಳನ್ನು ದೇವತೆಗಳಲ್ಲಿ ಸಮರ್ಪಿಸಿದಂತೆ, ಈ ಮಂತ್ರದಲ್ಲಿ ಅಶ್ವದ ಮಾಂಸ-ರಕ್ತಗಳ ಲೇಶವೂ ಸಹ ದೇವತೆಗಳ ಮಹಿಮೆಯಿಂದ ದೇವತೆಗಳಿಗೇ ಅರ್ಪಿತವಾದದ್ದಾಗಲಿ ಎಂಬ ಪ್ರಾರ್ಥನೆಯಿದೆ. ಎಲ್ಲವೂ ದೇವತಾರ್ಪಿತ ಎಂದು ತಾತ್ಪರ್ಯ.

ಅಶ್ವಮೇಧಯಾಗದಲ್ಲಿ ಅಶ್ವರೂಪವಾದ ಹವಿಸ್ಸು ಯಜ್ಞಾರ್ಹವಾಗುವಂತೆ ಈ ಮಂತ್ರದಲ್ಲಿ ಆಶಂಸನೆಯು ಇದೆ.

ಕುದುರೆಯ ಹೊಟ್ಟೆಯಲ್ಲಿ ಅರ್ಧಜೀರ್ಣವಾದ ಯಾವ ವಸ್ತುವು ದುರ್ಗಂಧವಾಗಿರುತ್ತದೆಯೋ, ಜೀರ್ಣವಾಗದ ಮಾಂಸದ ಅಂಶವಿರುತ್ತದೆಯೋ ಅದೆಲ್ಲವನ್ನೂ ವಿಶಸನ ಮಾಡುವವರು ಅಶುದ್ಧವಾದ ಭಾಗವನ್ನು ಬಿಟ್ಟು ಉಳಿದ ಭಾಗವನ್ನು ಅಪಕ್ವ-ಅತಿಪಕ್ವವೂ ಆಗದಂತೆ ಚೆನ್ನಾಗಿ ಬೇಯಿಸಿ ಯಜ್ಞಾರ್ಹವನ್ನಾಗಿ ಮಾಡಲಿ.

ಅಗ್ನಿಯಿಂದ ಪಕ್ವವಾಗುತ್ತಿರುವ ಅಶ್ವದ ಶರೀರದ ಅವಯವದ ಅಂಶಗಳೂ ಅಪಕ್ವವಾಗಿ ನೆಲಕ್ಕೆ ಬೀಳುತ್ತವೆ. ಶೂಲದಲ್ಲಿ ಸೇರಿರುವ ಅಂಶಗಳೂ ಕೆಳಗೆ ಬೀಳುತ್ತವೆ. ಆ ಅಂಶಗಳು ಯಾವುವೂ ಸಹ ವ್ಯರ್ಥವಾಗಿ ಹುಲ್ಲಿಗಾಗಲೀ, ನೆಲಕ್ಕಾಗಲೀ ಸೇರದೆ ಎಲ್ಲವೂ ದೇವತೆಗಳಿಗೇ ಸೇರಲಿ ಎಂಬ ಪ್ರಾರ್ಥನೆಯು ಇಲ್ಲಿದೆ.

## ॥ ನವಮೋಽನುವಾಕಃ ॥

**ಯೇ ವಾಜಿನಂ ಪರಿಪಶ್ಯಂತಿ ಪಕ್ವಂ ಯ ಈಮಾಹುಃ ಸುರಭಿರ್ನಿರ್ ಹರೇತಿ ।**

**ಯೇ ಚಾರ್ವತೋ ಮಾಗ್ಂಸಭಿಕ್ಷಾಮುಪಾಸತ ಉತೋ**

**ತೇಷಾಮಭಿಗೂರ್ತಿರ್ನ ಇನ್ವತು ॥**

---

**ಯೇ । ವಾಜಿನಮ್ । ಪರಿಪಶ್ಯಂತೀತಿ ಪರಿ–ಪಶ್ಯಂತಿ । ಪಕ್ವಮ್ । ಯೇ । ಈಮ್ । ಆಹುಃ । ಸುರಭಿಃ । ನಿರಿತಿ । ಹರ । ಇತಿ ॥ ಯೇ । ಚ । ಅರ್ವತಃ । ಮಾಗ್ಂಸಭಿಕ್ಷಾಮಿತಿ ಮಾಗ್ಂಸ–ಭಿಕ್ಷಾಮ್ । ಉಪಾಸತ ಇತ್ಯುಪ–ಆಸತೇ । ಉತೋ ಇತಿ । ತೇಷಾಮ್ । ಅಭಿಗೂರ್ತಿರಿತ್ಯಭಿ–ಗೂರ್ತಿಃ । ನಃ । ಇನ್ವತು ॥**

---

**ಹಿಂದಿನ ಎಂಟನೆಯ ಅನುವಾಕದಲ್ಲಿ ಕೆಲವು ಅಶ್ವಸ್ತೋಮೀಯಮಂತ್ರಗಳು ಹೇಳಲ್ಪಟ್ಟಿವೆ. ಈ ಒಂಬತ್ತನೆಯ ಅನುವಾಕದಲ್ಲಿ ಉಳಿದ ಅಶ್ವಸ್ತೋಮೀಯಮಂತ್ರಗಳು ಹೇಳಲ್ಪಡುತ್ತವೆ.**

---

| ಮಂತ್ರ | ವಿನಿಯೋಗ |
|---|---|
| **ಯೇ ವಾಜಿನಮ್...ಇನ್ವತು ॥** | ಅಶ್ವಸ್ತೋಮೀಯಹೋಮದ ಈ ಅನುವಾಕದ ಮೊದಲನೆಯ ಮಂತ್ರ. |

---

▲ **ಯೇ**=ಯಾವ ಪುರುಷರು; **ವಾಜಿನಮ್**=ಈ ಕುದುರೆಯನ್ನು; **ಪಕ್ವಮ್**=ಚೆನ್ನಾಗಿ ಪಕ್ವವಾದುದನ್ನಾಗಿ; **ಪರಿಪಶ್ಯಂತಿ**=ಸುತ್ತಲೂ ಬಂದು ಆದರದಿಂದ ನೋಡುತ್ತಾರೆಯೋ; **ಯೇ ಈಮ್**=ಬೇರೆಯವರಾದ ಯಾವ ಕೆಲವು ಜನರು; **ಸುರಭಿಃ**='ಈ ಕುದುರೆಯು ಸುಗಂಧಯುಕ್ತವಾಗಿದೆ; **ನಿರ್ ಹರ ಇತಿ**=ಇದರಿಂದ ಸ್ವಲ್ಪ ಭಾಗವನ್ನು ಬೇರ್ಪಡಿಸಿಕೊಡು' ಎಂದು; **ಆಹುಃ**=ಹೇಳುತ್ತಾರೆಯೋ; **ಉತೋ**=ಮತ್ತು; **ಯೇ ಚ**= ಯಾವ ಕೆಲವರು; **ಅರ್ವತಃ**=ಕುದುರೆಯ; **ಮಾಗ್ಂಸಭಿಕ್ಷಾಮ್**=ಮಾಂಸದ ಭಿಕ್ಷೆಯನ್ನು; **ಉಪಾಸತೇ**= ಪ್ರಾರ್ಥಿಸುತ್ತಾರೆಯೋ; **ತೇಷಾಮ್**=ಅವರೆಲ್ಲರ; **ಅಭಿಗೂರ್ತಿಃ**=ಸಂಕಲ್ಪವು; **ನಃ**=ನಮ್ಮನ್ನು; **ಇನ್ವತು**= ಹೊಂದಲಿ/ನಮ್ಮ ಶ್ರೇಯಸ್ಸಿಗೆ ಕಾರಣವಾಗಲಿ.

ಯನ್ನೀಕ್ಷ॑ಣಂ ಮಾ॒ಗ್ಂ॑ಸ್ಪಚ॑ನ್ಯಾ ಉ॒ಖಾಯಾ॒ ಯಾ ಪಾತ್ರಾ॑ಣಿ ಯೂ॒ಷ್ಣ

ಆ॒ಸೇಚ॑ನಾನಿ । ಊ॒ಷ್ಮ॒ಣ್ಯಾ॑ಽಪಿಧಾನಾ॑ ಚರೂ॒ಣಾಮ॒ಙ್ಕಾಃ ಸೂ॒ನಾಃ ಪರಿ॑

ಭೂ॒ಷನ್ತ್ಯಶ್ವ॒ಮ್ ॥

---

ಯತ್ । ನೀಕ್ಷ॑ಣಮ್ । ಮಾ॒ಗ್ಂ॑ಸ್ಪಚ॑ನ್ಯಾಃ । ಉ॒ಖಾಯಾಃ । ಯಾ । ಪಾತ್ರಾ॑ಣಿ । ಯೂ॒ಷ್ಣಃ । ಆ॒ಸೇಚ॒ನಾನೀತ್ಯಾ॑-ಸೇಚ॑ನಾನಿ ॥ ಊ॒ಷ್ಮ॒ಣ್ಯಾ॑ । ಅ॒ಪಿ॒ಧಾನೇತ್ಯ॑ಪಿ-ಧಾನಾ॑ । ಚ॒ರೂ॒ಣಾಮ್ । ಅ॒ಙ್ಕಾಃ । ಸೂ॒ನಾಃ । ಪರೀ॑ತಿ । ಭೂ॒ಷ॒ನ್ತಿ॒ । ಅಶ್ವ॒ಮ್ ॥

---

| ಮಂತ್ರ | ವಿನಿಯೋಗ |
|---|---|
| ಯನ್ನೀಕ್ಷ॑ಣಂ...ಅಶ್ವ॒ಮ್ ॥ | ಅಶ್ವಸ್ತೋಮೀಯಹೋಮದ ಎರಡನೆಯ ಮಂತ್ರ. |

---

▲ **ಮಾಗ್ಂಸ್ಪಚನ್ಯಾಃ**=ಮಾಂಸವನ್ನು ಬೇಯಿಸುವ ಸಾಧನವಾದ; **ಉಖಾಯಾಃ**=ಉಖೆಯ; **ಯತ್**= ಯಾವ; **ನೀಕ್ಷಣಮ್**=ಆದರಪೂರ್ವಕವಾದ ನೋಟವಿದೆಯೋ; **ಯೂಷ್ಣಃ**=ಪಶುರಸದ; **ಆಸೇಚನಾನಿ** =ಸೇಚನಕ್ಕೆ ಆಧಾರಭೂತವಾದ; **ಯಾ**=ಯಾವ; **ಪಾತ್ರಾಣಿ**=ಪಾತ್ರೆಗಳಿವೆಯೋ; **ಚರೂಣಾಮ್**= ಮಾಂಸವೇ ಮೊದಲಾದವುಗಳನ್ನಿಡುವ ಪಾತ್ರೆಗಳ/ಪಾತ್ರೆಗಳನ್ನು; **ಊಷ್ಮಣ್ಯಾ**=ಬಿಸಿಯಾಗಿಯೇ ಇರುವಂತೆ ಮಾಡುವ; **ಅಪಿಧಾನಾ**=ಯಾವ ಮುಚ್ಚಳಗಳು ಇವೆಯೋ; **ಅಙ್ಕಾಃ**=ಮಾಂಸಲೇಪವುಳ್ಳ ವಸ್ತುಗಳು; **ಸೂನಾಃ**=ಸ್ವಧಿತಿ-ವೇತಸಶಾಖೆ ಮುಂತಾದ ಯಾವ ವಸ್ತುಗಳುಂಟೋ; [ಅವೆಲ್ಲವೂ] **ಅಶ್ವಮ್**= ಕುದುರೆಯನ್ನು; **ಪರಿ ಭೂಷಂತಿ**=ಅಲಂಕರಿಸುತ್ತವೆ.

---

ಹವಿಸ್ಸಿಗಾಗಿ ಪಕ್ವಗೊಳ್ಳುತ್ತಿರುವ ಕುದುರೆಯನ್ನು ಕೆಲವರು ಬಂದು ಸುತ್ತಲೂ ಆದರದಿಂದ ನೋಡುತ್ತಾರೆ. ಇನ್ನು ಕೆಲವರು ಸುಗಂಧವಾಗಿರುವ ಅಶ್ವದ ಕೊಂಚ ಭಾಗವನ್ನು ಬೇರ್ಪಡಿಸಿಕೊಡು ಎಂದು ಹೇಳುತ್ತಾರೆ. ಇನ್ನು ಕೆಲವರು ಮಾಂಸದ ಭಿಕ್ಷೆಯನ್ನು ಪ್ರಾರ್ಥಿಸುತ್ತಾರೆ. ಅವರೆಲ್ಲರ ಸಂಕಲ್ಪವೂ ನಮ್ಮನ್ನು ಹೊಂದಲಿ. ನಮ್ಮ ಶ್ರೇಯಸ್ಸಿಗೆ ಕಾರಣವಾಗಲಿ. ಅಶ್ವದ ದರ್ಶನವೂ, ಗಂಧಸೇವನೆಯೂ, ಮಾಂಸಭಕ್ಷಣವೂ ಶ್ರೇಯಸ್ಕರವೆಂದು ಭಾವನೆ.

ಮಾಂಸವನ್ನು ಬೇಯಿಸುವ ಉಖೆಯ ನೋಟ, ಪಶುರಸದ ಸೇಚನದ ಪಾತ್ರೆಗಳು, ಚರುವಿನ, ಬಿಸಿಯನ್ನು ರಕ್ಷಿಸುವ ಪಾತ್ರಗಳೂ, ವಿಶಸನದ ಆಯುಧಗಳೂ-ಇವೆಲ್ಲವೂ ಅಶ್ವಕ್ಕೆ ಸಂಬಂಧಿಸಿದ ಕಾರ್ಯವನ್ನೇ ಮಾಡುತ್ತಿವೆ. ಯಾಗಾಶ್ವಕ್ಕೆ ಸಂಬಂಧಿಸಿದೆಲ್ಲವೂ ಪವಿತ್ರವೆಂದು ಅಭಿಪ್ರಾಯ.

ಕುದುರೆಗೆ ಸಂಬಂಧಿಸಿದ ಸ್ಥಾನಗಳೂ, ಅದರ ಕ್ರಿಯೆಗಳೆಲ್ಲವೂ ದೇವತೆಗಳಲ್ಲಿಯೇ ಅರ್ಪಿತವಾಗಲಿ.

ನಿಕ್ರಮಣಂ ನಿಷದನಂ ವಿವರ್ತನಂ ಯಚ್ಚ ಪಡ್ಬೀಶಮರ್ವತಃ । ಯಚ್ಚ ಪಪೌ ಯಚ್ಚ ಘಾಸಿಂ [(೪೩)] ಜಘಾಸ ಸರ್ವಾ ತಾ ತೇ ಅಪಿ ದೇವೇಷ್ವಸ್ತು ॥ ಮಾ ತ್ವಾಽಗ್ನಿರ್ಧ್ವನಯಿದ್ಧೂಮಗಂಧಿರ್ಮೋಖಾ ಭ್ರಾಜನ್ತ್ಯಭಿ ವಿಕ್ತ ಜಘ್ರಿಃ ।

---

ನಿಕ್ರಮಣಮಿತಿ ನಿ-ಕ್ರಮಣಮ್ । ನಿಷದನಮಿತಿ ನಿ-ಸದನಮ್ । ವಿವರ್ತನಮಿತಿ ವಿ-ವರ್ತನಮ್ । ಯತ್ । ಚ । ಪಡ್ಬೀಶಮ್ । ಅರ್ವತಃ ॥ ಯತ್ । ಚ । ಪಪೌ । ಯತ್ । ಚ । ಘಾಸಿಮ್ । (೪೩) । ಜಘಾಸ । ಸರ್ವಾ । ತಾ । ತೇ । ಅಪೀತಿ । ದೇವೇಷು । ಅಸ್ತು ॥ ಮಾ । ತ್ವಾ । ಅಗ್ನಿಃ । ಧ್ವನಯಿತ್ । ಧೂಮಗಂಧಿರಿತಿ ಧೂಮ-ಗಂಧಿಃ । ಮಾ । ಉಖಾ । ಭ್ರಾಜಂತೀ । ಅಭೀತಿ । ವಿಕ್ತ । ಜಘ್ರಿಃ ॥

---

| ಮಂತ್ರ | ವಿನಿಯೋಗ |
|---|---|
| ನಿಕ್ರಮಣಂ...ದೇವೇಷ್ವಸ್ತು ॥ | ಅಶ್ವಸ್ತೋಮೀಯಹೋಮದ ಮೂರನೆಯ ಮಂತ್ರ. |
| ಮಾ ತ್ವಾಗ್ನಿಃ...ಅಶ್ವಮ್ ॥ | ಅಶ್ವಸ್ತೋಮೀಯಹೋಮದ ನಾಲ್ಕನೆಯ ಮಂತ್ರ. |

---

▲ **ನಿಕ್ರಮಣಮ್ ಯತ್**=ಕುದುರೆಯು ಹೆಜ್ಜೆ ಇಡುವ ಯಾವ ಸ್ಥಾನವಿದೆಯೋ; **ನಿಷದನಮ್** ಯತ್= ವಾಸಿಸುವ/ಕುಳಿತುಕೊಳ್ಳುವ ಯಾವ ಸ್ಥಾನವಿದೆಯೋ; **ವಿವರ್ತನಮ್** ಯತ್=ಹೊರಳಾಡುವ ಯಾವ ಸ್ಥಾನವಿದೆಯೋ; **ಚ**=ಮತ್ತು; **ಅರ್ವತಃ**=ಕುದುರೆಯ; ಯತ್ **ಪಡ್ಬೀಶಮ್**=ಪಾದಬಂಧನಸ್ಥಾನವು/ ಹೆಜ್ಜೆಯ ಧೂಳಿಯ ಸ್ಥಾನವು ಯಾವುದಿದೆಯೋ; **ಚ**=ಮತ್ತು; **ಯತ್**=ಯಾವ ನೀರನ್ನು; **ಪಪೌ**=ಕುಡಿದಿದೆಯೋ; **ಚ**=ಮತ್ತು; **ಯತ್**=ಯಾವ; **ಘಾಸಿಮ್**=ಹುಲ್ಲನ್ನು; **ಜಘಾಸ**=ತಿಂದಿದೆಯೋ; **ತೇ**=ನಿನ್ನದಾದ; **ತಾ ಸರ್ವಾ ಅಪಿ**=ಅವೆಲ್ಲವೂ ಕೂಡ; **ದೇವೇಷು ಅಸ್ತು**=ದೇವತೆಗಳಲ್ಲಿಯೇ ಸಮರ್ಪಿತವಾಗಲಿ. ▲ **ತ್ವಾ**=[ಹೇ! ಅಶ್ವವೇ] ನಿನ್ನನ್ನು; **ಧೂಮಗಂಧಿಃ**=ಹೊಗೆಯಿಂದ ವಾಸನೆಯುಳ್ಳದ್ದನ್ನಾಗಿ ಮಾಡಬಹುದಾದ; **ಅಗ್ನಿಃ**=ಅಗ್ನಿಯು; **ಮಾ ಧ್ವನಯಿತ್**=ಹಾಗೆ ಮಾಡದಿರಲಿ./ಕುದಿಯುವಾಗ ಕೆಟ್ಟ ಶಬ್ದವು ಬರುವಂತೆ ಮಾಡದಿರಲಿ. **ಉಖಾ ಭ್ರಾಜಂತೀ**=ಚೆನ್ನಾಗಿ ಕಾದಿರುವ ಅಡಿಗೆಯ ಪಾತ್ರೆಯು; **ಮಾ ಅಭಿ ವಿಕ್ತ**=ನಿನ್ನನ್ನು ಸೀದು ಹೋಗುವಂತೆ ಮಾಡದಿರಲಿ; [ನೀನು] **ಜಘ್ರಿಃ**=ಸುಗಂಧಯುಕ್ತನಾಗಿ ಆಘ್ರಾಣಿಸಲು ಯೋಗ್ಯನಾಗಿ; ಭವ=ಆಗು.

---

**ಹೆಜ್ಜೆಯಿಡುವ, ವಾಸಿಸುವ, ಕುಳಿತುಕೊಳ್ಳುವ, ಹೊರಳಾಡುವ ಸ್ಥಾನಗಳೂ ಯಜಮಾನನಿಗೆ ಸಂಬಂಧಿಸಿದ ಕುದುರೆಯು ಕುಡಿದ ನೀರು, ತಿಂದಿರುವ ಹುಲ್ಲು-ಹುರುಳಿಗಳೂ ದೇವತೆಗಳಿಗೇ ಸೇರಲಿ.**

ಇಷ್ಟಂ ವೀತಮಭಿಗೂರ್ತಂ ವಷಟ್ಕೃತಂ ತಂ ದೇವಾಸಃ ಪ್ರತಿ ಗೃಭ್ಣಂತ್ಯಶ್ವಮ್ ॥
ಯದಶ್ವಾಯ ವಾಸ ಉಪಸ್ತೃಣಂತ್ಯಧೀವಾಸಂ ಯಾ ಹಿರಣ್ಯಾನ್ಯಸ್ಮೈ ।
ಸನ್ದಾನಮರ್ವಂತಂ ಪಡ್ಬೀಶಂ ಪ್ರಿಯಾ ದೇವೇಷ್ವಾಯಾಮಯಂತಿ ॥

ಇಷ್ಟಮ್ । ವೀತಮ್ । ಅಭಿಗೂರ್ತಮಿತ್ಯಭಿ–ಗೂರ್ತಮ್ । ವಷಟ್ಕೃತಮಿತಿ ವಷಟ್–ಕೃತಮ್ । ತಮ್ । ದೇವಾಸಃ । ಪ್ರತೀತಿ । ಗೃಭ್ಣಂತಿ । ಅಶ್ವಮ್ ॥ ಯತ್ । ಅಶ್ವಾಯ । ವಾಸಃ । ಉಪಸ್ತೃಣಂತೀತ್ಯುಪ–ಸ್ತೃಣಂತಿ । ಅಧೀವಾಸಮಿತ್ಯಧಿ–ವಾಸಮ್ । ಯಾ । ಹಿರಣ್ಯಾನಿ । ಅಸ್ಮೈ ॥ ಸಂದಾನಮಿತಿ ಸಮ್–ದಾನಮ್ । ಅರ್ವಂತಮ್ । ಪಡ್ಬೀಶಮ್ । ಪ್ರಿಯಾ । ದೇವೇಷು । ಏತಿ । ಯಾಮಯಂತಿ ॥

| ಮಂತ್ರ | ವಿನಿಯೋಗ |
|---|---|
| **ಯದಶ್ವಾಯ...ಯಾಮಯಂತಿ ॥** | ಅಶ್ವಸ್ತೋಮೀಯಹೋಮದ ಐದನೆಯ ಮಂತ್ರ. |

**ಇಷ್ಟಮ್**=ಪ್ರಿಯವಾಗಿರುವ; **ವೀತಮ್**=ಚೆನ್ನಾಗಿ ಬೆಂದು ಮನೋಹರನಾಗಿರುವ; **ಅಭಿಗೂರ್ತಮ್**=ದೇವಯೋಗ್ಯವಾಗಲೆಂದು ಯಜಮಾನರಿಂದ ಸಂಕಲ್ಪಿತನಾಗಿರುವ; **ವಷಟ್ಕೃತಮ್**=ವಷಟ್ಕಾರಪೂರ್ವಕವಾಗಿ ಕೊಡಲ್ಪಟ್ಟಿರುವ; **ತಮ್ ಅಶ್ವಮ್**=ಆ ಕುದುರೆಯನ್ನು; **ದೇವಾಸಃ**=ದೇವತೆಗಳು; **ಪ್ರತಿ ಗೃಭ್ಣಂತಿ**=ಸ್ವೀಕರಿಸಲಿ. 🔔 **ಯತ್**=ಯಾವ; **ವಾಸಃ**=ವಸ್ತ್ರವನ್ನು; **ಅಶ್ವಾಯ**=ಕುದುರೆಗಾಗಿ; **ಉಪಸ್ತೃಣಂತಿ**=ಕೆಳಭಾಗದಲ್ಲಿ ಹಾಸುತ್ತಾರೆಯೋ; ಯತ್=ಯಾವ; **ಅಧೀವಾಸಮ್**=ಉಪಸ್ತೃಣಂತಿ=ಬಟ್ಟೆಯನ್ನು ಕುದುರೆಯ ಮೇಲೆ ಹೊದಿಸುತ್ತಾರೆಯೋ; **ಯಾ**=ಯಾವ; **ಹಿರಣ್ಯಾನಿ**=ಹಿರಣ್ಯ–ಮಣಿ ಮುಂತಾದವುಗಳನ್ನು; **ಅಸ್ಮೈ**=ಈ ಕುದುರೆಗಾಗಿ [ಸಂಪಾದಿಸಿರುತ್ತಾರೆಯೋ] **ಅರ್ವಂತಮ್**=ಕುದುರೆಯ; **ಸಂದಾನಮ್**=ಕಟ್ಟುವ ಹಗ್ಗವು ಯಾವುದಿದೆಯೋ; **ಪಡ್ಬೀಶಮ್**=ಕಾಲುಗಳನ್ನು ಕಟ್ಟುವ ಹಗ್ಗವು ಯಾವುದಿದೆಯೋ; [ಅವೆಲ್ಲವನ್ನೂ] **ದೇವೇಷು**=ದೇವತೆಗಳಿಗೆ; **ಪ್ರಿಯಾ**=ಪ್ರಿಯವಾದವುಗಳನ್ನಾಗಿ ಮಾಡಿ; **ಆ ಯಾಮಯಂತಿ**=ಎಲ್ಲೆಡೆ ಪ್ರಸಾರಿಸಲಿ.

ಅಡಿಗೆಯನ್ನು ಮಾಡುವಾಗ ಕಟ್ಟಿಗೆಗಳ ದೋಷದಿಂದ ಹೊಗೆಯ ವಾಸನೆಯು ಒದಗಬಹುದು. ಹಾಗೆಯೇ ಕೆಟ್ಟ ಶಬ್ದವೂ ಬರಬಹುದು. ಇದಾವುದೂ ಆಗದೆ ಅಶ್ವವು ಚೆನ್ನಾಗಿ ಪಕ್ವವಾಗಿ ಸುಗಂಧವಾಗಿರಲಿ. ವಷಟ್ಕಾರಪೂರ್ವಕವಾಗಿ ಸಮರ್ಪಿಸಿದ ಕುದುರೆಯನ್ನು ದೇವತೆಗಳು ಸ್ವೀಕರಿಸಲಿ.

ಹವಿಸ್ಸಾಗುವ ಅಶ್ವದ ಕೆಳಗೆ ಮತ್ತು ಮೇಲೆ ವಸ್ತ್ರವನ್ನು ಹರಡಿರುತ್ತಾರೆ. ಆ ವಸ್ತ್ರಗಳಿಗೆ ವಾಸ, ಅಧೀವಾಸ ಎಂದು ಹೆಸರು.

**ಯತ್ತೇ ಸಾದೇ ಮಹಸಾ ಶೂಕೃತಸ್ಯ ಪಾರ್ಷ್ಣಿಯಾ ವಾ ಕಶಯಾ [(೪೪) ವಾ ತುತೋದ ।] ವಾ ತುತೋದ । ಸ್ರುಚೇವ ತಾ ಹವಿಷೋ ಅಧ್ವರೇಷು ಸರ್ವಾ ತಾ ತೇ ಬ್ರಹ್ಮಣಾ ಸೂದಯಾಮಿ ॥ ಚತುಸ್ತ್ರಿಗ್ಂಶದ್ವಾಜಿನೋ ದೇವಬಂಧೋರ್ವಙ್ಕ್ರೀರಶ್ವಸ್ಯ ಸ್ವಧಿತಿಃ ಸಮೇತಿ ।**

---

ಯತ್ । ತೇ । ಸಾದೇ । ಮಹಸಾ । ಶೂಕೃತಸ್ಯೇತಿ ಶೂ-ಕೃತಸ್ಯ । ಪಾರ್ಷ್ಣಿಯಾ । ವಾ । ಕಶಯಾ । (೪೪) । ವಾ । ತುತೋದ ॥ ಸ್ರುಚಾ । ಇವ । ತಾ । ಹವಿಷಃ । ಅಧ್ವರೇಷು । ಸರ್ವಾ । ತಾ । ತೇ । ಬ್ರಹ್ಮಣಾ । ಸೂದಯಾಮಿ ॥ ಚತುಸ್ತ್ರಿಗ್ಂಶದಿತಿ ಚತುಃ-ತ್ರಿಗ್ಂಶತ್ । ವಾಜಿನಃ । ದೇವಬಂಧೋರಿತಿ ದೇವ-ಬಂಧೋಃ । ವಙ್ಕ್ರೀಃ । ಅಶ್ವಸ್ಯ । ಸ್ವಧಿತಿರಿತಿ ಸ್ವ-ಧಿತಿಃ । ಸಮಿತಿ । ಏತಿ ॥

---

| ಮಂತ್ರ | ವಿನಿಯೋಗ |
|---|---|
| **ಯತ್ತೇ ಸಾದೇ....ಸೂದಯಾಮಿ ॥** | ಅಶ್ವಸ್ತೋಮೀಯಹೋಮದ ಆರನೆಯ ಮಂತ್ರ. |
| **ಚತುಸ್ತ್ರಿಗ್ಂಶತ್...ವಿ ಶಸ್ತ ॥** | ಅಶ್ವಸ್ತೋಮೀಯಹೋಮದ ಏಳನೆಯ ಮಂತ್ರ. |

---

▲ [ಎಲೈ! ಅಶ್ವವೇ!] **ತೇ**=ನಿನ್ನ; **ಸಾದೇ**=ಗಮನಕಾಲದಲ್ಲಿ; **ಮಹಸಾ**=ಉತ್ಸವದಿಂದ/ಗರ್ವದಿಂದ; **ಶೂಕೃತಸ್ಯ**=ಶೂಕಾರವನ್ನು ಮಾಡುತ್ತಿರುವ; [ನಿನ್ನನ್ನು] [ಅಶ್ವಾರೋಹಿಯು] **ಪಾರ್ಷ್ಣಿಯಾ ವಾ**=ಹಿಮ್ಮಡಿಯಿಂದಾಗಲೀ; **ಕಶಯಾ ವಾ**=ಚಾಟಿಯಿಂದಾಗಲೀ; **ಯತ್ ತುತೋದ**=ಹಿಂಸಿಸಿದನೆಂಬುದು ಯಾವುದುಂಟೋ; **ತೇ**=ನಿನ್ನ; **ಸರ್ವಾ ತಾ**=ಅದೆಲ್ಲವನ್ನೂ; **ಅಧ್ವರೇಷು**=ಯಾಗಗಳಲ್ಲಿ; **ಹವಿಷಃ**=ಹವಿಸ್ಸಿಗೆ ಸಂಬಂಧಿಸಿದ; **ತಾ**=ಆ ವಸ್ತುಗಳನ್ನು; **ಸ್ರುಚಾ ಇವ**=ಸ್ರುಕ್ಕಿನಿಂದ ಹೇಗೋ ಹಾಗೆ; **ಬ್ರಹ್ಮಣಾ**=ಮಂತ್ರದಿಂದ; **ಸೂದಯಾಮಿ**=ಹೋಮ ಮಾಡುತ್ತೇನೆ./ಹಿಂಸೆಯ ಪಾಪವನ್ನು ಹೋಗಲಾಡಿಸುತ್ತೇನೆ. ▲ **ವಾಜಿನಃ**=ಅನ್ನಸಾಧನವಾದ; **ದೇವಬಂಧೋಃ**=ದೇವತೆಗಳಿಗೆ ಪ್ರಿಯವಾದ/ದೇವತೆಗಳಿಗಾಗಿ ವಿಶಸನ ಮಾಡಲ್ಪಡುವ; **ಅಶ್ವಸ್ಯ**=ಕುದುರೆಯ; **ವಙ್ಕ್ರೀಃ**=ಎರಡು ಪಕ್ಕಗಳಲ್ಲಿಯೂ ಇರುವ ವಕ್ರವಾದ ಮೂಳೆಗಳು; **ಚತುಸ್ತ್ರಿಗ್ಂಶತ್**=ಒಂದೊಂದು ಕಡೆಯಲ್ಲಿ ಹದಿನೇಳರಂತೆ ಒಟ್ಟು ಮೂವತ್ತನಾಲ್ಕು ಆಗಿವೆ. **ಸ್ವಧಿತಿಃ**=[ಅವುಗಳನ್ನು] ಶಸ್ತ್ರವು; **ಸಮೇತಿ**=ಎಚ್ಚರಿಕೆಯಿಂದ ಸೇರಲಿ/ಹೊಂದಲಿ.

**ಅಚ್ಛಿದ್ರಾ ಗಾತ್ರಾ ವಯುನಾ ಕೃಣೋತ ಪರುಷ್ಪರುರನುಘುಷ್ಯಾ ವಿ ಶಸ್ತ ॥ ಏಕಸ್ತ್ವಷ್ಟುರಶ್ವಸ್ಯಾ ವಿಶಸ್ತಾ ದ್ವಾ ಯನ್ತಾರಾ ಭವತಸ್ತಥರ್ತುಃ । ಯಾ ತೇ ಗಾತ್ರಾಣಾಮೃತುಥಾ ಕೃಣೋಮಿ ತಾತಾ ಪಿಂಡಾನಾಂ ಪ್ರ ಜುಹೋಮ್ಯಗ್ನೌ ॥**

---

ಅಚ್ಛಿದ್ರಾ । ಗಾತ್ರಾ । ವಯುನಾ । ಕೃಣೋತ । ಪರುಷ್ಪರುರಿತಿ ಪರುಃ-ಪರುಃ । ಅನುಘುಷ್ಯೇತ್ಯನು-ಘುಷ್ಯ । ವೀತಿ । ಶಸ್ತ ॥ ಏಕಃ । ತ್ವಷ್ಟುಃ । ಅಶ್ವಸ್ಯ । ವಿಶಸ್ತೇತಿ ವಿ-ಶಸ್ತಾ । ದ್ವಾ । ಯನ್ತಾರಾ । ಭವತಃ । ತಥಾ । ಋತುಃ ॥ ಯಾ । ತೇ । ಗಾತ್ರಾಣಾಮ್ । ಋತುಥೇತ್ಯೃತು-ಥಾ । ಕೃಣೋಮಿ । ತಾತೇತಿ ತಾ-ತಾ । ಪಿಂಡಾನಾಮ್ । ಪ್ರೇತಿ । ಜುಹೋಮಿ । ಅಗ್ನೌ ॥

---

| ಮಂತ್ರ | ವಿನಿಯೋಗ |
|---|---|
| **ಏಕಸ್ತ್ವಷ್ಟುಃ...ಪ್ರ ಜುಹೋಮ್ಯಗ್ನೌ॥** | ಅಶ್ವಸ್ತೋಮೀಯಹೋಮದ ಎಂಟನೆಯ ಮಂತ್ರ. |

---

[ಶಮಿತೃಗಳೇ!] **ಗಾತ್ರಾ**=ಹೃದಯಾದ್ಯಂಗಗಳನ್ನು; **ಅಚ್ಛಿದ್ರಾ ವಯುನಾ**=ಎಚ್ಚರಿಕೆಯಿಂದ ಛಿನ್ನವಾಗದಂತೆ; **ಕೃಣೋತ**=ಮಾಡಿರಿ. **ಪರುಷ್ಪರುಃ**=ಗೇಣ್ಣುಗಳನ್ನು; **ಅನುಘುಷ್ಯ**=ಗಮನಿಸಿ ತಿಳಿದುಕೊಂಡು; **ವಿಶಸ್ತ**=ವಿಶಸನ ಮಾಡಿರಿ. ▲ **ತ್ವಷ್ಟುಃ**=ದೀಪ್ತಿಯುಳ್ಳ; **ಅಶ್ವಸ್ಯ**=ಯಾಗಾಶ್ವಕ್ಕೆ; **ಋತುಃ**=ಕಾಲದಲ್ಲಿ ಕಾರ್ಯ ಮಾಡುವ; **ಏಕಃ ವಿಶಸ್ತಾ**=ಒಬ್ಬ ಹಿಂಸಕನು; **ತಥಾ ದ್ವಾ**=ಹಾಗೆಯೇ ಇಬ್ಬರು; **ಯನ್ತಾರಾ**=ಕುದುರೆಯನ್ನು ಅಲುಗಾಡದಂತೆ ಹಿಡಿಯುವವರು; **ಭವತಃ**=ಇರುತ್ತಾರೆ; [ಅಶ್ವವೇ!] **ತೇ**=ನಿನ್ನ; **ಗಾತ್ರಾಣಾಮ್**=ದೇಹದ; **ಯಾ**=ಯಾವ ಯಾವ ಅಂಗಗಳನ್ನು; **ಋತುಥಾ ಕೃಣೋಮಿ**=ಆಯಾ ಕಾಲದಲ್ಲಿ ಛೇದಿಸುತ್ತೇನೆಯೋ; **ಪಿಂಡಾನಾಮ್**=ಮಾಂಸಪಿಂಡಗಳ ಮಧ್ಯದಲ್ಲಿ; **ತಾತಾ**=ಆಯಾ; ಅಂಗಾನಿ=ಅಂಗಗಳನ್ನು; **ಅಗ್ನೌ**=ಅಗ್ನಿಯಲ್ಲಿ; **ಪ್ರ ಜುಹೋಮಿ**=ಚೆನ್ನಾಗಿ ಹೋಮ ಮಾಡುತ್ತೇನೆ.

---

**ಈ ಯಾಗಾಶ್ವಕ್ಕಾಗಿ ಹಿರಣ್ಯ-ಮಣಿ ಮುಂತಾಗಿ ಸಂಪಾದಿಸಲ್ಪಟ್ಟ ಅಲಂಕಾರಗಳು, ಕುದುರೆಯನ್ನು ಕಟ್ಟುವ ಹಗ್ಗ, ಕಾಲುಗಳನ್ನು ಬಂಧಿಸುವ ಹಗ್ಗ-ಇವೆಲ್ಲವೂ ದೇವತೆಗಳಿಗೆ ಪ್ರಿಯವಾದವುಗಳಾಗಲಿ.**

**ಹೇ! ಅಶ್ವವೇ! ನೀನು ಶೀಘ್ರವಾಗಿ ಹೋಗುತ್ತಿರುವಾಗ ಶೂಕಾರ ['ಶೂ' ಎಂಬ ಧ್ವನಿ]ವನ್ನು ಮಾಡುವೆ. ಸವಾರನಾದವನು ನಿನ್ನನ್ನು ಹಿಮ್ಮಡಿಯಿಂದ ಅಥವಾ ಚಾವಟಿಯಿಂದ ಶೀಘ್ರವಾಗಿ ಹೋಗಲು ತಿವಿಯುವನು. ಅದೆಲ್ಲವನ್ನೂ ಯಾಗಗಳಲ್ಲಿ ಹವಿಸ್ಸಿಗೆ ಸಂಬಂಧಿಸಿದ ವಸ್ತುಗಳನ್ನು ಸ್ರುಕ್ಕಿನಿಂದ ಹೇಗೋ ಹಾಗೆ ಮಂತ್ರದಿಂದ ಹೋಮ ಮಾಡುವೆನು. ಹಿಂಸೆಯ ಪಾಪವನ್ನು ದೂರ ಮಾಡುವೆನು. ಈ ಮಂತ್ರದಲ್ಲಿ ಕುದುರೆಯ ಸ್ವಭಾವವನ್ನೂ ಸವಾರಿಯ ರೀತಿಯನ್ನೂ ಚೆನ್ನಾಗಿ ವಿವರಿಸಲಾಗಿದೆ.**

ಮಾ ತ್ವಾ ತಪ[ತಪತ್(೪೫)ಪ್ರಿಯ]ತ್ಪ್ರಿಯ ಆತ್ಮಾಽಪಿಯಂತಂ ಮಾ ಸ್ವಧಿತಿಸ್ತನುವ ಆ ತಿಷ್ಠಿಪತ್ತೇ । ಮಾ ತೇ ಗೃಧ್ನುರವಿಶಸ್ತಾಽತಿಹಾಯ ಛಿದ್ರಾ ಗಾತ್ರಾಣ್ಯಸಿನಾ ಮಿಥೂ ಕಃ ॥ ನ ವಾ ಉವೇತನ್ಮ್ರಿಯಸೇ ನ ರಿಷ್ಯಸಿ ದೇವಾಗ್ಂ ಇದೇಷಿ ಪಥಿಭಿಃ ಸುಗೇಭಿಃ ।

ಮಾ । ತ್ವಾ । ತಪತ್ । (೪೫) । ಪ್ರಿಯಃ । ಆತ್ಮಾ । ಅಪಿಯಂತಮಿತ್ಯಪಿ-ಯಂತಮ್ । ಮಾ । ಸ್ವಧಿತಿರಿತಿ ಸ್ವ-ಧಿತಿಃ । ತನುವಃ । ಏತಿ । ತಿಷ್ಠಿಪತ್ । ತೇ ॥ ಮಾ । ತೇ । ಗೃಧ್ನುಃ । ಅವಿಶಸ್ತೇತ್ಯವಿ-ಶಸ್ತಾ । ಅತಿಹಾಯೇತ್ಯತಿ-ಹಾಯ । ಛಿದ್ರಾ । ಗಾತ್ರಾಣಿ । ಅಸಿನಾ । ಮಿಥು । ಕಃ ॥ ನ । ವೈ । ಉ । ಏತತ್ । ಮ್ರಿಯಸೇ । ನ । ರಿಷ್ಯಸಿ । ದೇವಾನ್ । ಇತ್ । ಏಷಿ । ಪಥಿಭಿರಿತಿ ಪಥಿ-ಭಿಃ । ಸುಗೇಭಿರಿತಿ ಸು-ಗೇಭಿಃ ॥

| ಮಂತ್ರ | ವಿನಿಯೋಗ |
|---|---|
| **ಮಾ ತ್ವಾ ತಪತ್...ಮಿಥೂ ಕಃ ॥** | ಅಶ್ವಸ್ತೋಮೀಯಹೋಮದ ಒಂಬತ್ತನೆಯ ಮಂತ್ರ. |
| **ನ ವಾ ಉ...ರಾಸಭಸ್ಯ ॥** | ಅಶ್ವಸ್ತೋಮೀಯಹೋಮದ ಹತ್ತನೆಯ ಮಂತ್ರ. |

▲ [ಅಶ್ವವೇ!] **ಅಪಿಯಂತಮ್**=[ಶರೀರವನ್ನು ತ್ಯಜಿಸಿ ದೇವತೆಗಳ ಬಳಿ] ಹೋಗಲಿರುವ; **ತ್ವಾ**=ನಿನ್ನನ್ನು; **ಪ್ರಿಯಃ ಆತ್ಮಾ**=ಪ್ರೀತಿಕಾರಣವಾದ ಶರೀರವು; **ಮಾ ತಪತ್**=ಸಂತಾಪಗೊಳಿಸದಿರಲಿ [ಹಾಗೆಯೇ] **ಸ್ವಧಿತಿಃ**=ಭೇದಿಸುವ ಆಯುಧವು; **ತೇ**=ನಿನ್ನ; **ತನುವಃ**=ಅವಯವಗಳನ್ನು; **ಮಾ ಆ ತಿಷ್ಠಿಪತ್**=ಉಳಿಯುವಂತೆ ಮಾಡದಿರಲಿ; **ಅವಿಶಸ್ತಾ**=ವಿಶಸನ ಮಾಡಲು ನಿಪುಣನಲ್ಲದ; **ಗೃಧ್ನುಃ**=ಕೇವಲ ಮಾಂಸಾಭಿಲಾಷಿಯಾದ ವಿಶಸನಕರ್ತನು; **ಅತಿಹಾಯ**=[ವಿಶಸನಪ್ರಕಾರವನ್ನು] ಅತಿಕ್ರಮಿಸಿ, **ತೇ**=ನಿನ್ನ; **ಗಾತ್ರಾಣಿ**=ಅವಯವಗಳನ್ನು; **ಅಸಿನಾ**=ಶಸ್ತ್ರದಿಂದ; **ಛಿದ್ರಾ ಮಿಥು ಮಾ ಕಃ**=ಛಿನ್ನಗಳನ್ನಾಗಿ ಮಾಡದಿರಲಿ. ▲ [ಅಶ್ವವೇ!] **ಮ್ರಿಯಸೇ**=[ನೀನು] ಸಾಯುತ್ತೀಯೆ **ಏತತ್ ನ ವೈ ಉ**=ಎಂಬುದು ಇಲ್ಲ [ಶಾಸ್ತ್ರದೃಷ್ಟಿಯಿಂದ ನೀನು ಸಾಯುವುದಿಲ್ಲ] **ನ ರಿಷ್ಯಸಿ**=ಹಿಂಸಿಸಲ್ಪಡುವುದೂ ಇಲ್ಲ [ಏಕೆಂದರೆ] **ಸುಗೇಭಿಃ**=ಸುಖವಾಗಿ ಹೋಗಲು ಅನುಕೂಲವಾಗಿರುವ; **ಪಥಿಭಿಃ**=ಮಾರ್ಗಗಳಿಂದ; **ದೇವಾನ್ ಇತ್ ಏಷಿ**=ದೇವತೆಗಳನ್ನೇ ಹೊಂದುತ್ತೀಯೆ.

**ಕುದುರೆಗಳಿಗೆ ಪಕ್ಕೆಯ ಮೂಳೆಗಳು ಮೂವತ್ತನಾಲ್ಕು ಇರುತ್ತವೆ. ಮಿಕ್ಕ ಪಶುಗಳ ಪಾರ್ಶ್ವಾಸ್ಥಿಗಳು ಅಂದರೆ**

**ಹರೀ ತೇ ಯುಂಜಾ ಪೃಷತೀ ಅಭೂತಾಮುಪಾಸ್ಥಾದ್ವಾಜೀ ಧುರಿ ರಾಸಭಸ್ಯ ॥**

**ಸುಗವ್ಯಂ ನೋ ವಾಜೀ ಸ್ವಶ್ವಿಯಂ ಪುಗ್ಂಸಃ ಪುತ್ರಾಗ್ಂ ಉತ**

**ವಿಶ್ವಾ ಪುಷಗ್ಂ ರಯಿಮ್ ।**

---

ಹರೀ ಇತಿ । ತೇ । ಯುಂಜಾ । ಪೃಷತೀ ಇತಿ । ಅಭೂತಾಮ್ । ಉಪೇತಿ । ಅಸ್ಥಾತ್ । ವಾಜೀ । ಧುರಿ । ರಾಸಭಸ್ಯ ॥

ಸುಗವ್ಯಮಿತಿ ಸು–ಗವ್ಯಮ್ । ನಃ । ವಾಜೀ । ಸ್ವಶ್ವಿಯಮಿತಿ ಸು–ಅಶ್ವಿಯಮ್ । ಪುಗ್ಂಸಃ । ಪುತ್ರಾನ್ । ಉತ ।

ವಿಶ್ವಾಪುಷಮಿತಿ ವಿಶ್ವ–ಪುಷಮ್ । ರಯಿಮ್ ॥

---

| ಮಂತ್ರ | ವಿನಿಯೋಗ |
|---|---|
| **ಸುಗವ್ಯಂ...ಹವಿಷ್ಮಾನ್ ॥** | ಅಶ್ವಸ್ತೋಮೀಯಹೋಮದ ಹನ್ನೊಂದನೆಯ ಮಂತ್ರ. |

---

**ತೇ**=ನಿನಗೆ/ಇಂದ್ರತ್ವವನ್ನು ಪಡೆದವನಿಗೆ; **ಹರೀ**=ಹರಿ ಎಂಬ ಹೆಸರಿನ ಕುದುರೆಗಳು; **ಯುಂಜಾ ಅಭೂತಾಮ್**=ರಥದಲ್ಲಿ ಯುಕ್ತವಾಗುತ್ತವೆ. **ಪೃಷತೀ**=ಚಿತ್ರವರ್ಣದ ಹೆಣ್ಣು ಕುದುರೆಗಳು; ಯುಂಜಾ ಅಭೂತಾಮ್=[ಮರುದ್ರೂಪವನ್ನು ಹೊಂದಿದ ನಿನ್ನ ರಥವನ್ನು] ಎಳೆಯುತ್ತವೆ. **ರಾಸಭಸ್ಯ ಧುರಿ**=ಈಗ ಕತ್ತೆಯಂತೆ ಭಾರವನ್ನು ಹೊರುವ ಸ್ಥಿತಿಯಲ್ಲಿರುವ ನಿನಗೆ; **ವಾಜೀ ಉಪ ಅಸ್ಥಾತ್**=ಸಮರ್ಥವಾದ ದೇವಾಶ್ವವು ದೇವಲೋಕದಲ್ಲಿ ನಿನ್ನನ್ನು ಹೊರಲು ಸಿದ್ಧವಾಗಿರುತ್ತದೆ. ▲ **ವಾಜೀ**=ಈ ಯಾಗಾಶ್ವವು; **ನಃ**=ನಮಗೆ; **ಸುಗವ್ಯಮ್**=ಒಳ್ಳೆಯ ಹಸುಗಳ ಸಮೂಹವನ್ನೂ; **ಸ್ವಶ್ವಿಯಮ್**=ಒಳ್ಳೆಯ ಕುದುರೆಗಳ ಸಮೂಹವನ್ನೂ; **ಪುಗ್ಂಸಃ ಪುತ್ರಾನ್**=ಪೌರುಷವುಳ್ಳ/ಸಮರ್ಥಪುರುಷರಾದ ಪುತ್ರರನ್ನೂ; **ಉತ**= ಮತ್ತು; **ವಿಶ್ವಾಪುಷಮ್**=ಎಲ್ಲವನ್ನೂ ಪೋಷಿಸಬಲ್ಲ; **ರಯಿಮ್**=ಧನವನ್ನೂ;

---

ಪಕ್ಕೆಯ ಮೂಳೆಗಳು ಇಪ್ಪತ್ತಾರು ಮಾತ್ರ. ಹೇ! ಶಮಿತೃಗಳೇ! ನೀವು ಹೃದಯವೇ ಮೊದಲಾದ ಹವಿಸ್ಸುಗಳಲ್ಲಿ ಮೂಳೆಗಳು ಸೇರದಂತೆ ಸಾವಧಾನರಾಗಿ ವಿಶಸನ ಮಾಡಿರಿ. ಛಿನ್ನವಾಗದೆ ಇರುವಂತೆಯೂ ಎಚ್ಚರಿಕೆಯಿಂದ ವಿಶಸನವನ್ನು ಮಾಡಿರಿ.

ದೀಪ್ತಿಯುಳ್ಳ ಅಶ್ವಕ್ಕೆ ವಿಶಸನ ಮಾಡುವವನು ಒಬ್ಬನು. **'ಅಧ್ರಿಗುಶ್ಚಾಪಾಪಶ್ಚ । ಉಭೌ ದೇವಾನಾಗ್ಂ ಶಮಿತಾರೌ'** ಎಂದು ಶ್ರುತಿಯಲ್ಲಿ ಹೇಳಿದೆ. ಅಧ್ರಿಗು–ಅಪಾಪ ಎಂಬುವರು ದೇವತೆಗಳು ಮಾಡುವ ಯಾಗದಲ್ಲಿ ಶಮಿತೃಗಳು. ಅಂತೆಯೇ ಇಲ್ಲಿಯೂ **'ದ್ವಾ ಯಂತಾರಾ'** ಎಂದು ಹೇಳಿದೆ. ಹೇ! ಅಶ್ವವೇ! ನಿನ್ನ ಯಾವ ಅಂಗಗಳನ್ನು ಛೇದಿಸುವೆನೋ ಆಯಾ ಅಂಗಗಳನ್ನು ಅಗ್ನಿಯಲ್ಲಿ ಚೆನ್ನಾಗಿ ಹೋಮ ಮಾಡುತ್ತೇನೆ.

ದೇವತೆಗಳನ್ನು ಹೊಂದಲು ಹೋಗುವ ಅಶ್ವವೇ! ನಿನ್ನ ಆತ್ಮವೂ ಸಂತಾಪಗೊಳ್ಳದಿರಲಿ. ಸ್ವಧಿತಿಯೂ ನಿನ್ನ

## ಅನಾಗಾಸ್ತ್ವಂ ನೋ ಅದಿತಿಃ ಕೃಣೋತು ಕ್ಷತ್ರಂ ನೋ ಅಶ್ವೋ ವನತಾಗ್ಂ ಹವಿಷ್ಮಾನ್ ॥ ೪೬-9 ॥

[ಘಾಸಿಂ ಕಶಯಾ ತಪದ್ರಯಿಂ ನವ ಚ ॥]

ಅನಾಗಾಸ್ತ್ವಮಿತ್ಯನಾಗಾಃ-ತ್ವಮ್ । ನಃ । ಅದಿತಿಃ । ಕೃಣೋತು । ಕ್ಷತ್ರಮ್ । ನಃ । ಅಶ್ವಃ । ವನತಾಮ್ । ಹವಿಷ್ಮಾನ್ ॥ (೪೬) ॥

**ಕೃಣೋತು**=ಉಂಟುಮಾಡಲಿ; **ಅದಿತಿಃ**=ಈ ಭೂಮಿಯು; **ನಃ**=ನಮಗೆ; **ಅನಾಗಾಸ್ತ್ವಮ್**= ಅಪರಾಧಿಗಳಾಗದಿರುವಿಕೆಯನ್ನು; **ಕೃಣೋತು**=ಉಂಟುಮಾಡಲಿ; **ಹವಿಷ್ಮಾನ್**=ಯಾಗದ ಹವಿಸ್ಸಾಗಿರುವ; **ಅಶ್ವಃ**= ಈ ಯಾಗಾಶ್ವವು; **ನಃ**=ನಮಗೆ; **ಕ್ಷತ್ರಮ್**=ಬಲವನ್ನು; **ವನತಾಮ್**=ಕರುಣಿಸಲಿ.

ಅವಯವಗಳನ್ನು ಸಿಕ್ಕಿದಂತೆ ಕತ್ತರಿಸದಿರಲಿ. ಯಾವ ಅವಯವವನ್ನೂ ಬಿಟ್ಟು ಬಿಡದಿರಲಿ. ವಿಶಸನವನ್ನು ತಿಳಿಯದ ಕೇವಲ ಮಾಂಸಾಪೇಕ್ಷಿಯಾದ ವಿಶಸನ ಮಾಡುವವನು ಕತ್ತಿಯಿಂದ ವಿಶಸನಕ್ರಮವನ್ನು ಮೀರಿ ನಿನ್ನ ಅಂಗಗಳನ್ನು ಕತ್ತರಿಸದಿರಲಿ.

ಹೇ! ಅಶ್ವವೇ! ಶಾಸ್ತ್ರವನ್ನು ತಿಳಿಯದ ಲೌಕಿಕರ ದೃಷ್ಟಿಯಿಂದ ನೀನು ಸತ್ತಂತೆ ಕಂಡರೂ ಶಾಸ್ತ್ರದೃಷ್ಟಿಯಿಂದ ನೀನು ಸಾಯುವುದಿಲ್ಲ. ನೀನು ದೇವತೆಗಳನ್ನು ಸೇರುವೆ. ಇಂದ್ರ-ಮರುತ್ತುಗಳ ರೂಪವನ್ನು ಹೊಂದುವ ನಿನ್ನನ್ನು ಅಶ್ವಗಳು ಪರಿಚರ್ಯೆ ಮಾಡುತ್ತವೆ. ಈಗ ಕತ್ತೆಯಂತೆ ಭಾರವನ್ನು ಹೊರುತ್ತಿರುವ ನಿನ್ನನ್ನು ದೇವಾಶ್ವವು ಹೊರುತ್ತದೆ. ಅಂತಹ ಉತ್ತಮಸ್ಥಿತಿಯು ಪ್ರಾಪ್ತವಾಗುತ್ತದೆ. **ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ** ಎಂಬ ವಚನದಂತೆ ಶಾಸ್ತ್ರಸಿದ್ಧವಾದ ಉತ್ತಮಗತಿಯು ಯಾಗಾಶ್ವಕ್ಕೆ ಪ್ರಾಪ್ತವಾಗುತ್ತದೆ ಎಂದು ಅಭಿಪ್ರಾಯ.

ನಮಗೆ ಈ ಅಶ್ವಯಾಗದಿಂದ ಗೋಸಂಪತ್ತಿಯೂ, ಅಶ್ವಸಂಪತ್ತಿಯೂ, ಪುತ್ರಸಂಪತ್ತಿಯೂ ಮತ್ತು ಧನಸಂಪತ್ತಿಯೂ ಲಭಿಸಲಿ. ಭೂಮಿಯು ನಾವು ಅಪರಾಧಿಗಳಾಗದಂತೆ ಅನುಗ್ರಹ ಮಾಡಲಿ. ಯಾಗಾಶ್ವವು ಯಾಗದ ಹವಿಸ್ಸಾಗಿ ದೇವತೆಗಳ ಅನುಗ್ರಹದಿಂದ ನಾವು ಬಲಸಂಪತ್ತಿಯನ್ನು ಹೊಂದುವಂತೆ ಮಾಡಲಿ.

ಈ ಮೂರು ಅನುವಾಕಗಳಲ್ಲಿ ಮೂವತ್ತೈದು ಅಶ್ವಸ್ತೋಮೀಯಮಂತ್ರಗಳು ಉಕ್ತವಾಗಿವೆ. '**ಕ್ರಮೈರತ್ಯಕ್ರಮೀತ್**' ಎಂಬ ಮತ್ತೊಂದು ಮಂತ್ರವು ಐದನೆಯ ಕಾಂಡದಲ್ಲಿದೆ.

### ವಿನಿಯೋಗಸಂಗ್ರಹ

ಪಂಚತ್ರಿಂಶದ್ಯದಕ್ರಂದೋಽನುವಾಕೇಷು ತ್ರಿಷು ಶ್ರುತಾಃ ।
ಅಶ್ವಸ್ತೋಮೀಯಹೋಮಾಸ್ತ್ಯೈರಿತಿ ಷಷ್ಠಸಮೀರಿತಾಃ ॥

7, 8 ಮತ್ತು 9ನೆಯ ಅನುವಾಕಗಳ ಮಂತ್ರಸಂಖ್ಯೆ-35

## ಅನುವಾಕದ ವಿಶೇಷವಿಷಯಗಳು.

### ಅ) ಮೀಮಾಂಸಾ.

### ೧) ಅಧ್ರಿಗುಪ್ರೈಷದಲ್ಲಿ ಮಂತ್ರವಿಕಲ್ಪವಿದೆಯೇ? [ಜೈ. ಸೂ. 9.4]

ಅಶ್ವಮೇಧಯಾಗದಲ್ಲಿ **'ಅಶ್ವಸ್ತೂಪರೋ ಗೋಮೃಗಸ್ತೇ ಪ್ರಾಜಾಪತ್ಯಾಃ'** [ತೈ. ಸಂ. 5.5.23] ಎಂದು ಮೂರು ಸವನೀಯಪಶುಗಳು ವಿಹಿತವಾಗಿವೆ. ಅವುಗಳಲ್ಲಿ ಕುದುರೆಯ ಪಾರ್ಶ್ವಾಸ್ಥಿಗಳು ಮೂವತ್ತನಾಲ್ಕು, ಉಳಿದ ಪಶುಗಳಿಗೆ ಇಪ್ಪತ್ತಾರು.

ಇಲ್ಲಿ ಅಧ್ರಿಗುಪ್ರೈಷದಲ್ಲಿ ವಿಶೇಷವು ಉಕ್ತವಾಗಿದೆ. **'ನ ಚತುಸ್ತ್ರಿಂಶದಿತಿ ಬ್ರೂಯಾತ್, ಷಡ್ವಿಂಶತಿರಿತ್ಯೇವ ಬ್ರೂಯಾತ್ ।'** ಪ್ರೈಷದಲ್ಲಿ **'ಚತುಸ್ತ್ರಿಂಶತ್'** ಎಂಬ ಪದವನ್ನು ಹೇಳಬಾರದು. **'ಷಡ್ವಿಂಶತಿಃ'** ಎಂದೇ ಹೇಳಬೇಕು ಎಂದು ಅದರ ಅರ್ಥ. ಮೊದಲನೆಯ ವಾಕ್ಯದಿಂದ ನಿಷೇಧವೂ, ಎರಡನೆಯ ವಾಕ್ಯದಿಂದ ವಿಧಿಯ ಅನುವಾದವೂ ತೋರುತ್ತದೆ. ಹೀಗಾಗಿ **'ಚತುಸ್ತ್ರಿಂಶದ್ವಾಜಿನೋ ದೇವಬಂಧೋಃ...'** ಎಂಬ ಋಕ್ಕಿನ ನಿಷೇಧವು ತೋರುತ್ತದೆ. ಯಾವ ರೀತಿ **'ನ ಗಿರಾಗಿರೇತಿ ಬ್ರೂಯಾತ್ ಐರಂ ಕೃತ್ವೋದ್ಗೇಯಮ್'** ಎಂಬಲ್ಲಿ **'ಗಿರಾ'** ಎಂಬ ಪದವನ್ನು ಗಾನದಲ್ಲಿ ನಿಷೇಧಿಸಿ, **'ಇರಾ'** ಪದವನ್ನು ಹೇಳಿರುವಾಗ ನಿಷಿದ್ಧವಾದ **'ಗಿರಾ'** ಪದವು ನಿತ್ಯವಾಗಿ ನಿವೃತ್ತವಾಗುವುದೋ ಹಾಗೆಯೇ **'ಚತುಸ್ತ್ರಿಂಶತ್'** ಎಂಬ ಪದದ ಮಂತ್ರವನ್ನು ನಿಷೇಧಿಸಿ **'ಷಡ್ವಿಂಶತಿಃ'** ಎಂಬ ಪದವನ್ನು ವಿಧಿಸಿರುವುದರಿಂದ **'ಚತುಸ್ತ್ರಿಂಶತ್'** ಪದದಿಂದ ಕೂಡಿರುವ ಮಂತ್ರವು ನಿತ್ಯವಾಗಿ ನಿವೃತ್ತವಾಗುತ್ತದೆ. ಹೀಗಾಗಿ **'ನ ಚತುಸ್ತ್ರಿಂಶದಿತಿ ಬ್ರೂಯಾತ್'** ಎಂಬ ನಿಷೇಧವೂ ನಿತ್ಯವಾಗುತ್ತದೆ ಎಂಬುದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ ಸಿದ್ಧಾಂತವು ಹೀಗಿದೆ:– ಅಧ್ರಿಗುಪ್ರೈಷದಲ್ಲಿ **'ಷಡ್ವಿಂಶತಿರಸ್ಯ ವಂಕ್ರಯಃ'** ಎಂಬ ವಾಕ್ಯವಿದೆ. ಅತಿದೇಶದಿಂದ ಆ ವಾಕ್ಯವು ಇಲ್ಲಿಯೂ ಬರುತ್ತದೆ. ಷಡ್ವಿಂಶತಿರಿತ್ಯೇವ ಎಂಬಲ್ಲಿ **'ಏವ'** ಕಾರದಿಂದ ಆ ವಾಕ್ಯದಲ್ಲಿ ವಿಧಿಯು ಬಾಧಿತವಾಗುತ್ತದೆ. ಅಧ್ರಿಗುಪ್ರೈಷದಲ್ಲಿ **'ಷಡ್ವಿಂಶತಿರಸ್ಯ'** ಎಂಬ ವಚನವು ಪ್ರಕೃತಿಯಿಂದಲೇ ಪ್ರಾಪ್ತವಾಗುತ್ತದೆ. ಮತ್ತೆ ಅದನ್ನು ವಿಧಿಸಬೇಕಾಗಿಲ್ಲ. ಪ್ರಕೃತಿ ಪ್ರಾಪ್ತವಾದ **'ಷಡ್ವಿಂಶತಿಃ'** ಎಂಬುದಕ್ಕೆ **'ಚತುಸ್ತ್ರಿಗ್ಂಶದ್ವಾಜಿನಃ'** ಎಂಬುದು ಅಪವಾದವಾಗಿ ಒದಗುತ್ತಿರ ಲಾಗಿ **'ನ ಚತುಸ್ತ್ರಿಗ್ಂಶತ್ ಇತಿ'** ಎಂದು ಆ ಅಪವಾದವನ್ನು ನಿರಾಕರಿಸಿ, ಪ್ರಕೃತಿಪ್ರಾಪ್ತವಾದ **'ಷಡ್ವಿಂಶತಿಃ'** ಎಂಬುದೇ ಇದೆ ಎಂಬುದನ್ನು ಸೂಚಿಸುವುದಕ್ಕಾಗಿ **'ಏವ'** ಎಂಬುದು ಪ್ರವೃತ್ತವಾಗಿದೆ.

ಗಿರಾದೃಷ್ಟಾಂತವು ವಿಷಮವಾಗಿದೆ. ಅಲ್ಲಿ **'ಇರಾ'** ಪದವು ಬೇರೆ ಯಾವುದರಿಂದಲೂ ಪ್ರಾಪ್ತವಾಗಿರುವುದಿಲ್ಲ. ನೂತನವಾಗಿ ಇರಾ ಪದವನ್ನು ವಿಧಾನ ಮಾಡಿರುವುದರಿಂದ ಗಾನದಲ್ಲಿ **ಗಿರಾ** ಪದಕ್ಕೆ ನಿಷೇಧವಿರುತ್ತದೆ. ಈ ನಿಷೇಧವೇ **'ನ ಗಿರಾ ಗಿರಾ'** ಎಂದು ಹೇಳಲ್ಪಟ್ಟಿದೆ. ದೃಷ್ಟಾಂತದಲ್ಲಿ ನಿಷೇಧಾನುವಾದ. ದಾರ್ಷ್ಟಾಂತಿಕವಾದ **ನ ಚತುಸ್ತ್ರಿಂಶತ್** ಎಂಬಲ್ಲಿ ವಿಧಿಯ ಅನುವಾದ– ಹೀಗೆ ಭೇದವಿದೆ. ಅಲ್ಲದೆ 'ಚತುಸ್ತ್ರಿಂಶತ್' ಎಂಬುದು ಮಂತ್ರವಾಕ್ಯವೇ ಹೊರತು ವಿಧಾಯಕವಲ್ಲ. **'ಪ್ರಾಪ್ತಸ್ಯೈವ ಪ್ರತಿಷೇಧಃ'**–ವಚನದಿಂದ ಪ್ರಾಪ್ತವಾದರೆ ಮಾತ್ರ ನಿಷೇಧವನ್ನು ಹೇಳಬೇಕು. ಹೀಗಾಗಿ ವಿಧಿಯನ್ನು ಕಲ್ಪಿಸ

ಬೇಕಾಗುತ್ತದೆ. ಇದರಿಂದ ಎರಡೂ ಸಮಬಲವಾದುದರಿಂದ 'ಸಮಬಲಯೋರ್ವಿಕಲ್ಪಃ' ಎಂಬ ನ್ಯಾಯವನ್ನು ಅನುಸರಿಸಿ, ಅಧ್ರಿಗುಪ್ರೈಷದಲ್ಲಿ 'ಷಡ್ವಿಗ್‌ಂಶತಿಃ' 'ಚತುಸ್ತ್ರಿಗ್‌ಂಶತ್'-ಇವುಗಳಿಗೆ ವಿಕಲ್ಪ. 'ಷಡ್ವಿಗ್‌ಂಶತಿರಸ್ಯ ವಂಕ್ರಯಃ' 'ಚತುಸ್ತ್ರಿಗ್‌ಂಶದಸ್ಯ ವಂಕ್ರಯಃ' ಎಂದು ಪ್ರೈಷವಾಕ್ಯವಾಗುತ್ತದೆ.

ಇದು ಇಲ್ಲಿನ ಸಿದ್ಧಾಂತ.

---

ಅಶ್ಮನ್ ಯ ಇಮೋದೇನಮಾಶುಃ ಪ್ರಾಚೀಂ ಜೀಮೂತಸ್ಯ ಯದಕ್ರಂದೋ ಮಾ ನೋ ಮಿತ್ರೋ ಯೇ ವಾಜಿನಂ ನವ ॥ ೯ ॥

ಅಶ್ಮನ್ನನೋಯುಜಂ ಪ್ರಾಚೀಮನು ಶರ್ಮ ಯಚ್ಛತು ತೇಷಾಮಭಿಗೂರ್ತಿಷ್ಷಟ್ಚತ್ವಾರಿಗ್‌ಂಶತ್ ॥ ೪೬ ॥

॥ ಅಶ್ಮನ್, ಹವಿಷ್ಮಾನ್ ॥

ಹರಿಃ ಓಮ್

॥ ಶ್ರೀಕೃಷ್ಣಾರ್ಪಣಮಸ್ತು ॥

ಇತಿ ಚತುರ್ಥಕಾಂಡೇ ಷಷ್ಠಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಸಪ್ತಮಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

**ಅಗ್ನಾವಿಷ್ಣೂ ಸಜೋಷಸೇಮಾ ವರ್ಧಂತು ವಾಂ ಗಿರಃ ।**

---

ಅಗ್ನಾವಿಷ್ಣೂ ಇತ್ಯಗ್ನಾ–ವಿಷ್ಣೂ । ಸಜೋಷಸೇತಿ ಸ–ಜೋಷಸಾ । ಇಮಾಃ । ವರ್ಧಂತು । ವಾಮ್ । ಗಿರಃ ॥

---

ಹಿಂದಿನ ಆರನೆಯ ಪ್ರಶ್ನೆಯಲ್ಲಿ ಪರಿಷೇಚನಮುಖ್ಯವಾದ ಸಂಸ್ಕಾರಗಳು ಹೇಳಲ್ಪಟ್ಟಿವೆ. ಈ ಏಳನೆಯ ಪ್ರಶ್ನೆಯಲ್ಲಿ ವಸೋರ್ಧಾರೆಯೇ ಮುಂತಾದ ಉಳಿದ ಮಂತ್ರಗಳು ಹೇಳಲ್ಪಟ್ಟಿವೆ.

**ಕಲ್ಪಃ:–ಅಗ್ನಾವಿಷ್ಣೂ ಸಜೋಷಸಾ ಇತಿ ಚತುರ್ಗೃಹೀತಂ ಹುತ್ವಾ, ಔದುಂಬರೀಂ ಸ್ರುಚಂ ವ್ಯಾಮ ಮಾತ್ರೀಂ ಮೃದಾ ಪ್ರದಿಗ್ಧಾಂ ಪಶ್ಚಾದಾಸೇಚನವತೀಂ ಘೃತಸ್ಯ ಪೂರಯಿತ್ವಾ ವಾಜಶ್ಚ ಮೇ ಪ್ರಸವಶ್ಚ ಮೇ ಇತಿ ಸಂತತಾಂ ವಸೋರ್ಧಾರಾಂ ಜುಹೋತಿ ಆ ಮಂತ್ರಸಮಾಪನಾತ್** [ಆಪ. ಶ್ರೌ. ಸೂ. 17.17.8]

**'ಅಗ್ನಾವಿಷ್ಣೂ...ಆಗತಮ್'** ಎಂಬ ಮಂತ್ರದಿಂದ ಚತುರ್ಗೃಹೀತಾಜ್ಯವನ್ನು [ನಾಲ್ಕು ಬಾರಿ ತುಂಬಿಕೊಂಡಿರುವ ಆಜ್ಯ]ಹವನ ಮಾಡಿ, ಔದುಂಬರವೃಕ್ಷದಿಂದ ಮಾಡಿರುವ ಒಂದು ಮಾರು ಉದ್ದದ, ತುದಿಯಲ್ಲಿ ಆಜ್ಯವನ್ನು ಹವನ ಮಾಡಲು ಅನುಕೂಲವಿರುವ, ಮಣ್ಣಿನಿಂದ ಲಿಪ್ತವಾಗಿರುವ ಸ್ರುಚವನ್ನು ಆಜ್ಯದಿಂದ ತುಂಬಿಕೊಂಡು **'ವಾಜಶ್ಚ ಮೇ'** ಎಂದು ಆರಂಭಗೊಳ್ಳುವ ಹನ್ನೊಂದು ಅನುವಾಕಗಳಿಂದ ಸತತವಾಗಿ ವಸೋರ್ಧಾರಾಹೋಮವನ್ನು ಮಂತ್ರವು ಸಮಾಪ್ತಿಯಾಗುವವರೆಗೂ ಅನುಷ್ಠಿಸಬೇಕು. ಈ ವಸೋರ್ಧಾರಾ ಹೋಮವನ್ನು ಅವಿಚ್ಛಿನ್ನವಾಗಿ ಮಾಡಬೇಕು.

ಇಲ್ಲಿ **'ವಾಜಶ್ಚ ಮೇ'** ಎಂದು ಆರಂಭಗೊಳ್ಳುವ **'ಅಧಿಪತಿಶ್ಚ'** ಎಂದು ಮುಕ್ತಾಯವಾಗುವ ಹನ್ನೊಂದು ಅನುವಾಕಗಳನ್ನೊಳಗೊಂಡ ಒಂದು ಮಂತ್ರವಿದೆ. ಇದು ಒಂದೇ ಮಂತ್ರವಾಗಿದ್ದರೂ ಅನುವಾಕಗಳು ಭಿನ್ನವಾಗಿರುವುದು ಅಯಜ್ಞಸಂಯುಕ್ತಕಲ್ಪದಲ್ಲಿ ಬೇರೆಯ ಕರ್ಮಗಳಲ್ಲಿ ಮಂತ್ರಭೇದವನ್ನು ತಿಳಿಸುವುದಕ್ಕಾಗಿದೆ.

---

| ಮಂತ್ರ | ವಿನಿಯೋಗ |
|---|---|
| **ಅಗ್ನಾವಿಷ್ಣೂ...ಆ ಗತಮ್** ॥ | ಚತುರ್ಗೃಹೀತಾಜ್ಯದ ಹವನಕ್ಕಾಗಿ. |

---

▲ **ಅಗ್ನಾವಿಷ್ಣೂ**=ಹೇ! ಅಗ್ನಾವಿಷ್ಣು ದೇವತೆಗಳೇ! **ಸಜೋಷಸಾ**=ಸಮಾನಪ್ರೀತಿಯುಳ್ಳವರಾಗಿ [ಆಗಿರಿ]. **ಇಮಾಃ ಗಿರಃ**=[ನಮ್ಮ] ಸ್ತುತಿರೂಪವಾದ ಈ ವಚನಗಳು; **ವಾಮ್**=ನಿಮಗೆ [ಸಂಬಂಧಿಸಿದ] **ವರ್ಧಂತು** =[ನಿಮ್ಮನ್ನು] ಸಂತೋಷದಿಂದ ವೃದ್ಧಿಗೊಳಿಸಲಿ.

**ದ್ಯುಮ್ನೈರ್ವಾಜೇಭಿರಾ ಗತಮ್ ॥ ವಾಜಶ್ಚ ಮೇ ಪ್ರಸವಶ್ಚ ಮೇ ಪ್ರಯತಿಶ್ಚ ಮೇ ಪ್ರಸಿತಿಶ್ಚ ಮೇ ಧೀತಿಶ್ಚ ಮೇ ಕ್ರತುಶ್ಚ ಮೇ ಸ್ವರಶ್ಚ ಮೇ ಶ್ಲೋಕಶ್ಚ ಮೇ ಶ್ರಾವಶ್ಚ ಮೇ ಶ್ರುತಿಶ್ಚ ಮೇ ಜ್ಯೋತಿಶ್ಚ ಮೇ ಸುವಶ್ಚ ಮೇ**

---

ದ್ಯುಮ್ನೈಃ । ವಾಜೇಭಿಃ । ಏತಿ । ಗತಮ್ ॥ ವಾಜಃ । ಚ । ಮೇ । ಪ್ರಸವ ಇತಿ ಪ್ರ-ಸವಃ । ಚ । ಮೇ । ಪ್ರಯತಿರಿತಿ ಪ್ರ-ಯತಿಃ । ಚ । ಮೇ । ಪ್ರಸಿತಿರಿತಿ ಪ್ರ-ಸಿತಿಃ । ಚ । ಮೇ । ಧೀತಿಃ । ಚ । ಮೇ । ಕ್ರತುಃ । ಚ । ಮೇ । ಸ್ವರಃ । ಚ । ಮೇ । ಶ್ಲೋಕಃ । ಚ । ಮೇ । ಶ್ರಾವಃ । ಚ । ಮೇ । ಶ್ರುತಿಃ । ಚ । ಮೇ । ಜ್ಯೋತಿಃ । ಚ । ಮೇ । ಸುವಃ । ಚ । ಮೇ ।

---

| ಮಂತ್ರ | ವಿನಿಯೋಗ |
| --- | --- |
| **ವಾಜಶ್ಚ ಮೇ...ಶರೀರಾಣಿ ಚ ಮೇ ॥** | ವಸೋರ್ಧಾರಾಹೋಮಕ್ಕಾಗಿ. |

---

[ನೀವು] **ದ್ಯುಮ್ನೈಃ**=ಧನಗಳಿಂದಲೂ; **ವಾಜೇಭಿಃ**=ಅನ್ನಗಳಿಂದಲೂ [ಕೂಡಿ] **ಆ ಗತಮ್**=ನಮ್ಮ ಬಳಿಗೆ ಆಗಮಿಸಿರಿ. 🔔 **ಮೇ**=ನನಗೆ; **ವಾಜಃ ಚ**=ಅನ್ನವು; *ಕಲ್ಪತಾಮ್=ಒದಗಲಿ.* **ಪ್ರಸವಃ ಚ**=[ಅನ್ನದ ವಿಷಯದ] ಅನುಮತಿಯು [ದೀಯತಾಮ್=ಕೊಡಲ್ಪಡಲಿ. ಭುಜ್ಯತಾಮ್=ಸೇವಿಸಲ್ಪಡಲಿ] **ಮೇ**=ನನಗೆ [ಒದಗಲಿ] **ಪ್ರಯತಿಃ ಚ ಮೇ**=ಶುದ್ಧಿಯೂ ನನಗೆ ಒದಗಲಿ; **ಪ್ರಸಿತಿಃ ಚ ಮೇ**=ಅನ್ನದ ವಿಷಯದಲ್ಲಿ ಔತ್ಸುಕ್ಯರೂಪವಾದ ಬಂಧನವು ನನಗೆ ಉಂಟಾಗಲಿ; **ಧೀತಿಃ ಚ ಮೇ**=ಅನ್ನಧಾರಣವೂ ನನಗೆ ಒದಗಲಿ; **ಕ್ರತುಃ ಚ ಮೇ**=ಅನ್ನಕ್ಕೆ ಕಾರಣವಾದ ಯಜ್ಞವೂ ನನಗೆ ಪ್ರಾಪ್ತವಾಗಲಿ; **ಸ್ವರಃ ಚ ಮೇ**=ಮಂತ್ರದಲ್ಲಿರುವ ಉದಾತ್ತಾದಿಧ್ವನಿರೂಪವಾದ ಸ್ವರವೂ ನನಗೆ ಒದಗಲಿ; **ಶ್ಲೋಕಃ ಚ ಮೇ**=ದೇವತಾದಿಸ್ತುತಿಯೂ ನನಗೆ ಒದಗಿಬರಲಿ; **ಶ್ರಾವಃ ಚ ಮೇ**=ಕೇಳಿಸುವಂತೆ ಮಾಡುವ ಸಾಮರ್ಥ್ಯವೂ ನನಗೆ ಉಂಟಾಗಲಿ; **ಶ್ರುತಿಃ ಚ ಮೇ**=ಕೇಳುವ ಶಕ್ತಿಯೂ ನನಗೆ ಇರಲಿ; **ಜ್ಯೋತಿಃ ಚ ಮೇ**=ಪ್ರಕಾಶವೂ/ಜ್ಞಾನವೂ ನನಗೆ ಉಂಟಾಗಲಿ; **ಸುವಃ ಚ ಮೇ**=ಸ್ವರ್ಗವೂ ನನಗೆ ಒದಗಲಿ.

---

* ಹತ್ತನೆಯ ಅನುವಾಕವಾದ **'ಗರ್ಭಾಶ್ಚ ಮೇ'** ಎಂಬಲ್ಲಿ **'ಆಯುರ್ಯಜ್ಞೇನ ಕಲ್ಪತಾಮ್'** ಎಂದು ಶ್ರುತಿಪಠಿತವಾಗಿದೆ. ಅಲ್ಲಿರುವ ಒದಗಲಿ ಎಂಬ ಅರ್ಥವನ್ನು ಕೊಡುವ **'ಕಲ್ಪತಾಮ್'** ಎಂಬ ಪದವು ಎಲ್ಲ ಕಡೆಯೂ ಅನ್ವಯಿಸುವುದು. **ವಾಜಶ್ಚ** ಮುಂತಾದ ಶಬ್ದಗಳಲ್ಲಿರುವ 'ಚ' ಕಾರವು ಮುಂದೆ ಹೇಳುವ ದ್ರವ್ಯಗಳೊಡನೆ ಸಮುಚ್ಚಯವನ್ನು ತಿಳಿಸುತ್ತದೆ.

ಪ್ರಾಣಶ್ಚ ಮೇಽಪಾನ [ಮೇಽಪಾನಃ(೧)ಚ ಮೇ] ಶ್ಚ ಮೇ ವ್ಯಾನಶ್ಚ ಮೇಽಸುಶ್ಚ ಮೇ ಚಿತ್ತಂ ಚ ಮ ಆಧೀತಂ ಚ ಮೇ ವಾಕ್ಚ ಮೇ ಮನಶ್ಚ ಮೇ ಚಕ್ಷುಶ್ಚ ಮೇ ಶ್ರೋತ್ರಂ ಚ ಮೇ ದಕ್ಷಶ್ಚ ಮೇ ಬಲಂ ಚ ಮ ಓಜಶ್ಚ ಮೇ ಸಹಶ್ಚ ಮ ಆಯುಶ್ಚ ಮೇ

---

ಪ್ರಾಣ ಇತಿ ಪ್ರ-ಅನಃ । ಚ । ಮೇ । ಅಪಾನ ಇತ್ಯಪ-ಅನಃ । (೧) । ಚ । ಮೇ । ವ್ಯಾನ ಇತಿ ವಿ-ಅನಃ । ಚ । ಮೇ । ಅಸುಃ । ಚ । ಮೇ । ಚಿತ್ತಮ್ । ಚ । ಮೇ । ಆಧೀತಮಿತ್ಯಾ-ಧೀತಮ್ । ಚ । ಮೇ । ವಾಕ್ । ಚ । ಮೇ । ಮನಃ । ಚ । ಮೇ । ಚಕ್ಷುಃ । ಚ । ಮೇ । ಶ್ರೋತ್ರಮ್ । ಚ । ಮೇ । ದಕ್ಷಃ । ಚ । ಮೇ । ಬಲಮ್ । ಚ । ಮೇ । ಓಜಃ । ಚ । ಮೇ । ಸಹಃ । ಚ । ಮೇ । ಆಯುಃ । ಚ । ಮೇ ।

---

***ಪ್ರಾಣಃ ಚ ಮೇ**=ಹೃದಯಪ್ರದೇಶದಲ್ಲಿರುವ ವಾಯುರೂಪನಾದ ಪ್ರಾಣವಾಯುವು ನನಗೆ ಅನುಕೂಲ ವಾಗಿರಲಿ; **ಅಪಾನಃ ಚ ಮೇ**=ಗುದಪ್ರದೇಶದಲ್ಲಿರುವ ಅಪಾನವಾಯುವೃತ್ತಿವಿಶೇಷವೂ ನನಗೆ ಅನುಕೂಲವಾಗಿರಲಿ; **ವ್ಯಾನಃ ಚ ಮೇ**=ಶರೀರದ ಸರ್ವಭಾಗದಲ್ಲಿರುವ ವ್ಯಾನವಾಯುವೃತ್ತಿವಿಶೇಷವು ನನಗೆ ಸುಖವಾಗಿರಲಿ; **ಅಸುಃ ಚ ಮೇ**=ಆಯಾ ವೃತ್ತಿವಿಶೇಷವುಳ್ಳ ವಾಯುವೂ ನನಗೆ ಅನುಕೂಲವಾಗಿ ಒದಗಲಿ; **ಚಿತ್ತಮ್ ಚ ಮೇ**=ಮನೋಜನ್ಯವಾದ ಜ್ಞಾನವೂ ನನಗೆ ಉಂಟಾಗಲಿ; **ಆಧೀತಮ್ ಚ ಮೇ**=ಸರ್ವದಾ ಆ ಜ್ಞಾನವಿಷಯವಾದ ದ್ರವ್ಯವೂ ನನಗೆ ಲಭಿಸಲಿ. **ವಾಕ್ ಚ ಮೇ**= ಮಾತೂ ನನಗೆ ಒಳ್ಳೆಯದಾಗಿ ಲಭಿಸಲಿ. **ಮನಃ ಚ ಮೇ**=ಒಳ್ಳೆಯ ಮನಸ್ಸು ನನಗೆ ಉಂಟಾಗಲಿ. **ಚಕ್ಷುಃ ಚ ಮೇ**= ಪ್ರಕಾಶಯುಕ್ತವಾದ, ರೋಗರಹಿತವಾದ ಕಣ್ಣು ನನಗೆ ಲಭಿಸಲಿ. **ಶ್ರೋತ್ರಮ್ ಚ ಮೇ**=ಕೇಳಲು ಸಮರ್ಥ ವಾದ ಕಿವಿಯೂ ನನಗೆ ಲಭಿಸಲಿ. **ದಕ್ಷಃ ಚ ಮೇ**=ಜ್ಞಾನೇಂದ್ರಿಯಗತವಾದ ಕೌಶಲ್ಯವೂ ನನಗೆ ಉಂಟಾ ಗಲಿ. **ಬಲಮ್ ಚ ಮೇ**=ಕರ್ಮೇಂದ್ರಿಯಗತವಾದ ಸಾಮರ್ಥ್ಯವೂ ನನಗೆ ಉಂಟಾಗಲಿ; **ಓಜಃ ಚ ಮೇ**= ಬಲಕ್ಕೆ ಕಾರಣವಾದ ಅಷ್ಟಮಧಾತುವೂ ನನಗೆ ಪ್ರಾಪ್ತವಾಗಲಿ; **ಸಹಃ ಚ ಮೇ**=ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವೂ/ಶತ್ರುಗಳನ್ನು ಸಹಿಸುವ ಸಾಮರ್ಥ್ಯವೂ ನನಗೆ ಪ್ರಾಪ್ತವಾಗಲಿ; **ಆಯುಃ ಚ ಮೇ**= ನೂರಿಪ್ಪತ್ತು-ನೂರು ವರ್ಷಗಳು ಮೊದಲಾದ ಆಯುಸ್ಸೂ ನನಗೆ ಒದಗಲಿ.

---

* ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಮಂಡಲೇ ।
ಉದಾನಃ ಕಂಠದೇಶಸ್ಥೋ ವ್ಯಾನಃ ಸರ್ವಶರೀರಗಃ ॥ —ಅಮರಕೋಶ.

ಜರಾ ಚ ಮ ಆತ್ಮಾ ಚ ಮೇ ತನೂಶ್ಚ ಮೇ ಶರ್ಮ ಚ ಮೇ ವರ್ಮ ಚ ಮೇಽಂಗಾನಿ ಚ ಮೇಽಸ್ಥಾನಿ ಚ ಮೇ ಪರೂಗ್‍ಂಷಿ ಚ ಮೇ ಶರೀರಾಣಿ ಚ ಮೇ ॥ ೨–1 ॥

[ಅಪಾನಸ್ತನೂಶ್ಚ ಮೇಽಷ್ಟಾದಶ ಚ ॥]

---

ಜರಾ । ಚ । ಮೇ । ಆತ್ಮಾ । ಚ । ಮೇ । ತನೂಃ । ಚ । ಮೇ । ಶರ್ಮ । ಚ । ಮೇ । ವರ್ಮ । ಚ । ಮೇ । ಅಂಗಾನಿ । ಚ । ಮೇ । ಅಸ್ಥಾನಿ । ಚ । ಮೇ । ಪರೂಗ್‍ಂಷಿ । ಚ । ಮೇ । ಶರೀರಾಣಿ । ಚ । ಮೇ ॥ (೨) ॥

---

**ಜರಾ ಚ ಮೇ**=ಕಾಲದಲ್ಲಿ ಮುಪ್ಪೂ ನನಗೆ ಪ್ರಾಪ್ತವಾಗಲಿ; **ಆತ್ಮಾ ಚ ಮೇ**=ಶಾಸ್ತ್ರಸಿದ್ಧನಾದ ಪರಮಾತ್ಮನೂ ನನಗೆ ಅನುಗ್ರಹಿಸಲಿ;/ಪರಮಾತ್ಮಜ್ಞಾನವೂ ಉಂಟಾಗಲಿ; **ತನೂಃ ಚ ಮೇ**=ಶುಭ ಲಕ್ಷಣಸನ್ನಿವೇಶವುಳ್ಳ ದೇಹವೂ ನನಗೆ ಲಭಿಸಲಿ; **ಶರ್ಮ ಚ ಮೇ**=ಐಹಿಕಾಮುಷ್ಮಿಕಸುಖವೂ ನನಗೆ ಒದಗಲಿ; **ವರ್ಮ ಚ ಮೇ**=ಶರೀರಕವಚಾದಿಗಳೂ ನನಗೆ ಪ್ರಾಪ್ತವಾಗಲಿ; **ಅಂಗಾನಿ ಚ ಮೇ**= ಸಂಪೂರ್ಣಾವಯವಗಳೂ ನನಗೆ ಇರಲಿ; **ಅಸ್ಥಾನಿ ಚ ಮೇ**=ನನ್ನ ಮೂಳೆಗಳೂ ತಮ್ಮ ತಮ್ಮ ಸ್ಥಾನಗಳಲ್ಲಿ ಸರಿಯಾಗಿ ಇರುವಂತೆ ಆಗಲಿ; **ಪರೂಗ್‍ಂಷಿ ಚ ಮೇ**=ಬೆರಳುಗಳೂ ಗಿಣ್ಣುಗಳೂ ಚೆನ್ನಾಗಿ ಇರಲಿ; **ಶರೀರಾಣಿ ಚ ಮೇ**=ಹಿಂದೆ ಹೇಳದ ನನ್ನ ಶರೀರಾವಯವಗಳೂ ಚೆನ್ನಾಗಿ ಇರಲಿ.

---

**ತಾ ॥ ಹೇ! ಅಗ್ನಾವಿಷ್ಣು ದೇವತೆಗಳೇ! ನಾವು ಮಾಡುವ ಸ್ತುತಿರೂಪವಾದ ವಚನಗಳು ನಿಮ್ಮನ್ನು ಸಂತೋಷ ಗೊಳಿಸಲಿ. ನೀವು ಧನ–ಅನ್ನಯುಕ್ತರಾಗಿ ನಮ್ಮಲ್ಲಿಗೆ ಬನ್ನಿರಿ. ನಿಮ್ಮ ಅನುಗ್ರಹದಿಂದ ನಮಗೆ ಧನ–ಅನ್ನಗಳು ವಿಪುಲವಾಗಿ ಒದಗಿಬರಲಿ.**

**ಹೇ! ಅಗ್ನಾವಿಷ್ಣು ದೇವತೆಗಳೇ! ನನಗೆ ಅನ್ನವೂ, ಅನ್ನದಾನಕ್ಕೆ–ಅನ್ನಭೋಜನಕ್ಕೆ ಅನುಮತಿಯೂ ಸಿಗಲಿ. ಶುದ್ಧಿಯೂ, ಅನ್ನದ ವಿಷಯದಲ್ಲಿ ಉತ್ಸುಕತೆಯೂ ಅನ್ನಧಾರಣವೂ ಒದಗಿಬರಲಿ.**

**ಮಾನವನು ಉತ್ತಮನಾಗಬೇಕು. ಆತನಿಗೆ ಉತ್ತಮ ವಸ್ತುಗಳು ಲಭಿಸಲು ದೇವತಾನುಗ್ರಹವಿರಬೇಕು. ಅಗ್ನಾವಿಷ್ಣು ದೇವತೆಗಳು ತನಗೆ ಬೇಕಾದುದೆಲ್ಲವನ್ನೂ ಅನುಗ್ರಹಿಸಲಿ ಎಂದು ಚಮಕಾನುವಾಕಗಳಲ್ಲಿ ಸವಿಸ್ತರ ವಾದ ಪ್ರಾರ್ಥನೆಯು ಇದೆ.**

## ॥ ದ್ವಿತೀಯೋಽನುವಾಕಃ ॥

**ಜ್ಯೈಷ್ಠ್ಯಂ ಚ ಮ ಆಧಿಪತ್ಯಂ ಚ ಮೇ ಮನ್ಯುಶ್ಚ ಮೇ ಭಾಮಶ್ಚ ಮೇಽಮಶ್ಚ ಮೇಽಂಭಶ್ಚ ಮೇ ಜೇಮಾ ಚ ಮೇ ಮಹಿಮಾ ಚ ಮೇ ವರಿಮಾ ಚ ಮೇ ಪ್ರಥಿಮಾ ಚ ಮೇ**

---

ಜ್ಯೈಷ್ಠ್ಯಮ್ । ಚ । ಮೇ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಚ । ಮೇ । ಮನ್ಯುಃ । ಚ । ಮೇ । ಭಾಮಃ । ಚ । ಮೇ । ಅಮಃ । ಚ । ಮೇ । ಅಂಭಃ । ಚ । ಮೇ । ಜೇಮಾ । ಚ । ಮೇ । ಮಹಿಮಾ । ಚ । ಮೇ । ವರಿಮಾ । ಚ । ಮೇ । ಪ್ರಥಿಮಾ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| **ಜ್ಯೈಷ್ಠ್ಯಂ ಚ ಮೇ...ಸುಮತಿಶ್ಚ ಮೇ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

▲ ***ಜ್ಯೈಷ್ಠ್ಯಮ್ ಚ ಮೇ**=ಅತ್ಯಂತ ಪ್ರಶಸ್ತನಾಗಿರುವಿಕೆಯು/ಹಿರಿಯನಾಗಿರುವಿಕೆಯು ನನಗೆ ಪ್ರಾಪ್ತವಾಗಲಿ. **ಆಧಿಪತ್ಯಮ್ ಚ ಮೇ**=ಒಡೆಯನಾಗಿರುವಿಕೆಯು ನನಗೆ ಲಭಿಸಲಿ. **ಮನ್ಯುಃ ಚ ಮೇ**=ಮಾನಸ ಕ್ರೋಧವು ತಕ್ಕ ಸಮಯದಲ್ಲಿ ನನಗೆ ಉಂಟಾಗಲಿ. **ಭಾಮಃ ಚ ಮೇ**=ಕೋಪವನ್ನು ವ್ಯಕ್ತಪಡಿಸುವ ಅಂಗ ಚಿಹ್ನಾದಿಗಳಿಂದ ಕೂಡಿದ ರೇಗುವಿಕೆಯು ತಕ್ಕ ಕಾಲದಲ್ಲಿ ನನಗೆ ಉಂಟಾಗಲಿ. **ಅಮಃ ಚ ಮೇ**=ವಿರೋಧಿಗಳಿಂದ 'ಇಷ್ಟೇ' ಎಂದು ನಿಶ್ಚಯಿಸಲಾಗದ ವ್ಯಕ್ತಿತ್ವವು ನನಗೆ ಲಭಿಸಲಿ. **ಅಂಭಃ ಚ ಮೇ**=ಶೈತ್ಯ–ಮಾಧುರ್ಯಗಳಿಂದ ಕೂಡಿದ ಉತ್ತಮವಾದ ನೀರೂ ನನಗೆ ಪ್ರಾಪ್ತವಾಗಲಿ. **ಜೇಮಾ ಚ ಮೇ**=ಜಯಿಸುವ ಸಾಮರ್ಥ್ಯವೂ ನನಗೆ ಉಂಟಾಗಲಿ. **ಮಹಿಮಾ ಚ ಮೇ**=ಗೆಲುವಿನಿಂದ ದೊರಕುವ ದೊಡ್ಡತನವು/ಧನಾದಿಸಂಪತ್ತುಗಳು ನನಗೆ ಉಂಟಾಗಲಿ. **ವರಿಮಾ ಚ ಮೇ**=ಪೂಜ್ಯತ್ವವು/ಮುಖ್ಯನನ್ನಾಗಿ ಆರಿಸಿಕೊಳ್ಳುವಿಕೆಯು ನನಗೆ ಉಂಟಾಗಲಿ. **ಪ್ರಥಿಮಾ ಚ ಮೇ**=ಗೃಹಕ್ಷೇತ್ರಾದಿವಿಸ್ತಾರವೂ ನನಗೆ ಒದಗಲಿ.

---

* ಚಮಕಾನುವಾಕಗಳಲ್ಲಿ ಪದಶಃ ಅರ್ಥವೇ ತಾತ್ಪರ್ಯವಾಗಿರುವುದರಿಂದ ತಾತ್ಪರ್ಯವನ್ನು ಪ್ರತ್ಯೇಕವಾಗಿ ನೀಡಿಲ್ಲ. ವಿಶೇಷವಿದ್ದಲ್ಲಿ ಅಡಿಟಿಪ್ಪಣಿಯನ್ನು ಕೊಟ್ಟಿದೆ.

ವರ್ಷ್ಮಾ ಚ ಮೇ ದ್ರಾಘುಯಾ ಚ ಮೇ ವೃದ್ಧಂ ಚ ಮೇ ವೃದ್ಧಿಶ್ಚ ಮೇ ಸತ್ಯಂ ಚ ಮೇ ಶ್ರದ್ಧಾ ಚ ಮೇ ಜಗಚ್ಚ [(೩)] ಮೇ ಧನಂ ಚ ಮೇ ವಶಶ್ಚ ಮೇ ತ್ವಿಷಿಶ್ಚ ಮೇ ಕ್ರೀಡಾ ಚ ಮೇ ಮೋದಶ್ಚ ಮೇ ಜಾತಂ ಚ ಮೇ ಜನಿಷ್ಯಮಾಣಂ ಚ ಮೇ ಸೂಕ್ತಂ ಚ ಮೇ ಸುಕೃತಂ ಚ ಮೇ ವಿತ್ತಂ ಚ ಮೇ

---

ವರ್ಷ್ಮಾ । ಚ । ಮೇ । ದ್ರಾಘುಯಾ । ಚ । ಮೇ । ವೃದ್ಧಮ್ । ಚ । ಮೇ । ವೃದ್ಧಿಃ । ಚ । ಮೇ । ಸತ್ಯಮ್ । ಚ । ಮೇ । ಶ್ರದ್ಧೇತಿ ಶ್ರತ್-ಧಾ । ಚ । ಮೇ । ಜಗತ್ । ಚ । (೩) । ಮೇ । ಧನಮ್ । ಚ । ಮೇ । ವಶಃ । ಚ । ಮೇ । ತ್ವಿಷಿಃ । ಚ । ಮೇ । ಕ್ರೀಡಾ । ಚ । ಮೇ । ಮೋದಃ । ಚ । ಮೇ । ಜಾತಮ್ । ಚ । ಮೇ । ಜನಿಷ್ಯಮಾಣಮ್ । ಚ । ಮೇ । ಸೂಕ್ತಮಿತಿ ಸು-ಉಕ್ತಮ್ । ಚ । ಮೇ । ಸುಕೃತಮಿತಿ ಸು-ಕೃತಮ್ । ಚ । ಮೇ । ವಿತ್ತಮ್ । ಚ । ಮೇ ।

ಪದಶಃ ಅರ್ಥ/ತಾತ್ಪರ್ಯ.

**ವರ್ಷ್ಮಾ ಚ ಮೇ**=ಪುತ್ರ-ಪೌತ್ರಾದಿ ಶರೀರಗಳೂ ನನಗೆ ಪ್ರಾಪ್ತವಾಗಲಿ. **ದ್ರಾಘುಯಾ ಚ ಮೇ**=ಅವಿಚ್ಛಿನ್ನವಾದ ದೀರ್ಘವಾದ ಸಂತತಿಯೂ ನನಗೆ ಒದಗಲಿ. **ವೃದ್ಧಮ್ ಚ ಮೇ**=ಹೆಚ್ಚಾದ ಅನ್ನಧನಾದಿಯೂ ನನಗೆ ಲಭಿಸಲಿ. **ವೃದ್ಧಿಃ ಚ ಮೇ**=ವಿದ್ಯಾದಿಗುಣಗಳ ಉತ್ಕರ್ಷವೂ ನನಗೆ ಒದಗಲಿ. **ಸತ್ಯಮ್ ಚ ಮೇ**=ಯಥಾರ್ಥಭಾಷಣವೂ ಯಾವಾಗಲೂ ನನಗಿರಲಿ. **ಶ್ರದ್ಧಾ ಚ ಮೇ**=ಪರಲೋಕವಿದೆಯೆಂಬ ಬುದ್ಧಿಯೂ, ಕರ್ಮಗಳಿಗೆ ಫಲವು ಅವಶ್ಯವಿದೆಯೆಂಬ ಬುದ್ಧಿಯೂ ನನಗೆ ಯಾವಾಗಲೂ ಇರಲಿ. **ಜಗತ್ ಚ ಮೇ**=ಸ್ಥಾವರ-ಜಂಗಮಾತ್ಮಕವಾದ ಜಗತ್ತು ನನಗೆ ಯಾವಾಗಲೂ ಅನುಕೂಲವಾಗಿರಲಿ. **ಧನಮ್ ಚ ಮೇ**=ಸುವರ್ಣಾದಿಧನವೂ ನನಗೆ ಪ್ರಾಪ್ತವಾಗಲಿ. **ವಶಃ ಚ ಮೇ**=ಸರ್ವವೂ ಸ್ವಾಧೀನವಾಗಿರುವಿಕೆಯೂ ನನಗೆ ಲಭಿಸಲಿ. **ತ್ವಿಷಿಃ ಚ ಮೇ**=ಒಳ್ಳೆಯ ಶರೀರಕಾಂತಿಯೂ ನನಗೆ ಉಂಟಾಗಲಿ. **ಕ್ರೀಡಾ ಚ ಮೇ**=ಅಕ್ಷದ್ಯೂತಾದಿಕ್ರೀಡೆಯೂ ನನಗೆ ಲಭಿಸಲಿ. **ಮೋದಃ ಚ ಮೇ**=ಅದರಿಂದ ಉಂಟಾಗುವ ಸಂತೋಷಪ್ರಾಪ್ತಿಯೂ ನನಗೆ ಸಂಭವಿಸಲಿ. **ಜಾತಮ್ ಚ ಮೇ**=ಮೊದಲೇ ಹುಟ್ಟಿರುವ ನನ್ನ ಅಪತ್ಯವೂ ಒಳ್ಳೆಯದಾಗಿರಲಿ. **ಜನಿಷ್ಯಮಾಣಮ್ ಚ ಮೇ**=ಮುಂದೆ ಹುಟ್ಟುವ ನನ್ನ ಮಗುವೂ ಚೆನ್ನಾಗಿರಲಿ. **ಸೂಕ್ತಮ್ ಚ ಮೇ**=ಋಕ್ಕುಗಳ ಸಮೂಹವೂ/ಪುರುಷಸೂಕ್ತಾದಿಯೂ ನನಗೆ ಫಲದಾಯಕವಾಗಲಿ. **ಸುಕೃತಮ್ ಚ ಮೇ**=ಸೂಕ್ತಜನ್ಯವಾದ ಅಪೂರ್ವವೂ ನನಗೆ ಪ್ರಾಪ್ತವಾಗಲಿ. **ವಿತ್ತಮ್ ಚ ಮೇ**=ಮೊದಲು ಪ್ರಾಪ್ತವಾಗಿರುವ ದ್ರವ್ಯವೂ ನನಗೆ ಲಾಭಕರವಾಗಿ ಪರಿಣಮಿಸಲಿ.

ವೇದ್ಯಂ ಚ ಮೇ ಭೂತಂ ಚ ಮೇ ಭವಿಷ್ಯಚ್ಚ ಮೇ ಸುಗಂ ಚ ಮೇ ಸುಪಥಂ ಚ ಮ ಋದ್ಧಂ ಚ ಮ ಋದ್ಧಿಶ್ಚ ಮೇ ಕ್ಲೃಪ್ತಂ ಚ ಮೇ ಕ್ಲೃಪ್ತಿಶ್ಚ ಮೇ ಮತಿಶ್ಚ ಮೇ ಸುಮತಿಶ್ಚ ಮೇ ॥ ೪-2 ॥

[ಜಗಚ್ಛರ್ದ್ಧಿಶ್ಚತುರ್ದಶ ಚ ॥]

---

ವೇದ್ಯಮ್ । ಚ । ಮೇ । ಭೂತಮ್ । ಚ । ಮೇ । ಭವಿಷ್ಯತ್ । ಚ । ಮೇ । ಸುಗಮಿತಿ ಸು-ಗಮ್ । ಚ । ಮೇ । ಸುಪಥಮಿತಿ ಸು-ಪಥಮ್ । ಚ । ಮೇ । ಋದ್ಧಮ್ । ಚ । ಮೇ । ಋದ್ಧಿಃ । ಚ । ಮೇ । ಕ್ಲೃಪ್ತಮ್ । ಚ । ಮೇ । ಕ್ಲೃಪ್ತಿಃ । ಚ । ಮೇ । ಮತಿಃ । ಚ । ಮೇ । ಸುಮತಿರಿತಿ ಸು-ಮತಿಃ । ಚ । ಮೇ ॥ (೪) ॥

ಪದಶಃ ಅರ್ಥ/ತಾತ್ಪರ್ಯ. ———————

**ವೇದ್ಯಮ್ ಚ ಮೇ**=ಮುಂದೆ ಸಿಕ್ಕುವ ದ್ರವ್ಯವೂ ನನಗೆ ಕ್ಷೇಮಕರವಾಗಿರಲಿ. **ಭೂತಮ್ ಚ ಮೇ**=ಪೂರ್ವಸಿದ್ಧವಾದ ಕ್ಷೇತ್ರವೇ/ಭೂಮಿಯೇ ಮೊದಲಾದುದು ನನಗೆ ಲಾಭಪ್ರದವಾಗಲಿ. **ಭವಿಷ್ಯತ್ ಚ ಮೇ**=ಮುಂದೆ ಸಂಪಾದಿಸುವ ಕ್ಷೇತ್ರಾದಿಯೂ ನನಗೆ ಶುಭಪ್ರದವಾಗಲಿ. **ಸುಗಮ್ ಚ ಮೇ**=ಹೋಗಬೇಕಾದ ಬಂಧುಜನಯುಕ್ತವಾದ ಗ್ರಾಮಾದಿಯು ಕ್ಲೇಶರಹಿತವಾಗಿ ಪ್ರಾಪ್ತವಾಗಲಿ. **ಸುಪಥಮ್ ಚ ಮೇ**=ಚೋರಾದಿರಹಿತವಾದ ಒಳ್ಳೆಯ ಮಾರ್ಗವೇ ನನಗೆ ಲಭಿಸಲಿ. **ಋದ್ಧಮ್ ಚ ಮೇ**=ವೃದ್ಧಿ ಹೊಂದಿದ ಧನಾದಿಯೂ/ಅನುಷ್ಠಿತಕರ್ಮಫಲವೂ ನನಗೆ ಲಭಿಸಲಿ. **ಋದ್ಧಿಃ ಚ ಮೇ**=ಮುಂದೆ ಅನುಷ್ಠಾನ ಮಾಡುವ ಸತ್ರಾದಿಯಾಗಫಲವೂ ನನಗೆ ಪ್ರಾಪ್ತವಾಗಲಿ. **ಕ್ಲೃಪ್ತಮ್ ಚ ಮೇ**=ಸ್ವಕಾರ್ಯಕ್ಷಮದ್ರವ್ಯವೂ ನನಗೆ ಲಭಿಸಲಿ. **ಕ್ಲೃಪ್ತಿಃ ಚ ಮೇ**=ತನ್ನ ಕಾರ್ಯಗಳನ್ನು ಚೆನ್ನಾಗಿ ನೆರವೇರಿಸುವ ಸಾಮರ್ಥ್ಯವೂ ನನಗೆ ಉಂಟಾಗಲಿ. **ಮತಿಃ ಚ ಮೇ**=ಪದಾರ್ಥಸಾಮಾನ್ಯನಿಶ್ಚಯಬುದ್ಧಿಯೂ ನನಗೆ ಉಂಟಾಗಲಿ. **ಸುಮತಿಃ ಚ ಮೇ**=ನಿರ್ಣಯಿಸಲು ಕಷ್ಟಸಾಧ್ಯವಾದ ರಾಜಕಾರ್ಯಾದಿಗಳನ್ನು ನಿಶ್ಚಯಿಸುವ ಒಳ್ಳೆಯ ಬುದ್ಧಿಯೂ ನನಗೆ ಲಭಿಸಲಿ.

## ॥ ತೃತೀಯೋಽನುವಾಕಃ ॥

ಶಂ ಚ ಮೇ ಮಯಶ್ಚ ಮೇ ಪ್ರಿಯಂ ಚ ಮೇಽನುಕಾಮಶ್ಚ ಮೇ ಕಾಮಶ್ಚ ಮೇ ಸೌಮನಸಶ್ಚ ಮೇ ಭದ್ರಂ ಚ ಮೇ ಶ್ರೇಯಶ್ಚ ಮೇ ವಸ್ಯಶ್ಚ ಮೇ ಯಶಶ್ಚ ಮೇ ಭಗಶ್ಚ ಮೇ ದ್ರವಿಣಂ ಚ ಮೇ

---

ಶಮ್ । ಚ । ಮೇ । ಮಯಃ । ಚ । ಮೇ । ಪ್ರಿಯಮ್ । ಚ । ಮೇ । ಅನುಕಾಮ ಇತ್ಯನು–ಕಾಮಃ । ಚ । ಮೇ । ಕಾಮಃ । ಚ । ಮೇ । ಸೌಮನಸಃ । ಚ । ಮೇ । ಭದ್ರಮ್ । ಚ । ಮೇ । ಶ್ರೇಯಃ । ಚ । ಮೇ । ವಸ್ಯಃ । ಚ । ಮೇ । ಯಶಃ । ಚ । ಮೇ । ಭಗಃ । ಚ । ಮೇ । ದ್ರವಿಣಮ್ । ಚ । ಮೇ ।

---

| ಮಂತ್ರ | ವಿನಿಯೋಗ |
| --- | --- |
| **ಶಂ ಚ ಮೇ...ಸುದಿನಂ ಚ ಮೇ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

▲ **ಶಮ್ ಚ ಮೇ**=ಐಹಿಕಸುಖವೂ ನನಗೆ ಒದಗಲಿ. **ಮಯಃ ಚ ಮೇ**=ಆಮುಷ್ಮಿಕಸುಖವೂ ನನಗೆ ಲಭಿಸಲಿ. **ಪ್ರಿಯಮ್ ಚ ಮೇ**=ಪ್ರೀತಿಕಾರಣವಾದ ವಸ್ತುವು ನನಗೆ ಒದಗಲಿ. **ಅನುಕಾಮಃ ಚ ಮೇ**= ಅನುಕೂಲವಾಗುವುದೆಂದು ಇಚ್ಛಿಸುವ ವಸ್ತುವು ನನಗೆ ಒದಗಲಿ. **ಕಾಮಃ ಚ ಮೇ**=ಆಮುಷ್ಮಿಕಸುಖಸಾಧನವಾದ ಸ್ವರ್ಗಾದಿಯೂ ನನಗೆ ಪ್ರಾಪ್ತವಾಗಲಿ. **ಸೌಮನಸಃ ಚ ಮೇ**=ಮನಸ್ಸನ್ನು ಸಂತೋಷಪಡಿಸುವ ಬಂಧುವರ್ಗವೂ ನನಗಿರಲಿ. **ಭದ್ರಮ್ ಚ ಮೇ**=ಈ ಲೋಕದಲ್ಲಿ ರಮಣೀಯವಾದ ಮಂಗಳವೂ ನನಗೆ ಒದಗಲಿ. **ಶ್ರೇಯಃ ಚ ಮೇ**=ಪರಲೋಕಹಿತವಾದ ಶ್ರೇಯಸ್ಸೂ ನನಗೆ ಲಭಿಸಲಿ. **ವಸ್ಯಃ ಚ ಮೇ**= ವಾಸಹೇತುವಾದ ಮನೆ ಮೊದಲಾದವು ನನಗೆ ಸಿಕ್ಕಲಿ. **ಯಶಃ ಚ ಮೇ**=ಒಳ್ಳೆಯ ಕೀರ್ತಿಯು ನನಗೆ ಲಭಿಸಲಿ. **ಭಗಃ ಚ ಮೇ**=ಸೌಭಾಗ್ಯವೂ ನನಗೆ ಉಂಟಾಗಲಿ. **ದ್ರವಿಣಮ್ ಚ ಮೇ**=ಧನವೂ ನನಗೆ ಪ್ರಾಪ್ತವಾಗಲಿ.

# ಯಂತಾ ಚ ಮೇ ಧರ್ತಾ ಚ ಮೇ ಕ್ಷೇಮಶ್ಚ ಮೇ ಧೃತಿಶ್ಚ ಮೇ ವಿಶ್ವಂ ಚ [(೫)] ಮೇ ಮಹಶ್ಚ ಮೇ ಸಂವಿಚ್ಚ ಮೇ ಜ್ಞಾತ್ರಂ ಚ ಮೇ ಸೂಶ್ಚ ಮೇ ಪ್ರಸೂಶ್ಚ ಮೇ ಸೀರಂ ಚ ಮೇ ಲಯಶ್ಚ ಮ ಋತಂ ಚ ಮೇಽಮೃತಂ ಚ ಮೇಽಯಕ್ಷ್ಮಂ ಚ ಮೇಽನಾಮಯಚ್ಚ ಮೇ ಜೀವಾತುಶ್ಚ ಮೇ

---

ಯಂತಾ । ಚ । ಮೇ । ಧರ್ತಾ । ಚ । ಮೇ । ಕ್ಷೇಮಃ । ಚ । ಮೇ । ಧೃತಿಃ । ಚ । ಮೇ । ವಿಶ್ವಮ್ । ಚ । (೫) । ಮೇ । ಮಹಃ । ಚ । ಮೇ । ಸಂವಿದಿತಿ ಸಮ್-ವಿತ್ । ಚ । ಮೇ । ಜ್ಞಾತ್ರಮ್ । ಚ । ಮೇ । ಸೂಃ । ಚ । ಮೇ । ಪ್ರಸೂರಿತಿ ಪ್ರ-ಸೂಃ । ಚ । ಮೇ । ಸೀರಮ್ । ಚ । ಮೇ । ಲಯಃ । ಚ । ಮೇ । ಋತಮ್ । ಚ । ಮೇ । ಅಮೃತಮ್ । ಚ । ಮೇ । ಅಯಕ್ಷ್ಮಮ್ । ಚ । ಮೇ । ಅನಾಮಯತ್ । ಚ । ಮೇ । ಜೀವಾತುಃ । ಚ । ಮೇ ।

ಪದಶಃ ಅರ್ಥ/ತಾತ್ಪರ್ಯ. ———

**ಯಂತಾ ಚ ಮೇ**=ನಿಯಾಮಕನಾದ ಆಚಾರ್ಯನೇ ಮೊದಲಾದವರೂ ನನಗೆ ಲಭಿಸಲಿ. **ಧರ್ತಾ ಚ ಮೇ**=ಪೋಷಕನಾದ ತಂದೆಯೇ ಮೊದಲಾದವರೂ ನನಗೆ ಇರಲಿ. **ಕ್ಷೇಮಃ ಚ ಮೇ**=ಇರುವ ಧನಾದಿ ವಸ್ತುವಿನ ರಕ್ಷಣಾಶಕ್ತಿಯು ನನಗೆ ಉಂಟಾಗಲಿ. **ಧೃತಿಃ ಚ ಮೇ**=ಆಪತ್ತಿನಲ್ಲಿಯೂ ಎದೆಗೆಡದ ಧೈರ್ಯವೂ ನನಗೆ ಇರಲಿ. **ವಿಶ್ವಮ್ ಚ ಮೇ**=ಎಲ್ಲರ ಆನುಕೂಲ್ಯವೂ ನನಗೆ ಒದಗಲಿ. **ಮಹಃ ಚ ಮೇ**=ಎಲ್ಲರ ಪೂಜೆಯೂ [ಗೌರವಿಸುವಿಕೆಯೂ] ನನಗೆ ಲಭಿಸಲಿ. **ಸಂವಿತ್ ಚ ಮೇ**=ವೇದ-ಶಾಸ್ತ್ರಾದಿಗಳ ಒಳ್ಳೆಯ ಜ್ಞಾನವೂ ನನಗೆ ಉಂಟಾಗಲಿ. **ಜ್ಞಾತ್ರಮ್ ಚ ಮೇ**=ಬೇರೆಯವರಿಗೆ ತಿಳಿಸಿಕೊಡುವ ಸಾಮರ್ಥ್ಯವೂ ನನಗೆ ಲಭಿಸಲಿ. **ಸೂಃ ಚ ಮೇ**=ಪುತ್ರ-ಶಿಷ್ಯಾದಿಗಳನ್ನು ಪ್ರೇರಿಸುವ ಶಕ್ತಿಯೂ ನನಗೆ ಬರಲಿ. **ಪ್ರಸೂಃ ಚ ಮೇ**=ಭೃತ್ಯಾದಿಪ್ರೇರಣಸಾಮರ್ಥ್ಯವೂ ನನಗೆ ಲಭಿಸಲಿ. **ಸೀರಮ್ ಚ ಮೇ**=ನೇಗಿಲೇ ಮೊದಲಾದ ಕೃಷಿಸಾಧನಸಂಪತ್ತೂ ನನಗೆ ಪ್ರಾಪ್ತವಾಗಲಿ. **ಲಯಃ ಚ ಮೇ**=ಕೃಷಿಪ್ರತಿಬಂಧನಿವೃತ್ತಿಯೂ ನನಗೆ ಉಂಟಾಗಲಿ. **ಋತಮ್ ಚ ಮೇ**=ಯಜ್ಞಾದಿಕರ್ಮವೂ ನನಗೆ ಪ್ರಾಪ್ತವಾಗಲಿ. **ಅಮೃತಮ್ ಚ ಮೇ**=ಕ್ಷಯಿಸುವ ಯಾಗಾದಿಕ್ರಿಯೆಗಳ ಪುಣ್ಯಫಲವೂ ನನಗೆ ಒದಗಲಿ. **ಅಯಕ್ಷ್ಮಮ್ ಚ ಮೇ**=ಕ್ಷಯಾದಿಮಹಾರೋಗರಾಹಿತ್ಯವೂ ನನಗೆ ಇರಲಿ. **ಅನಾಮಯತ್ ಚ ಮೇ**=ಜ್ವರವೇ ಮೊದಲಾದ ಸಾಮಾನ್ಯ ರೋಗಗಳಿಲ್ಲದಿರುವಿಕೆಯೂ ನನಗೆ ಇರಲಿ. **ಜೀವಾತುಃ ಚ ಮೇ**=ಬದುಕಲು ಕಾರಣವಾದ ವ್ಯಾಧಿಪರಿಹಾರಕವಾದ ಔಷಧವು ನನಗೆ ಲಭಿಸಲಿ.

ದೀರ್ಘಾಯುತ್ವಂ ಚ ಮೇಽನಮಿತ್ರಂ ಚ ಮೇಽಭಯಂ ಚ ಮೇ ಸುಗಂ ಚ ಮೇ ಶಯನಂ ಚ ಮೇ ಸೂಷಾ ಚ ಮೇ ಸುದಿನಂ ಚ ಮೇ ॥ ೬–3 ॥

[ವಿಶ್ವಂ ಚ ಶಯನಮಷ್ಟೌ ಚ ॥]

---

ದೀರ್ಘಾಯುತ್ವಮಿತಿ ದೀರ್ಘಾಯು–ತ್ವಮ್ । ಚ । ಮೇ । ಅನಮಿತ್ರಮ್ । ಚ । ಮೇ । ಅಭಯಮ್ । ಚ । ಮೇ । ಸುಗಮಿತಿ ಸು–ಗಮ್ । ಚ । ಮೇ । ಶಯನಮ್ । ಚ । ಮೇ । ಸೂಷೇತಿ ಸು–ಉಷಾ । ಚ । ಮೇ । ಸುದಿನಮಿತಿ ಸು–ದಿನಮ್ । ಚ । ಮೇ ॥ (೬) ॥

---

**ದೀರ್ಘಾಯುತ್ವಮ್ ಚ ಮೇ**=ಅಪಮೃತ್ಯುಪರಿಹಾರವೂ ನನಗೆ ಉಂಟಾಗಲಿ. **ಅನಮಿತ್ರಮ್ ಚ ಮೇ**=ವೈರಿಗಳಿಲ್ಲದಿರುವಿಕೆಯೂ ನನಗೆ ಇರಲಿ. **ಅಭಯಮ್ ಚ ಮೇ**=ಯಾವುದರಿಂದಲೂ ಭಯವು ನನಗೆ ಒದಗದಿರಲಿ. **ಸುಗಮ್ ಚ ಮೇ**=ನನ್ನ ಪ್ರಯಾಣವು ಯಾವಾಗಲೂ ಸುಖವಾಗಿರಲಿ/ನನ್ನ ಆಚರಣೆಯು ಎಲ್ಲರಿಗೂ ಹಿಡಿಸಲಿ. **ಶಯನಮ್ ಚ ಮೇ**=ಉತ್ತಮವಾದ ಹಾಸಿಗೆಯೇ ಮೊದಲಾದವು ನನಗೆ ಒದಗಲಿ. **ಸೂಷಾ ಚ ಮೇ**=ಒಳ್ಳೆಯ ಕಾರ್ಯಗಳುಳ್ಳ ಉತ್ತಮ ಪ್ರಾತಃಕಾಲವೂ ನನಗೆ ಲಭಿಸಲಿ. **ಸುದಿನಮ್ ಚ ಮೇ**=ಯಜ್ಞ–ದಾನ–ಅಧ್ಯಯನಗಳಿಂದ ಕೂಡಿರುವ ಒಳ್ಳೆಯ ದಿನವೂ ನನಗೆ ಉಂಟಾಗಲಿ.

**ಪದಶಃ ಅರ್ಥ/ತಾತ್ಪರ್ಯ.** ————

ಅನುವಾಕದಲ್ಲಿ ಪುನರುಕ್ತಿಯಂತೆ ಕೆಲವು ಶಬ್ದಗಳು ತೋರುತ್ತವೆ. ಸುಖ, ಧನ, ಕರ್ಮ–ಇವುಗಳಲ್ಲಿ ವೈವಿಧ್ಯವಿದೆ. ಆದುದರಿಂದ ಪುನರುಕ್ತಿಯಿಲ್ಲ.

## ॥ ಚತುರ್ಥೋಽನುವಾಕಃ ॥

**ಊರ್ಕ್ಚ ಮೇ ಸೂನೃತಾ ಚ ಮೇ ಪಯಶ್ಚ ಮೇ ರಸಶ್ಚ ಮೇ ಘೃತಂ ಚ ಮೇ ಮಧು ಚ ಮೇ ಸಗ್ಧಿಶ್ಚ ಮೇ ಸಪೀತಿಶ್ಚ ಮೇ ಕೃಷಿಶ್ಚ ಮೇ ವೃಷ್ಟಿಶ್ಚ ಮೇ ಜೈತ್ರಂ ಚ ಮ ಔದ್ಭಿದ್ಯಂ ಚ ಮೇ**

---

**ಊರ್ಕ್। ಚ। ಮೇ। ಸೂನೃತಾ। ಚ। ಮೇ। ಪಯಃ। ಚ। ಮೇ। ರಸಃ। ಚ। ಮೇ। ಘೃತಮ್। ಚ। ಮೇ। ಮಧು। ಚ। ಮೇ। ಸಗ್ಧಿಃ। ಚ। ಮೇ। ಸಪೀತಿರಿತಿ ಸ-ಪೀತಿಃ। ಚ। ಮೇ। ಕೃಷಿಃ। ಚ। ಮೇ। ವೃಷ್ಟಿಃ। ಚ। ಮೇ। ಜೈತ್ರಮ್। ಚ। ಮೇ। ಔದ್ಭಿದ್ಯಮಿತ್ಯೌತ್-ಭಿದ್ಯಮ್। ಚ। ಮೇ।**

---

| ಮಂತ್ರ | ವಿನಿಯೋಗ |
|---|---|
| **ಊರ್ಕ್ಚ ಮೇ...ನೀವಾರಾಶ್ಚ ಮೇ ॥** | **ವಸೋರ್ಧಾರಾಹೋಮಕ್ಕಾಗಿ.** |

**ಪದಶಃ ಅರ್ಥ/ತಾತ್ಪರ್ಯ.**

**ಊರ್ಕ್ ಚ ಮೇ**=ಅನ್ನಸಾಮಾನ್ಯವು ನನಗೆ ಲಭಿಸಲಿ. **ಸೂನೃತಾ ಚ ಮೇ**=ಪ್ರಿಯೋಕ್ತಿಯು ನನಗೆ ಪ್ರಾಪ್ತವಾಗಲಿ. **ಪಯಃ ಚ ಮೇ**=ಕ್ಷೀರವೂ ನನಗೆ ಲಭಿಸಲಿ. **ರಸಃ ಚ ಮೇ**=ಹಾಲೇ ಮೊದಲಾದವುಗಳ ಸಾರವೂ ನನಗೆ ಸಿಕ್ಕಲಿ. **ಘೃತಮ್ ಚ ಮೇ**=ಒಳ್ಳೆಯ ತುಪ್ಪವೂ ನನಗೆ ಪ್ರಾಪ್ತವಾಗಲಿ. **ಮಧು ಚ ಮೇ**= ಒಳ್ಳೆಯ ಜೇನುತುಪ್ಪವೂ ನನಗೆ ಲಭಿಸಲಿ. **ಸಗ್ಧಿಃ ಚ ಮೇ**=ಬಂಧುಗಳೊಡನೆ ಸಹಭೋಜನವೂ ನನಗೆ ಪ್ರಾಪ್ತ ವಾಗಲಿ. **ಸಪೀತಿಃ ಚ ಮೇ**=ಬಂಧುಗಳೊಡನೆ ಸಹಪಾನವೂ ನನಗೆ ದೊರಕಲಿ. **ಕೃಷಿಃ ಚ ಮೇ**= ಅನ್ನಹೇತುವಾದ ಉತ್ತಮಕೃಷಿಯೂ ನನಗೆ ಪ್ರಾಪ್ತವಾಗಲಿ. **ವೃಷ್ಟಿಃ ಚ ಮೇ**=ಸಸ್ಯವೃದ್ಧಿಕರವಾದ ಉತ್ತಮವೃಷ್ಟಿಯೂ ನನಗೆ ಕಾಲಕಾಲಕ್ಕೆ ಒದಗಲಿ. **ಜೈತ್ರಮ್ ಚ ಮೇ**=ಜಯಶೀಲವಾದ ಒಳ್ಳೆಯ ಕ್ಷೇತ್ರವೂ ನನಗೆ ಒದಗಲಿ. **ಔದ್ಭಿದ್ಯಮ್ ಚ ಮೇ**=ವೃಕ್ಷ-ಲತಾದಿಗಳ ಉದ್ಭಿಜ್ಜಗಳ ಉತ್ಪತ್ತಿಯೂ ನನಗೆ ಲಭಿಸಲಿ.

ರಯಿಶ್ಚ ಮೇ ರಾಯಶ್ಚ ಮೇ ಪುಷ್ಟಂ ಚ ಮೇ ಪುಷ್ಟಿಶ್ಚ ಮೇ ವಿಭು ಚ [(೭)ಮೇ ಪ್ರಭು] ಮೇ ಪ್ರಭು ಚ ಮೇ ಬಹು ಚ ಮೇ ಭೂಯಶ್ಚ ಮೇ ಪೂರ್ಣಂ ಚ ಮೇ ಪೂರ್ಣತರಂ ಚ ಮೇಽಕ್ಷಿತಿಶ್ಚ ಮೇ ಕೂಯವಾಶ್ಚ ಮೇಽನ್ನಂ ಚ ಮೇಽಕ್ಷುಚ್ಚ ಮೇ ವ್ರೀಹಯಶ್ಚ ಮೇ ಯವಾಶ್ಚ ಮೇ ಮಾಷಾಶ್ಚ ಮೇ ತಿಲಾಶ್ಚ ಮೇ

---

ರಯಿಃ । ಚ । ಮೇ । ರಾಯಃ । ಚ । ಮೇ । ಪುಷ್ಟಮ್ । ಚ । ಮೇ । ಪುಷ್ಟಿಃ । ಚ । ಮೇ । ವಿಭ್ವಿತಿ ವಿ-ಭು । ಚ । (೭) । ಮೇ । ಪ್ರಭ್ವಿತಿ ಪ್ರ-ಭು । ಚ । ಮೇ । ಬಹು । ಚ । ಮೇ । ಭೂಯಃ । ಚ । ಮೇ । ಪೂರ್ಣಮ್ । ಚ । ಮೇ । ಪೂರ್ಣತರಮಿತಿ ಪೂರ್ಣ-ತರಮ್ । ಚ । ಮೇ । ಅಕ್ಷಿತಿಃ । ಚ । ಮೇ । ಕೂಯವಾಃ । ಚ । ಮೇ । ಅನ್ನಮ್ । ಚ । ಮೇ । ಅಕ್ಷುತ್ । ಚ । ಮೇ । ವ್ರೀಹಯಃ । ಚ । ಮೇ । ಯವಾಃ । ಚ । ಮೇ । ಮಾಷಾಃ । ಚ । ಮೇ । ತಿಲಾಃ । ಚ । ಮೇ ।

ಪದಶಃ ಅರ್ಥ/ತಾತ್ಪರ್ಯ. ——————

**ರಯಿಃ ಚ ಮೇ**=ಸುವರ್ಣಾದಿದ್ರವ್ಯವೂ ನನಗೆ ಪ್ರಾಪ್ತವಾಗಲಿ. **ರಾಯಃ ಚ ಮೇ**=ಮಣಿಮುಕ್ತಾದಿಗಳೂ ನನಗೆ ಲಭಿಸಲಿ. **ಪುಷ್ಟಮ್ ಚ ಮೇ**=ಸುವರ್ಣಾದಿಸಮೃದ್ಧಿಯೂ ನನಗೆ ಪ್ರಾಪ್ತವಾಗಲಿ. **ಪುಷ್ಟಿಃ ಚ ಮೇ**=ಶರೀರಪುಷ್ಟಿಯೂ ನನಗೆ ಚೆನ್ನಾಗಿ ಆಗಲಿ. **ವಿಭು ಚ ಮೇ**=ಧಾನ್ಯಸಮೃದ್ಧಿಯೂ ನನಗೆ ಹೆಚ್ಚಾಗಿ ಲಭಿಸಲಿ. **ಪ್ರಭು ಚ ಮೇ**=ಸಮರ್ಥವಾದ ಧಾನ್ಯಸಮೃದ್ಧಿಯೂ ನನಗೆ ಉಂಟಾಗಲಿ. **ಬಹು ಚ ಮೇ**=ಧಾನ್ಯಜಾತವು ಹೆಚ್ಚು ಹೆಚ್ಚಾಗಿ/ಅಧಿಕಸಂಖ್ಯೆಯಲ್ಲಿ ಆಗಲಿ. **ಭೂಯಃ ಚ ಮೇ**=ಧಾನ್ಯದ ಉತ್ಪತ್ತಿಯೂ ಮತ್ತೆ ಮತ್ತೆ ಉಂಟಾಗಲಿ. **ಪೂರ್ಣಮ್ ಚ ಮೇ**=ಧಾನ್ಯವು ಮನೆಯಲ್ಲಿ ತುಂಬಿರುವಂತೆ ಹೆಚ್ಚಾಗಿ ಲಭಿಸಲಿ. **ಪೂರ್ಣತರಮ್ ಚ ಮೇ**=ಉತ್ತರೋತ್ತರ ಹೆಚ್ಚಾಗಿ ತುಂಬಿರುವ ಧಾನ್ಯರಾಶಿಯೂ ನನಗೆ ಪ್ರಾಪ್ತವಾಗಲಿ. **ಅಕ್ಷಿತಿಃ ಚ ಮೇ**=ಕ್ಷಯರಹಿತವಾದ ಧಾನ್ಯರಾಶಿಯು ನನಗೆ ಲಭಿಸಲಿ. **ಕೂಯವಾಃ ಚ ಮೇ**=ಸಣ್ಣದಾಗಿರುವ/ಕುತ್ಸಿತವಾದ ಯವಧಾನ್ಯಗಳೂ ನನಗೆ ಲಭಿಸಲಿ. **ಅನ್ನಮ್ ಚ ಮೇ**=ಒಳ್ಳೆಯ ಅನ್ನವೂ ನನಗೆ ಪ್ರಾಪ್ತವಾಗಲಿ. **ಅಕ್ಷುತ್ ಚ ಮೇ**=ಹಸಿವನ್ನು ಹೋಗಲಾಡಿಸುವ ಧಾನ್ಯವು ಲಭಿಸಿ ಹಸಿವಿಲ್ಲದಂತಾಗಲಿ. **ವ್ರೀಹಯಃ ಚ ಮೇ**=ಒಳ್ಳೆಯ ಬತ್ತವೂ ನನಗೆ ಸಿಗಲಿ. **ಯವಾಃ ಚ ಮೇ**=ಉತ್ತಮವಾದ ಯವಧಾನ್ಯವೂ ನನಗೆ ಸಿಗಲಿ. **ಮಾಷಾಃ ಚ ಮೇ**=ಉದ್ದೂ ನನಗೆ ಲಭ್ಯವಾಗಲಿ. **ತಿಲಾಃ ಚ ಮೇ**=ಎಳ್ಳೂ ನನಗೆ ಒದಗಲಿ.

ಮುದ್ಗಾಶ್ಚ ಮೇ ಖಲ್ವಾಶ್ಚ ಮೇ ಗೋಧೂಮಾಶ್ಚ ಮೇ ಮಸುರಾಶ್ಚ ಮೇ ಪ್ರಿಯಂಗವಶ್ಚ ಮೇಽಣವಶ್ಚ ಮೇ ಶ್ಯಾಮಾಕಾಶ್ಚ ಮೇ ನೀವಾರಾಶ್ಚ ಮೇ ॥ ೮-4 ॥

[ವಿಭು ಚ ಮಸುರಾಶ್ಚತುರ್ದಶ ಚ ॥]

---

ಮುದ್ಗಾಃ । ಚ । ಮೇ । ಖಲ್ವಾಃ । ಚ । ಮೇ । ಗೋಧೂಮಾಃ । ಚ । ಮೇ । ಮಸುರಾಃ । ಚ । ಮೇ । ಪ್ರಿಯಂಗವಃ । ಚ । ಮೇ । ಅಣವಃ । ಚ । ಮೇ । ಶ್ಯಾಮಾಕಾಃ । ಚ । ಮೇ । ನೀವಾರಾಃ । ಚ । ಮೇ ॥ (೮) ॥

ಪದಶಃ ಅರ್ಥ/ತಾತ್ಪರ್ಯ.

**ಮುದ್ಗಾಃ ಚ ಮೇ**=ಹೆಸರೂ ನನಗೆ ಒದಗಲಿ. **ಖಲ್ವಾಃ ಚ ಮೇ**=*ಹೆಸರುಕಾಳುಗಳಿಗಿಂತಲೂ ಸ್ಥೂಲವಾಗಿರುವ ಧಾನ್ಯವಿಶೇಷವೂ/ಕಡಲೆಯೂ/ಅವರೆಯೂ ನನಗೆ ಲಭಿಸಲಿ. **ಗೋಧೂಮಾಃ ಚ ಮೇ**= ಗೋಧಿಯೂ ನನಗೆ ಸಿಕ್ಕಲಿ. **ಮಸುರಾಃ ಚ ಮೇ**=ಕಾಡುಕಡಲೆಯೂ ನನಗೆ ಒದಗಲಿ. **ಪ್ರಿಯಂಗವಃ ಚ ಮೇ**=ನವಣೆಯೂ ನನಗೆ ಲಭ್ಯವಾಗಲಿ. **ಅಣವಃ ಚ ಮೇ**=ಸಣ್ಣ ಬತ್ತವೂ ನನಗೆ ದೊರೆಯುವಂತಾಗಲಿ. **ಶ್ಯಾಮಾಕಾಃ ಚ ಮೇ**=ಸಾಮೆ ಅಕ್ಕಿಯೂ ನನಗೆ ಸಿಗುವಂತಾಗಲಿ. **ನೀವಾರಾಃ ಚ ಮೇ**=ಆರಣ್ಯಧಾನ್ಯ ವಿಶೇಷವೂ ನನಗೆ ದೊರೆಯುವಂತಾಗಲಿ.

---

* ಕೆಲವು ಧಾನ್ಯಗಳ ವಿಷಯದಲ್ಲಿ ಮತಭೇದವಿದೆ.

## ॥ ಪಂಚಮೋಽನುವಾಕಃ ॥

ಅಶ್ಮಾ ಚ ಮೇ ಮೃತ್ತಿಕಾ ಚ ಮೇ ಗಿರಯಶ್ಚ ಮೇ ಪರ್ವತಾಶ್ಚ ಮೇ ಸಿಕತಾಶ್ಚ ಮೇ ವನಸ್ಪತಯಶ್ಚ ಮೇ ಹಿರಣ್ಯಂ ಚ ಮೇಽಯಶ್ಚ ಮೇ ಸೀಸಂ ಚ ಮೇ ತ್ರಪುಶ್ಚ ಮೇ ಶ್ಯಾಮಂ ಚ ಮೇ ಲೋಹಂ ಚ ಮೇಽಗ್ನಿಶ್ಚ ಮ ಆಪಶ್ಚ ಮೇ

---

ಅಶ್ಮಾ । ಚ । ಮೇ । ಮೃತ್ತಿಕಾ । ಚ । ಮೇ । ಗಿರಯಃ । ಚ । ಮೇ । ಪರ್ವತಾಃ । ಚ । ಮೇ । ಸಿಕತಾಃ । ಚ । ಮೇ । ವನಸ್ಪತಯಃ । ಚ । ಮೇ । ಹಿರಣ್ಯಮ್ । ಚ । ಮೇ । ಅಯಃ । ಚ । ಮೇ । ಸೀಸಮ್ । ಚ । ಮೇ । ತ್ರಪು । ಚ । ಮೇ । ಶ್ಯಾಮಮ್ । ಚ । ಮೇ । ಲೋಹಮ್ । ಚ । ಮೇ । ಅಗ್ನಿಃ । ಚ । ಮೇ । ಆಪಃ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| **ಅಶ್ಮಾ ಚ ಮೇ...ಗತಿಶ್ಚ ಮೇ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

**ಅಶ್ಮಾ ಚ ಮೇ**=ಕಲ್ಲೂ ನನಗೆ ಅನುಕೂಲವಾಗಿರಲಿ. **ಮೃತ್ತಿಕಾ ಚ ಮೇ**=ಮಣ್ಣೂ ನನಗೆ ಬೇಕಾದಷ್ಟು ಲಭಿಸಲಿ. **ಗಿರಯಃ ಚ ಮೇ**=ಬೆಟ್ಟ-ಗುಡ್ಡಗಳೂ ನನಗೆ ಸುಖಕರವಾಗಿರಲಿ. **ಪರ್ವತಾಃ ಚ ಮೇ**=ಕುಲ ಪರ್ವತಗಳೂ ನನಗೆ ಸೌಖ್ಯವನ್ನು ಒದಗಿಸಲಿ. **ಸಿಕತಾಃ ಚ ಮೇ**=ಮರಳೂ ನನಗೆ ಒದಗಲಿ. **ವನಸ್ಪತಯಃ ಚ ಮೇ**=ವೃಕ್ಷಗಳೂ ನನಗೆ ಸುಖಕರವಾಗಿರಲಿ. **ಹಿರಣ್ಯಮ್ ಚ ಮೇ**=ಚಿನ್ನವೂ ನನಗೆ ಒದಗಲಿ. **ಅಯಃ ಚ ಮೇ**=ಕಬ್ಬಿಣವೂ ನನಗೆ ಕಾರ್ಯಾನುಕೂಲವಾಗಿ ಒದಗಲಿ. **ಸೀಸಮ್ ಚ ಮೇ**=ಸೀಸವೂ ನನಗೆ ಪ್ರಾಪ್ತವಾಗಲಿ. **ತ್ರಪು ಚ ಮೇ**=ತವರವೂ ನನಗೆ ಲಭಿಸಲಿ. **ಶ್ಯಾಮಮ್ ಚ ಮೇ**=ಉಕ್ಕೂ ನನಗೆ ಲಭಿಸಲಿ. **ಲೋಹಮ್ ಚ ಮೇ**=ತಾಮ್ರ-ಕಂಚು ಮುಂತಾದ ಲೋಹವೂ ನನಗೆ ಒದಗಲಿ. **ಅಗ್ನಿಃ ಚ ಮೇ**=ಅಗ್ನಿಯು ನನಗೆ ಕಾರ್ಯಸಾಧಕನಾಗಿ ಒದಗಲಿ. **ಆಪಃ ಚ ಮೇ**=ಒಳ್ಳೆಯ ನೀರೂ ನನಗೆ ಲಭಿಸಲಿ.

ವೀರುಧಶ್ಚ ಮ ಓಷಧಯಶ್ಚ ಮೇ ಕೃಷ್ಟಪಚ್ಯಂ ಚ [(೯) ಮೇಽಕೃಷ್ಟಪಚ್ಯಂ] ಮೇಽಕೃಷ್ಟಪಚ್ಯಂ ಚ ಮೇ ಗ್ರಾಮ್ಯಾಶ್ಚ ಮೇ ಪಶವ ಆರಣ್ಯಾಶ್ಚ ಯಜ್ಞೇನ ಕಲ್ಪಂತಾಂ ವಿತ್ತಂ ಚ ಮೇ ವಿತ್ತಿಶ್ಚ ಮೇ ಭೂತಂ ಚ ಮೇ ಭೂತಿಶ್ಚ ಮೇ ವಸು ಚ ಮೇ ವಸತಿಶ್ಚ ಮೇ ಕರ್ಮ ಚ ಮೇ ಶಕ್ತಿಶ್ಚ ಮೇಽರ್ಥಶ್ಚ ಮ ಏಮಶ್ಚ ಮ

---

ವೀರುಧಃ । ಚ । ಮೇ । ಓಷಧಯಃ । ಚ । ಮೇ । ಕೃಷ್ಟಪಚ್ಯಮಿತಿ ಕೃಷ್ಟ-ಪಚ್ಯಮ್ । ಚ । (೯) । ಮೇ । ಅಕೃಷ್ಟಪಚ್ಯಮಿತ್ಯಕೃಷ್ಟ-ಪಚ್ಯಮ್ । ಚ । ಮೇ । ಗ್ರಾಮ್ಯಾಃ । ಚ । ಮೇ । ಪಶವಃ । ಆರಣ್ಯಾಃ । ಚ । ಯಜ್ಞೇನ । ಕಲ್ಪಂತಾಮ್ । ವಿತ್ತಮ್ । ಚ । ಮೇ । ವಿತ್ತಿಃ । ಚ । ಮೇ । ಭೂತಮ್ । ಚ । ಮೇ । ಭೂತಿಃ । ಚ । ಮೇ । ವಸು । ಚ । ಮೇ । ವಸತಿಃ । ಚ । ಮೇ । ಕರ್ಮ । ಚ । ಮೇ । ಶಕ್ತಿಃ । ಚ । ಮೇ । ಅರ್ಥಃ । ಚ । ಮೇ । ಏಮಃ । ಚ । ಮೇ ।

**ಪದಶಃ ಅರ್ಥ/ತಾತ್ಪರ್ಯ.**

**ವೀರುಧಃ ಚ ಮೇ**=ಲತೆ-ಬಳ್ಳಿಗಳೂ ನನಗೆ ಪ್ರಾಪ್ತವಾಗಲಿ. **ಓಷಧಯಃ ಚ ಮೇ**=ಬತ್ತ ಮುಂತಾದ ಓಷಧಿಗಳೆನಿಸುವ ಸಸ್ಯವರ್ಗವೂ ನನಗೆ ಒದಗಲಿ. **ಕೃಷ್ಟಪಚ್ಯಮ್ ಚ ಮೇ**=ಉತ್ತು, ಬಿತ್ತಿ ಬೆಳೆದ ಬೆಳೆಯೂ ನನಗೆ ಲಭಿಸಲಿ. **ಅಕೃಷ್ಟಪಚ್ಯಮ್ ಚ ಮೇ**=ಉತ್ತು, ಬಿತ್ತಿ, ಬೆಳೆಯದೆ ತಾನಾಗಿಯೇ ಬೆಳೆದ ಬೆಳೆಯು ನನಗೆ ಪ್ರಾಪ್ತವಾಗಲಿ. **ಗ್ರಾಮ್ಯಾಃ ಪಶವಃ ಚ ಮೇ**=ಹಸು ಮುಂತಾದ ಗ್ರಾಮ್ಯಪಶುಗಳೂ, **ಆರಣ್ಯಾಃ** ಪಶವಃ **ಚ ಯಜ್ಞೇನ ಕಲ್ಪಂತಾಮ್**=ಆನೆಯೇ ಮೊದಲಾದ ಆರಣ್ಯಪಶುಗಳೂ ನನಗೆ ಯಜ್ಞನಿಮಿತ್ತವಾಗಿ ಸಫಲವಾಗಿ/ಸಮರ್ಥವಾಗಿ ಒದಗಲಿ. **ವಿತ್ತಮ್ ಚ ಮೇ**=ಮೊದಲು ಪ್ರಾಪ್ತವಾದ ಲಾಭವೂ ನನಗೆ ನಾಶವಾಗದಿರಲಿ. **ವಿತ್ತಿಃ ಚ ಮೇ**=ಮುಂದೆ ಒದಗುವ ಲಾಭವೂ/ಐಶ್ವರ್ಯವೂ ಹಾನಿಯಿಲ್ಲದೆ ಇರಲಿ. **ಭೂತಮ್ ಚ ಮೇ**=ಐಶ್ವರ್ಯೋಪೇತವಾದ ಪುತ್ರಾದಿಯೂ ನನಗೆ ಇರಲಿ. **ಭೂತಿಃ ಚ ಮೇ**=ಸ್ವಕೀಯವಾದ ಐಶ್ವರ್ಯವೂ ನನಗೆ ವೃದ್ಧಿ ಹೊಂದಿ ಸ್ಥಿರವಾಗಿರಲಿ. **ವಸು ಚ ಮೇ**=ನಿವಾಸಕ್ಕೆ ಸಾಧನವಾದ ಗವಾದಿಯೂ ನನಗೆ ಲಭಿಸಿರಲಿ. **ವಸತಿಃ ಚ ಮೇ**=ನಿವಾಸಾಧಾರವಾದ ಗೃಹಾದಿಯೂ ನನಗೆ ಲಭಿಸಲಿ. **ಕರ್ಮ ಚ ಮೇ**=ಅಗ್ನಿಹೋತ್ರಾದಿಕರ್ಮವೂ ನನಗೆ ಒದಗಲಿ. **ಶಕ್ತಿಃ ಚ ಮೇ**=ಕರ್ಮಾನುಷ್ಠಾನಸಾಮರ್ಥ್ಯವೂ ನನಗೆ ಉಂಟಾಗಲಿ. **ಅರ್ಥಃ ಚ ಮೇ**=ಪ್ರಯೋಜನವಿಶೇಷವೂ ನನಗೆ ಲಭಿಸಲಿ. **ಏಮಃ ಚ ಮೇ**=ಹೊಂದಬೇಕಾದ ಸುಖವೂ ನನಗೆ ಪ್ರಾಪ್ತವಾಗಲಿ.

ಇತಿಶ್ಚ ಮೇ ಗತಿಶ್ಚ ಮೇ ॥ ೧೦–5 ॥

[ಕೃಷ್ಣಪಕ್ಷ್ಯಂ ಚಾಷ್ಟಾಚತ್ವಾರಿಗ್ಂಶಚ್ಚ ॥]

---

ಇತಿಃ । ಚ । ಮೇ । ಗತಿಃ । ಚ । ಮೇ ॥ (೧೦) ॥

ಪದಶಃ ಅರ್ಥ/ತಾತ್ಪರ್ಯ. ——————

**ಇತಿಃ ಚ ಮೇ**=ಇಷ್ಟಪ್ರಾಪ್ತ್ಯುಪಾಯವೂ ನನಗೆ ಲಭಿಸಲಿ. **ಗತಿಃ ಚ ಮೇ**=ನನಗೆ ಇಷ್ಟಪ್ರಾಪ್ತಿಯುಂಟಾಗಲಿ.

ಬೇಕಾದ ಎಲ್ಲ ವಸ್ತುಗಳ ಪ್ರಾರ್ಥನೆಯು ಇಲ್ಲಿದೆ.

## ॥ ಷಷ್ಠೋಽನುವಾಕಃ ॥

**ಅಗ್ನಿಶ್ಚ ಮ ಇಂದ್ರಶ್ಚ ಮೇ ಸೋಮಶ್ಚ ಮ ಇಂದ್ರಶ್ಚ ಮೇ ಸವಿತಾ ಚ ಮ ಇಂದ್ರಶ್ಚ ಮೇ ಸರಸ್ವತೀ ಚ ಮ ಇಂದ್ರಶ್ಚ ಮೇ ಪೂಷಾ ಚ ಮ ಇಂದ್ರಶ್ಚ ಮೇ ಬೃಹಸ್ಪತಿಶ್ಚ ಮ ಇಂದ್ರಶ್ಚ ಮೇ**

---

ಅಗ್ನಿಃ । ಚ । ಮೇ । ಇಂದ್ರಃ । ಚ । ಮೇ । ಸೋಮಃ । ಚ । ಮೇ । ಇಂದ್ರಃ । ಚ । ಮೇ । ಸವಿತಾ । ಚ । ಮೇ । ಇಂದ್ರಃ । ಚ । ಮೇ । ಸರಸ್ವತೀ । ಚ । ಮೇ । ಇಂದ್ರಃ । ಚ । ಮೇ । ಪೂಷಾ । ಚ । ಮೇ । ಇಂದ್ರಃ । ಚ । ಮೇ । ಬೃಹಸ್ಪತಿಃ । ಚ । ಮೇ । ಇಂದ್ರಃ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| **ಅಗ್ನಿಶ್ಚ ಮೇ...ಇಂದ್ರಶ್ಚ ಮೇ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

**ಅಗ್ನಿಃ ಚ ಮೇ**=ಅಗ್ನಿದೇವನೂ ನನಗೆ ಪ್ರಸನ್ನನಾಗಲಿ. ***ಇಂದ್ರಃ ಚ ಮೇ**=ದೇವೇಂದ್ರನೂ ನನಗೆ ಅನುಗ್ರಹ ಮಾಡಲಿ. **ಸೋಮಃ ಚ ಮೇ**=ಸೋಮದೇವನೂ ನನಗೆ ಅನುಗ್ರಹ ಮಾಡಲಿ. **ಇಂದ್ರಃ ಚ ಮೇ**=ಇಂದ್ರನು ನನಗೆ ಪ್ರಸನ್ನನಾಗಲಿ. **ಸವಿತಾ ಚ ಮೇ**=ಸವಿತೃದೇವತೆಯೂ/ಸೂರ್ಯನೂ ನನಗೆ ಎದುರಾಗಿ ಬರಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಅನುಗ್ರಹಿಸಲಿ. **ಸರಸ್ವತೀ ಚ ಮೇ**= ವಾಗ್ದೇವಿಯೂ ನನಗೆ ಪ್ರಸನ್ನಳಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನ್ನನ್ನು ಅನುಗ್ರಹಿಸಲಿ. **ಪೂಷಾ ಚ ಮೇ**=ದ್ವಾದಶಾದಿತ್ಯರಲ್ಲಿ ಒಬ್ಬನಾದ ಪೂಷದೇವನೂ ನನ್ನಲ್ಲಿ ಅನುಗ್ರಹವನ್ನು ತೋರಲಿ. **ಇಂದ್ರಃ ಚ ಮೇ**=ಅವನೊಡಗೂಡಿ ಇಂದ್ರನೂ ಸುಪ್ರಸನ್ನನಾಗಲಿ. **ಬೃಹಸ್ಪತಿಃ ಚ ಮೇ**=ಬೃಹಸ್ಪತಿಯೂ ನನಗೆ ಅನುಗ್ರಹವನ್ನು ತೋರಲಿ. **ಇಂದ್ರಃ ಚ ಮೇ**=ದೇವತೆಗಳ ಒಡೆಯನಾದ ಇಂದ್ರನು ನನಗೆ ಅಭಿಮುಖನಾಗಲಿ.

---

* ಪ್ರಸಿದ್ಧ ಅಗ್ನಿ ಮುಂತಾದ ಎಲ್ಲ ದೇವತೆಗಳೊಡನೆ ಇಂದ್ರನು ಸಮಾನಹವಿರ್ಭಾಗವನ್ನು ಹೊಂದಿರುವುದರಿಂದ ಎಲ್ಲ ದೇವತೆಗಳ ಜೊತೆಯಲ್ಲಿ ಶ್ರುತಿಯಲ್ಲಿ ಇಂದ್ರಶಬ್ದವು ಪಠಿತವಾಗಿದೆ.

ಮಿತ್ರಶ್ಚ ಮ ಇಂದ್ರಶ್ಚ ಮೇ ವರುಣಶ್ಚ ಮ ಇಂದ್ರಶ್ಚ ಮೇ ತ್ವಷ್ಟಾ ಚ [(೧೧)] ಮ ಇಂದ್ರಶ್ಚ ಮೇ ಧಾತಾ ಚ ಮ ಇಂದ್ರಶ್ಚ ಮೇ ವಿಷ್ಣುಶ್ಚ ಮ ಇಂದ್ರಶ್ಚ ಮೇಽಶ್ವಿನೌ ಚ ಮ ಇಂದ್ರಶ್ಚ ಮೇ ಮರುತಶ್ಚ ಮ ಇಂದ್ರಶ್ಚ ಮೇ ವಿಶ್ವೇ ಚ ಮೇ ದೇವಾ ಇಂದ್ರಶ್ಚ ಮೇ ಪೃಥಿವೀ ಚ ಮ ಇಂದ್ರಶ್ಚ ಮೇಽಂತರಿಕ್ಷಂ ಚ ಮ ಇಂದ್ರಶ್ಚ ಮೇ

---

ಮಿತ್ರಃ । ಚ । ಮೇ । ಇಂದ್ರಃ । ಚ । ಮೇ । ವರುಣಃ । ಚ । ಮೇ । ಇಂದ್ರಃ । ಚ । ಮೇ । ತ್ವಷ್ಟಾ । ಚ । (೧೧) । ಮೇ । ಇಂದ್ರಃ । ಚ । ಮೇ । ಧಾತಾ । ಚ । ಮೇ । ಇಂದ್ರಃ । ಚ । ಮೇ । ವಿಷ್ಣುಃ । ಚ । ಮೇ । ಇಂದ್ರಃ । ಚ । ಮೇ । ಅಶ್ವಿನೌ । ಚ । ಮೇ । ಇಂದ್ರಃ । ಚ । ಮೇ । ಮರುತಃ । ಚ । ಮೇ । ಇಂದ್ರಃ । ಚ । ಮೇ । ವಿಶ್ವೇ । ಚ । ಮೇ । ದೇವಾಃ । ಇಂದ್ರಃ । ಚ । ಮೇ । ಪೃಥಿವೀ । ಚ । ಮೇ । ಇಂದ್ರಃ । ಚ । ಮೇ । ಅಂತರಿಕ್ಷಮ್ । ಚ । ಮೇ । ಇಂದ್ರಃ । ಚ । ಮೇ ।

**ಪದಶಃ ಅರ್ಥ/ತಾತ್ಪರ್ಯ.** ———

**ಮಿತ್ರಃ ಚ ಮೇ**=ಮಿತ್ರದೇವನೂ ನನ್ನಲ್ಲಿ ಅನುಗ್ರಹಬುದ್ಧಿಯನ್ನು ತೋರಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಅನುಗ್ರಹಿಸಲಿ. **ವರುಣಃ ಚ ಮೇ**= ಜಲಾಧಿಪತಿಯಾದ ವರುಣನೂ ನನಗೆ ಅನುಕೂಲನಾಗಲಿ. **ಇಂದ್ರಃ ಚ ಮೇ**=ಇಂದ್ರದೇವನೂ ನನ್ನಲ್ಲಿ ಪ್ರಸನ್ನನಾಗಲಿ. **ತ್ವಷ್ಟಾ ಚ ಮೇ**=ತ್ವಷ್ಟೃದೇವನೂ ನನಗೆ ಅನುಕೂಲನಾಗಲಿ. **ಇಂದ್ರಃ ಚ ಮೇ**=ಇಂದ್ರದೇವನೂ ನನ್ನಲ್ಲಿ ಪ್ರಸನ್ನನಾಗಲಿ. **ಧಾತಾ ಚ ಮೇ**=ಧಾತೃದೇವನೂ ನನಗೆ ಸುಮುಖನಾಗಲಿ. **ಇಂದ್ರಃ ಚ ಮೇ**=ದೇವತೆಗಳ ಒಡೆಯನಾದ ಇಂದ್ರನೂ ನನ್ನಲ್ಲಿ ಕೃಪೆದೋರಲಿ. **ವಿಷ್ಣುಃ ಚ ಮೇ**=ಯಜ್ಞರೂಪನಾದ ವಿಷ್ಣುದೇವನೂ ನನಗೆ ಸುಪ್ರಸನ್ನನಾಗಲಿ. **ಇಂದ್ರಃ ಚ ಮೇ**=ಪರಮೈಶ್ವರ್ಯಸಂಪನ್ನನಾದ ಇಂದ್ರನೂ ನನ್ನಲ್ಲಿ ಪ್ರಸನ್ನನಾಗಲಿ. **ಅಶ್ವಿನೌ ಚ ಮೇ**=ದೇವವೈದ್ಯರಾದ ಅಶ್ವಿನೀದೇವತೆಗಳೂ ನನ್ನಲ್ಲಿ ಅನುಗ್ರಹಿಸಲಿ. **ಇಂದ್ರಃ ಚ ಮೇ**= ದೇವಾಧಿಪತಿಯಾದ ಇಂದ್ರನೂ ನನ್ನಲ್ಲಿ ಪ್ರಸನ್ನನಾಗಲಿ. **ಮರುತಃ ಚ ಮೇ**=ವಾಯುದೇವತೆಗಳೂ ನನಗೆ ಪ್ರಸನ್ನರಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಒಲಿಯಲಿ. **ವಿಶ್ವೇ ಚ ಮೇ ದೇವಾಃ**=ವಿಶ್ವೇದೇವತೆಗಳೂ ನನಗೆ ಅನುಗ್ರಹಿಸಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಪ್ರಸನ್ನನಾಗಲಿ. **ಪೃಥಿವೀ ಚ ಮೇ**=ಭೂದೇವಿಯೂ ನನಗೆ ಒಲಿದವಳಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಅನುಕೂಲನಾಗಲಿ. **ಅಂತರಿಕ್ಷಮ್ ಚ ಮೇ**= ಅಂತರಿಕ್ಷದೇವತೆಯೂ ನನ್ನಲ್ಲಿ ಪ್ರಸನ್ನವಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನ್ನಲ್ಲಿ ದಯೆತೋರಲಿ.

ದ್ಯೌಶ್ಚ॒ಮ ಇಂದ್ರ॑ಶ್ಚ॒ ಮೇ॒ ದಿಶ॑ಶ್ಚ॒ ಮ॒ ಇಂದ್ರ॑ಶ್ಚ॒ ಮೇ॒ ಮೂ॒ರ್ಧಾ ಚ॑ ಮ॒

ಇಂದ್ರ॑ಶ್ಚ ಮೇ ಪ್ರ॒ಜಾಪ॑ತಿಶ್ಚ॒ ಮ॒ ಇಂದ್ರ॑ಶ್ಚ ಮೇ ॥ ೧೨-6 ॥

[ತ್ವಷ್ಟಾ॑ ಚ॒ ದ್ಯೌಶ್ಚ॒॑ ಮ॒ ಏಕ॑ವಿಗ್ಂಶತಿಶ್ಚ ॥]

---

ದ್ಯೌಃ। ಚ॒। ಮೇ॒। ಇಂದ್ರ॑ಃ। ಚ॒। ಮೇ॒। ದಿಶ॑ಃ। ಚ॒। ಮೇ॒। ಇಂದ್ರ॑ಃ। ಚ॒। ಮೇ॒। ಮೂ॒ರ್ಧಾ। ಚ॒। ಮೇ॒। ಇಂದ್ರ॑ಃ।

ಚ॒। ಮೇ॒। ಪ್ರ॒ಜಾಪ॑ತಿ॒ರಿತಿ॑ ಪ್ರ॒ಜಾ-ಪ॒ತಿ॒ಃ। ಚ॒। ಮೇ॒। ಇಂದ್ರ॑ಃ। ಚ॒। ಮೇ॒॥ (೧೨)॥

ಪದಶಃ ಅರ್ಥ/ತಾತ್ಪರ್ಯ. ———————

**ದ್ಯೌಃ ಚ ಮೇ**=ದ್ಯುಲೋಕದೇವತೆಯೂ ನನ್ನನ್ನು ಅನುಗ್ರಹಿಸಲಿ. **ಇಂದ್ರಃ ಚ ಮೇ**=ಇಂದ್ರನೂ ನನ್ನನ್ನು ಅನುಗ್ರಹಿಸಲಿ. **ದಿಶಃ ಚ ಮೇ**=ಪೂರ್ವಾದಿದಿಗ್ದೇವತೆಗಳೂ ನನ್ನಲ್ಲಿ ಸೌಮನಸ್ಯವನ್ನು ತೋರಲಿ. **ಇಂದ್ರಃ ಚ ಮೇ**=ಇಂದ್ರನೂ ನನ್ನನ್ನು ಅನುಗ್ರಹಿಸಲಿ. **ಮೂರ್ಧಾ ಚ ಮೇ**=ಊರ್ಧ್ವದಿಗ್ದೇವತೆಯೂ ನನ್ನಲ್ಲಿ ಪ್ರಸನ್ನವಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಒಲಿಯಲಿ. **ಪ್ರಜಾಪತಿಃ ಚ ಮೇ**=ಪ್ರಜಾಪತಿ ದೇವನೂ ನನ್ನಲ್ಲಿ ಪ್ರಸನ್ನನಾಗಲಿ. **ಇಂದ್ರಃ ಚ ಮೇ**=ಇಂದ್ರನೂ ನನಗೆ ಒಳ್ಳೆಯವನಾಗಲಿ.

---

ದೇವತಾನುಗ್ರಹದಿಂದಲೇ ಮಾನವನು ಎಲ್ಲವನ್ನೂ ಪಡೆಯಬೇಕು. ಆ ಸಮಸ್ತದೇವತೆಗಳೂ ಅಭಿಮುಖರಾಗಿ ನಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ.

ವಿಶೇಷವಾಗಿ ಇಂದ್ರನು ಸುಪ್ರಸನ್ನನಾಗಲೆಂದು ಪ್ರಾರ್ಥನೆ.

## ॥ ಸಪ್ತಮೋಽನುವಾಕಃ ॥

**ಅಗ್ಂಶುಶ್ಚ ಮೇ ರಶ್ಮಿಶ್ಚ ಮೇಽದಾಭ್ಯಶ್ಚ ಮೇಽಧಿಪತಿಶ್ಚ ಮ ಉಪಾಗ್ಂಶುಶ್ಚ ಮೇಽಂತರ್ಯಾಮಶ್ಚ ಮ ಐಂದ್ರವಾಯವಶ್ಚ ಮೇ**

---

ಅಗ್ಂಶುಃ । ಚ । ಮೇ । ರಶ್ಮಿಃ । ಚ । ಮೇ । ಅದಾಭ್ಯಃ । ಚ । ಮೇ । ಅಧಿಪತಿರಿತ್ಯಧಿ–ಪತಿಃ । ಚ । ಮೇ । ಉಪಾಗ್ಂಶುರಿತ್ಯುಪ–ಅಗ್ಂಶುಃ । ಚ । ಮೇ । ಅಂತರ್ಯಾಮ ಇತ್ಯಂತಃ–ಯಾಮಃ । ಚ । ಮೇ । ಐಂದ್ರವಾಯವ ಇತ್ಯೈಂದ್ರ–ವಾಯವಃ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| ಅಗ್ಂಶುಶ್ಚ ಮೇ...ಹಾರಿಯೋಜನಶ್ಚ ಮೇ ॥ | ವಸೋರ್ಧಾರಾಹೋಮಕ್ಕಾಗಿ. |

ಪದಶಃ ಅರ್ಥ/ತಾತ್ಪರ್ಯ. ————

***ಅಗ್ಂಶುಃ ಚ ಮೇ**=ಅಂಶುಗ್ರಹವೂ ನನಗೆ ಲಭಿಸಲಿ. **ರಶ್ಮಿಃ ಚ ಮೇ**=*1ಅದಾಭ್ಯಗ್ರಹವೂ ನನಗೆ ಲಭಿಸಲಿ. **ಅದಾಭ್ಯಃ ಚ ಮೇ**=ರಶ್ಮಿಯಾಗಿರುವ ಅದಾಭ್ಯಗ್ರಹವು ನನಗೆ ಒದಗಲಿ. **ಅಧಿಪತಿಃ ಚ ಮೇ**=*2ದಧಿಗ್ರಹವು ನನಗೆ ಫಲಸಾಧಕವಾಗಲಿ. **ಉಪಾಗ್ಂಶುಃ ಚ ಮೇ**=ಉಪಾಂಶುಗ್ರಹವೂ ನನಗೆ ಒದಗಲಿ. **ಅಂತರ್ಯಾಮಃ ಚ ಮೇ**=ಅಂತರ್ಯಾಮಗ್ರಹವೂ ನನಗೆ ಒದಗಲಿ. **ಐಂದ್ರವಾಯವಃ ಚ ಮೇ**=ಐಂದ್ರವಾಯವಗ್ರಹವೂ ನನಗೆ ದೊರೆಯಲಿ.

---

* ಈ ಅನುವಾಕದಲ್ಲಿ ಬರುವ ಅಂಶ್ವಾದಿಗಳು ಸೋಮರಸವನ್ನು ಸಂಗ್ರಹಿಸುವ ಗ್ರಹಪಾತ್ರಗಳು. ಇವುಗಳ ಗ್ರಹಣಮಂತ್ರಗಳು ಸಂಹಿತೆಯ ಪ್ರಥಮಕಾಂಡದ ನಾಲ್ಕನೆಯ ಪ್ರಶ್ನದಲ್ಲಿ ಹೇಳಲ್ಪಟ್ಟಿವೆ. ಈ ಗ್ರಹಗಳು ಸೋಮಯಾಗಸಾಧನಗಳು. ಇವುಗಳು ನನಗೆ ಲಭಿಸಲಿ. ಸೋಮದೇವತೆಗಳು ನನ್ನನ್ನು ಅನುಗ್ರಹಿಸಲಿ ಎಂಬ ಪ್ರಾರ್ಥನೆಯು ಇಲ್ಲಿದೆ.

*1 **'ಶುಕ್ರಂ ತೇ ಶುಕ್ರೇಣ ಗೃಹ್ಣಾಮ್ಯಹ್ನೋ ರೂಪೇಣ ಸೂರ್ಯಸ್ಯ ರಶ್ಮಿಭಿಃ'** ಎಂದು ರಶ್ಮಿಪದದಿಂದ ಯುಕ್ತವಾದ ಮಂತ್ರದಿಂದ ಗ್ರಹಿಸಲ್ಪಡುತ್ತದೆ. ಆದುದರಿಂದ ಅದಾಭ್ಯಗ್ರಹವೇ ಪರಿಗ್ರಹ ಮಾಡುವ ದಶೆಯಲ್ಲಿ ರಶ್ಮಿ ಎನಿಸಿದೆ.

*2 **'ಜ್ಯೇಷ್ಠೋ ವಾ ಏಷ ಗ್ರಹಾಣಾಮ್'** ಎಂದು ಸ್ತುತಿಸಲ್ಪಡುವ ದಧಿಗ್ರಹವು ಅಧಿಪತಿಗ್ರಹವೆನಿಸಿದೆ.

ಮೈತ್ರಾವರುಣಶ್ಚ ಮ ಆಶ್ವಿನಶ್ಚ ಮೇ ಪ್ರತಿಪ್ರಸ್ಥಾನಶ್ಚ ಮೇ ಶುಕ್ರಶ್ಚ ಮೇ ಮಂಥೀ ಚ ಮ ಆಗ್ರಯಣಶ್ಚ ಮೇ ವೈಶ್ವದೇವಶ್ಚ ಮೇ ಧ್ರುವಶ್ಚ ಮೇ ವೈಶ್ವಾನರಶ್ಚ ಮ ಋತುಗ್ರಹಾಶ್ಚ [(೧೩)ಮೇಽತಿಗ್ರಾಹ್ಯಾಶ್ಚ]ಮೇಽತಿಗ್ರಾಹ್ಯಾಶ್ಚ ಮ ಐಂದ್ರಾಗ್ನಶ್ಚ ಮೇ ವೈಶ್ವದೇವಶ್ಚ ಮೇ ಮರುತ್ವತೀಯಾಶ್ಚ ಮೇ ಮಾಹೇಂದ್ರಶ್ಚ ಮ

---

ಮೈತ್ರಾವರುಣ ಇತಿ ಮೈತ್ರಾ-ವರುಣಃ । ಚ । ಮೇ । ಆಶ್ವಿನಃ । ಚ । ಮೇ । ಪ್ರತಿಪ್ರಸ್ಥಾನ ಇತಿ ಪ್ರತಿ-ಪ್ರಸ್ಥಾನಃ । ಚ । ಮೇ । ಶುಕ್ರಃ । ಚ । ಮೇ । ಮಂಥೀ । ಚ । ಮೇ । ಆಗ್ರಯಣಃ । ಚ । ಮೇ । ವೈಶ್ವದೇವ ಇತಿ ವೈಶ್ವ-ದೇವಃ । ಚ । ಮೇ । ಧ್ರುವಃ । ಚ । ಮೇ । ವೈಶ್ವಾನರಃ । ಚ । ಮೇ । ಋತುಗ್ರಹಾ ಇತ್ಯೃತು-ಗ್ರಹಾಃ । ಚ । (೧೩) । ಮೇ । ಅತಿಗ್ರಾಹ್ಯಾ ಇತ್ಯತಿ-ಗ್ರಾಹ್ಯಾಃ । ಚ । ಮೇ । ಐಂದ್ರಾಗ್ನ ಇತ್ಯೈಂದ್ರ-ಅಗ್ನಃ । ಚ । ಮೇ । ವೈಶ್ವದೇವ ಇತಿ ವೈಶ್ವ-ದೇವಃ । ಚ । ಮೇ । ಮರುತ್ವತೀಯಾಃ । ಚ । ಮೇ । ಮಾಹೇಂದ್ರ ಇತಿ ಮಾಹಾ-ಇಂದ್ರಃ । ಚ । ಮೇ ।

**ಪದಶಃ ಅರ್ಥ/ತಾತ್ಪರ್ಯ.**

**ಮೈತ್ರಾವರುಣಃ ಚ ಮೇ**=ಮೈತ್ರಾವರುಣಗ್ರಹವೂ ನನಗೆ ಪ್ರಾಪ್ತವಾಗಲಿ. **ಆಶ್ವಿನಃ ಚ ಮೇ**=ಆಶ್ವಿನ ಗ್ರಹವೂ ನನಗೆ ಯಾಗಸಾಧಕವಾಗಲಿ. **ಪ್ರತಿಪ್ರಸ್ಥಾನಃ ಚ ಮೇ**=ದ್ವಿದೇವತ್ಯಗ್ರಹಸಹಭಾವಿಯಾದ ಪ್ರತಿ ಪ್ರಸ್ಥಾನವೂ/ಪ್ರತಿಗ್ರಾಹ್ಯವೂ ನನಗೆ ಲಭಿಸಲಿ. **ಶುಕ್ರಃ ಚ ಮೇ**=ಶುಕ್ರಗ್ರಹವೂ ನನಗೆ ಒದಗಿ ಬರಲಿ. **ಮಂಥೀ ಚ ಮೇ**=ಮಂಥಿಗ್ರಹವೂ ನನಗೆ ಲಭಿಸಲಿ. **ಆಗ್ರಯಣಃ ಚ ಮೇ**=ಆಗ್ರಯಣಗ್ರಹವೂ ನನಗೆ ಲಭಿಸಲಿ. **ವೈಶ್ವದೇವಃ ಚ ಮೇ**=ಪ್ರಾತಃಸವನದ ವೈಶ್ವದೇವಗ್ರಹವೂ ನನಗೆ ದೊರೆಯಲಿ. **ಧ್ರುವಃ ಚ ಮೇ**= *ಧ್ರುವಗ್ರಹವೂ ನನಗೆ ಪ್ರಾಪ್ತವಾಗಲಿ. **ವೈಶ್ವಾನರಃ ಚ ಮೇ**=ವೈಶ್ವಾನರವಾದ ಧ್ರುವಗ್ರಹವೂ ನನಗೆ ಒದಗಲಿ. **ಋತುಗ್ರಹಾಃ ಚ ಮೇ**=ಋತುಗ್ರಹಗ್ರಹಗಳೂ ನನಗೆ ಲಭಿಸಲಿ. **ಅತಿಗ್ರಾಹ್ಯಾಃ ಚ ಮೇ**= ಅತಿಗ್ರಾಹ್ಯಗ್ರಹಗಳೂ ನನಗೆ ಲಭಿಸಲಿ. **ಐಂದ್ರಾಗ್ನಃ ಚ ಮೇ**=ಐಂದ್ರಾಗ್ನಗ್ರಹವೂ ನನಗೆ ಪ್ರಾಪ್ತವಾಗಲಿ. **ವೈಶ್ವದೇವಃ ಚ ಮೇ**=ತೃತೀಯಸವನದ ವೈಶ್ವದೇವಗ್ರಹವೂ ನನಗೆ ಪ್ರಾಪ್ತವಾಗಲಿ. **ಮರುತ್ವತೀಯಾಃ ಚ ಮೇ**= ಮರುತ್ವತೀಯಗ್ರಹಗಳೂ ನನಗೆ ಲಭಿಸಲಿ. **ಮಾಹೇಂದ್ರಃ ಚ ಮೇ**=ಮಾಹೇಂದ್ರಗ್ರಹವೂ ನನಗೆ ಲಭ್ಯವಾಗಲಿ.

---

* ವೈಶ್ವಾನರಸೂಕ್ತದಿಂದ ಆವನಯನ ಮಾಡುವುದರಿಂದ ಈ ಗ್ರಹವನ್ನೇ **ವೈಶ್ವಾನರ** ಎಂದು ಶ್ರುತಿಯು ತಿಳಿಸಿದೆ.

ಆದಿತ್ಯಶ್ಚ ಮೇ ಸಾವಿತ್ರಶ್ಚ ಮೇ ಸಾರಸ್ವತಶ್ಚ ಮೇ ಪೌಷ್ಣಶ್ಚ ಮೇ ಪಾತ್ನೀವತಶ್ಚ ಮೇ ಹಾರಿಯೋಜನಶ್ಚ ಮೇ ॥ ೧೪–7 ॥

[ಋತುಗ್ರಹಾಶ್ಚ ಚತುಸ್ತ್ರಿಗ್ಂಶಚ್ಚ ॥]

---

ಆದಿತ್ಯಃ । ಚ । ಮೇ । ಸಾವಿತ್ರಃ । ಚ । ಮೇ । ಸಾರಸ್ವತಃ । ಚ । ಮೇ । ಪೌಷ್ಣಃ । ಚ । ಮೇ । ಪಾತ್ನೀವತ ಇತಿ ಪಾತ್ನೀ–ವತಃ । ಚ । ಮೇ । ಹಾರಿಯೋಜನ ಇತಿ ಹಾರಿ–ಯೋಜನಃ । ಚ । ಮೇ ॥ (೧೪) ॥

ಪದಶಃ ಅರ್ಥ/ತಾತ್ಪರ್ಯ.

**ಆದಿತ್ಯಃ ಚ ಮೇ**=ಆದಿತ್ಯಗ್ರಹವೂ ನನಗೆ ಪ್ರಾಪ್ತವಾಗಲಿ. **ಸಾವಿತ್ರಃ ಚ ಮೇ**=ಸಾವಿತ್ರಗ್ರಹವೂ ನನಗೆ ಒದಗಲಿ. **ಸಾರಸ್ವತಃ ಚ ಮೇ**=*ಸಾರಸ್ವತಗ್ರಹವೂ ನನಗೆ ಒದಗಲಿ. **ಪೌಷ್ಣಃ ಚ ಮೇ**=ವಿಕೃತಿಯಾಗದಲ್ಲಿರುವ ಪೌಷ್ಣಗ್ರಹವೂ ನನಗೆ ದೊರೆಯಲಿ. **ಪಾತ್ನೀವತಃ ಚ ಮೇ**=ಪಾತ್ನೀವತಗ್ರಹವೂ ನನಗೆ ಲಭಿಸಲಿ. **ಹಾರಿಯೋಜನಃ ಚ ಮೇ**=ಹಾರಿಯೋಜನಗ್ರಹವೂ ನನಗೆ ಫಲಪ್ರದವಾಗಿ ಪರಿಣಮಿಸಲಿ.

---

ಗ್ರಹಮಂತ್ರಗಳು 'ಆ ದದೇ' [ತೈ. ಸಂ. 1.4] ಪ್ರಪಾಠಕದಲ್ಲಿವೆ. ಆ ಗ್ರಹಗಳೆಲ್ಲವೂ ಯಾಗಸಾಧನಗಳಾಗಿ ಸೋಮಯಾಗದೇವತೆಗಳ ಅನುಗ್ರಹವನ್ನು ನನಗೆ ಒದಗಿಸಲಿ ಎಂಬ ಪ್ರಾರ್ಥನೆಯು ಇಲ್ಲಿದೆ.

---

* ಅಭಿಷೇಚನೀಯವೆಂಬ ವಿಕೃತಿಯಾಗದಲ್ಲಿ ಈ ಗ್ರಹವು ವಿನಿಯೋಗವಾಗುವುದು. **'ಸಾರಸ್ವತಂ ಗ್ರಹಂ ಗೃಹ್ಣಾತಿ'** ಎಂಬ ಶ್ರುತಿವಚನವಿದೆ.

## ॥ ಅಷ್ಟಮೋಽನುವಾಕಃ ॥

ಇಧ್ಮಶ್ಚ ಮೇ ಬರ್ಽಹಿಶ್ಚ ಮೇ ವೇದಿಶ್ಚ ಮೇ ಧಿಷ್ಣಿಯಾಶ್ಚ ಮೇ ಸ್ರುಚಶ್ಚ ಮೇ
ಚಮಸಾಶ್ಚ ಮೇ ಗ್ರಾವಾಣಶ್ಚ ಮೇ ಸ್ವರವಶ್ಚ ಮ ಉಪರವಾಶ್ಚ
ಮೇಽಧಿಷವಣೇ ಚ ಮೇ ದ್ರೋಣಕಲಶಶ್ಚ ಮೇ

---

ಇಧ್ಮಃ । ಚ । ಮೇ । ಬರ್ಹಿಃ । ಚ । ಮೇ । ವೇದಿಃ । ಚ । ಮೇ । ಧಿಷ್ಣಿಯಾಃ । ಚ । ಮೇ । ಸ್ರುಚಃ । ಚ । ಮೇ ।
ಚಮಸಾಃ । ಚ । ಮೇ । ಗ್ರಾವಾಣಃ । ಚ । ಮೇ । ಸ್ವರವಃ । ಚ । ಮೇ । ಉಪರವಾ ಇತ್ಯುಪ-ರವಾಃ । ಚ । ಮೇ ।
ಅಧಿಷವಣೇ ಇತ್ಯಧಿ-ಸವನೇ । ಚ । ಮೇ । ದ್ರೋಣಕಲಶ ಇತಿ ದ್ರೋಣ-ಕಲಶಃ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| ಇಧ್ಮಶ್ಚ ಮೇ...ಸ್ವಗಾಕಾರಶ್ಚ ಮೇ ॥ | ವಸೋರ್ಧಾರಾಹೋಮಕ್ಕಾಗಿ. |

ಪದಶಃ ಅರ್ಥ/ತಾತ್ಪರ್ಯ. ——————

**ಇಧ್ಮಃ ಚ ಮೇ**=ಇಧ್ಮವೂ ನನಗೆ ಲಭಿಸಲಿ. **ಬರ್ಹಿಃ ಚ ಮೇ**=ಯಜ್ಞಸಾಧನವಾದ ದರ್ಭವೂ ನನಗೆ ಒದಗಲಿ. **ವೇದಿಃ ಚ ಮೇ**=ಯಾಗವೇದಿಯೂ ನನಗೆ ಲಭಿಸಲಿ. **ಧಿಷ್ಣಿಯಾಃ ಚ ಮೇ**=ಧಿಷ್ಣಿಯಗಳೂ ನನಗೆ ಪ್ರಾಪ್ತವಾಗಲಿ. **ಸ್ರುಚಃ ಚ ಮೇ**=ಹೋಮಸಾಧನಗಳಾದ ಸ್ರುಕ್ಕುಗಳೂ ನನಗೆ ಲಭಿಸಲಿ. **ಚಮಸಾಃ ಚ ಮೇ**=ಸೋಮಯಾಗಸಾಧನವಾದ ಚಮಸಗಳೂ ನನಗೆ ದೊರೆಯಲಿ. **ಗ್ರಾವಾಣಃ ಚ ಮೇ**=ಅಧಿಷವಣಸಾಧನವಾದ ಗ್ರಾವಗಳೂ ನನಗೆ ಪ್ರಾಪ್ತವಾಗಲಿ. **ಸ್ವರವಃ ಚ ಮೇ**=ಯಜ್ಞಸಾಧನಗಳಾದ ಸ್ವರುಗಳೂ ನನಗೆ ದೊರೆಯಲಿ. **ಉಪರವಾಃ ಚ ಮೇ**=ಯಜ್ಞಸಾಧನಗಳಾದ ಉಪರವಗಳೂ ನನಗೆ ದೊರೆಯಲಿ. **ಅಧಿಷವಣೇ ಚ ಮೇ**=ಯಜ್ಞಸಾಧನವಾದ ಅಧಿಷವಣಫಲಕಗಳು ನನಗೆ ಲಭಿಸಲಿ. **ದ್ರೋಣಕಲಶಃ ಚ ಮೇ**=ದ್ರೋಣಕಲಶವೂ ನನಗೆ ಒದಗಲಿ.

**ವಾಯವ್ಯಾನಿ ಚ ಮೇ ಪೂತಭೃಚ್ಚ ಮ ಆಧವನೀಯಶ್ಚ ಮ ಆಗ್ನೀಧ್ರಂ ಚ ಮೇ ಹವಿರ್ಧಾನಂ ಚ ಮೇ ಗೃಹಾಶ್ಚ ಮೇ ಸದಶ್ಚ ಮೇ ಪುರೋಡಾಶಾಶ್ಚ ಮೇ ಪಚತಾಶ್ಚ ಮೇಽವಭೃಥಶ್ಚ ಮೇ ಸ್ವಗಾಕಾರಶ್ಚ ಮೇ ॥ ೧೫–8 ॥**

**[ಗೃಹಾಶ್ಚ ಷೋಡಶ ಚ ॥]**

---

ವಾಯವ್ಯಾನಿ । ಚ । ಮೇ । ಪೂತಭೃದಿತಿ ಪೂತ–ಭೃತ್ । ಚ । ಮೇ । ಆಧವನೀಯ ಇತ್ಯಾ–ಧವನೀಯಃ । ಚ । ಮೇ । ಆಗ್ನೀಧ್ರಮಿತ್ಯಾಗ್ನಿ–ಇಧ್ರಮ್ । ಚ । ಮೇ । ಹವಿರ್ಧಾನಮಿತಿ ಹವಿಃ–ಧಾನಮ್ । ಚ । ಮೇ । ಗೃಹಾಃ । ಚ । ಮೇ । ಸದಃ । ಚ । ಮೇ । ಪುರೋಡಾಶಾಃ । ಚ । ಮೇ । ಪಚತಾಃ । ಚ । ಮೇ । ಅವಭೃಥ ಇತ್ಯವ–ಭೃಥಃ । ಚ । ಮೇ । ಸ್ವಗಾಕಾರ ಇತಿ ಸ್ವಗಾ–ಕಾರಃ । ಚ । ಮೇ ॥ (೧೫) ॥

**ಪದಶಃ ಅರ್ಥ/ತಾತ್ಪರ್ಯ.**

**ವಾಯವ್ಯಾನಿ ಚ ಮೇ**=ವಾಯವ್ಯಗ್ರಹಗಳೂ ನನಗೆ ಲಭಿಸಲಿ. **ಪೂತಭೃತ್ ಚ ಮೇ**=ಪೂತಭೃತ್ತೂ ನನಗೆ ಸಿಕ್ಕಲಿ. **ಆಧವನೀಯಃ ಚ ಮೇ**=ಆಧವನೀಯವೂ ನನಗೆ ಪ್ರಾಪ್ತವಾಗಲಿ. **ಆಗ್ನೀಧ್ರಮ್ ಚ ಮೇ**=ಆಗ್ನೀಧ್ರವೂ ನನಗೆ ಒದಗಲಿ. **ಹವಿರ್ಧಾನಮ್ ಚ ಮೇ**=ಹವಿರ್ಧಾನಮಂಟಪವೂ ನನಗೆ ಪ್ರಾಪ್ತವಾಗಲಿ. **ಗೃಹಾಃ ಚ ಮೇ**=ಪತ್ನೀಶಾಲಾಮಂಟಪಾದಿಗಳೂ ನನಗೆ ಸಿಗಲಿ. **ಸದಃ ಚ ಮೇ**=ಸದೋಮಂಟಪವೂ ನನಗೆ ಲಭಿಸಲಿ. **ಪುರೋಡಾಶಾಃ ಚ ಮೇ**=ಪುರೋಡಾಶಾದಿಹವಿಸ್ಸುಗಳೂ ನನಗೆ ಒದಗಿ ಬರಲಿ. **ಪಚತಾಃ ಚ ಮೇ**=ಶಾಮಿತ್ರಾದಿಗಳೂ ನನಗೆ ಒದಗಲಿ. **ಅವಭೃಥಃ ಚ ಮೇ**=ಅವಭೃಥಸ್ನಾನವೂ ನನಗೆ ದೊರೆಯಲಿ. **ಸ್ವಗಾಕಾರಃ ಚ ಮೇ**=ದೇವತೆಗಳನ್ನು ಆಹ್ವಾನಿಸುವ ಶಂಯುವಾಕವೂ ನನಗೆ ಲಭಿಸಲಿ.

---

**ಯಜ್ಞಾಂಗಗಳೆಲ್ಲವೂ ನನಗೆ ಲಭಿಸಿ, ಯಜ್ಞವು ಸಫಲವಾಗಲಿ ಎಂಬ ಪ್ರಾರ್ಥನೆಯು ಇದೆ.**



# ॥ ನವಮೋಽನುವಾಕಃ ॥

**ಅಗ್ನಿಶ್ಚ ಮೇ ಘರ್ಮಶ್ಚ ಮೇಽರ್ಕಶ್ಚ ಮೇ ಸೂರ್ಯಶ್ಚ ಮೇ ಪ್ರಾಣಶ್ಚ ಮೇಽಶ್ವಮೇಧಶ್ಚ ಮೇ ಪೃಥಿವೀ ಚ ಮೇಽದಿತಿಶ್ಚ ಮೇ ದಿತಿಶ್ಚ ಮೇ ದ್ಯೌಶ್ಚ ಮೇ**

---

ಅಗ್ನಿಃ । ಚ । ಮೇ । ಘರ್ಮಃ । ಚ । ಮೇ । ಅರ್ಕಃ । ಚ । ಮೇ । ಸೂರ್ಯಃ । ಚ । ಮೇ । ಪ್ರಾಣ ಇತಿ ಪ್ರ-ಅನಃ । ಚ । ಮೇ । ಅಶ್ವಮೇಧ ಇತ್ಯಶ್ವ-ಮೇಧಃ । ಚ । ಮೇ । ಪೃಥಿವೀ । ಚ । ಮೇ । ಅದಿತಿಃ । ಚ । ಮೇ । ದಿತಿಃ । ಚ । ಮೇ । ದ್ಯೌಃ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| **ಅಗ್ನಿಶ್ಚ ಮೇ...ಕಲ್ಪೇತಾಮ್ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

▲ **ಅಗ್ನಿಃ ಚ ಮೇ**=ಚಯನ ಮಾಡಿರುವ ಅಗ್ನಿಯು ನನಗೆ ಇಷ್ಟಸಾಧಕನಾಗಲಿ. **ಘರ್ಮಃ ಚ ಮೇ**= ಪ್ರವರ್ಗ್ಯವೂ ನನಗೆ ಕಾರ್ಯಸಾಧಕವಾಗಿ ಒದಗಲಿ. **ಅರ್ಕಃ ಚ ಮೇ**=*[1]ಅರ್ಕಯಾಗವೂ/ಅರ್ಕದೇವತೆಯೂ ನನಗೆ ಒದಗಲಿ. **ಸೂರ್ಯಃ ಚ ಮೇ**=*[2]ಸೌರ್ಯಯಾಗವೂ/ಸೂರ್ಯದೇವತೆಯೂ ನನಗೆ ಲಭಿಸಲಿ. **ಪ್ರಾಣಃ ಚ ಮೇ**=*[3]ಪ್ರಾಣಹೋಮವೂ/ವಾಯುದೇವತೆಯೂ ನನಗೆ ಕಾರ್ಯಸಾಧಕವಾಗಲಿ. **ಅಶ್ವಮೇಧಃ ಚ ಮೇ**=ಪ್ರಸಿದ್ಧವಾದ ಅಶ್ವಮೇಧಯಾಗವೂ ನನಗೆ ಲಭಿಸಲಿ. **ಪೃಥಿವೀ ಚ ಮೇ**= ಪೃಥಿವೀದೇವತೆಯೂ ನನಗೆ ಇಷ್ಟಪ್ರದವಾಗಲಿ. **ಅದಿತಿಃ ಚ ಮೇ**=ಅದಿತಿದೇವತೆಯೂ ಪ್ರಸನ್ನಳಾಗಿ ನನ್ನನ್ನು ಅನುಗ್ರಹಿಸಲಿ. **ದಿತಿಃ ಚ ಮೇ**=ದಿತಿದೇವತೆಯೂ ನನ್ನ ಇಷ್ಟಪ್ರದಳಾಗಲಿ. **ದ್ಯೌಃ ಚ ಮೇ**= ದ್ಯುಲೋಕದೇವತೆಯೂ ನನ್ನ ಇಷ್ಟಪ್ರದಳಾಗಲಿ.

---

*1 ಇಂದ್ರಾಯಾರ್ಕವತೇ ಪುರೋಡಾಶಮ್ [ತೈ. ಸಂ. 2.2.7] ಎಂದು ವಿಹಿತವಾಗಿರುವ ಯಾಗ.

*2 ಸೌರ್ಯಂ ಚರುಂ...[ತೈ. ಸಂ. 2.3.2] ಎಂದು ವಿಹಿತವಾಗಿದೆ.

*3 ಪ್ರಾಣಾಯ ಸ್ವಾಹಾ [ತೈ. ಸಂ. 7.1.19] ಎಂದು ವಿಹಿತವಾಗಿದೆ.

ಶಕ್ವರೀರಙ್ಗುಲಯೋ ದಿಶಶ್ಚ ಮೇ ಯಜ್ಞೇನ ಕಲ್ಪಂತಾಮೃಕ್ಚ ಮೇ ಸಾಮ ಚ ಮೇ ಸ್ತೋಮಶ್ಚ ಮೇ ಯಜುಶ್ಚ ಮೇ ದೀಕ್ಷಾ ಚ ಮೇ ತಪಶ್ಚ ಮ ಋತುಶ್ಚ ಮೇ ವ್ರತಂ ಚ ಮೇಽಹೋರಾತ್ರಯೋರ್ವೃಷ್ಟ್ಯಾ ಬೃಹದ್ರಥಂತರೇ ಚ ಮೇ ಯಜ್ಞೇನ ಕಲ್ಪೇತಾಮ್ ॥ ೧೬-9 ॥

[ದೀಕ್ಷಾಽಷ್ಟಾದಶ ಚ ॥]

ಶಕ್ವರೀಃ । ಅಙ್ಗುಲಯಃ । ದಿಶಃ । ಚ । ಮೇ । ಯಜ್ಞೇನ । ಕಲ್ಪಂತಾಮ್ । ಋಕ್ । ಚ । ಮೇ । ಸಾಮ । ಚ । ಮೇ । ಸ್ತೋಮಃ । ಚ । ಮೇ । ಯಜುಃ । ಚ । ಮೇ । ದೀಕ್ಷಾ । ಚ । ಮೇ । ತಪಃ । ಚ । ಮೇ । ಋತುಃ । ಚ । ಮೇ । ವ್ರತಮ್ । ಚ । ಮೇ । ಅಹೋರಾತ್ರಯೋರಿತ್ಯಹಃ-ರಾತ್ರಯೋಃ । ವೃಷ್ಟ್ಯಾ । ಬೃಹದ್ರಥಂತರೇ ಇತಿ ಬೃಹತ್-ರಥಂತರೇ । ಚ । ಮೇ । ಯಜ್ಞೇನ । ಕಲ್ಪೇತಾಮ್ ॥ (೧೬) ॥

ಪದಶಃ ಅರ್ಥ/ತಾತ್ಪರ್ಯ.

**ಶಕ್ವರೀಃ**=ಶಕ್ವರೀ ಎಂಬ ಛಂದೋವಿಶೇಷವೂ ನನ್ನ ಕಾರ್ಯಸಾಧಕವಾಗಲಿ. **ಅಙ್ಗುಲಯಃ**=ವಿರಾಟ್ ಪುರುಷನ ಬೆರಳುಗಳಂತಿರುವ, **ದಿಶಃ ಚ**= ಪೂರ್ವ ಮುಂತಾದ ದಿಕ್ಕುಗಳೂ, ಆಗ್ನೇಯ ಮುಂತಾದ ವಿದಿಕ್ಕುಗಳೂ; **ಮೇ ಯಜ್ಞೇನ ಕಲ್ಪಂತಾಮ್**=ನನ್ನ ಯಜ್ಞದಿಂದ ತಮ್ಮ ತಮ್ಮ ಕಾರ್ಯಸಮರ್ಥವಾಗಲಿ. **ಋಕ್ ಚ ಮೇ**=ಋಕ್ಕುಗಳೂ ನನಗೆ ಕಾರ್ಯಸಾಧಕಗಳಾಗಲಿ. **ಸಾಮ ಚ ಮೇ**=ಗಾನವಿಶಿಷ್ಟವಾದ ಮಂತ್ರವೂ ನನ್ನ ಯಾಗದಲ್ಲಿ ಒದಗಲಿ. **ಸ್ತೋಮಃ ಚ ಮೇ**=ಸಾಮಾವೃತ್ತಿರೂಪವಾದ ಸ್ತೋತ್ರವೂ ನನಗೆ ಒದಗಲಿ. **ಯಜುಃ ಚ ಮೇ**=ಯಜುರ್ಮಂತ್ರವೂ ನನಗೆ ಲಭಿಸಲಿ. **ದೀಕ್ಷಾ ಚ ಮೇ**=ಯಜಮಾನನ ದೀಕ್ಷಾಸಂಸ್ಕಾರವೂ ನನಗೆ ಒದಗಲಿ. **ತಪಃ ಚ ಮೇ**=ಪಾಪಕ್ಷಯಾರ್ಥವಾದ ಆಹಾರನಿಯಮಾದಿಗಳು/ ಕೃಚ್ಛ್ರಾದಿಗಳೂ ನನಗೆ ಒದಗಲಿ. **ಋತುಃ ಚ ಮೇ**=ವಸಂತವೇ ಮೊದಲಾದ ಯಾಗಾಂಗವಾದ ಕಾಲವೂ ನನಗೆ ಒದಗಲಿ. **ವ್ರತಮ್ ಚ ಮೇ**=*ಏಕಸ್ತನಾದಿವ್ರತವೂ ನನಗೆ ಒದಗಲಿ. **ಅಹೋರಾತ್ರಯೋಃ ವೃಷ್ಟ್ಯಾ** [ಮದೀಯಮ್ ಸಸ್ಯಮ್ ಕಲ್ಪತಾಮ್]=ಹಗಲು-ರಾತ್ರಿಗಳು ಸುರಿಯುವ ಮಳೆಯಿಂದ; ನನ್ನ ಸಸ್ಯವು ಚೆನ್ನಾಗಿ ಬೆಳೆದು ನನ್ನ ಕಾರ್ಯಸಮರ್ಥವಾಗಲಿ. **ಬೃಹದ್ರಥಂತರೇ ಚ**=ಮುಖ್ಯವಾದ ಬೃಹತ್-ರಥಂತರಸಾಮಗಳು; **ಮೇ ಯಜ್ಞೇನ ಕಲ್ಪೇತಾಮ್**=ನನ್ನ ಯಜ್ಞದಿಂದ ತಮ್ಮ ಕಾರ್ಯದಲ್ಲಿ ಸಮರ್ಥವಾಗಿ ಯಜ್ಞವನ್ನು ನೆರವೇರಿಸಿ, ಫಲಪ್ರದವಾಗಲಿ.

* ಹಸುವಿನ ಒಂದೇ ಮೊಲೆಯ ಹಾಲನ್ನು ಕುಡಿಯುವುದು.

## ॥ ದಶಮೋऽನುವಾಕಃ ॥

**ಗರ್ಭಾಶ್ಚ ಮೇ ವತ್ಸಾಶ್ಚ ಮೇ ತ್ರ್ಯವಿಶ್ಚ ಮೇ ತ್ರ್ಯವೀ ಚ ಮೇ ದಿತ್ಯವಾಟ್ಚ ಮೇ ದಿತ್ಯೌಹೀ ಚ ಮೇ ಪಂಚಾವಿಶ್ಚ ಮೇ ಪಂಚಾವೀ ಚ ಮೇ ತ್ರಿವತ್ಸಶ್ಚ ಮೇ ತ್ರಿವತ್ಸಾ ಚ ಮೇ ತುರ್ಯವಾಟ್ ಚ ಮೇ**

---

ಗರ್ಭಾಃ । ಚ । ಮೇ । ವತ್ಸಾಃ । ಚ । ಮೇ । ತ್ರ್ಯವಿರಿತಿ ತ್ರಿ–ಅವಿಃ । ಚ । ಮೇ । ತ್ರ್ಯವೀತಿ ತ್ರಿ–ಅವೀ । ಚ । ಮೇ । ದಿತ್ಯವಾಡಿತಿ ದಿತ್ಯ–ವಾಟ್ । ಚ । ಮೇ । ದಿತ್ಯೌಹೀ । ಚ । ಮೇ । ಪಂಚಾವಿರಿತಿ ಪಂಚ–ಅವಿಃ । ಚ । ಮೇ । ಪಂಚಾವೀತಿ ಪಂಚ–ಅವೀ । ಚ । ಮೇ । ತ್ರಿವತ್ಸಇತಿ ತ್ರಿ–ವತ್ಸಃ । ಚ । ಮೇ । ತ್ರಿವತ್ಸೇತಿ ತ್ರಿ–ವತ್ಸಾ । ಚ । ಮೇ । ತುರ್ಯವಾಡಿತಿ ತುರ್ಯ–ವಾಟ್ । ಚ । ಮೇ ।

---

| ಮಂತ್ರ | ವಿನಿಯೋಗ |
|---|---|
| **ಗರ್ಭಾಶ್ಚ...ಕಲ್ಪತಾಮ್ ॥** | ವಸೋರ್ಧಾರಾಹೋಮಕ್ಕಾಗಿ. |

**ಪದಶಃ ಅರ್ಥ/ತಾತ್ಪರ್ಯ.**

**ಗರ್ಭಾಃ ಚ ಮೇ**=ಪ್ರಾಣಿಗಳ ಗರ್ಭಗಳೂ ನನಗೆ ಕಾರ್ಯಸಾಧಕಗಳಾಗಲಿ. **ವತ್ಸಾಃ ಚ ಮೇ**=ಕರುಗಳೂ ನನ್ನ ಕಾರ್ಯಸಾಧಕಗಳಾಗಿ ಪರಿಣಮಿಸಲಿ. **ತ್ರ್ಯವಿಃ ಚ ಮೇ**=ಒಂದುವರೆ ವರ್ಷದ ಹೋರಿಕರುವೂ ನನಗೆ ಪ್ರಯೋಜನಕಾರಿಯಾಗಲಿ. **ತ್ರ್ಯವೀ ಚ ಮೇ**=ಒಂದೂವರೆ ವರ್ಷದ ಹೆಣ್ಣುಕರುವೂ ನನಗೆ ಪ್ರಯೋಜನವನ್ನುಂಟುಮಾಡಲಿ. **ದಿತ್ಯವಾಟ್ ಚ ಮೇ**=ಎರಡು ವರ್ಷಗಳ ಹೋರಿಕರುವೂ ನನ್ನ ಕಾರ್ಯಸಾಧಕವಾಗಲಿ. **ದಿತ್ಯೌಹೀ ಚ ಮೇ**=ಎರಡು ವರ್ಷಗಳ ಹೆಣ್ಣು ಕರುವೂ ನನಗೆ ಲಾಭಕಾರಿಯಾಗಲಿ. **ಪಂಚಾವಿಃ ಚ ಮೇ**=ಎರಡುವರೆ ವರ್ಷಗಳ ಗಂಡುಕರುವೂ ನನಗೆ ಕಾರ್ಯಸಾಧಕವಾಗಲಿ. **ಪಂಚಾವೀ ಚ ಮೇ**=ಎರಡುವರೆ ವರ್ಷಗಳ ಹೆಣ್ಣುಕರುವೂ ನನಗೆ ಪ್ರಯೋಜನಕಾರಿಯಾಗಲಿ. **ತ್ರಿವತ್ಸಃ ಚ ಮೇ**=ಮೂರು ವರ್ಷಗಳಾಗಿರುವ ಹೋರಿಕರುವೂ ನನಗೆ ಕಾರ್ಯಸಾಧಕವಾಗಲಿ. **ತ್ರಿವತ್ಸಾ ಚ ಮೇ**=ಮೂರು ವರ್ಷಗಳ ಹೆಣ್ಣು ಕರುವೂ ಪ್ರಯೋಜನಪ್ರದವಾಗಲಿ. **ತುರ್ಯವಾಟ್ ಚ ಮೇ**=ಮೂರುವರೆ ವರ್ಷಗಳ ಹೋರಿಯೂ ನನ್ನ ಕಾರ್ಯಸಮರ್ಥವಾಗಲಿ.

ತುರ್ಯೌಹೀ ಚ ಮೇ ಪಷ್ಠವಾಚ್ಚ ಮೇ ಪಷ್ಠೌಹೀ ಚ ಮ ಉಕ್ಷಾ ಚ ಮೇ ವಶಾ ಚ ಮ ಋಷಭಶ್ಚ [(೧೭) ಮೇ ವೇಹಚ್ಚ] ಮೇ ವೇಹಚ್ಚ ಮೇಽನಡ್ವಾಂಶ್ಚ ಮೇ ಧೇನುಶ್ಚ ಮ ಆಯುರ್ಯಜ್ಞೇನ ಕಲ್ಪತಾಂ ಪ್ರಾಣೋ ಯಜ್ಞೇನ ಕಲ್ಪತಾಮಪಾನೋ ಯಜ್ಞೇನ ಕಲ್ಪತಾಂ

---

ತುರ್ಯೌಹೀ । ಚ । ಮೇ । ಪಷ್ಠವಾದಿತಿ ಪಷ್ಠ–ವಾತ್ । ಚ । ಮೇ । ಪಷ್ಠೌಹೀ । ಚ । ಮೇ । ಉಕ್ಷಾ । ಚ । ಮೇ । ವಶಾ । ಚ । ಮೇ । ಋಷಭಃ । ಚ । (೧೭) । ಮೇ । ವೇಹತ್ । ಚ । ಮೇ । ಅನಡ್ವಾನ್ । ಚ । ಮೇ । ಧೇನುಃ । ಚ । ಮೇ । ಆಯುಃ । ಯಜ್ಞೇನ । ಕಲ್ಪತಾಮ್ । ಪ್ರಾಣ ಇತಿ ಪ್ರ–ಅನಃ । ಯಜ್ಞೇನ । ಕಲ್ಪತಾಮ್ । ಅಪಾನ ಇತ್ಯಪ–ಅನಃ । ಯಜ್ಞೇನ । ಕಲ್ಪತಾಮ್ ।

ಪದಶಃ ಅರ್ಥ/ತಾತ್ಪರ್ಯ. ———

**ತುರ್ಯೌಹೀ ಚ ಮೇ**=ಮೂರುವರೆ ವರ್ಷಗಳ ಹೆಣ್ಣು ಕರುವೂ ನನಗೆ ಕಾರ್ಯಸಾಧಕವಾಗಲಿ. **ಪಷ್ಠವಾತ್ ಚ ಮೇ**=ನಾಲ್ಕು ವರ್ಷಗಳಾಗಿರುವ ಹೋರಿಯೂ ನನಗೆ ಕಾರ್ಯವನ್ನು ಸಾಧಿಸಿಕೊಡಲಿ. **ಪಷ್ಠೌಹೀ ಚ ಮೇ**=ನಾಲ್ಕು ವರ್ಷಗಳ ಹಸುವೂ ನನಗೆ ಪ್ರಯೋಜನಪ್ರದವಾಗಲಿ. **ಉಕ್ಷಾ ಚ ಮೇ**=ಸೇಚನಸಮರ್ಥವಾದ ಗೂಳಿಯೂ ನನ್ನ ಕಾರ್ಯವನ್ನು ಸಾಧಿಸಿಕೊಡಲಿ. **ವಶಾ ಚ ಮೇ**=ಬಂಜೆ ಹಸುವೂ ನನಗೆ ಫಲಪ್ರದವಾಗಲಿ. **ಋಷಭಃ ಚ ಮೇ**=ಉಕ್ಷಕ್ಕಿಂತಲೂ ಹೆಚ್ಚಿನ ವಯಸ್ಸಿನ ಗೂಳಿಯೂ ನನ್ನ ಕಾರ್ಯಸಾಧಕವಾಗಲಿ. **ವೇಹತ್ ಚ ಮೇ**=ಗರ್ಭಘಾತಿನಿಯಾದ ಗೋವು ನನಗೆ ಪ್ರಯೋಜನಕಾರಿಯಾಗಲಿ. **ಅನಡ್ವಾನ್ ಚ ಮೇ**=ಬಂಡಿಯನ್ನು ಎಳೆಯಬಲ್ಲ ಎತ್ತೂ ನನಗೆ ಕಾರ್ಯಸಾಧಕವಾಗಲಿ. ***ಧೇನುಃ ಚ ಮೇ**=ಹೊಸದಾಗಿ ಕರು ಹಾಕಿರುವ ಹಸುವೂ ನನಗೆ ಕಾರ್ಯಸಾಧಕವಾಗಲಿ. **ಆಯುಃ ಯಜ್ಞೇನ ಕಲ್ಪತಾಮ್**=ಈ ಯಾಗದಿಂದ ಶತಸಂವತ್ಸರಾದಿಯಾದ ಆಯುಸ್ಸೂ ತನ್ನ ಕಾರ್ಯಸಮರ್ಥವಾಗಲಿ. **ಪ್ರಾಣಃ ಯಜ್ಞೇನ ಕಲ್ಪತಾಮ್**=ಈ ಯಾಗದಿಂದ ಪ್ರಾಣವಾಯುವು ತನ್ನ ಕಾರ್ಯವನ್ನು ಸಾಧಿಸಲಿ. **ಅಪಾನಃ ಯಜ್ಞೇನ ಕಲ್ಪತಾಮ್**=ಈ ಕರ್ಮದಿಂದ ಅಪಾನವಾಯುವೂ ತನ್ನ ಕಾರ್ಯಸಮರ್ಥವಾಗಲಿ.

---

* ಮೇಲಿನ ಪಶುಗಳು ಯಾಗಸಾಧಕಗಳಾಗಿಯೂ, ಕೆಲವು ದಕ್ಷಿಣಾರೂಪವಾಗಿಯೂ, ಇನ್ನು ಕೆಲವು ವಸ್ತುಗಳನ್ನು ಸಾಗಿಸಲು ಸಹಕಾರಿಗಳಾಗಿಯೂ, ಇನ್ನೂ ಕೆಲವು ಕ್ಷೀರ–ಘೃತಾದಿಗಳಿಗಾಗಿಯೂ–ಅದರಿಂದ ಯಾಗಾನುಷ್ಠಾನವನ್ನು ಮಾಡಲು ಅನುಕೂಲವಾಗಿರಲಿ ಎಂಬ ಪ್ರಾರ್ಥನೆಯು ಇಲ್ಲಿದೆ.

ವ್ಯಾನೋ ಯಜ್ಞೇನ ಕಲ್ಪತಾಂ ಚಕ್ಷುರ್ಯಜ್ಞೇನ ಕಲ್ಪತಾಗ್ಂ ಶ್ರೋತ್ರಂ ಯಜ್ಞೇನ ಕಲ್ಪತಾಂ ಮನೋ ಯಜ್ಞೇನ ಕಲ್ಪತಾಂ ವಾಗ್ಯಜ್ಞೇನ ಕಲ್ಪತಾಮಾತ್ಮಾ ಯಜ್ಞೇನ ಕಲ್ಪತಾಂ ಯಜ್ಞೋ ಯಜ್ಞೇನ ಕಲ್ಪತಾಮ್ ॥ ೧೦–10 ॥

[ಋಷಭಶ್ಚ ಚತ್ವಾರಿಗ್ಂಶಚ್ಚ ॥]

---

ವ್ಯಾನ ಇತಿ ವಿ–ಅನಃ । ಯಜ್ಞೇನ । ಕಲ್ಪತಾಮ್ । ಚಕ್ಷುಃ । ಯಜ್ಞೇನ । ಕಲ್ಪತಾಮ್ । ಶ್ರೋತ್ರಮ್ । ಯಜ್ಞೇನ । ಕಲ್ಪತಾಮ್ । ಮನಃ । ಯಜ್ಞೇನ । ಕಲ್ಪತಾಮ್ । ವಾಕ್ । ಯಜ್ಞೇನ । ಕಲ್ಪತಾಮ್ । ಆತ್ಮಾ । ಯಜ್ಞೇನ । ಕಲ್ಪತಾಮ್ । ಯಜ್ಞಃ । ಯಜ್ಞೇನ । ಕಲ್ಪತಾಮ್ ॥ (೧೦) ॥

ಪದಶಃ ಅರ್ಥ/ತಾತ್ಪರ್ಯ. ——————

**ವ್ಯಾನಃ ಯಜ್ಞೇನ ಕಲ್ಪತಾಮ್**=ಈ ಯಾಗದಿಂದ ವ್ಯಾನವಾಯುವೂ ತನ್ನ ಕಾರ್ಯದಲ್ಲಿ ಸಮರ್ಥವಾಗಲಿ. **ಚಕ್ಷುಃ ಯಜ್ಞೇನ ಕಲ್ಪತಾಮ್**=ಈ ಯಾಗದಿಂದ ಕಣ್ಣೂ ತನ್ನ ನೋಡುವ ಕಾರ್ಯದಲ್ಲಿ ಸಮರ್ಥವಾಗಲಿ. **ಶ್ರೋತ್ರಮ್ ಯಜ್ಞೇನ ಕಲ್ಪತಾಮ್**=ಕೇಳುವ ನನ್ನ ಕಿವಿಯೂ ಈ ಯಾಗಾನುಷ್ಠಾನದಿಂದ ತನ್ನ ಕೆಲಸದಲ್ಲಿ ಶಕ್ತವಾಗಲಿ. **ಮನಃ ಯಜ್ಞೇನ ಕಲ್ಪತಾಮ್**=ಈ ಯಾಗಾನುಷ್ಠಾನದಿಂದ ಮನಸ್ಸೂ ತನ್ನ ಕಾರ್ಯದಲ್ಲಿ ಸಮರ್ಥವಾಗಲಿ. **ವಾಕ್ ಯಜ್ಞೇನ ಕಲ್ಪತಾಮ್**=ಈ ಅನುಷ್ಠಾನದಿಂದ ಮಂತ್ರಾದಿರೂಪವಾದ ವಾಕ್ಕು ತನ್ನ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಲಿ. **ಆತ್ಮಾ ಯಜ್ಞೇನ ಕಲ್ಪತಾಮ್**=ಈ ಯಾಗದಿಂದ ನನ್ನ ಶರೀರವೂ ತನ್ನ ಕಾರ್ಯದಲ್ಲಿ ಶಕ್ತವಾಗಲಿ. **ಯಜ್ಞಃ ಯಜ್ಞೇನ ಕಲ್ಪತಾಮ್**=ಈಗ ಮಾಡುತ್ತಿರುವ ಯಾಗದಿಂದ ಮುಂದೆ ಮಾಡುವ ಅಶ್ವಮೇಧಾದಿಯಾಗಗಳು ಫಲಿಸುವಂತಾಗಲಿ.

---

ಈ ಅನುವಾಕದಲ್ಲಿ ಬಂದಿರುವ **'ಕಲ್ಪತಾಮ್'** ಎಂಬ ಪದವು **'ವಾಜಶ್ಚ ಮೇ'** ಮುಂತಾದ ಕಡೆಗಳಲ್ಲಿಯೂ ಅನ್ವಯಿಸುತ್ತದೆ.

## ॥ ಏಕಾದಶೋಽನುವಾಕಃ ॥

**ಏಕಾ ಚ ಮೇ ತಿಸ್ರಶ್ಚ ಮೇ ಪಂಚ ಚ ಮೇ ಸಪ್ತ ಚ ಮೇ ನವ ಚ ಮ**
**ಏಕಾದಶ ಚ ಮೇ ತ್ರಯೋದಶ ಚ ಮೇ ಪಂಚದಶ ಚ ಮೇ**

---

ಏಕಾ । ಚ । ಮೇ । ತಿಸ್ರಃ । ಚ । ಮೇ । ಪಂಚ । ಚ । ಮೇ । ಸಪ್ತ । ಚ । ಮೇ । ನವ । ಚ । ಮೇ । ಏಕಾದಶ । ಚ । ಮೇ । ತ್ರಯೋದಶೇತಿ ತ್ರಯಃ–ದಶ । ಚ । ಮೇ । ಪಂಚದಶೇತಿ ಪಂಚ–ದಶ । ಚ । ಮೇ ।

---

ಈ ಮಂತ್ರದ ಬ್ರಾಹ್ಮಣದಲ್ಲಿ 'ದೇವಛಂದಸಂ ವಾ ಏಕಾ ಚ ತಿಸ್ರಶ್ಚ ಮನುಷ್ಯಛಂದಸಂ ಚತಸ್ರಶ್ಚಾಷ್ಟೌ ಚ ದೇವಛಂದಸಂ ಚೈವ ಮನುಷ್ಯಛಂದಸಂ ಚಾವರುಂಧೇ' ಎಂದು ಹೇಳಿದೆ. ವಿಷಮಸಂಖ್ಯೆಗಳು ದೇವ ಛಂದಸಗಳು. ಸಮಸಂಖ್ಯೆಗಳು ಮನುಷ್ಯಛಂದಸಗಳು. ಈ ಮಂತ್ರದಿಂದ ಎರಡನ್ನೂ ಹೊಂದಿದಂತಾಗುತ್ತದೆ. ಇವು ದೇವತೆಗಳ ಪ್ರೀತಿಗೆ ಹಾಗೂ ಮನುಷ್ಯರ ಪ್ರೀತಿಗೆ ಕಾರಣವಾದವುಗಳು.

---

| ಮಂತ್ರ | ವಿನಿಯೋಗ |
| --- | --- |
| **ಏಕಾ ಚ ಮೇ...ಅಧಿಪತಿಶ್ಚ ॥** | **ವಸೋರ್ಧಾರಾಹೋಮಕ್ಕಾಗಿ.** |

**ಪದಶಃ ಅರ್ಥ/ತಾತ್ಪರ್ಯ.**

🔔 **ಏಕಾ ಚ ಮೇ**=ಒಂದು ಎಂಬ ಸಂಖ್ಯೆಯೂ ನನಗೆ ಕಾರ್ಯಸಾಧಕವಾಗಲಿ. **ತಿಸ್ರಃ ಚ ಮೇ**='ಮೂರು' ಎಂಬ ಸಂಖ್ಯೆಯೂ ನನಗೆ ಒದಗಲಿ. **ಪಂಚ ಚ ಮೇ**='ಐದು' ಎಂಬ ಸಂಖ್ಯೆಯೂ ನನಗೆ ಪ್ರಾಪ್ತವಾಗಲಿ. **ಸಪ್ತ ಚ ಮೇ**='ಏಳು' ಎಂಬ ಸಂಖ್ಯೆಯೂ ನನಗೆ ಲಭಿಸಲಿ. **ನವ ಚ ಮೇ**='ಒಂಬತ್ತು' ಎಂಬ ಸಂಖ್ಯೆಯೂ ನನಗೆ ಕಾರ್ಯಸಾಧಕವಾಗಲಿ. **ಏಕಾದಶ ಚ ಮೇ**='ಹನ್ನೊಂದು' ಎಂಬ ಸಂಖ್ಯೆಯೂ ನನಗೆ ಪ್ರಯೋಜನಕಾರಿಯಾಗಿ ಪರಿಣಮಿಸಲಿ. **ತ್ರಯೋದಶ ಚ ಮೇ**='ಹದಿಮೂರು' ಎಂಬ ಸಂಖ್ಯೆಯೂ ನನಗೆ ಲಭ್ಯವಾಗಲಿ. **ಪಂಚದಶ ಚ ಮೇ**='ಹದಿನೈದೂ' ನನಗೆ ಕಾರ್ಯಸಾಧಕವಾಗಲಿ.

**ಸಪ್ತದಶ ಚ ಮೇ ನವದಶ ಚ ಮ ಏಕವಿಗ್ಂಶತಿಶ್ಚ ಮೇ ತ್ರಯೋವಿಗ್ಂಶತಿಶ್ಚ ಮೇ ಪಂಚವಿಗ್ಂಶತಿಶ್ಚ ಮೇ ಸಪ್ತವಿಗ್ಂಶತಿಶ್ಚ ಮೇ ನವವಿಗ್ಂಶತಿಶ್ಚ ಮ ಏಕತ್ರಿಗ್ಂಶಚ್ಚ ಮೇ ತ್ರಯಸ್ತ್ರಿಗ್ಂಶಚ್ಚ [(೧೯)] ಮೇ ಚತಸ್ರಶ್ಚ ಮೇಽಷ್ಟೌ ಚ ಮೇ ದ್ವಾದಶ ಚ ಮೇ ಷೋಡಶ ಚ ಮೇ ವಿಗ್ಂಶತಿಶ್ಚ ಮೇ**

---

ಸಪ್ತದಶೇತಿ ಸಪ್ತ-ದಶ । ಚ । ಮೇ । ನವದಶೇತಿ ನವ-ದಶ । ಚ । ಮೇ । ಏಕವಿಗ್ಂಶತಿರಿತ್ಯೇಕ-ವಿಗ್ಂಶತಿಃ । ಚ । ಮೇ । ತ್ರಯೋವಿಗ್ಂಶತಿರಿತಿ ತ್ರಯಃ-ವಿಗ್ಂಶತಿಃ । ಚ । ಮೇ । ಪಂಚವಿಗ್ಂಶತಿರಿತಿ ಪಂಚ-ವಿಗ್ಂಶತಿಃ । ಚ । ಮೇ । ಸಪ್ತವಿಗ್ಂಶತಿರಿತಿ ಸಪ್ತ-ವಿಗ್ಂಶತಿಃ । ಚ । ಮೇ । ನವವಿಗ್ಂಶತಿರಿತಿ ನವ-ವಿಗ್ಂಶತಿಃ । ಚ । ಮೇ । ಏಕತ್ರಿಗ್ಂಶದಿತ್ಯೇಕ-ತ್ರಿಗ್ಂಶತ್ । ಚ । ಮೇ । ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ । ಚ । (೧೯) । ಮೇ । ಚತಸ್ರಃ । ಚ । ಮೇ । ಅಷ್ಟೌ । ಚ । ಮೇ । ದ್ವಾದಶ । ಚ । ಮೇ । ಷೋಡಶ । ಚ । ಮೇ । ವಿಗ್ಂಶತಿಃ । ಚ । ಮೇ ।

**ಪದಶಃ ಅರ್ಥ/ತಾತ್ಪರ್ಯ.** ———————

**ಸಪ್ತದಶ ಚ ಮೇ**='ಹದಿನೇಳು' ಎಂಬ ಸಂಖ್ಯೆಯೂ ನನಗೆ ಲಭ್ಯವಾಗಲಿ. **ನವದಶ ಚ ಮೇ**='ಹತ್ತೊಂಬತ್ತು' ಎಂಬ ಸಂಖ್ಯೆಯೂ ನನಗೆ ಪ್ರಾಪ್ತವಾಗಲಿ. **ಏಕವಿಗ್ಂಶತಿಃ ಚ ಮೇ**= 'ಇಪ್ಪತ್ತೊಂದು' ಎಂಬ ಸಂಖ್ಯೆಯೂ ನನಗೆ ಒದಗಲಿ/ಪ್ರಯೋಜನಕಾರಿಯಾಗಲಿ. **ತ್ರಯೋವಿಗ್ಂಶತಿಃ ಚ ಮೇ**='ಇಪ್ಪತ್ತಮೂರು' ಎಂಬ ಸಂಖ್ಯೆಯೂ ನನಗೆ ಒದಗಲಿ. **ಪಂಚವಿಗ್ಂಶತಿಃ ಚ ಮೇ**='ಇಪ್ಪತ್ತೈದು' ಎಂಬ ಸಂಖ್ಯೆಯೂ ನನಗೆ ಫಲಕಾರಿಯಾಗಲಿ. **ಸಪ್ತವಿಗ್ಂಶತಿಃ ಚ ಮೇ**='ಇಪ್ಪತ್ತೇಳೂ' ನನಗೆ ಪ್ರಯೋಜನಕಾರಿಯಾಗಲಿ. **ನವವಿಗ್ಂಶತಿಃ ಚ ಮೇ**='ಇಪ್ಪತ್ತೊಂಬತ್ತು'ಎಂಬ ಸಂಖ್ಯೆಯೂ ನನಗೆ ಒದಗಲಿ. **ಏಕತ್ರಿಗ್ಂಶತ್ ಚ ಮೇ**='ಮೂವತ್ತೊಂದು' ನನಗೆ ಕಾರ್ಯಸಾಧಕವಾಗಲಿ. **ತ್ರಯಸ್ತ್ರಿಗ್ಂಶತ್ ಚ ಮೇ**='ಮೂವತ್ತಮೂರು' ಎಂಬ ಸಂಖ್ಯೆಯೂ ನನಗೆ ಪ್ರಯೋಜನಕಾರಿಯಾಗಲಿ. **ಚತಸ್ರಃ ಚ ಮೇ**='ನಾಲ್ಕು' ಎಂಬ ಸಂಖ್ಯೆಯೂ ನನಗೆ ಲಾಭಪ್ರದವಾಗಲಿ. **ಅಷ್ಟೌ ಚ ಮೇ**='ಎಂಟು' ಎಂಬ ಸಂಖ್ಯೆಯೂ ನನಗೆ ಫಲಪ್ರದವಾಗಲಿ. **ದ್ವಾದಶ ಚ ಮೇ**='ಹನ್ನೆರಡು' ಎಂಬ ಸಂಖ್ಯೆಯೂ ನನಗೆ ಫಲಪ್ರದವಾಗಿ ಪರಿಣಮಿಸಲಿ. **ಷೋಡಶ ಚ ಮೇ**='ಹದಿನಾರು' ಎಂಬ ಸಂಖ್ಯೆಯೂ ನನಗೆ ಹಿತಕರವಾಗಿರಲಿ. **ವಿಗ್ಂಶತಿಃ ಚ ಮೇ**='ಇಪ್ಪತ್ತು' ಎಂಬ ಸಂಖ್ಯೆಯೂ ನನಗೆ ಲಾಭದಾಯಕವಾಗಿ ಪರಿಣಮಿಸಲಿ.

**ಚತುರ್ವಿಗ್ಂಶತಿಶ್ಚ ಮೇಽಷ್ಟಾವಿಗ್ಂಶತಿಶ್ಚ ಮೇ ದ್ವಾತ್ರಿಗ್ಂಶಚ್ಚ ಮೇ ಷಟ್ತ್ರಿಗ್ಂಶಚ್ಚ ಮೇ ಚತ್ವಾರಿಗ್ಂಶಚ್ಚ ಮೇ ಚತುಶ್ಚತ್ವಾರಿಗ್ಂಶಚ್ಚ ಮೇಽಷ್ಟಾಚತ್ವಾರಿಗ್ಂಶಚ್ಚ ಮೇ ವಾಜಶ್ಚ ಪ್ರಸವಶ್ಚಾಪಿಜಶ್ಚ ಕ್ರತುಶ್ಚ ಸುವಶ್ಚ ಮೂರ್ಧಾ ಚ ವ್ಯಶ್ನಿಯಶ್ಚಾಽಽನ್ತ್ಯಾಯನಶ್ಚಾನ್ತ್ಯಶ್ಚ**

---

ಚತುರ್ವಿಗ್ಂಶತಿರಿತಿ ಚತುಃ-ವಿಗ್ಂಶತಿಃ । ಚ । ಮೇ । ಅಷ್ಟಾವಿಗ್ಂಶತಿರಿತ್ಯಷ್ಟಾ-ವಿಗ್ಂಶತಿಃ । ಚ । ಮೇ । ದ್ವಾತ್ರಿಗ್ಂಶತ್ । ಚ । ಮೇ । ಷಟ್ತ್ರಿಗ್ಂಶದಿತಿ ಷಟ್-ತ್ರಿಗ್ಂಶತ್ । ಚ । ಮೇ । ಚತ್ವಾರಿಗ್ಂಶತ್ । ಚ । ಮೇ । ಚತುಶ್ಚತ್ವಾರಿಗ್ಂಶದಿತಿ ಚತುಃ-ಚತ್ವಾರಿಗ್ಂಶತ್ । ಚ । ಮೇ । ಅಷ್ಟಾಚತ್ವಾರಿಗ್ಂಶದಿತ್ಯಷ್ಟಾ-ಚತ್ವಾರಿಗ್ಂಶತ್ । ಚ । ಮೇ । ವಾಜಃ । ಚ । ಪ್ರಸವ ಇತಿ ಪ್ರ-ಸವಃ । ಚ । ಅಪಿಜ ಇತ್ಯಪಿ-ಜಃ । ಚ । ಕ್ರತುಃ । ಚ । ಸುವಃ । ಚ । ಮೂರ್ಧಾ । ಚ । ವ್ಯಶ್ನಿಯ ಇತಿ ವಿ-ಅಶ್ನಿಯಃ । ಚ । ಆನ್ತ್ಯಾಯನಃ । ಚ । ಅನ್ತ್ಯಃ । ಚ ।

**ಪದಶಃ ಅರ್ಥ/ತಾತ್ಪರ್ಯ.**

**ಚತುರ್ವಿಗ್ಂಶತಿಃ ಚ ಮೇ**='ಇಪ್ಪತ್ತನಾಲ್ಕು' ಎಂಬ ಸಂಖ್ಯೆಯೂ ನನಗೆ ಫಲಪ್ರದವಾಗಲಿ. **ಅಷ್ಟಾವಿಗ್ಂಶತಿಃ ಚ ಮೇ**='ಇಪ್ಪತ್ತೆಂಟು' ಎಂಬ ಸಂಖ್ಯೆಯೂ ನನಗೆ ಕಾಮಪ್ರದವಾಗಲಿ. **ದ್ವಾತ್ರಿಗ್ಂಶತ್ ಚ ಮೇ**='ಮೂವತ್ತೆರಡು' ಎಂಬ ಸಂಖ್ಯೆಯೂ ನನಗೆ ಪ್ರಯೋಜನಕಾರಿಯಾಗಲಿ. **ಷಟ್ತ್ರಿಗ್ಂಶತ್ ಚ ಮೇ**='ಮೂವತ್ತಾರು' ಎಂಬ ಸಂಖ್ಯೆಯೂ ನನಗೆ ಫಲಪ್ರದವಾಗಲಿ. **ಚತ್ವಾರಿಗ್ಂಶತ್ ಚ ಮೇ**='ನಲವತ್ತು' ಎಂಬ ಸಂಖ್ಯೆಯೂ ನನಗೆ ಫಲಿಸಲಿ. **ಚತುಶ್ಚತ್ವಾರಿಗ್ಂಶತ್ ಚ ಮೇ**='ನಲವತ್ತನಾಲ್ಕು' ಎಂಬ ಸಂಖ್ಯೆಯೂ ನನಗೆ ಇಷ್ಟಸಾಧಕವಾಗಲಿ. **ಅಷ್ಟಾಚತ್ವಾರಿಗ್ಂಶತ್ ಚ ಮೇ**='ನಲವತ್ತೆಂಟು' ಎಂಬ ಸಂಖ್ಯೆಯೂ ನನಗೆ ಇಷ್ಟಪ್ರದವಾಗಲಿ. **ವಾಜಃ ಚ** ಮೇ=ಅನ್ನವೂ ನನಗೆ ಲಭಿಸಲಿ. **ಪ್ರಸವಃ ಚ** ಮೇ= ನನಗೆ ಅನ್ನದ ಉತ್ಪತ್ತಿಯೂ ಲಭಿಸಲಿ. **ಅಪಿಜಃ ಚ** ಮೇ=ಅನ್ನದ ಉತ್ಪತ್ತಿಯೂ ನನಗೆ ಪುನಃ ಪುನಃ ಉಂಟಾಗಲಿ. **ಕ್ರತುಃ ಚ** ಮೇ=ಸೋಮಾದಿಯಾಗವಿಷಯವಾದ ಸಂಕಲ್ಪವೂ/ಸೋಮಾದಿಯಾಗವೂ ನನಗೆ ಉಂಟಾಗಲಿ. **ಸುವಃ ಚ** ಮೇ=ಅದರ ಉತ್ಪತ್ತಿಗೆ ಕಾರಣನಾದ ಆದಿತ್ಯನೂ ನನಗೆ ಪ್ರಸನ್ನನಾಗಲಿ. **ಮೂರ್ಧಾ ಚ** ಮೇ=ದ್ಯುಲೋಕವೂ ನನಗೆ ಲಭಿಸಲಿ. **ವ್ಯಶ್ನಿಯಃ ಚ** ಮೇ=ವ್ಯಾಪಕವಾದ ಆಕಾಶಾದಿಗಳಲ್ಲಿರುವ ವಾಯುವೂ, ಗ್ರಹ-ನಕ್ಷತ್ರಗಳೂ ನನಗೆ ಪ್ರಸನ್ನವಾಗಲಿ. **ಆಂತ್ಯಾಯನಃ ಚ ಮೇ**= ಕೊನೆಯಲ್ಲಿ ಹುಟ್ಟಿದುದೂ ನನಗೆ ಒದಗಲಿ. **ಅಂತ್ಯಃ ಚ** ಮೇ=ಕೊನೆಯಲ್ಲಿ ಇರುವುದೂ ನನಗೆ ಲಭಿಸಲಿ.

## ಭೌವನಶ್ಚ ಭುವನಶ್ಚಾಧಿಪತಿಶ್ಚ ॥ ೨೦-11 ॥

[ತ್ರಯಸ್ತ್ರಿಗ್ಂಶಚ್ಚ ವ್ಯಶ್ಣಿಯ ಏಕಾದಶ ಚ ॥]

---

ಭೌವನಃ । ಚ । ಭುವನಃ । ಚ । ಅಧಿಪತಿರಿತ್ಯಧಿ-ಪತಿಃ । ಚ ॥ (೨೦) ॥

ಪದಶಃ ಅರ್ಥ/ತಾತ್ಪರ್ಯ.

**ಭೌವನಃ ಚ** ಮೇ=ಲೋಕಗಳಲ್ಲಿರುವ ಉತ್ತಮವಸ್ತುವೂ ನನಗೆ ಶುಭಪ್ರದವಾಗಲಿ. **ಭುವನಃ ಚ** ಮೇ= ಲೋಕವೂ ನನಗೆ ಶುಭಪ್ರದವಾಗಲಿ. **ಅಧಿಪತಿಃ*** **ಚ** ಮೇ=ಆಕ್ರಮಿಸಿ ರಕ್ಷಿಸುವ ದೇವನು ನನಗೆ ರಕ್ಷಕನಾಗಿರಲಿ.

---

ವಾಜ ಮುಂತಾದ ಹನ್ನೆರಡು ಶಬ್ದಗಳು ಚೈತ್ರ ಮುಂತಾದ ಹನ್ನೆರಡು ತಿಂಗಳುಗಳ ಹೆಸರುಗಳೆಂದು ಕೆಲವರ ಮತ. ಆ ಮಾಸದೇವತೆಗಳು ಪ್ರಸನ್ನರಾಗಲಿ.

**'ವಾಜಃ ಚ'** ಮಂತ್ರಕ್ಕಿಂತ ಮುಂದಿರುವ **'ಚ'** ಶಬ್ದವು ಪರಸ್ಪರಸಮುಚ್ಚಯವನ್ನು ಸೂಚಿಸುತ್ತದೆ. ಅಥವಾ ಇಲ್ಲಿ ಹೇಳಲ್ಪಡದೇ ಇರುವ ಕಾಲವೇ ಮುಂತಾದ ದೇವತೆಗಳ ಸಮುಚ್ಚಯವನ್ನು ತಿಳಿಸುತ್ತದೆ.

---

## ಅನುವಾಕದ ವಿಶೇಷವಿಷಯಗಳು

### ಅ) ಚಮಕಾನುವಾಕಗಳ ವಿನಿಯೋಗ/ಪ್ರಶಂಸೆ.

ವಸೋರ್ಧಾರಾಹೋಮವನ್ನು ಈ ಚಮಕಾನುವಾಕಗಳಿಂದ ಅನುಷ್ಠಿಸಲಾಗುತ್ತದೆ. ವಸು ಎಂದರೆ ಧನ ಎಂದು ಅರ್ಥ. ಯಾವ ಆಹುತಿಯಿಂದ ಧನದ ಧಾರೆಯು ಅಂದರೆ ಅವಿಚ್ಛಿನ್ನತೆಯು ಲಭಿಸುವುದೋ ಆ ಧಾರೆಯು ವಸೋರ್ಧಾರೆ ಎನಿಸುವುದು. ಹೀಗೆ ವಸೋರ್ಧಾರಾ ಶಬ್ದದ ವಿವರಣೆಯು ಇದೆ. ಅಗ್ನಿಯು ವಸು ಎನಿಸಿಕೊಳ್ಳುವನು. ವಿಷ್ಣುವಿಗೂ ವಸು ಎಂದು ಹೆಸರು. ಈ ವಸೋರ್ಧಾರಾಹೋಮವು ಆಗ್ನಾ ವೈಷ್ಣವದೇವತಾಕವಾದುದರಿಂದಲೂ ಇದು **ವಸೋರ್ಧಾರೆ.** ಈ ಚಮಕಾನುವಾಕಗಳಿಂದ ಸಂತತವಾಗಿ ಆಜ್ಯದ ಧಾರೆಯು ಅಗ್ನಿಯಲ್ಲಿ ಬೀಳುವಂತೆ ಒಂದು ಹೋಮವನ್ನು ಅನುಷ್ಠಿಸಬೇಕು. ಇದು ಸರ್ವಕಾಮ ಪ್ರದವೂ ಆಗಿದೆ.

ಚಮಕಾನುವಾಕದಲ್ಲಿ ಪಠಿತವಾಗಿರುವ ಉಳಿದ ಅನುವಾಕಗಳಲ್ಲಿರುವ ಮಂತ್ರಗಳ ಪ್ರಶಂಸೆಯು ಹೀಗಿದೆ.

**'ವಾಜಶ್ಚ ಮೇ'** ಎಂದು ಆರಂಭವಾಗುವ ಮಂತ್ರದಿಂದ **'ಅನ್ನಂ ಚ ಮೇಽಕ್ಷುಚ್ಚ ಮೇ'** ಎಂಬಲ್ಲಿಯವರೆಗೆ ನೂರನಲವತ್ತನಾಲ್ಕು ಮಂತ್ರಗಳಾಗುತ್ತವೆ. ಅವುಗಳನ್ನು ಹನ್ನೆರಡು ಮಂತ್ರಗಳ ಹನ್ನೆರಡು ಗುಂಪುಗಳನ್ನಾಗಿ ವಿಭಜಿಸಿ **'ದ್ವಾದಶ ದ್ವಾದಶಾನಿ ಜುಹೋತಿ'** ಎಂದು ಶ್ರುತಿಯು ಹೇಳುತ್ತದೆ. ಈ ಮಂತ್ರಗಳ ಹೋಮಭಾಗ ದಿಂದ ಅನ್ನಪ್ರಾಪ್ತಿಯಾಗುತ್ತದೆ.

---

* ರಾಜನು-ಅಹೋಬಲಭಾಷ್ಯ.

ನಾಲ್ಕನೆಯ ಅನುವಾಕದ **'ಅನ್ನಂ ಚ ಮೇ'** ಮೊದಲಾದ ವಾಕ್ಯಗಳೂ ಅನ್ನಪ್ರಾಪ್ತಿಸಾಧನಗಳು.

ಐದನೆಯ ಅನುವಾಕದ **'ಅಗ್ನಿಶ್ಚ ಮೇ'** ಮೊದಲಾದವೂ ಅನ್ನಪ್ರಾಪ್ತಿಸಾಧನಗಳಾಗಿವೆ.

ಆರನೆಯ ಅನುವಾಕದ ಅರ್ಧೇಂದ್ರಹೋಮಗಳು ಇಂದ್ರಪ್ರೀತಿಕರಗಳಾಗಿವೆ. **'ಅರ್ಧೇಂದ್ರಾಣಿ ಜುಹೋತಿ'** ಎಂಬ ಬ್ರಾಹ್ಮಣವಾಕ್ಯವಿದೆ. **'ಅರ್ಧಮ್ ಇಂದ್ರಃ ಯೇಷಾಂ ತಾನಿ'**=ಯಾವ ವಾಕ್ಯಗಳಲ್ಲಿ ಅರ್ಧಭಾಗವು ಇಂದ್ರಶಬ್ದವು ಇದೆಯೋ ಆ ವಾಕ್ಯಗಳು ಅರ್ಧೇಂದ್ರಾಣಿ ಎನಿಸುತ್ತವೆ. ಆ ವಾಕ್ಯಗಳಿಂದ ಹೋಮವು ಅನುಷ್ಠಿಸಲ್ಪಡುತ್ತದೆ. ಅವು ಇಂದ್ರಿಯಪಾಟವಸಾಧನಗಳಾಗಿವೆ.

ಏಳು-ಎಂಟನೆಯ ಅನುವಾಕಗಳಲ್ಲಿ ಇರುವ ಯಜ್ಞಾಯುಧಗಳ ಹೋಮದಿಂದ ಸಫಲವಾದ ಯಜ್ಞ ಪ್ರಾಪ್ತಿಯಾಗುತ್ತದೆ.

ಒಂಬತ್ತನೆಯ ಅನುವಾಕದ ಪೂರ್ವಾರ್ಧದ **'ಅಗ್ನಿಶ್ಚ ಮೇ ಘರ್ಮಶ್ಚ ಮೇ'** ಮೊದಲಾದ ಮಂತ್ರಗಳ ಹೋಮದಿಂದ ಯಜಮಾನನಿಗೆ ಬ್ರಹ್ಮವರ್ಚಸಪ್ರಾಪ್ತಿಯಾಗುತ್ತದೆ. ಈ ಅನುವಾಕದ ಉತ್ತರಾರ್ಧ ದಲ್ಲಿರುವ **'ಋಕ್ಚ ಮೇ ಸಾಮ ಚ ಮೇ'** ಮೊದಲಾದ ಮಂತ್ರಗಳಿಂದ ಮಾಡುವ ಹೋಮದಿಂದ ಛಂದಸ್ಸುಗಳ/ವೇದಗಳ ಪ್ರಾಪ್ತಿಯಾಗುತ್ತದೆ.

ಹತ್ತನೆಯ ಅನುವಾಕದ ಪೂರ್ವಾರ್ಧದ **'ಗರ್ಭಾಶ್ಚ ಮೇ ವತ್ಸಾಶ್ಚ ಮೇ'** ಮೊದಲಾದ ಮಂತ್ರಗಳ ಹೋಮದಿಂದ ಪಶುಪ್ರಾಪ್ತಿಯಾಗುತ್ತದೆ. ಈ ಅನುವಾಕದ **'ಆಯುರ್ಯಜ್ಞೇನ ಕಲ್ಪತಾಮ್'** ಮೊದಲಾದ ಮಂತ್ರಗಳಿಗೆ ಕಲ್ಪಗಳೆಂದು ಹೆಸರುಂಟು. ಈ ಮಂತ್ರಗಳ ಹೋಮದಿಂದ ತನ್ನ ಕಾರ್ಯದಲ್ಲಿ ಅಸಮರ್ಥ ವಾದುದೂ ತನ್ನ ಕಾರ್ಯದಲ್ಲಿ ಸಮರ್ಥವಾಗುತ್ತದೆ.

ಹನ್ನೊಂದನೆಯ ಅನುವಾಕದ ಪೂರ್ವಾರ್ಧದ **'ಏಕಾ ಚ ಮೇ' 'ಚತಸ್ರಶ್ಚ ಮೇ'** ಮೊದಲಾದ ಮಂತ್ರಗಳ ಹೋಮದಿಂದ ಉತ್ತಮಸ್ತ್ರೀಪುರುಷಯುಗ್ಮವನ್ನು ಪಡೆದಂತೆ ಆಗುತ್ತದೆ. ಉತ್ತರೋತ್ತರ ಆಧಿಕ್ಯವನ್ನು ಪ್ರತಿಪಾದಿಸುವ ಮಂತ್ರಗಳ ಹೋಮದಿಂದ ಉತ್ತರೋತ್ತರಾಭಿವೃದ್ಧಿಯಾಗುತ್ತದೆ. ಏಕಾದಿ ಛಂದಸ್ಸುಗಳು ದೇವಛಂದಸ್ಸುಗಳು. ಚತಸ್ರಶ್ಚ ಅಷ್ಟೌ ಚ ಮುಂತಾದವುಗಳು ಮನುಷ್ಯಛಂದಸ್ಸುಗಳು. ಈ ಎರಡು ವಿಧವಾದ ಮಂತ್ರಗಳ ಹೋಮದಿಂದ ಎರಡು ವಿಧವಾದ ಛಂದಸ್ಸುಗಳನ್ನು ಹೊಂದಿದಂತಾಗುತ್ತದೆ. ವಿಷಮಸಂಖ್ಯೆಗಳ ಮಂತ್ರಗಳ ಕೊನೆಯ ಮಂತ್ರವು **'ತ್ರಯಸ್ತ್ರಿಗ್ಂಶಚ್ಚ ಮೇ'** ಎಂಬುದಾಗಿದೆ. ಇದರಿಂದ ಮೂವತ್ತು ಮೂರು ಸಂಖ್ಯೆಯ ದೇವತೆಗಳ ಪ್ರಾಪ್ತಿಯಾಗುತ್ತದೆ. **'ಅಷ್ಟಾಚತ್ವಾರಿಗ್ಂಶಚ್ಚ ಮೇ'** ಸಮ ಸಂಖ್ಯೆಯ ಮಂತ್ರಗಳಲ್ಲಿ ಕೊನೆಯದು. ಇವುಗಳ ಹೋಮದಿಂದ ಪಶುಪ್ರಾಪ್ತಿಯಾಗುತ್ತದೆ.

ಈ ಅನುವಾಕದ **'ವಾಜಶ್ಚ ಪ್ರಸವಶ್ಚ'** ಮೊದಲಾದ ಹನ್ನೆರಡು ಮಂತ್ರಗಳ ಹೋಮದಿಂದ ಸಂವತ್ಸರ ದಲ್ಲಿ ಪ್ರತಿಷ್ಠೆಯನ್ನು ಹೊಂದುತ್ತಾನೆ.

ಹೀಗೆ ವಸೋರ್ಧಾರಾಹೋಮಮಂತ್ರಗಳ ಪ್ರಶಂಸೆಯಿದೆ.

---

## ಆ) ವಿನಿಯೋಗಸಂಗ್ರಹ

ಅಗ್ನಾವಿಷ್ಣೂ ವಸೋರ್ಧಾರಾಮೇಕಾದಶಭಿರಾದಿತಃ ।
ಅನುವಾಕೈರ್ಜುಹೋತ್ಯೇಕಾಮಾಹುತಿಂ ಸಂತತಾಂ ಘೃತಾತ್ ॥

ಅಗ್ನಾವಿಷ್ಣೂ ಎಂದು ಆರಂಭವಾಗುವ ಈ ಪ್ರಶ್ನೆಯಲ್ಲಿ ಮೊದಲಿನಿಂದ ಹನ್ನೊಂದು ಅನುವಾಕಗಳಿಂದ ಒಂದು ಆಹುತಿಯನ್ನು ಆಜ್ಯದಿಂದ ಮಾಡಬೇಕು. ಇದು ವಸೋರ್ಧಾರಾಹೋಮ.

## ೩) ಮೀಮಾಂಸಾ

### ೧) ವಸೋರ್ಧಾರಾಹೋಮವನ್ನು ಯಾವಾಗ ಮಾಡಬೇಕು? [ಜೈ. ನ್ಯಾ. 12.3]

'ಸಂತತಾಂ ವಸೋರ್ಧಾರಾಂ ಜುಹೋತಿ' ಎಂಬುದಾಗಿ ವಸೋರ್ಧಾರಾಹೋಮವು ವಿಹಿತವಾಗಿದೆ. ವಸೋರ್ಧಾರಾಹೋಮದಲ್ಲಿ ಕರ್ಮದ ಆದಿಯಿಂದಲೇ ಮಂತ್ರವನ್ನು ಆರಂಭಿಸಿದರೆ ಸಂತತವಾಗಿ ಹೋಮ ಮಾಡಿದಂತಾಗುತ್ತದೆ. ಮಂತ್ರ-ಕರ್ಮಗಳು ಒಟ್ಟಿಗೇ ಆರಂಭವಾದರೆ ಸಾಂತತ್ಯವು ಇರುತ್ತದೆ. ಆದುದರಿಂದ ಮಂತ್ರಾದಿಯಿಂದಲೇ ವಸೋರ್ಧಾರೆಯನ್ನು ಆರಂಭಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ವಸೋರ್ಧಾರಾಹೋಮಕ್ಕೆ ಸಂಬಂಧಿಸಿದ **'ದ್ವಾದಶ ದ್ವಾದಶಾನಿ ಜುಹೋತಿ'** ಎಂಬ ವಾಕ್ಯವಿದೆ. ಹನ್ನೆರಡು ಮಂತ್ರವಾಕ್ಯಗಳಿಂದ ಮಾಡಲ್ಪಡುವ ಆಹುತಿಯ ಸ್ವರೂಪವು **'ದ್ವಾದಶ'** ಎನಿಸುತ್ತದೆ. ಹನ್ನೆರಡು ಮಂತ್ರಗಳ ಸಮೂಹದಿಂದ ಒಂದು ಆಹುತಿಯಾದ ಬಳಿಕ ಹನ್ನೊಂದು ಆಹುತಿಗಳು ಉಳಿಯುತ್ತವೆ. ಈ ರೀತಿಯ ಆಹುತಿಗಳ ಮಧ್ಯೆ ಅಂತರವಿರಬಾರದು. ಇದೇ ಸಾಂತತ್ಯ. ಮಂತ್ರ-ಕರ್ಮಗಳನ್ನು ಒಟ್ಟಿಗೆ ಆರಂಭಿಸುವುದು ಇಲ್ಲಿ ಸಾಂತತ್ಯವಲ್ಲ. ಹೀಗಾಗಿ **'ಮಂತ್ರಾಂತ್ಯೈಃ ಕರ್ಮಾದಿಃ ಸನ್ನಿಪಾತ್ಯಃ'** ಎಂಬ ಸಾಮಾನ್ಯ ನಿಯಮದಂತೆ ಮಂತ್ರಾಂತ್ಯದಲ್ಲಿಯೇ ಕರ್ಮಾರಂಭವನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

#### ವಿಶೇಷವಿಚಾರ

**'ಆಘಾರೇ ಧಾರಾಯಾಂ ಚಾದಿಸಂಯೋಗಃ'** ಎಂದು ಆಪಸ್ತಂಬಪರಿಭಾಷಾಸೂತ್ರದಲ್ಲಿದೆ. ಆಘಾರ ಹೋಮದಲ್ಲಿಯೂ, ಧಾರಾರೂಪಹೋಮದಲ್ಲಿಯೂ ಅಂದರೆ ವಸೋರ್ಧಾರಾಹೋಮದಲ್ಲಿಯೂ ಆದಿಯಲ್ಲಿಯೇ ಮಂತ್ರ-ಕರ್ಮಗಳ ಸಂಯೋಗವಾಗಬೇಕು ಎಂದು ಅದರ ಅರ್ಥ.

ಈ ಚಮಕಾನುವಾಕಗಳು ಹನ್ನೊಂದು ಇವೆ. ಎಲ್ಲ ಅನುವಾಕಗಳೂ ಕೂಡಿ ಒಂದೇ ಮಂತ್ರವೆಂದು ಭಾಷ್ಯಕಾರರು ವಿವರಿಸಿರುತ್ತಾರೆ. **'ದ್ವಾದಶ ದ್ವಾದಶಾನಿ ಜುಹೋತಿ'** ಮೊದಲಾದ ವಾಕ್ಯಗಳನ್ನು ಪ್ರಶಂಸಾಪರ ವಾದ ಅರ್ಥವಾದಗಳೆಂದು ವಿವರಿಸಿರುತ್ತಾರೆ. ಹೀಗಾಗಿ **'ದ್ವಾದಶ ದ್ವಾದಶಾನಿ ಜುಹೋತಿ'** ಎಂಬುದು ವಿಧಾಯಕವಾಕ್ಯಗಳಲ್ಲವಾದುದರಿಂದ ಮೀಮಾಂಸಾಧಿಕರಣದಲ್ಲಿ ಅಸಾಂತತ್ಯವು ಆ ಮಂತ್ರಸಮೂಹಗಳ ನಡುವೆ ಇರಬಾರದು ಎಂದು ತಿಳಿಸುತ್ತಿರುವುದು ಹೇಗೆ ಸಂಗತ? ಆದುದರಿಂದ ಆ ವಾಕ್ಯಗಳನ್ನು ವಿಧಾಯಕ ವಾಕ್ಯಗಳೆಂದು ಭಾವಿಸಿ ಮೀಮಾಂಸಾಧಿಕರಣದಲ್ಲಿ ವಿಚಾರವಿದೆಯೆಂದು ತಿಳಿಯಬಹುದು. ಈ ರೀತಿಯ ವಿಚಾರವನ್ನು ಶಾಸ್ತ್ರದಲ್ಲಿ **'ಕೃತ್ವಾ ಚಿಂತಾ'** ಎಂದು ಹೇಳುತ್ತಾರೆ.

## ॥ ದ್ವಾದಶೋಽನುವಾಕಃ ॥

ವಾಜೋ ನಃ ಸಪ್ತ ಪ್ರದಿಶಶ್ಚತಸ್ರೋ ವಾ ಪರಾವತಃ । ವಾಜೋ ನೋ
ವಿಶ್ವೈರ್ದೇವೈರ್ಧನಸಾತಾವಿಹಾವತು ॥

---

ವಾಜಃ । ನಃ । ಸಪ್ತ । ಪ್ರದಿಶ ಇತಿ ಪ್ರ-ದಿಶಃ । ಚತಸ್ರಃ । ವಾ । ಪರಾವತ ಇತಿ ಪರಾ-ವತಃ ॥ ವಾಜಃ । ನಃ ।
ವಿಶ್ವೈಃ । ದೇವೈಃ । ಧನಸಾತಾವಿತಿ ಧನ-ಸಾತೌ । ಇಹ । ಅವತು ॥

---

ಹನ್ನೊಂದು ಅನುವಾಕಗಳಿಂದ ವಸೋರ್ಧಾರಾಹೋಮವು ಹೇಳಲ್ಪಟ್ಟಿತು. ಈ ಹನ್ನೆರಡನೆಯ ಅನುವಾಕದಲ್ಲಿ ವಾಜಪ್ರಸವೀಯಹೋಮವು ಹೇಳಲ್ಪಡುತ್ತದೆ. **'ವಾಜಪ್ರಸವೀಯಂ ಜುಹೋತಿ ಸಪ್ತ ಗ್ರಾಮ್ಯಾ ಓಷಧಯಃ ಸಪ್ತಾರಣ್ಯಾಃ ಪೃಥಗನ್ನಾನಿ ದ್ರವೀಕೃತ್ಯ ಔದುಂಬರೇಣ ಸ್ರುವೇಣ ವಾಜಸ್ಯೇಮಂ ಪ್ರಸವಃ ಇತಿ ಗ್ರಾಮ್ಯಾನ್ ಹುತ್ವಾ ಆರಣ್ಯಾನ್ ಜುಹೋತಿ'** [ಆಪ. ಶ್ರೌ. ಸೂ. 17.19.1.3]

ಅವುಗಳಲ್ಲಿ ಮೊದಲನೆಯ ಕಾಂಡದ ಏಳನೆಯ ಪ್ರಶ್ನದಲ್ಲಿ ಹತ್ತನೆಯ ಅನುವಾಕದಲ್ಲಿ ಗ್ರಾಮ್ಯವಾದ ಓಷಧಿಗಳ ಹೋಮಮಂತ್ರಗಳು ಹೇಳಲ್ಪಟ್ಟಿವೆ. ಇಲ್ಲಿ ಆರಣ್ಯ ಓಷಧಿಗಳ ಹೋಮಮಂತ್ರಗಳು ಹೇಳಲ್ಪಟ್ಟಿವೆ. ಮೊದಲು ವೇಣುಧಾನ್ಯದ ಹೋಮಮಂತ್ರವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
| --- | --- |
| **ವಾಜೋ ನಃ...ಇಹಾವತು ॥** | **ವೇಣುಧಾನ್ಯದ ಹೋಮಕ್ಕಾಗಿ.** |

---

🔔 **ಪ್ರದಿಶಃ ಸಪ್ತ**=ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ಹೀಗೆ ನಾಲ್ಕು ದಿಕ್ಕುಗಳೂ, ಊರ್ಧ್ವ, ಮಧ್ಯ ಹಾಗೂ ಅಧೋದಿಕ್ಕು-ಹೀಗೆ ಶ್ರೇಷ್ಠವಾದ ಏಳು ದಿಕ್ಕುಗಳೂ; **ಪರಾವತಃ**=ದೂರದಲ್ಲಿ ಇರುವಂತೆ ತೋರುವ; **ಚತಸ್ರಃ ವಾ**=ನಾಲ್ಕು ಆಗ್ನೇಯವೇ ಮುಂತಾದ ವಿದಿಕ್ಕುಗಳೂ; **ನಃ**=ನಮಗೆ; **ವಾಜಃ**=ಅನ್ನಪ್ರದವಾಗಲಿ; **ವಾಜಃ**=ಈ ಅನ್ನವು; **ವಿಶ್ವೈಃ ದೇವೈಃ**=ವಿಶ್ವೇದೇವರಿಂದ ಪ್ರೇರಿತವಾಗಿ; **ಇಹ ಧನಸಾತೌ** =ಈ ಧನಪ್ರದವಾದ ಯಜ್ಞದಲ್ಲಿ; **ನಃ**=ನಮ್ಮನ್ನು; **ಅವತು**=ರಕ್ಷಿಸಲಿ.

ವಿಶ್ವೇ ಅದ್ಯ ಮರುತೋ ವಿಶ್ವ ಊತೀ ವಿಶ್ವೇ ಭವಂತ್ವಗ್ನಯಃ ಸಮಿದ್ಧಾಃ ।
ವಿಶ್ವೇ ನೋ ದೇವಾ ಅವಸಾಽಽಗಮಂತು ವಿಶ್ವಮಸ್ತು ದ್ರವಿಣಂ ವಾಜೋ
ಅಸ್ಮೇ ॥ ವಾಜಸ್ಯ ಪ್ರಸವಂ ದೇವಾ ರಥೈರ್ಯಾತಾ ಹಿರಣ್ಯಯೈಃ ।
ಅಗ್ನಿರಿಂದ್ರೋ ಬೃಹಸ್ಪತಿರ್ಮರುತಃ ಸೋಮಪೀತಯೇ ॥

---

ವಿಶ್ವೇ । ಅದ್ಯ । ಮರುತಃ । ವಿಶ್ವೇ । ಊತೀ । ವಿಶ್ವೇ । ಭವಂತು । ಅಗ್ನಯಃ । ಸಮಿದ್ಧಾ ಇತಿ ಸಮ್-ಇದ್ಧಾಃ ॥
ವಿಶ್ವೇ । ನಃ । ದೇವಾಃ । ಅವಸಾ । ಏತಿ । ಗಮಂತು । ವಿಶ್ವಮ್ । ಅಸ್ತು । ದ್ರವಿಣಮ್ । ವಾಜಃ । ಅಸ್ಮೇ ಇತಿ ॥
ವಾಜಸ್ಯ । ಪ್ರಸವಮಿತಿ ಪ್ರ-ಸವಮ್ । ದೇವಾಃ । ರಥೈಃ । ಯಾತ । ಹಿರಣ್ಯಯೈಃ ॥ ಅಗ್ನಿಃ । ಇಂದ್ರಃ । ಬೃಹಸ್ಪತಿಃ ।
ಮರುತಃ । ಸೋಮಪೀತಯ ಇತಿ ಸೋಮ-ಪೀತಯೇ ॥

---

| ಮಂತ್ರ | ವಿನಿಯೋಗ |
|---|---|
| ವಿಶ್ವೇ ಅದ್ಯ...ಅಸ್ಮೇ ॥ | ಶ್ಯಾಮಾಕಧಾನ್ಯದ ಹೋಮಕ್ಕಾಗಿ. |
| ವಾಜಸ್ಯ ಪ್ರಸವಂ...ಸೋಮಪೀತಯೇ ॥ | ನೀವಾರ [ತಾನಾಗಿ ಬೆಳೆದ ಬತ್ತ] ಧಾನ್ಯದ ಹೋಮಕ್ಕಾಗಿ. |

---

♠ **ಅದ್ಯ**=ಈ ದಿನದಲ್ಲಿ; **ವಿಶ್ವೇ ಮರುತಃ**=ಮರುದ್ದೇವತೆಗಳೆಲ್ಲರೂ; **ವಿಶ್ವೇ** ದೇವಾಃ=ಮತ್ತು ಎಲ್ಲ ದೇವತೆಗಳೂ; **ಊತೀ ಭವಂತು**=ನಮ್ಮ ರಕ್ಷಣೆಗಾಗಿ ಪ್ರವರ್ತಿಸಲಿ. **ವಿಶ್ವೇ ಅಗ್ನಯಃ**=ಅಗ್ನಿಗಳೆಲ್ಲರೂ; **ಸಮಿದ್ಧಾಃ**=ಪ್ರಜ್ವಲಿತಗಳಾಗಿ; ಭವಂತು=ಆಗಲಿ. **ವಿಶ್ವೇ ದೇವಾಃ**=ದೇವತೆಗಳೆಲ್ಲರೂ; **ನಃ**=ನಮ್ಮ; **ಅವಸಾ**=ರಕ್ಷಣಾನಿಮಿತ್ತವಾಗಿ; **ಆ ಗಮಂತು**=ಆಗಮಿಸಲಿ. **ವಿಶ್ವಮ್** ದ್ರವಿಣಮ್=ಸಮಸ್ತಧನರೂಪವಾದ; **ವಾಜಃ**=ಅನ್ನವೂ; **ಅಸ್ಮೇ ಅಸ್ತು**=ನಮ್ಮಲ್ಲಿ ಸ್ಥಿತವಾಗಲಿ. ♠ **ದೇವಾಃ**=ದೇವತೆಗಳೇ! **ಅಗ್ನಿಃ**=ಅಗ್ನಿದೇವನೂ; **ಇಂದ್ರಃ**=ಇಂದ್ರನೂ; **ಬೃಹಸ್ಪತಿಃ**=ಬೃಹಸ್ಪತಿಯೂ; **ಮರುತಃ**=ಮರುದ್ದೇವತೆಗಳೂ; [ನೀವೆಲ್ಲರೂ] **ಸೋಮಪೀತಯೇ**=ಸೋಮದಂತಿರುವ ಅನ್ನರಸದ ಪಾನಕ್ಕಾಗಿ; **ವಾಜಸ್ಯ**=ನಮ್ಮ ಅನ್ನದ; **ಪ್ರಸವಮ್**=ಪ್ರೇರಣೆಯನ್ನು [ಉದ್ದೇಶವನ್ನಾಗಿಸಿಕೊಂಡು]; **ಹಿರಣ್ಯಯೈಃ ರಥೈಃ**=ಸುವರ್ಣಮಯವಾದ ರಥಗಳಿಂದ ಕೂಡಿ; [ಅನ್ನದ ಸ್ಥಾನವಾದ ಯಾಗಭೂಮಿಯನ್ನು] **ಯಾತ**=ಹೊಂದಿರಿ.

---

**ತಾತ್ಪರ್ಯ:-**ಪೂರ್ವಾದಿ ನಾಲ್ಕು ಹಾಗೂ ಊರ್ಧ್ವಾದಿ ಮೂರು-ಹೀಗೆ ಏಳು ದಿಕ್ಕುಗಳೂ ನಾಲ್ಕು ವಿದಿಕ್ಕುಗಳೂ

ವಾಜೇವಾಜೇಽವತ ವಾಜಿನೋ ನೋ ಧನೇಷು [(೨೧)ವಿಪ್ರಾ ಅಮೃತಾ ಋತಜ್ಞಾಃ ।]ವಿಪ್ರಾ ಅಮೃತಾ ಋತಜ್ಞಾಃ । ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ ॥ ವಾಜಃ ಪುರಸ್ತಾದುತ ಮಧ್ಯತೋ ನೋ ವಾಜೋ ದೇವಾಗ್ಂ ಋತುಭಿಃ ಕಲ್ಪಯಾತಿ ।

---

ವಾಜೇವಾಜ ಇತಿ ವಾಜೇ-ವಾಜೇ । ಅವತ । ವಾಜಿನಃ । ನಃ । ಧನೇಷು । (೨೧) । ವಿಪ್ರಾಃ । ಅಮೃತಾಃ । ಋತಜ್ಞಾ ಇತ್ಯೃತ-ಜ್ಞಾಃ ॥ ಅಸ್ಯ । ಮಧ್ವಃ । ಪಿಬತ । ಮಾದಯಧ್ವಮ್ । ತೃಪ್ತಾಃ । ಯಾತ । ಪಥಿಭಿರಿತಿ ಪಥಿ-ಭಿಃ । ದೇವಯಾನೈರಿತಿ ದೇವ-ಯಾನೈಃ ॥ ವಾಜಃ । ಪುರಸ್ತಾತ್ । ಉತ । ಮಧ್ಯತಃ । ನಃ । ವಾಜಃ । ದೇವಾನ್ । ಋತುಭಿರಿತ್ಯೃತು-ಭಿಃ । ಕಲ್ಪಯಾತಿ ॥

---

| ಮಂತ್ರ | ವಿನಿಯೋಗ |
|---|---|
| **ವಾಜೇವಾಜೇ...ದೇವಯಾನೈಃ ॥** | ಆರಣ್ಯತಿಲಧಾನ್ಯದ ಹೋಮಕ್ಕಾಗಿ. |
| **ವಾಜಃ ಪುರಸ್ತಾತ್...ಭವೇಯಮ್ ॥** | ಆರಣ್ಯಗೋಧೂಮಧಾನ್ಯಹೋಮಕ್ಕಾಗಿ. |

---

▲ **ವಾಜಿನಃ**=ಅನ್ನಸಂಪಾದಕರಾದ ದೇವತೆಗಳೇ! **ವಾಜೇವಾಜೇ**=ಆಯಾ ಅನ್ನದ ನಿಮಿತ್ತವಾಗಿಯೂ; **ಧನೇಷು**=ವಿವಿಧಧನನಿಮಿತ್ತವಾಗಿಯೂ; **ನಃ**=ನಮ್ಮನ್ನು; **ಅವತ**=ರಕ್ಷಿಸಿರಿ. **ವಿಪ್ರಾಃ**=ವಿಪ್ರರಂತೆ ಶುದ್ಧರೇ! **ಅಮೃತಾಃ**=ಮರಣರಹಿತರೇ! **ಋತಜ್ಞಾಃ**=ಸತ್ಯವನ್ನು/ಯಜ್ಞವನ್ನು ತಿಳಿದವರೇ! ಇಂತಹ ದೇವತೆಗಳೇ! **ಅಸ್ಯ ಮಧ್ವಃ**=ಈ ಮಧುವಿನಂತೆ ಮಧುರವಾದ ಅನ್ನರಸವನ್ನು/ಹವಿಸ್ಸನ್ನು; **ಪಿಬತ**=ಕುಡಿಯಿರಿ. **ಮಾದಯಧ್ವಮ್**=ಸಂತುಷ್ಟರಾಗಿರಿ. **ತೃಪ್ತಾಃ**=ಬಳಿಕ ತೃಪ್ತಿಗೊಂಡವರಾಗಿ; **ದೇವಯಾನೈಃ**=ದೇವತೆಗಳು ಸಂಚರಿಸುವ; **ಪಥಿಭಿಃ**=ಮಾರ್ಗಗಳಿಂದ; **ಯಾತ**=ನಿಮ್ಮ ನಿಮ್ಮ ಸ್ಥಾನಗಳಿಗೆ ಹೋಗಿರಿ. ▲ **ನಃ**=ನಮಗೆ; **ಪುರಸ್ತಾತ್**=ಪೂರ್ವವಯಸ್ಸಿನಲ್ಲಿಯೂ; **ಉತ**=ಮತ್ತು; **ಮಧ್ಯತಃ**=ಮಧ್ಯಮವಯಸ್ಸಿನಲ್ಲಿಯೂ; **ವಾಜಃ**=ಅನ್ನವು [ಇರಲಿ]. **ವಾಜಃ**=ಅನ್ನವು; **ದೇವಾನ್**=ದೇವತೆಗಳನ್ನು; **ಋತುಭಿಃ**=ಕಾಲವಿಶೇಷಗಳಿಂದ; **ಕಲ್ಪಯಾತಿ**=ಸಂಪಾದಿಸಿಕೊಡುತ್ತದೆ.

---

ನಮಗೆ ಅನ್ನಪ್ರದಗಳಾಗಲಿ. ವಿಶ್ವೇದೇವರಿಂದ ಪ್ರೇರಿತವಾದ ಈ ಅನ್ನವು ಯಜ್ಞಪ್ರದೇಶದಲ್ಲಿ ನಮಗೆ ಪ್ರಾಪ್ತವಾಗಲಿ. ನಮ್ಮನ್ನು ರಕ್ಷಿಸಲಿ.

**ವಾಜಸ್ಯ ಹಿ ಪ್ರಸವೋ ನನ್ನಮೀತಿ ವಿಶ್ವಾ ಆಶಾ ವಾಜಪತಿರ್ಭವೇಯಮ್ ॥**

**ಪಯಃ ಪೃಥಿವ್ಯಾಂ ಪಯ ಓಷಧೀಷು ಪಯೋ ದಿವ್ಯಂತರಿಕ್ಷೇ ಪಯೋ**

**ಧಾಮ್ । ಪಯಸ್ವತೀಃ ಪ್ರದಿಶಃ ಸಂತು ಮಹ್ಯಮ್ ॥**

---

ವಾಜಸ್ಯ । ಹಿ । ಪ್ರಸವ ಇತಿ ಪ್ರ-ಸವಃ । ನನ್ನಮೀತಿ । ವಿಶ್ವಾಃ । ಆಶಾಃ । ವಾಜಪತಿರಿತಿ ವಾಜ-ಪತಿಃ । ಭವೇಯಮ್ ॥

ಪಯಃ । ಪೃಥಿವ್ಯಾಮ್ । ಪಯಃ । ಓಷಧೀಷು । ಪಯಃ । ದಿವಿ । ಅಂತರಿಕ್ಷೇ । ಪಯಃ । ಧಾಮ್ ॥ ಪಯಸ್ವತೀಃ ।

ಪ್ರದಿಶ ಇತಿ ಪ್ರ-ದಿಶಃ । ಸಂತು । ಮಹ್ಯಮ್ ॥

---

| ಮಂತ್ರ | ವಿನಿಯೋಗ |
|---|---|
| **ಪಯಃ ಪೃಥಿವ್ಯಾಂ...ಮಹ್ಯಮ್ ॥** | ಮರ್ಕಟಕವೆಂಬ ಧಾನ್ಯವಿಶೇಷದ ಹೋಮಕ್ಕಾಗಿ. |

---

**ವಾಜಸ್ಯ**=ಅನ್ನದ; **ಪ್ರಸವಃ**=ಸಮೃದ್ಧಿಯು; **ವಿಶ್ವಾಃ**=ಎಲ್ಲಾ; **ಆಶಾಃ**=ದಿಕ್ಕುಗಳನ್ನೂ/ದಿಕ್ಕುಗಳಲ್ಲಿರುವ ಎಲ್ಲ ಪ್ರಾಣಿಗಳನ್ನೂ; **ನನ್ನಮೀತಿ ಹಿ**=ವಶಪಡಿಸಿಕೊಳ್ಳುತ್ತದೆಯಷ್ಟೆ. [ನಿಮ್ಮ ಅನುಗ್ರಹದಿಂದ] **ವಾಜಪತಿಃ**=ಅನ್ನದ ಒಡೆಯನಾಗುವಂತೆ; **ಭವೇಯಮ್**=ನಾನು ಆಗುವಂತಾಗಲಿ. **ಪೃಥಿವ್ಯಾಮ್**=[ಅನ್ನಸಮೃದ್ಧಿಗಾಗಿ] ಭೂಮಿಯಲ್ಲಿ; **ಪಯಃ**=ನೀರನ್ನು; **ಧಾಮ್**=[ನಾನು] ಸ್ಥಾಪಿಸುತ್ತೇನೆ. **ಓಷಧೀಷು**=ಸಸ್ಯನಿಮಿತ್ತವಾಗಿಯೂ; **ಪಯಃ**=ನೀರನ್ನು; ಧಾಮ್=ಉಪಯೋಗಿಸುತ್ತೇನೆ; **ದಿವಿ**=ದ್ಯುಲೋಕದಲ್ಲಿಯೂ; **ಪಯಃ**=ನೀರನ್ನು; ಧಾಮ್=ಧರಿಸುತ್ತೇನೆ. **ಅಂತರಿಕ್ಷೇ**=ಅಂತರಿಕ್ಷದಲ್ಲಿಯೂ; **ಪಯಃ**=ನೀರನ್ನು; ಧಾಮ್=ಹೊಂದುತ್ತೇನೆ. **ಪ್ರದಿಶಃ**=ಶ್ರೇಷ್ಠವಾದ ಎಲ್ಲ ದಿಕ್ಕುಗಳೂ; **ಮಹ್ಯಮ್**=ನನಗಾಗಿ; **ಪಯಸ್ವತೀಃ**=ನೀರುಳ್ಳವುಗಳಾಗಿ; **ಸಂತು**=ಆಗಲಿ.

---

**ಮರುದ್ದೇವತೆಗಳೂ, ಇತರ ದೇವತೆಗಳೂ ನಮ್ಮನ್ನು ರಕ್ಷಿಸಲು ಈ ದಿನ ಇಲ್ಲಿಗೆ ಬರಲಿ. ಆಹವನೀಯ ಮುಂತಾದ ಅಗ್ನಿಗಳೆಲ್ಲವೂ ಚೆನ್ನಾಗಿ ಜ್ವಲಿಸಲಿ. ಧನರೂಪವಾದ ಅನ್ನವೆಲ್ಲವೂ ನಮಗೆ ಲಭಿಸಲಿ. ದೇವತೆಗಳೆಲ್ಲರೂ ನಮ್ಮನ್ನು ರಕ್ಷಿಸಿ ಅನುಗ್ರಹಿಸಲಿ. ಇದು ಸಾಮೆಧಾನ್ಯದ ಹೋಮದ ಮಂತ್ರವಾಗಿದೆ.**

**ಅಗ್ನಿ-ಇಂದ್ರ-ಬೃಹಸ್ಪತಿದೇವತೆಗಳೇ! ಮರುದಾದಿ ಸರ್ವದೇವತೆಗಳೇ! ನೀವು ಸೋಮರಸದಂತಿರುವ ನಾವು ಕೊಡುವ ಅನ್ನರಸದ ಪಾನಕ್ಕಾಗಿ ಸುವರ್ಣನಿರ್ಮಿತರಥಗಳಲ್ಲಿ ನಮ್ಮ ಯಾಗಭೂಮಿಗೆ ಆಗಮಿಸಿ, ನಮ್ಮನ್ನು ಅನುಗ್ರಹಿಸಿರಿ.**

**ಹೇ! ದೇವತೆಗಳೇ! ನೀವು ಅನ್ನಸಂಪಾದಕರು. ಯಾಗಾದಿ ಷಟ್ಕರ್ಮನಿರತನಾದ ಬ್ರಾಹ್ಮಣನಂತೆ ಪರಿಶುದ್ಧರು. ಯಜ್ಞವನ್ನೂ ಸತ್ಯವನ್ನೂ ತಿಳಿದವರು. ಮರಣರಹಿತರು. ನೀವು ಅನ್ನನಿಮಿತ್ತವಾಗಿಯೂ, ಧನನಿಮಿತ್ತವಾಗಿಯೂ**

ಸಂ ಮಾ ಸೃಜಾಮಿ ಪಯಸಾ ಘೃತೇನ ಸಂ ಮಾ ಸೃಜಾಮ್ಯಪ

[..ಜಾಮ್ಯಪಃ(೨೨)] ಓಷಧೀಭಿಃ । ಸೋಽಹಂ ವಾಜಗ್ಂ ಸನೇಯಮಗ್ನೇ ॥

---

ಸಮಿತಿ । ಮಾ । ಸೃಜಾಮಿ । ಪಯಸಾ । ಘೃತೇನ । ಸಮಿತಿ । ಮಾ । ಸೃಜಾಮಿ । ಅಪಃ । (೨೨) ।

ಓಷಧೀಭಿರಿತ್ಯೋಷಧಿ-ಭಿಃ ॥ ಸಃ । ಅಹಮ್ । ವಾಜಮ್ । ಸನೇಯಮ್ । ಅಗ್ನೇ ॥

---

| ಮಂತ್ರ | ವಿನಿಯೋಗ |
|---|---|
| ಸಂ ಮಾ ಸೃಜಾಮಿ...ಅಗ್ನೇ ॥ | ತೃಣಧಾನ್ಯವಿಶೇಷ/ಹುರುಳಿ/ಸೀಮೆಅಕ್ಕಿಯ ಹೋಮಕ್ಕಾಗಿ. |

---

▲ **ಅಗ್ನೇ**=ಅಗ್ನಿದೇವನೇ! [ನಿನ್ನ ಅನುಗ್ರಹದಿಂದ]; **ಪಯಸಾ**=ಕ್ಷೀರದಿಂದ [ನಾನು] **ಮಾ**=ನನ್ನನ್ನು; **ಸಮ್ ಸೃಜಾಮಿ**=ಸಂಯೋಜಿಸುತ್ತೇನೆ. **ಘೃತೇನ**=ತುಪ್ಪದಿಂದ; **ಮಾ**=ನನ್ನನ್ನು; **ಸಮ್ ಸೃಜಾಮಿ**=ಕೂಡಿದವ ನನ್ನಾಗಿ ಮಾಡುತ್ತೇನೆ. **ಅಪಃ**=ಸಲಿಲಗಳನ್ನು; **ಓಷಧೀಭಿಃ**=ಓಷಧಿಗಳಿಂದ; ಸಮ್ ಸೃಜಾಮಿ=ಕೂಡಿಸು ತ್ತೇನೆ; **ಸಃ ಅಹಮ್**=ಅಂತಹ ನಾನು; **ವಾಜಮ್**=[ನಿನ್ನ ಅನುಗ್ರಹದಿಂದ] ಅನ್ನವನ್ನು; **ಸನೇಯಮ್**=ಹೊಂದುತ್ತೇನೆ.

---

ನಮ್ಮನ್ನು ಕಾಪಾಡಿರಿ. ನೀವು ನಾವು ಕೊಡುವ ಮಧುರವಾದ ಹವಿಸ್ಸನ್ನು ಸ್ವೀಕರಿಸಿ, ತೃಪ್ತರಾಗಿರಿ. ಬಳಿಕ ದೇವತೆಗಳು ಸಂಚರಿಸುವ ಮಾರ್ಗಗಳಿಂದ ನಿಮ್ಮ ನಿಮ್ಮ ಸ್ಥಾನಗಳನ್ನು ಹೊಂದಿರಿ.

ನನಗೆ ಪೂರ್ವವಯಸ್ಸಿನಲ್ಲಿಯೂ ಮತ್ತು ಮಧ್ಯಮವಯಸ್ಸಿನಲ್ಲಿಯೂ ಅನ್ನವು ಪ್ರಾಪ್ತವಾಗಿ ಕರ್ಮಗಳನ್ನು ಆಚರಿಸಲು ಅನುಕೂಲವಾಗಲಿ.

ಅನ್ನವು ಆಯಾ ಕಾಲಗಳಲ್ಲಿ ಆಯಾ ದೇವತೆಗಳನ್ನು ಕುರಿತು ಯಾಗ ಮಾಡಲು ಸಾಧ್ಯವಾಗುವಂತೆ ಮಾಡುತ್ತದೆ. ಅನ್ನಸಮೃದ್ಧಿಯು ಎಲ್ಲ ದಿಕ್ಕುಗಳಲ್ಲಿ ಇರುವ ಪ್ರಾಣಿಗಳನ್ನು ವಶಪಡಿಸಿಕೊಳ್ಳಬಲ್ಲುದು. ನಾನು ದೇವತಾನುಗ್ರಹ ದಿಂದ ಅನ್ನಸ್ವಾಮಿಯಾಗುವೆನು.

ಭೂಮಿಯಲ್ಲಿಯೂ ಅನ್ನಕ್ಕಾಗಿ ನೀರು ಒದಗಲಿ. ದ್ಯುಲೋಕ-ಅಂತರಿಕ್ಷಗಳಲ್ಲಿಯೂ ಸಸ್ಯಸಮೃದ್ಧಿಗಾಗಿ ನೀರು ಪ್ರಾಪ್ತವಾಗಲಿ. ಹಾಗೆಯೇ ದಿಕ್ಕುಗಳೆಲ್ಲವೂ ದೇವತಾನುಗ್ರಹದಿಂದ ನನಗಾಗಿ ನೀರನ್ನು ಅನುಗ್ರಹಿಸಲಿ.

ಹೇ! ಅಗ್ನಿದೇವನೇ! ನಿನ್ನ ಅನುಗ್ರಹದಿಂದ ನಾನು ಹಾಲಿನಿಂದಲೂ ತುಪ್ಪದಿಂದಲೂ ಯುಕ್ತನಾಗುವೆನು. ನೀರನ್ನು ಸಸ್ಯಗಳ ವೃದ್ಧಿಗಾಗಿ ಪಡೆಯುವೆನು. ನಿನ್ನ ಅನುಗ್ರಹದಿಂದ ಕ್ಷೀರ-ಘೃತಪೂರ್ಣನಾದ ನಾನು ಅನ್ನಸಮೃದ್ಧಿಯನ್ನೂ ಪಡೆಯುವಂತಾಗಲಿ. ನಾನು ಬೇರೆಯವರಿಂದಲೂ ಒದಗುವ ಅನ್ನವನ್ನು ಭುಂಜಿಸುವಂತಾಗಲಿ.

ನಕ್ತೋಷಾಸಾ ಸಮನಸಾ ವಿರೂಪೇ ಧಾಪಯೇತೇ ಶಿಶುಮೇಕಗ್ಂ ಸಮೀಚೀ ।
ದ್ಯಾವಾ ಕ್ಷಾಮಾ ರುಕ್ಮೋ ಅಂತರ್ವಿಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಃ ॥
ಸಮುದ್ರೋಽಸಿ ನಭಸ್ವಾನಾರ್ದ್ರದಾನುಃ ಶಂಭೂರ್ಮಯೋಭೂರಭಿ ಮಾ ವಾಹಿ

---

ನಕ್ತೋಷಾಸಾ । ಸಮನಸೇತಿ ಸ-ಮನಸಾ । ವಿರೂಪೇ ಇತಿ ವಿ-ರೂಪೇ । ಧಾಪಯೇತೇ ಇತಿ । ಶಿಶುಮ್ । ಏಕಮ್ । ಸಮೀಚೀ ಇತಿ ॥ ದ್ಯಾವಾ । ಕ್ಷಾಮ । ರುಕ್ಮಃ । ಅಂತಃ । ವೀತಿ । ಭಾತಿ । ದೇವಾಃ । ಅಗ್ನಿಮ್ । ಧಾರಯನ್ನ್ । ದ್ರವಿಣೋದಾ ಇತಿ ದ್ರವಿಣಃ-ದಾಃ ॥ ಸಮುದ್ರಃ । ಅಸಿ । ನಭಸ್ವಾನ್ । ಆರ್ದ್ರದಾನುರಿತ್ಯಾರ್ದ್ರ-ದಾನುಃ । ಶಂಭೂರಿತಿ ಶಮ್-ಭೂಃ । ಮಯೋಭೂರಿತಿ ಮಯಃ-ಭೂಃ । ಅಭೀತಿ । ಮಾ । ವಾಹಿ ।

---

| ಮಂತ್ರ | ವಿನಿಯೋಗ |
| --- | --- |
| ನಕ್ತೋಷಾಸಾ...ದ್ರವಿಣೋದಾಃ ॥ | *ಪಯೋಹೋಮವನ್ನು ಮಾಡಲು. |
| ಸಮುದ್ರೋಽಸಿ...ಸ್ವಾಹಾ ॥ | ವಾತನಾಮಹೋಮದ ಮೊದಲನೆಯ ಮಂತ್ರ. |

---

▲ **ಸಮನಸಾ**=ಐಕಮತ್ಯವನ್ನು ಹೊಂದಿರುವ; **ವಿರೂಪೇ**=ಕೃಷ್ಣವರ್ಣ-ಶ್ವೇತವರ್ಣವೆಂಬ ವಿಭಿನ್ನ ರೂಪಗಳುಳ್ಳ; **ನಕ್ತೋಷಾಸಾ**=ರಾತ್ರಿ-ಹಗಲುಗಳು; **ಸಮೀಚೀ**=ಅನುಕೂಲೆಯರಾಗಿ; **ಏಕಮ್**=ಒಂದು; **ಶಿಶುಮ್**=ಅಗ್ನಿರೂಪವಾದ/ಅಗ್ನಿಚಯನರೂಪವಾದ ಮಗುವನ್ನು; **ಧಾಪಯೇತೇ**=ಯಜಮಾನಕರ್ತೃಕ ವಾದ ಕರ್ಮಾನುಷ್ಠಾನವನ್ನು ಸಂಪಾದಿಸಿ ಕೊಡುವಂತೆ ಮಾಡುತ್ತವೆ. **ದ್ಯಾವಾ**=ದ್ಯುಲೋಕದಲ್ಲಿಯೂ; **ಕ್ಷಾಮ**=ಭೂಮಿಯಲ್ಲಿಯೂ; **ಅಂತಃ**=ಮಧ್ಯದ ಅಂತರಿಕ್ಷದಲ್ಲಿಯೂ; **ರುಕ್ಮಃ**=ಈ ಅಗ್ನಿಯು; **ವಿ ಭಾತಿ**= ವಿಶೇಷವಾಗಿ ಪ್ರಕಾಶಿಸುತ್ತಾನೆ. **ದೇವಾಃ**=ಪ್ರಾಣಗಳು/ದೇವತೆಗಳು; **ದ್ರವಿಣೋದಾಃ**=[ಯಜಮಾನನಿಗೆ ಯಾಗದ್ವಾರಾ] ಧನವನ್ನು ನೀಡುತ್ತವೆ. [ಆ ಪ್ರಾಣಗಳು] **ಅಗ್ನಿಮ್**=ಈ ಅಗ್ನಿಯನ್ನು; **ಧಾರಯನ್**= ಧರಿಸುತ್ತವೆ. ▲ [ವಾತವೇ! ನೀನು] **ಸಮುದ್ರಃ ಅಸಿ**=[ದೇವತೆಗಳಲ್ಲಿ] ಸಮುದ್ರದಂತೆ ವಿಶಾಲನಾಗಿರುವೆ. **ನಭಸ್ವಾನ್**=ಸಂಚಾರಕ್ಕಾಗಿ ವಿಶಾಲವಾದ ಆಕಾಶವುಳ್ಳವನು; **ಆರ್ದ್ರದಾನುಃ**=ಆರ್ದ್ರವಾದ ವೃಷ್ಟಿಜಲ ವನ್ನು ಕೊಡತಕ್ಕವನು; **ಶಂಭೂಃ**=ಐಹಿಕಸುಖವನ್ನುಂಟುಮಾಡತಕ್ಕವನು; **ಮಯೋಭೂಃ**= ಆಮುಷ್ಮಿಕ ಸುಖವನ್ನು ನೀಡತಕ್ಕವನು; [ಇಂತಹ ನೀನು] **ಮಾ ಅಭಿ ವಾಹಿ**=ನಿನ್ನ ಎದುರಾಗಿ ಅನುಕೂಲನಾಗಿ ಬೀಸು.

---

* ಕೃಷ್ಣಾಯೈ ಶ್ವೇತವತ್ಸಾಯೈ ಪಯಸಾ ಜುಹೋತಿ ಎಂದು ವಿಹಿತವಾಗಿದೆ. [ತೈ. ಸಂ. 5.4.9]

ಸ್ವಾಹಾ ಮಾರುತೋಽಸಿ ಮರುತಾಂ ಗಣಃ ಶಂಭೂರ್ಮಯೋಭೂರಭಿ ಮಾ ವಾಹಿ ಸ್ವಾಹಾಽವಸ್ಯುರಸಿ ದುವಸ್ವಾಞ್ಛಂಭೂರ್ಮಯೋಭೂರಭಿ ಮಾ ವಾಹಿ ಸ್ವಾಹಾ ॥ ೨೩–12 ॥

[ಧನೇಷ್ವಪ್ರೋ ದುವಸ್ವಾಞ್ಛಂಭೂರ್ಮಯೋಭೂರಭಿ ಮಾ ದ್ವೇ ಚ ॥]

---

ಸ್ವಾಹಾ । ಮಾರುತಃ । ಅಸಿ । ಮರುತಾಮ್ । ಗಣಃ । ಶಂಭೂರಿತಿ ಶಮ್–ಭೂಃ । ಮಯೋಭೂರಿತಿ ಮಯಃ–ಭೂಃ । ಅಭೀತಿ । ಮಾ । ವಾಹಿ । ಸ್ವಾಹಾ । ಅವಸ್ಯುಃ । ಅಸಿ । ದುವಸ್ವಾನ್ । ಶಂಭೂರಿತಿ ಶಮ್–ಭೂಃ । ಮಯೋಭೂರಿತಿ ಮಯಃ–ಭೂಃ । ಅಭೀತಿ । ಮಾ । ವಾಹಿ । ಸ್ವಾಹಾ ॥ (೨೩) ॥

---

| ಮಂತ್ರ | ವಿನಿಯೋಗ |
| --- | --- |
| ಮಾರುತೋಽಸಿ...ಸ್ವಾಹಾ ॥ | ವಾತನಾಮಹೋಮದ ಎರಡನೆಯ ಮಂತ್ರ. |
| ಅವಸ್ಯುರಸಿ...ಸ್ವಾಹಾ ॥ | ವಾತನಾಮಹೋಮದ ಮೂರನೆಯ ಮಂತ್ರ. |

---

**ಸ್ವಾಹಾ**=ಈ ಹವ್ಯವು ನಿನಗೆ ಹುತವಾಗಲಿ. ♠ [ವಾತದೇವನೇ!] [ನೀನು]; **ಮಾರುತಃ ಅಸಿ**=ಮಾರುತನೆಂದು ಪ್ರಸಿದ್ಧನಾದವನು; **ಮರುತಾಮ್ ಗಣಃ**=ನೀನು ಮರುತರ ಗಣಸ್ವರೂಪನಾಗಿರುವೆ. [ನೀನು] **ಶಂಭೂಃ ಮಯೋಭೂಃ**=ಐಹಿಕ–ಆಮುಷ್ಮಿಕಸುಖಗಳನ್ನು ಕೊಡುವವನು. **ಮಾ ಅಭಿ ವಾಹಿ**=ನನಗೆ ಎದುರಾಗಿ ಬೀಸಿ ಶೈತ್ಯವನ್ನು ಉಂಟು ಮಾಡು. **ಸ್ವಾಹಾ**=ನಿನಗೆ ಈ ಹವ್ಯವು ಹುತವಾಗಲಿ. ♠ [ಎಲೈ! ವಾತದೇವನೇ!] [ನೀನು] **ಅವಸ್ಯುಃ ಅಸಿ**=ಪ್ರಾರ್ಥಿಸುವವರನ್ನು ರಕ್ಷಿಸಲು ಇಚ್ಛಿಸುವವನಾಗಿದ್ದೀಯೆ. **ದುವಸ್ವಾನ್**=ಪರಿಚರ್ಯೆಯುಳ್ಳವನು/ಸುತ್ತಲೂ ಸಂಚರಿಸುವಿಕೆಯುಳ್ಳವನೂ; ಅಸಿ=ಆಗಿರುವೆ. **ಶಂಭೂಃ**=ಐಹಿಕಸುಖಗಳನ್ನು ಉಂಟುಮಾಡುವವನೂ; **ಮಯೋಭೂಃ**=ಆಮುಷ್ಮಿಕಸುಖಗಳನ್ನುಂಟುಮಾಡುವವನೂ [ಆಗಿರುವೆ]; **ಮಾ ಅಭಿ ವಾಹಿ**=ನನಗೆ ಪ್ರತ್ಯಕ್ಷನಾಗಿ/ಎದುರಾಗಿ ಬೀಸು; **ಸ್ವಾಹಾ**=ನಿನಗೆ ಇದು ಹುತವಾಗಲಿ.

---

ರಾತ್ರಿ–ಹಗಲುಗಳು ಪರಸ್ಪರ ಐಕಮತ್ಯದಿಂದ ನಡೆದುಕೊಳ್ಳುತ್ತವೆ. ಇವು ಪರಸ್ಪರವಾಗಿ ವಿರುದ್ಧವಾದ ರೂಪವುಳ್ಳವುಗಳಾದರೂ ಅನುಕೂಲಗಳಾಗಿ ಮಗುವಿನಂತೆ ಇರುವ ಅಗ್ನಿರೂಪವಾದ ಅಥವಾ ಅಗ್ನಿಚಯನರೂಪವಾದ ಕರ್ಮವನ್ನು ಯಜಮಾನನು ಅನುಷ್ಠಿಸುವಂತೆ ಮಾಡುತ್ತವೆ.

ಶ್ವೇತವರ್ಣದ ಕರುವುಳ್ಳ, ಕೃಷ್ಣವರ್ಣದ ಧೇನುವಿನ ಹಾಲಿನಿಂದ ಈ ಹೋಮವನ್ನು ಮಾಡಬೇಕು.

ಕೈಗಳ ಬೊಗಸೆಯಿಂದ ಬೀಸುವುದೇ ವಾತನಾಮಹೋಮವಾಗಿದೆ. ಈ ವಾತದೇವನು ದೇವತೆಗಳಲ್ಲಿ ಸಮುದ್ರದಂತೆ ಇರುವವನು. ವಿಶಾಲವಾದ ಅಂತರಿಕ್ಷದಲ್ಲಿ ಸಂಚರಿಸುವವನು. ಮಳೆಯನ್ನು ಸುರಿಸಿ ಲೋಕವನ್ನು ತಂಪಾಗಿ ಇಡುವವನು. ಇಹ-ಪರ ಸುಖಗಳನ್ನು ಕರುಣಿಸುವವನಾಗಿದ್ದಾನೆ. ಹೇ! ವಾತದೇವನೇ! ನೀನು ನನ್ನ ಎದುರಾಗಿ ಅನುಕೂಲನಾಗಿ ಬೀಸು. ನಿನಗಾಗಿ ಈ ಹೋಮವನ್ನು ಮಾಡುತ್ತೇನೆ. ನೀನು ಸ್ವೀಕರಿಸು.

ಇಂದ್ರನು ದಿತಿದೇವಿಯ ಗರ್ಭವನ್ನು ಏಳು ಭಾಗಗಳಾಗಿ ಛೇದಿಸಿದಾಗ ಅಮೋಘವಾದ ಆ ಗರ್ಭವು ರೋದಿಸಿತು. ಅದನ್ನು ಕುರಿತು ಇಂದ್ರನು **'ಮಾ ರುದಃ'** [ಅಳಬೇಡ] ಎಂದು ಹೇಳಿದನು. ಇದರಿಂದ ಜನಿಸಿದ ಆ ಗರ್ಭಗಳಿಗೆ **'ಮಾರುತ'** ಎಂಬ ಹೆಸರು ಬಂದಿತು.

ವಾತದೇವನೇ! ನೀನು **'ಸಪ್ತಗಣಾ ವೈ ಮರುತಃ'** ಎಂಬಂತೆ ಮರುತರ ಗಣಸ್ವರೂಪನಾಗಿರುವೆ. ನೀನು ಇಹ-ಪರಸುಖಗಳನ್ನು ಕೊಡುವವನೂ ಆಗಿರುವೆ. ನಿನಗಾಗಿ ಈ ಹೋಮವನ್ನು ಮಾಡುತ್ತೇನೆ. ನೀನು ಸ್ವೀಕರಿಸಿ, ಅಭಿಮುಖನಾಗಿ ಬೀಸುತ್ತಿರು.

ವಾಯುದೇವನು ರಕ್ಷಿಸತಕ್ಕವನು. ಸರ್ವತ್ರ ಸಂಚರಿಸುವವನು. ಇಹ-ಪರಸೌಖ್ಯದಾತನು. ಇಂತಹ ದೇವನು ನನಗೆ ಎದುರಾಗಿ ಬೀಸಿ ಅನುಗ್ರಹಿಸಲಿ. ಅವನಿಗೆ ಈ ಕೈಗಳಿಂದ ಬೀಸುವ ವಾಯುವನ್ನು ಆಹುತಿಯನ್ನಾಗಿ ಸಮರ್ಪಿಸುತ್ತೇನೆ.

---

## ವಿನಿಯೋಗಸಂಗ್ರಹ

1-7ವಾಜೋ ನಃ ಸಪ್ತಭಿರ್ವಾಜಪ್ರಸವೀಯಂ ಜುಹೋತಿ ಹಿ ।

ನಕ್ತೇತಿ8 ಪಯಸಾ ಹೋಮಃ ಸಮುದ್ರೋ9-11 ವಾತನಾಮಭಿಃ ॥

ತ್ರಿಭಿರ್ಜುಹೋತ್ಯತ್ರ ಮಂತ್ರಾ ಏಕಾದಶ ಸಮೀರಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-11

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) 'ಅಗ್ನಿಚಿತ್' ಯಜಮಾನನಿಗೆ ವ್ರತಾರಂಭ ಯಾವಾಗ? [ಜೈ. ಸೂ. 5.3.10]**

ಅಗ್ನಿಚಯನಪ್ರಕರಣದಲ್ಲಿ **'ಅಗ್ನಿಚಿದ್ವರ್ಷತಿ ನ ಧಾವೇತ್' 'ನ ಸ್ತ್ರಿಯಮುಪೇಯಾತ್'** ಮುಂತಾದ ವ್ರತ ವಚನಗಳು ಇವೆ. ಈ ವ್ರತಗಳು ಯಜಮಾನನಿಗೆ ಆರಂಭವಾಗುವುದು ಯಾವಾಗ? ಎಂಬುದು ಇಲ್ಲಿನ **ಸಂಶಯ.**

ಈ ಚಯನವ್ರತಗಳು ಚಯನನಿಮಿತ್ತವಾದ ವ್ರತಗಳು. ಚಯನವೆಂದರೆ ಇಟ್ಟಿಗೆಗಳಿಂದ ಬಗೆಬಗೆಯ ಆಕಾರಗಳನ್ನು ಕಟ್ಟುವುದು. ಈ ಚಯನನಿಮಿತ್ತವಾದ ವ್ರತಗಳು ಚಯನವಾದೊಡನೆಯೇ ಆರಂಭಗೊಳ್ಳುತ್ತವೆ. ಅಗ್ನಿಚಯನದ ಅನಂತರ ಕ್ರತುವಿನ ಅನುಷ್ಠಾನದವರೆಗೂ ಕಾಯಬೇಕಾಗಿಲ್ಲ. ಏಕೆಂದರೆ

ಈ ವ್ರತಗಳಿಗೆ ಅಗ್ನಿಚಯನವನ್ನೇ ನಿಮಿತ್ತವನ್ನಾಗಿ ಹೇಳಿರುವುದರಿಂದ ನಿಮಿತ್ತದ ಅನಂತರ ನೈಮಿತ್ತಿಕ ಅನುಷ್ಠಾನವು ಯುಕ್ತವಾಗುವುದು. ಹೀಗಾಗಿ ಅಗ್ನಿಚಯನವಾದೊಡನೆಯೇ ವ್ರತಗಳು ಆರಂಭಗೊಳ್ಳುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

ಕ್ರತುವಿನ ಅನುಷ್ಠಾನಕ್ಕಾಗಿ ಚಯನವು ಅಗ್ನಿಯ ಸಂಸ್ಕಾರಕವಾಗಿದೆ. ಕ್ರತುವಿನ ಅನುಷ್ಠಾನವಾದರೆ ಅಗ್ನಿಚಯನವು ಸಫಲವಾಗುತ್ತದೆ ಮತ್ತು ಕ್ರತುವಿನ ಅನುಷ್ಠಾನದ ಅನಂತರವೇ ಯಜಮಾನನು **'ಅಗ್ನಿಚಿತ್'** ಎಂದು ಹೇಳಿಸಿಕೊಳ್ಳುತ್ತಾನೆ. ಆದುದರಿಂದ ಯಾಗದ ಅನುಷ್ಠಾನದ ಅನಂತರವೇ ಅಗ್ನಿಚಿತ್ ಆಗಿರುವ ಯಜಮಾನನಿಗೆ ಅವನಿಗೆ ಸಂಬಂಧಿಸಿದ ವ್ರತಗಳು ಅಂದರೆ ನಿಯಮಗಳು ಪ್ರವೃತ್ತವಾಗುತ್ತವೆ. ಇದು ಇಲ್ಲಿನ **ಸಿದ್ಧಾಂತ.**

## ॥ ತ್ರಯೋದಶೋಽನುವಾಕಃ ॥

ಅಗ್ನಿಂ ಯುನಜ್ಮಿ ಶವಸಾ ಘೃತೇನ ದಿವ್ಯಗ್ಂ ಸುಪರ್ಣಂ ವಯಸಾ ಬೃಹಂತಮ್ । ತೇನ ವಯಂ ಪತೇಮ ಬ್ರಧ್ನಸ್ಯ ವಿಷ್ಟಪಗ್ಂ ಸುವೋ ರುಹಾಣಾ ಅಧಿ ನಾಕ ಉತ್ತಮೇ ॥

ಅಗ್ನಿಮ್ । ಯುನಜ್ಮಿ । ಶವಸಾ । ಘೃತೇನ । ದಿವ್ಯಮ್ । ಸುಪರ್ಣಮಿತಿ ಸು–ಪರ್ಣಮ್ । ವಯಸಾ । ಬೃಹಂತಮ್ ॥ ತೇನ । ವಯಮ್ । ಪತೇಮ । ಬ್ರಧ್ನಸ್ಯ । ವಿಷ್ಟಪಮ್ । ಸುವಃ । ರುಹಾಣಾಃ । ಅಧೀತಿ । ನಾಕೇ । ಉತ್ತಮ ಇತ್ಯುತ್–ತಮೇ ॥

ಹನ್ನೆರಡನೆಯ ಅನುವಾಕದಲ್ಲಿ ವಾಜಪ್ರಸವೀಯಹೋಮವು ಉಕ್ತವಾಯಿತು. ಈ ಹದಿಮೂರನೆಯ ಅನುವಾಕದಲ್ಲಿ ಅಗ್ನಿಯೋಗವು ಹೇಳಲ್ಪಡುತ್ತದೆ. ಚಯನಸಂಸ್ಕೃತವಾದ ಅಗ್ನಿಯನ್ನು ಮತ್ತೊಂದು ಕರ್ಮದಲ್ಲಿ ಸೇರಿಸುವುದು ಅಗ್ನಿಯೋಗವೆನಿಸುತ್ತದೆ. **'ಪುರಸ್ತಾತ್ ಪ್ರಾತರನುವಾಕಾತ್ ಅಗ್ನಿಂ ಯುನಜ್ಮೀತಿ ತಿಸೃಭಿರಭಿಮೃಶನ್ನಗ್ನಿಂ ಯುನಕ್ತಿ'** [ಆಪ. ಶ್ರೌ. 17.23.1] ಎಂದು ಈ ಅಗ್ನಿಯೋಗವು ವಿಹಿತವಾಗಿದೆ.

| ಮಂತ್ರ | ವಿನಿಯೋಗ |
|---|---|
| **ಅಗ್ನಿಂ...ಉತ್ತಮೇ ॥** | ಅಗ್ನಿಯೋಗದ ಪ್ರಥಮಮಂತ್ರ. |

🔔 [ನಾನು] **ದಿವ್ಯಮ್**=ಪ್ರಕಾಶಮಾನವಾಗಿರುವ; **ಸುಪರ್ಣಮ್**=ಪಕ್ಷಿಯ ಆಕಾರವನ್ನು ಹೊಂದಿರುವ; **ವಯಸಾ ಬೃಹಂತಮ್**=ಚಿರಕಾಲವಿರುವ; **ಅಗ್ನಿಮ್**=ಚಯನಸಂಸ್ಕೃತವಾದ ಅಗ್ನಿಯನ್ನು; **ಶವಸಾ**= ಬಲವಾಗಿ; **ಘೃತೇನ**=ಘೃತಾದಿದ್ರವ್ಯದಿಂದ ಯುಕ್ತವಾದ ಕರ್ಮದೊಡನೆ; **ಯುನಜ್ಮಿ**=[ರಥಕ್ಕೆ ಕುದುರೆ ಯನ್ನು ಕಟ್ಟುವಂತೆ] ಸೇರಿಸುತ್ತೇನೆ. **ತೇನ**=ಆ ಅಗ್ನಿಯಿಂದ; **ಉತ್ತಮೇ**=ಉತ್ಕೃಷ್ಟವಾದ; **ನಾಕೇ**=ಸ್ವರ್ಗ ಲೋಕದಲ್ಲಿ; **ಸುವಃ**=ಕೇವಲ ಸುಖಸಾಧನವಾದ ಪ್ರದೇಶವನ್ನು; **ಅಧಿ ರುಹಾಣಾಃ**=ಏರಲು ಇಚ್ಛಿಸುತ್ತಿ ರುವ; **ವಯಮ್**=ನಾವು/ಯಜಮಾನರು; **ಬ್ರಧ್ನಸ್ಯ**=ಆದಿತ್ಯನ; **ವಿಷ್ಟಪಮ್**=ತಾಪರಹಿತವಾದ ಸ್ಥಾನ ವನ್ನು **ಪತೇಮ**=ಹೊಂದುವೆವು.

ಇಮೌ ತೇ ಪಕ್ಷಾವಜರೌ ಪತತ್ರಿಣೋ ಯಾಭ್ಯಾಗ್ಂ ರಕ್ಷಾಗ್ಂಸ್ಯಪಹಗ್ಂಸ್ಯಗ್ನೇ । ತಾಭ್ಯಾಂ ಪತೇಮ ಸುಕೃತಾಮು ಲೋಕಂ ಯತ್ರರ್ಷಯಃ ಪ್ರಥಮಜಾ ಯೇ ಪುರಾಣಾಃ ॥ ಚಿದಸಿ ಸಮುದ್ರಯೋನಿರಿಂದುರ್ದಕ್ಷಃ ಶ್ಯೇನ ಋತಾವಾ ।

ಇಮೌ । ತೇ । ಪಕ್ಷೌ । ಅಜರೌ । ಪತತ್ರಿಣಃ । ಯಾಭ್ಯಾಮ್ । ರಕ್ಷಾಗ್ಂಸಿ । ಅಪಹಗ್ಂಸೀತ್ಯಪ-ಹಗ್ಂಸಿ । ಅಗ್ನೇ ॥ ತಾಭ್ಯಾಮ್ । ಪತೇಮ । ಸುಕೃತಾಮಿತಿ ಸು-ಕೃತಾಮ್ । ಉ । ಲೋಕಮ್ । ಯತ್ರ । ಋಷಯಃ । ಪ್ರಥಮಜಾ ಇತಿ ಪ್ರಥಮ-ಜಾಃ । ಯೇ । ಪುರಾಣಾಃ ॥ ಚಿತ್ । ಅಸಿ । ಸಮುದ್ರಯೋನಿರಿತಿ ಸಮುದ್ರ-ಯೋನಿಃ । ಇಂದುಃ । ದಕ್ಷಃ । ಶ್ಯೇನಃ । ಋತಾವೇತ್ಯೃತ-ವಾ ॥

| ಮಂತ್ರ | ವಿನಿಯೋಗ |
|---|---|
| **ಇಮೌ ತೇ...ಪುರಾಣಾಃ ॥** | ಅಗ್ನಿಯೋಗದ ಎರಡನೆಯ ಮಂತ್ರ. |
| **ಚಿದಸಿ...ಆ ನಿಷತ್ತ ॥** | ಅಗ್ನಿಯೋಗದ ಮೂರನೆಯ ಮಂತ್ರ. |

🔔 **ಅಗ್ನೇ**=ಅಗ್ನಿದೇವನೇ! **ಯಾಭ್ಯಾಮ್**=ಯಾವ ರೆಕ್ಕೆಗಳಿಂದ; **ರಕ್ಷಾಗ್ಂಸಿ**=ರಾಕ್ಷಸರನ್ನು; **ಅಪಹಗ್ಂಸಿ**=ಕೊಲ್ಲುತ್ತೀಯೋ; [ಆ] **ಪತತ್ರಿಣಃ**=ಪಕ್ಷಿರೂಪನಾದ; **ತೇ**=ನಿನ್ನ; **ಇಮೌ ಪಕ್ಷೌ**=ಈ ರೆಕ್ಕೆಗಳು; **ಅಜರೌ**=ಮುದಿತನವನ್ನು ಪಡೆಯುವುದಿಲ್ಲ. **ತಾಭ್ಯಾಮ್**=ಆ ರೆಕ್ಕೆಗಳಿಂದ; **ಯತ್ರ**=ಎಲ್ಲಿ; **ಪ್ರಥಮಜಾಃ**=ಅನಾದಿ ಸಿದ್ಧರಾದ; **ಯೇ ಪುರಾಣಾಃ ಋಷಯಃ**=ಯಾವ ಪುರಾಣಮುನಿಗಳಿರುವರೋ; [ಅಂತಹ] **ಸುಕೃತಾಮ್ ಉ**=ಪುಣ್ಯವಂತರ; **ಲೋಕಮ್**=ಲೋಕವನ್ನು; **ಪತೇಮ**=ಹೊಂದುತ್ತೇವೆ. 🔔 [ಅಗ್ನಿದೇವನೇ!] **ಚಿತ್ ಅಸಿ**=ನೀನು ಜಗತ್ತನ್ನು ಚೈತನ್ಯಯುಕ್ತವನ್ನಾಗಿ ಮಾಡುವವನು/ಯಜಮಾನರಿಂದ ಚಯನ ಮಾಡಲ್ಪಟ್ಟವನು; **ಸಮುದ್ರಯೋನಿಃ**=ಸಮುದ್ರವು ನೀರುಗಳೆಲ್ಲದರ ಆಶ್ರಯವಾಗಿರುವಂತೆ ಕ್ರತುಗಳಿಗೆ ಆಶ್ರಯಭೂತನಾದವನು. **ಇಂದುಃ**=ಪರಮೈಶ್ವರ್ಯಯುಕ್ತನು/ಪ್ರಕಾಶಯುಕ್ತನು. **ದಕ್ಷಃ**=ಕರ್ಮನಿಷ್ಪಾದನೆಯಲ್ಲಿ ಸಮರ್ಥನು. **ಶ್ಯೇನಃ**=ಕಾಮನಾವಶದಿಂದ ಶ್ಯೇನಪಕ್ಷಿಯ ಆಕಾರವುಳ್ಳವನು. **ಋತಾವಾ**=ಸತ್ಯವಂತನು.

ನಾವು ಈ ಅಗ್ನಿಯಿಂದ ಸ್ವರ್ಗಲೋಕದಲ್ಲಿ *ಕೇವಲ ಸುಖರೂಪಪ್ರದೇಶವನ್ನು* ಏರಲು ಅಪೇಕ್ಷಿಸುತ್ತೇವೆ. ಅದಕ್ಕಾಗಿ ಪ್ರಯಾಣ ಮಾಡಲು ನಾನು ರಥಕ್ಕೆ ಕುದುರೆಯನ್ನು ಕಟ್ಟುವಂತೆ ಈ ಅಗ್ನಿಚಯನದಿಂದ ಸಂಸ್ಕೃತವಾದ

* **ಯನ್ನ ದುಃಖೇನ ಸಂಭಿನ್ನಂ ನ ಚ ಗ್ರಸ್ತಮನಂತರಮ್ । ಅಭಿಲಾಷೋಪನೀತಂ ಚ ತತ್ಸುಖಂ ಸ್ವಃಪದಾಸ್ಪದಮ್ ॥**
ದುಃಖದಿಂದ ಮಿಶ್ರಿತವಲ್ಲದ, ದುಃಖವನ್ನು ತಂದು ಒಡ್ಡದ, ಬಯಸಿದಂತೆಯೇ ಒದಗುವ ಸುಖವೇ ಸ್ವರ್ಗಸುಖ.

ಹಿರಣ್ಯಪಕ್ಷಃ ಶಕುನೋ ಭುರಣ್ಯುರ್ಮಹಾನ್ತ್ಸಧಸ್ಥೇ ಧ್ರುವ [ಧ್ರುವಃ(೨೪)]

ಆ ನಿಷತ್ತಃ ॥ ನಮಸ್ತೇ ಅಸ್ತು ಮಾ ಮಾ ಹಿಂಗ್ಂಸೀರ್ವಿಶ್ವಸ್ಯ ಮೂರ್ಧನ್ನಧಿ

ತಿಷ್ಠಸಿ ಶ್ರಿತಃ । ಸಮುದ್ರೇ ತೇ ಹೃದಯಮಂತರಾಯುರ್ದ್ಯಾವಾಪೃಥಿವೀ

ಭುವನೇಷ್ವರ್ಪಿತೇ ॥

---

ಹಿರಣ್ಯಪಕ್ಷ ಇತಿ ಹಿರಣ್ಯ-ಪಕ್ಷಃ । ಶಕುನಃ । ಭುರಣ್ಯುಃ । ಮಹಾನ್ । ಸಧಸ್ಥ ಇತಿ ಸಧ-ಸ್ಥೇ । ಧ್ರುವಃ । (೨೪) ।

ಏತಿ । ನಿಷತ್ತ ಇತಿ ನಿ-ಸತ್ತಃ ॥ ನಮಃ । ತೇ । ಅಸ್ತು । ಮಾ । ಮಾ । ಹಿಂಗ್ಂಸೀಃ । ವಿಶ್ವಸ್ಯ । ಮೂರ್ಧನ್ನ್ । ಅಧೀತಿ ।

ತಿಷ್ಠಸಿ । ಶ್ರಿತಃ ॥ ಸಮುದ್ರೇ । ತೇ । ಹೃದಯಮ್ । ಅಂತಃ । ಆಯುಃ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ ।

ಭುವನೇಷು । ಅರ್ಪಿತೇ ಇತಿ ॥

---

| ಮಂತ್ರ | ವಿನಿಯೋಗ |
|---|---|
| **ನಮಸ್ತೇ...ಅರ್ಪಿತೇ ॥** | ಯಜ್ಞಾಯಜ್ಞಿಯಸ್ತೋತ್ರಕಾಲದಲ್ಲಿ ವಿಹಿತವಾದ ಎರಡು ಅಗ್ನಿಯೋಗಮಂತ್ರಗಳಲ್ಲಿ ಪ್ರಥಮಮಂತ್ರ. |

---

**ಹಿರಣ್ಯಪಕ್ಷಃ**=ಚಿನ್ನದಿಂದ ಮಾಡಿದಂತೆ ಇರುವ ರೆಕ್ಕೆಗಳುಳ್ಳವನು; **ಶಕುನಃ**=ಕಾಮನೆಗೆ ಅನುಗುಣವಾಗಿ ಕಂಕಾದಿಪಕ್ಷಿರೂಪನು; **ಭುರಣ್ಯುಃ**=ಎಲ್ಲವನ್ನೂ ಭರಿಸಲು ಸಮರ್ಥನು. **ಮಹಾನ್**=ಹಲವು ಇಟ್ಟಿಗೆಗಳಿಂದ ನಿರ್ಮಿತನಾಗಿರುವ ಪ್ರೌಢನು. **ಸಧಸ್ಥೇ**=ಆದಿತ್ಯನೊಡನೆ ಸಮಾನಮಂಡಲದಲ್ಲಿ; **ಧ್ರುವಃ**=ಸ್ಥಿರನಾಗಿ; **ಆ ನಿಷತ್ತಃ**=ಸುತ್ತಲೂ ಇರುವವನು. 🔔 [ಅಗ್ನಿದೇವನೇ!] **ತೇ**=ನಿನಗೆ; **ನಮಃ ಅಸ್ತು**=ನಮಸ್ಕಾರವು; **ಮಾ**=[ಯಾಗದಿಂದ ನಿನ್ನನ್ನು ಆರಾಧಿಸುವ] ನನ್ನನ್ನು; **ಮಾ ಹಿಂಗ್ಂಸೀಃ**=ಹಿಂಸಿಸಬೇಡ. [ನೀನು] **ವಿಶ್ವಸ್ಯ ಮೂರ್ಧನ್**=ಸರ್ವಜಗತ್ತಿನ ತಲೆಯಂತೆ ಉತ್ತಮವಾದ ಚಿತಿಪ್ರದೇಶದಲ್ಲಿ; **ಶ್ರಿತಃ**=ಇರುವವನಾಗಿ; **ಅಧಿ ತಿಷ್ಠಸಿ**=ಅಧಿಕನಾಗಿ ಇರುವೆ. **ತೇ**=ನಿನ್ನ; **ಹೃದಯಮ್**=ಮನಸ್ಸು; **ಸಮುದ್ರೇ**=ಸಮುದ್ರದಲ್ಲಿ [ಇದೆ]. ಸಮುದ್ರವು ಮಳೆಯಿಂದ ಹೇಗೋ ಹಾಗೆ ಅಪಾರವಾದ ನೀರನ್ನು ಅನುಗ್ರಹಿಸುವುದರಲ್ಲಿ ಆಸಕ್ತವಾಗಿದೆ; [ಹಾಗೆಯೇ] **ಅಂತಃ**=ನಿನ್ನ ಮನಸ್ಸಿನ ಮಧ್ಯದಲ್ಲಿ; **ಆಯುಃ**=ಸರ್ವಪ್ರಾಣಿಗಳ ಆಯುಸ್ಸೂ ಇದೆ. **ಭುವನೇಷು**=ಲೋಕಗಳಲ್ಲಿ; **ದ್ಯಾವಾಪೃಥಿವೀ**=ಮೇಲೆ ದ್ಯುಲೋಕವೂ, ಕೆಳಗೆ ಭೂಲೋಕವೂ; **ಅರ್ಪಿತೇ**=ಇಡಲ್ಪಟ್ಟಿವೆ.

---

**ಅಗ್ನಿಯನ್ನು ಘೃತಾದಿದ್ರವ್ಯಯುಕ್ತವಾದ ಕರ್ಮದೊಡನೆ ಸೇರಿಸುತ್ತೇನೆ. ಈ ಅಗ್ನಿಯು ಪ್ರಕಾಶಮಾನನು. ಪಕ್ಷಿಯ**

**ಉದ್ನೋ ದತ್ತೋದಧಿಂ ಭಿಂತ ದಿವಃ ಪರ್ಜನ್ಯಾದಂತರಿಕ್ಷಾತ್ಪೃಥಿವ್ಯಾಸ್ತತೋ ನೋ ವೃಷ್ಟ್ಯಾಽವತ । ದಿವೋ ಮೂರ್ಧಾಽಸಿ ಪೃಥಿವ್ಯಾ ನಾಭಿರೂರ್ಗಪಾ ಮೋಷಧೀನಾಮ್ । ವಿಶ್ವಾಯುಃ ಶರ್ಮ ಸಪ್ರಥಾ ನಮಸ್ಪಥೇ ॥**

---

ಉದ್ನಃ । ದತ್ತ । ಉದಧಿಮಿತ್ಯುದ-ಧಿಮ್ । ಭಿನ್ತ । ದಿವಃ । ಪರ್ಜನ್ಯಾತ್ । ಅಂತರಿಕ್ಷಾತ್ । ಪೃಥಿವ್ಯಾಃ । ತತಃ । ನಃ । ವೃಷ್ಟ್ಯಾ । ಅವತ ॥ ದಿವಃ । ಮೂರ್ಧಾ । ಅಸಿ । ಪೃಥಿವ್ಯಾಃ । ನಾಭಿಃ । ಊರ್ಕ್ । ಅಪಾಮ್ । ಓಷಧೀನಾಮ್ ॥ ವಿಶ್ವಾಯುರಿತಿ ವಿಶ್ವ-ಆಯುಃ । ಶರ್ಮ । ಸಪ್ರಥಾ ಇತಿ ಸ-ಪ್ರಥಾಃ । ನಮಃ । ಪಥೇ ॥

---

| ಮಂತ್ರ | ವಿನಿಯೋಗ |
|---|---|
| **ಉದ್ನೋ...ಪಥೇ ॥** | ಯಜ್ಞಾಯಜ್ಞಿಯಸ್ತೋತ್ರಕಾಲದ ಎರಡು ಮಂತ್ರಗಳಲ್ಲಿ ಎರಡನೆಯ ಅಗ್ನಿಯೋಗಮಂತ್ರ. |

---

▲ [ಹೇ! ಅಗ್ನಿಗಳೇ!] [ನೀವು] **ಉದ್ನಃ**=[ನಮಗೆ] ನೀರುಗಳನ್ನು; ***ದತ್ತ**=ಕೊಡಿರಿ. **ಉದಧಿಮ್**=ನೀರಿರುವ ಮೋಡಗಳನ್ನು; **ಪೃಥಿವ್ಯಾಃ**=ಭೂಲೋಕದ ನಿಮಿತ್ತವಾಗಿಯೂ; **ಅಂತರಿಕ್ಷಾತ್**=ಅಂತರಿಕ್ಷನಿಮಿತ್ತವಾಗಿಯೂ; **ದಿವಃ**=ದ್ಯುಲೋಕದ ನಿಮಿತ್ತವಾಗಿಯೂ; [ಹೀಗೆ ಮೂರು ಲೋಕಗಳ ನಿಮಿತ್ತವಾಗಿ] **ಭಿಂತ**=*ಭೇದಿಸಿರಿ. **ತತಃ**=ಮೇಘಭೇದನದ ಬಳಿಕ; **ಪರ್ಜನ್ಯಾತ್**=ಪರ್ಜನ್ಯದೇವನ ಅನುಗ್ರಹದಿಂದ ಪ್ರಾಪ್ತವಾದ; **ವೃಷ್ಟ್ಯಾ**=ಮಳೆಯಿಂದ **ನಃ**=ನಮ್ಮನ್ನು; ***ಅವತ**=ರಕ್ಷಿಸಿರಿ [ಅಗ್ನಿದೇವನೇ! ನೀನು] **ದಿವಃ**=ದ್ಯುಲೋಕದ; **ಮೂರ್ಧಾ ಅಸಿ**=ಶಿರಸ್ಸಿನಂತೆ ಇರುವ ಆದಿತ್ಯರೂಪನಾಗಿರುವೆ. **ಪೃಥಿವ್ಯಾಃ**=ಭೂಮಿಯ ಮಧ್ಯದಲ್ಲಿ; **ನಾಭಿಃ**=ನಾಭಿಯಂತೆ [ಇರುವೆ]. **ಅಪಾಮ್**=ನೀರಿನ; **ಓಷಧೀನಾಮ್**=ಸಸ್ಯಗಳ; **ಊರ್ಕ್**=ರಸರೂಪನಾಗಿ [ಇರುವೆ]. **ವಿಶ್ವಾಯುಃ**=ಜಗತ್ತಿಗೆ ಆಯುಃಪ್ರದನು. **ಶರ್ಮ**=ಶರಣನಾಗಿದ್ದೀಯೆ/ಕ್ಷೇಮರೂಪನಾಗಿರುವೆ/ರಕ್ಷಕನಾಗಿರುವೆ; **ಸಪ್ರಥಾಃ**=ಸವಿಸ್ತಾರನಾಗಿದ್ದೀಯೆ. **ಪಥೇ**=ಪುಣ್ಯಲೋಕಮಾರ್ಗರೂಪನಾದ ನಿನಗೆ; **ನಮಃ**=ನಮಸ್ಕಾರವು.

---

**ಆಕಾರವನ್ನು ಹೊಂದಿರುವವನು. ಚಿರಕಾಲ ಇರತಕ್ಕವನು. ಇಂತಹ ಅಗ್ನಿಯು ನಮಗೆ ತಾಪರಹಿತವಾದ ಸೂರ್ಯನ ಸ್ಥಾನವನ್ನು ಹೊಂದಿಸಲು ಸಮರ್ಥನಾಗಿರುತ್ತಾನೆ.**

**ಎಲೈ! ಅಗ್ನಿದೇವನೇ! ನೀನು ಪಕ್ಷಿರೂಪನು. ನೀನು ನಿನ್ನ ಎರಡು ರೆಕ್ಕೆಗಳಿಂದ ರಾಕ್ಷಸರನ್ನು ನಾಶಪಡಿಸುತ್ತೀಯೆ. ಆ ನಿನ್ನ ರೆಕ್ಕೆಗಳನ್ನು ಆಶ್ರಯಿಸಿ ನಾವು ಅನಾದಿಸಿದ್ಧರಾದ ಪುರಾತನ ಮಹರ್ಷಿಗಳಿರುವ ಊರ್ಧ್ವಲೋಕಗಳಿಗೆ**

---

* ಒಂದೇ ಅಗ್ನಿಯಲ್ಲಿ ಪೂಜಾರ್ಥವಾಗಿ ಬಹುತ್ವದ ಆರೋಪ. ಹೀಗಾಗಿ ಬಹುವಚನ.

**ಯೇನರ್ಷಯಸ್ತಪಸಾ ಸತ್ರಮಾ[ಸತ್ರಮ್(೨೫)ಆಸತೇ..]ಸತೇನ್ಧಾನಾ ಅಗ್ನಿಗ್ಂ ಸುವರಾಭರಂತಃ । ತಸ್ಮಿನ್ನಹಂ ನಿ ದಧೇ ನಾಕೇ ಅಗ್ನಿಮೇತಂ ಯಮಾಹುರ್ಮನವಃ ಸ್ತೀರ್ಣಬರ್ಹಿಷಮ್ ॥**

---

ಯೇನ । ಋಷಯಃ । ತಪಸಾ । ಸತ್ರಮ್ । (೨೫) । ಆಸತ । ಇನ್ಧಾನಾಃ । ಅಗ್ನಿಮ್ । ಸುವಃ । ಆಭರಂತ ಇತ್ಯಾ-ಭರಂತಃ ॥ ತಸ್ಮಿನ್ನ್ । ಅಹಮ್ । ನೀತಿ । ದಧೇ । ನಾಕೇ । ಅಗ್ನಿಮ್ । ಏತಮ್ । ಯಮ್ । ಆಹುಃ । ಮನವಃ । ಸ್ತೀರ್ಣಬರ್ಹಿಷಮಿತಿ ಸ್ತೀರ್ಣ-ಬರ್ಹಿಷಮ್ ॥

---

| ಮಂತ್ರ | ವಿನಿಯೋಗ |
|---|---|
| **ಯೇನರ್ಷಯಃ...ಬರ್ಹಿಷಮ್ ॥** | ಪುನಶ್ಚಿತಿಯ ಎಂಟು ಮಂತ್ರಗಳಲ್ಲಿ ಪ್ರಥಮಮಂತ್ರ. |

---

🔔 **ಯೇನ**=ಯಾವ ಸ್ವರ್ಗನಿಮಿತ್ತವಾಗಿ; **ಅಗ್ನಿಮ್**=ಅಗ್ನಿಯನ್ನು; **ಇನ್ಧಾನಾಃ**=ಜ್ವಲಿಸುವವರಾಗಿ; **ಸುವಃ**=ಸ್ವರ್ಗವನ್ನು; **ಆಭರಂತಃ**=ಪಡೆಯಲು ಪ್ರಯತ್ನಿಸುವವರಾಗಿ; **ಋಷಯಃ**=ಪುರಾತನಮುನಿಗಳು; **ತಪಸಾ**=ಸಂತಾಪಯುಕ್ತನಾದ ಅಗ್ನಿಯಿಂದ; **ಸತ್ರಮ್**=ಸತ್ರಯಾಗವನ್ನು; **ಆಸತ**=ಮಾಡಿದರೋ; **ತಸ್ಮಿನ್ ನಾಕೇ**=ಆ ಸ್ವರ್ಗನಿಮಿತ್ತವಾಗಿ; **ಅಹಮ್**=ನಾನು; **ಯಮ್**=ಯಾವ ಅಗ್ನಿಯನ್ನು; **ಮನವಃ**=ಪುರಾತನ ಮಾನವರು; **ಸ್ತೀರ್ಣಬರ್ಹಿಷಮ್**=ಆರಂಭಿಸಿದ ಯಜ್ಞವುಳ್ಳವನನ್ನಾಗಿ; **ಆಹುಃ**=ಹೇಳುತ್ತಾರೆಯೋ; **ಏತಮ್**=ಈ; **ಅಗ್ನಿಮ್**=ಅಗ್ನಿಯನ್ನು; **ನಿ ದಧೇ**=ಸ್ಥಾಪಿಸುತ್ತೇನೆ.

---

ಹಾರುತ್ತೇವೆ. ಮೇಲಿನ ಲೋಕಗಳನ್ನು ಹೊಂದುತ್ತೇವೆ.

ಚಿತನಾಗಿರುವ ಅಗ್ನಿಯನ್ನು ನೀನು ಚೈತನ್ಯಪ್ರದನೆಂದೂ ಕ್ರತುಗಳಿಗೆ ಆಶ್ರಯನೆಂದೂ, ಕರ್ಮಸಮರ್ಥನೆಂದೂ, ಸುವರ್ಣರೆಕ್ಕೆಯವನೆಂದೂ, ಬಗೆಬಗೆಯಾಗಿ ವರ್ಣಿಸಲಾಗಿದೆ.

ಅಗ್ನಿಯೇ! ನಿನಗೆ ನಮಸ್ಕರಿಸುತ್ತೇನೆ. ನನ್ನನ್ನು ಹಿಂಸಿಸಬೇಡ. ನೀನು ವಿಶ್ವದ ಮೇಲಿರುವೆ. ಮಳೆಯು ನಿನ್ನ ಅನುಗ್ರಹದಿಂದಲೇ. ನಿನ್ನ ಇಚ್ಛೆಗೆ ಅನುಗುಣವಾಗಿ ಪ್ರಾಣಿಗಳ ಆಯುಸ್ಸು ವೃದ್ಧಿ ಹೊಂದುತ್ತದೆಯಷ್ಟೆ. ಲೋಕಗಳಲ್ಲಿ ದ್ಯುಲೋಕ-ಭೂಲೋಕಗಳು ನಿನ್ನಿಂದಲೇ ಸ್ವಸ್ಥಾನಗಳಲ್ಲಿ ಇವೆ.

ಹೇ! ಅಗ್ನಿಗಳೇ! ನೀವು ನೀರು ತುಂಬಿದ ಮೋಡಗಳಿಂದ ಮಳೆಯನ್ನು ಸುರಿಸಿ, ನಮ್ಮನ್ನು ಕಾಪಾಡಿರಿ. ಹೇ! ಅಗ್ನಿಯೇ! ಪರ್ಜನ್ಯದೇವನ ಅನುಗ್ರಹದಿಂದ ಭೂಮಿಯ ನಾಭಿಯಂತೆ ಮಧ್ಯದಲ್ಲಿರುವ ನೀನು ಸ್ವರ್ಗಕ್ಕೆ ಮೂರ್ಧಸ್ಥಾನವಾದ ಆದಿತ್ಯರೂಪನಾಗಿ ಮೂರು ಲೋಕಗಳಿಗೂ ಹಿತಕರವಾದ ಮಳೆಯನ್ನು ಸುರಿಸು. ನೀನು ಜಲಗಳ, ಸಸ್ಯಗಳ ರಸರೂಪನಾಗಿರುವೆ. ಅಗ್ನಿಯಲ್ಲಿ ಪಾಕ ಮಾಡುವುದರಿಂದ ರಸವು ಉತ್ಪನ್ನವಾಗುತ್ತದೆ. ವಿಶ್ವಕ್ಕೆ ಆಯುಸ್ಸನ್ನು ನೀನು

**ತಂ ಪತ್ನೀಭಿರನು ಗಚ್ಛೇಮ ದೇವಾಃ ಪುತ್ರೈರ್ಭ್ರಾತೃಭಿರುತ ವಾ ಹಿರಣ್ಯೈಃ । ನಾಕಂ ಗೃಹ್ಣಾನಾಃ ಸುಕೃತಸ್ಯ ಲೋಕೇ ತೃತೀಯೇ ಪೃಷ್ಠೇ ಅಧಿ ರೋಚನೇ ದಿವಃ ॥ ಆ ವಾಚೋ ಮಧ್ಯಮರುಹದ್ಭುರಣ್ಯುರಯಮಗ್ನಿಃ ಸತ್ಪತಿಶ್ಚೇಕಿತಾನಃ ।**

---

**ತಮ್ । ಪತ್ನೀಭಿಃ । ಅನ್ವಿತಿ । ಗಚ್ಛೇಮ । ದೇವಾಃ । ಪುತ್ರೈಃ । ಭ್ರಾತೃಭಿರಿತಿ ಭ್ರಾತೃ-ಭಿಃ । ಉತ । ವಾ । ಹಿರಣ್ಯೈಃ ॥ ನಾಕಮ್ । ಗೃಹ್ಣಾನಾಃ । ಸುಕೃತಸ್ಯೇತಿ ಸು-ಕೃತಸ್ಯ । ಲೋಕೇ । ತೃತೀಯೇ । ಪೃಷ್ಠೇ । ಅಧೀತಿ । ರೋಚನೇ । ದಿವಃ ॥ ಏತಿ । ವಾಚಃ । ಮಧ್ಯಮ್ । ಅರುಹತ್ । ಭುರಣ್ಯುಃ । ಅಯಮ್ । ಅಗ್ನಿಃ । ಸತ್ಪತಿರಿತಿ ಸತ್-ಪತಿಃ । ಚೇಕಿತಾನಃ ॥**

---

| ಮಂತ್ರ | ವಿನಿಯೋಗ |
|---|---|
| **ತಂ ಪತ್ನೀಭಿಃ...ದಿವಃ ॥** | ಪುನಶ್ಚಿತಿಯ ಎರಡನೆಯ ಮಂತ್ರ. |
| **ಆ ವಾಚೋ...ಷ್ಪೃತನ್ಯವಃ ॥** | ಪುನಶ್ಚಿತಿಯ ಮೂರನೆಯ ಮಂತ್ರ. |

---

▲ **ದೇವಾಃ**=ಋತ್ವಿಜರೇ! [ನಾವು] **ದಿವಃ**=ಸ್ವರ್ಗದ; **ಪೃಷ್ಠೇ**=ಮೇಲ್ಭಾಗದಲ್ಲಿ; **ನಾಕಮ್**=ದುಃಖರಹಿತವಾದ ಸ್ಥಾನವನ್ನು; **ಗೃಹ್ಣಾನಾಃ**=ಹೊಂದಲು ಬಯಸುವವರಾಗಿರುತ್ತೇವೆ. **ಸುಕೃತಸ್ಯ ಲೋಕೇ**=ಚೆನ್ನಾಗಿ ಅನುಷ್ಠಿತವಾದ ಯಾಗದ ಫಲವಾದ; **ತೃತೀಯೇ**=ಭೂಲೋಕದಿಂದ ಮೂರನೆಯದಾದ; **ಅಧಿ ರೋಚನೇ**=ಹೆಚ್ಚಾಗಿ ಪ್ರಕಾಶಿಸುವ ಸ್ವರ್ಗಲೋಕದ ನಿಮಿತ್ತವಾಗಿ; **ಪತ್ನೀಭಿಃ**=ಪತ್ನಿಯರಿಂದಲೂ; **ಪುತ್ರೈಃ**=ಮಕ್ಕಳಿಂದಲೂ; **ಭ್ರಾತೃಭಿಃ**=ಅಣ್ಣತಮ್ಮಂದಿರಿಂದಲೂ; [ಈ ಎಲ್ಲರಿಂದಲೂ ಕೂಡಿದವರಾಗಿ]; **ಉತ ವಾ ಹಿರಣ್ಯೈಃ**=ಹಿರಣ್ಯಾದಿಸಾಧನಗಳಿಂದಲೂ ಸಹಿತರಾಗಿ; [ನಾವು]; **ತಮ್**=ಆ ಅಗ್ನಿಯನ್ನು; **ಅನು ಗಚ್ಛೇಮ**=ಹಿಂಬಾಲಿಸೋಣ/ಅನುಗ್ರಹವನ್ನು ಹೊಂದಿ ಫಲವನ್ನು ಪಡೆಯೋಣ. ▲ **ಭುರಣ್ಯುಃ**= ಎಲ್ಲ ಲೋಕಗಳನ್ನೂ ಭರಿಸುವ; **ಸತ್ಪತಿಃ**=ಸತ್ಪುರುಷರಕ್ಷಕನಾದ; **ಚೇಕಿತಾನಃ**=ಎಲ್ಲವನ್ನೂ ತಿಳಿದಿರುವ; **ಅಯಮ್ ಅಗ್ನಿಃ**=ಈ ಪುನಶ್ಚಿತಿಯ ಅಗ್ನಿಯು; **ವಾಚಃ**=ಸ್ತೋತ್ರರೂಪವಾದ ವಾಕ್ಕುಗಳ; **ಮಧ್ಯಮ್**=ಅರ್ಥವಾಗಿರುವಿಕೆಯನ್ನು; **ಆ ಅರುಹತ್**=ಹೊಂದಿರುತ್ತಾನೆ.

---

ಕೊಡುವವನು. ನಮಗೆ ಸುಖವನ್ನೂ ರಕ್ಷಣೆಯನ್ನೂ ಕೊಡು. ನೀನು ಪುಣ್ಯಲೋಕಮಾರ್ಗರೂಪನು. ನಿನಗೆ ನಮಸ್ಕಾರವಿರಲಿ.

ಅಸ್ರವಣಾರ್ಥವಾಗಿಯೂ, ಸಮೃದ್ಧಿಗಾಗಿಯೂ, ಸಂತಾನಾರ್ಥವಾಗಿಯೂ ಎಂಟು ಮಂತ್ರಗಳಿಂದ ಪುನಶ್ಚಿತಿಯು ಉತ್ತರವೇದಿಯಲ್ಲಿ ವಿಹಿತವಾಗಿದೆ.

ಪೃಷ್ಠೇ ಪೃಥಿವ್ಯಾ ನಿಹಿತೋ ದವಿದ್ಯುತದಧಸ್ಪದಂ ಕೃಣುತೇ [ಕೃಣುತೇ(೨೬)]

ಯೇ ಪೃತನ್ಯವಃ ॥ ಅಯಮಗ್ನಿರ್ವೀರತಮೋ ವಯೋಧಾಃ ಸಹಸ್ರಿಯೋ

ದೀಪ್ಯತಾಮಪ್ರಯುಚ್ಛನ್ನ್ । ವಿಭ್ರಾಜಮಾನಃ ಸರಿರಸ್ಯ ಮಧ್ಯ ಉಪ

ಪ್ರ ಯಾತ ದಿವ್ಯಾನಿ ಧಾಮ ॥

---

ಪೃಷ್ಠೇ । ಪೃಥಿವ್ಯಾಃ । ನಿಹಿತ ಇತಿ ನಿ-ಹಿತಃ । ದವಿದ್ಯುತತ್ । ಅಧಸ್ಪದಮಿತ್ಯಧಃ-ಪದಮ್ । ಕೃಣುತೇ । (೨೬) । ಯೇ । ಪೃತನ್ಯವಃ ॥ ಅಯಮ್ । ಅಗ್ನಿಃ । ವೀರತಮ ಇತಿ ವೀರ-ತಮಃ । ವಯೋಧಾ ಇತಿ ವಯಃ-ಧಾಃ । ಸಹಸ್ರಿಯಃ । ದೀಪ್ಯತಾಮ್ । ಅಪ್ರಯುಚ್ಛನ್ನಿತ್ಯಪ್ರ-ಯುಚ್ಛನ್ನ್ ॥ ವಿಭ್ರಾಜಮಾನ ಇತಿ ವಿ-ಭ್ರಾಜಮಾನಃ । ಸರಿರಸ್ಯ । ಮಧ್ಯೇ । ಉಪ । ಪ್ರೇತಿ । ಯಾತ । ದಿವ್ಯಾನಿ । ಧಾಮ ॥

---

| ಮಂತ್ರ | ವಿನಿಯೋಗ |
|---|---|
| **ಅಯಮಗ್ನಿಃ...ಧಾಮ ॥** | ಪುನಶ್ಚಿತಿಯ ನಾಲ್ಕನೆಯ ಮಂತ್ರ. |

---

**ಪೃಥಿವ್ಯಾಃ ಪೃಷ್ಠೇ**=ಭೂಮಿಯ ಮೇಲೆ; **ನಿಹಿತಃ**=ಇಡಲ್ಪಟ್ಟವನಾಗಿ; **ದವಿದ್ಯುತತ್**=ಅತಿಶಯವಾಗಿ ಪ್ರಕಾಶಿಸುತ್ತಾನೆ. **ಯೇ**=ಯಾರು; **ಪೃತನ್ಯವಃ**=ನಮ್ಮೊಡನೆ ಜಗಳ ಮಾಡುವವರೋ; [ಅವರನ್ನು] **ಅಧಸ್ಪದಮ್ ಕೃಣುತೇ**=ಕಾಲಿನ ಕೆಳಗೆ ಹಾಕಿ ತುಳಿದುಬಿಡುತ್ತಾನೆ. ♠ **ವೀರತಮಃ**=ಅತ್ಯಂತ ಶೂರನಾದ; **ವಯೋಧಾಃ**=ಆಯುಸ್ಸನ್ನು ಸ್ಥಾಪಿಸುವವನಾದ; **ಸಹಸ್ರಿಯಃ**=ಸಾವಿರಾರು ಇಟ್ಟಿಗೆಗಳಿಂದ ಸಂಪಾದಿಸಲ್ಪಟ್ಟಿರುವ; **ಅಪ್ರಯುಚ್ಛನ್**=ಈ ಕರ್ಮದಲ್ಲಿ ಪ್ರಮಾದರಹಿತನಾದ; **ಅಯಮ್ ಅಗ್ನಿಃ**=ಈ ಅಗ್ನಿಯು; **ದೀಪ್ಯತಾಮ್**=ಚೆನ್ನಾಗಿ ಪ್ರಕಾಶಿಸಲಿ. [ಈ ಅಗ್ನಿಯು] **ಸರಿರಸ್ಯ**=ನೀರಿನ; **ಮಧ್ಯೇ**=ಮಧ್ಯದಲ್ಲಿ; **ವಿಭ್ರಾಜಮಾನಃ**=ಔರ್ವ-ವಿದ್ಯುತಾದಿರೂಪದಿಂದ ಪ್ರಕಾಶಮಾನನಾಗಿರುತ್ತಾನೆ. [ಋತ್ವಿಗ್ಯಜಮಾನರೇ! ನೀವು ಈ ಅಗ್ನಿಯ ಅನುಗ್ರಹದಿಂದ] **ದಿವ್ಯಾನಿ**=ದಿವ್ಯವಾಗಿರುವ; **ಧಾಮ**=ಸ್ವರ್ಗಾದಿ ಸ್ಥಾನಗಳನ್ನು; **ಉಪ ಪ್ರ ಯಾತ**=ಹೊಂದಿರಿ.

---

ಎಂಟು ಮಂತ್ರಗಳ ತಾತ್ಪರ್ಯವು ಕ್ರಮವಾಗಿ ಹೀಗಿದೆ:

ಸ್ವರ್ಗನಿಮಿತ್ತವಾಗಿ ಪುರಾತನಮುನಿಗಳು ಶ್ರಮಸಾಧ್ಯವಾದ ಸತ್ರಯಾಗವನ್ನು ಮಾಡುತ್ತಿದ್ದರು. ಅದಕ್ಕಾಗಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಿದ್ದರು. ಅಂತಹ ಸ್ವರ್ಗನಿಮಿತ್ತವಾಗಿ ಯಾವ ಅಗ್ನಿಯನ್ನು ಪುರಾತನರು

**ಸಂ ಪ್ರ ಚ್ಯವಧ್ವಮನು ಸಂ ಪ್ರ ಯಾತಾಗ್ನೇ ಪಥೋ ದೇವಯಾನಾನ್ಕೃಣುಧ್ವಮ್ ।**

**ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ವಿಶ್ವೇ ದೇವಾ ಯಜಮಾನಶ್ಚ ಸೀದತ ॥**

---

ಸಮ್ । ಪ್ರೇತಿ । ಚ್ಯವಧ್ವಮ್ । ಅನ್ವಿತಿ । ಸಮ್ । ಪ್ರೇತಿ । ಯಾತ । ಅಗ್ನೇ । ಪಥಃ । ದೇವಯಾನಾನಿತಿ ದೇವ–ಯಾನಾನ್ । ಕೃಣುಧ್ವಮ್ ॥ ಅಸ್ಮಿನ್ನ್ । ಸಧಸ್ಥ ಇತಿ ಸಧ–ಸ್ಥೇ । ಅಧೀತಿ । ಉತ್ತರಸ್ಮಿನ್ನಿತ್ಯುತ್–ತರಸ್ಮಿನ್ನ್ । ವಿಶ್ವೇ । ದೇವಾಃ । ಯಜಮಾನಃ । ಚ । ಸೀದತ ॥

---

| ಮಂತ್ರ | ವಿನಿಯೋಗ |
|---|---|
| ಸಂ ಪ್ರ ಚ್ಯವಧ್ವಮ್...ಸೀದತ ॥ | ಪುನಶ್ಚಿತಿಯ ಐದನೆಯ ಮಂತ್ರ. |

---

▲ **ಅಗ್ನೇ**=ಅಗ್ನಿದೇವನೇ! [ನೀನೂ] **ವಿಶ್ವೇ ದೇವಾಃ**=ಸರ್ವದೇವತೆಗಳೂ; **ಯಜಮಾನಃ ಚ**=ಯಜಮಾನನೂ; [ನೀವೆಲ್ಲರೂ] **ಸಮ್ ಪ್ರ ಚ್ಯವಧ್ವಮ್**=ಈ ಕರ್ಮದ ವಿಘ್ನಗಳನ್ನು ಸಂಪೂರ್ಣವಾಗಿ ಹೋಗಲಾಡಿಸಿರಿ. **ಅನು ಸಮ್ ಪ್ರ ಯಾತ**=ಅನುಕ್ರಮವಾಗಿ ಕರ್ಮಸಿದ್ಧಿಯನ್ನು ಹೊಂದಿರಿ. **ದೇವಯಾನಾನ್**=ದೇವಲೋಕಪ್ರಾಪ್ತಿಸಾಧನವಾದ; **ಪಥಃ**=ಮಾರ್ಗಗಳನ್ನು; **ಕೃಣುಧ್ವಮ್**=ಸಂಪಾದಿಸಿರಿ. **ಅಸ್ಮಿನ್**=ಈ; **ಸಧಸ್ಥೇ**=ಸಹಸ್ಥಿತಿಯೋಗ್ಯವಾದ ಕರ್ಮದಲ್ಲಿ; **ಅಧಿ ಸೀದತ**=ಮೇಲಾಗಿ ಇರಿ. **ಉತ್ತರಸ್ಮಿನ್**=[ಈ ಲೋಕದಲ್ಲಿಯೂ] ಸ್ವರ್ಗದಲ್ಲಿಯೂ; ಅಧಿ ಸೀದತ=ಉತ್ತಮರಾಗಿ ಇರಿ.

---

ಯಾಗದಲ್ಲಿ ಪ್ರಸಾರ ಮಾಡಿದರೋ, ಅಂತಹ ಅಗ್ನಿಯನ್ನೇ ಪುನಶ್ಚಿತಿರೂಪವಾಗಿ ಸ್ಥಾಪಿಸುತ್ತೇನೆ. ಆತನು ನಮ್ಮ ಇಷ್ಟಾರ್ಥಗಳನ್ನು ಪೂರ್ಣಗೊಳಿಸಲಿ.

ಹೇ! ಋತ್ವಿಜರೇ! ನಾವೆಲ್ಲರೂ ಅಗ್ನಿಯನ್ನು ಹಿಂಬಾಲಿಸಿ, ಯಾಗಗಳ ಫಲವಾಗಿ ದುಃಖಸಂಬಂಧರಹಿತವಾದ ಸ್ವರ್ಗವನ್ನು ಹೆಂಡತಿ, ಸೋದರರು ಮೊದಲಾದ ಎಲ್ಲರೊಡನೆ ಪಡೆಯೋಣ.

ಈ ಪುನಶ್ಚಿತಿ ಮಾಡಿರುವ ಅಗ್ನಿಯು ಲೋಕಗಳನ್ನು ಭರಿಸಬಲ್ಲನು. ಸತ್ಪುರುಷರನ್ನು ರಕ್ಷಿಸುತ್ತಾನೆ. ಎಲ್ಲವನ್ನೂ ತಿಳಿದಿರುತ್ತಾನೆ. ನಮ್ಮ ಸ್ತೋತ್ರವನ್ನು ಮನಸ್ಸಿಗೆ ತಂದುಕೊಂಡು ಅನುಗ್ರಹಿಸುತ್ತಾನೆ. ಪೃಥಿವಿಯ ಮೇಲೆ ಸ್ಥಾಪಿಸಿರುವ ಪ್ರಕಾಶಮಾನನಾದ ಈ ಅಗ್ನಿಯು ನಮ್ಮ ಶತ್ರುಗಳನ್ನು ತುಳಿದುಬಿಡಲಿ. ನಮ್ಮನ್ನು ಮೇಲಕ್ಕೆ ತರಲಿ.

ಅತ್ಯಂತ ಶೂರನೂ, ಆಯುಃಪ್ರದನೂ, ಇಷ್ಟಕಾಸಂಪಾದಿತನೂ, ಪ್ರಮಾದರಹಿತನೂ ಆದ ಅಗ್ನಿಯು ಬೆಳಗುತ್ತಾನೆ. ಅವನ ಅನುಗ್ರಹದಿಂದ ದಿವ್ಯಸ್ಥಾನಗಳನ್ನು ಹೊಂದೋಣ.

ಹೇ! ಅಗ್ನಿದೇವನೇ! ನೀನೂ ಸರ್ವದೇವತೆಗಳೂ ಯಜಮಾನರಿಂದ ಕೂಡಿ ಈ ಕರ್ಮದ ಅಡ್ಡಿಗಳನ್ನು ದೂರ ಮಾಡಿರಿ. ದೇವಲೋಕದ ಮಾರ್ಗಗಳನ್ನು ಪಡೆಯಿರಿ. ಈ ಲೋಕ ಮತ್ತು ಪರಲೋಕಗಳಲ್ಲಿ ಶ್ರೇಷ್ಠತೆಯನ್ನು ಪಡೆಯಿರಿ.

**ಯೇನಾ ಸಹಸ್ರಂ ವಹಸಿ ಯೇನಾಗ್ನೇ ಸರ್ವವೇದಸಮ್ ॥ ತೇನೇಮಂ ಯಜ್ಞಂ ನೋ ವಹ ದೇವಯಾನೋ ಯ[ಯಃ (೨೭) ಉತ್ತಮಃ ।] ಉತ್ತಮಃ ॥ ಉದ್ಬುಧ್ಯಸ್ವಾಗ್ನೇ ಪ್ರತಿ ಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂಸೃಜೇಥಾಮಯಂ ಚ ।**

---

ಯೇನ । ಸಹಸ್ರಮ್ । ವಹಸಿ । ಯೇನ । ಅಗ್ನೇ । ಸರ್ವವೇದಸಮಿತಿ ಸರ್ವ-ವೇದಸಮ್ ॥ ತೇನ । ಇಮಮ್ । ಯಜ್ಞಮ್ । ನಃ । ವಹ । ದೇವಯಾನ ಇತಿ ದೇವ-ಯಾನಃ । ಯಃ । (೨೭) । ಉತ್ತಮ ಇತ್ಯುತ್-ತಮಃ ॥ ಉದಿತಿ । ಬುಧ್ಯಸ್ವ । ಅಗ್ನೇ । ಪ್ರತೀತಿ । ಜಾಗೃಹಿ । ಏನಮ್ । ಇಷ್ಟಾಪೂರ್ತೇ ಇತೀಷ್ಟಾ-ಪೂರ್ತೇ । ಸಮಿತಿ । ಸೃಜೇಥಾಮ್ । ಅಯಮ್ । ಚ ॥

---

| ಮಂತ್ರ | ವಿನಿಯೋಗ |
|---|---|
| ಯೇನಾ ಸಹಸ್ರಮ್...ಉತ್ತಮಃ ॥ | ಪುನಶ್ಚಿತಿಯ ಆರನೆಯ ಮಂತ್ರ. |
| ಉದ್ಬುಧ್ಯಸ್ವ...ಏತಮ್ ॥ | ಪುನಶ್ಚಿತಿಯ ಏಳನೆಯ ಮಂತ್ರ. |

---

▲ **ಅಗ್ನೇ**=ಅಗ್ನಿದೇವನೇ! **ದೇವಯಾನಃ**=ದೇವತೆಗಳನ್ನು ಹೊಂದಿಸುವವನಾದ; **ಯಃ**=ಯಾವ ನೀನು; **ಉತ್ತಮಃ**=ಶ್ರೇಷ್ಠನಾಗಿರುತ್ತೀಯೋ; [ಅಂತಹ ನೀನು]; **ಯೇನ**=ಯಾವ ವ್ಯಾಪಾರದಿಂದ; **ಸಹಸ್ರಮ್**=ಸರ್ವದಕ್ಷಿಣವಾದ ಯಾಗವನ್ನು; **ವಹಸಿ**=ನಿರ್ವಹಿಸುತ್ತೀಯೋ; **ಯೇನ**=ಯಾವ ವ್ಯಾಪಾರದಿಂದ; **ಸರ್ವವೇದಸಮ್**=ಸರ್ವದಕ್ಷಿಣಾಕವಾದ ಯಾಗವನ್ನು; ವಹಸಿ=[ಹೇಗೆ] ನಿರ್ವಹಿಸುವೆಯೋ; **ತೇನ**=ಆ ವ್ಯಾಪಾರದಿಂದಲೇ; **ನಃ**=ನಮ್ಮ; **ಇಮಮ್**=ಈ; **ಯಜ್ಞಮ್**=ಯಜ್ಞವನ್ನೂ; **ವಹ**=ನಿರ್ವಹಿಸು. ▲ **ಅಗ್ನೇ**=ಅಗ್ನಿದೇವನೇ! **ಉತ್ ಬುಧ್ಯಸ್ವ**=[ನೀನು ನಮ್ಮ ವಿಷಯದಲ್ಲಿ] ಸಾವಧಾನನಾಗಿರು; **ಏನಮ್**=ಈ ಯಜಮಾನನನ್ನು; **ಪ್ರತಿ ಜಾಗೃಹಿ**=ಪ್ರತಿ ದಿನವೂ ಸಾವಧಾನನಾಗಿ ಇರುವಂತೆ ಮಾಡು; **ಅಯಮ್ ಚ**=ಈ ಯಜಮಾನನೂ ಮತ್ತು ನೀನೂ ಸೇರಿ; **ಇಷ್ಟಾಪೂರ್ತೇ**=ಶ್ರೌತ-ಸ್ಮಾರ್ತಕರ್ಮಗಳನ್ನು; **ಸಮ್ ಸೃಜೇಥಾಮ್**=ಸಂಪಾದಿಸಿರಿ.

---

ಕೆಲವು ಯಜ್ಞಗಳಲ್ಲಿ ಸಹಸ್ರದಕ್ಷಿಣೆಯು ವಿಹಿತವಾಗಿದೆ. ಕೆಲವು ಯಾಗಗಳಲ್ಲಿ ಸರ್ವಸ್ವದಕ್ಷಿಣೆಯು ಇದೆ. ಈ ಹಿನ್ನೆಲೆಯಲ್ಲಿ ಮಂತ್ರತಾತ್ಪರ್ಯವು ಹೀಗಿದೆ.

ಹೇ! ಅಗ್ನಿದೇವನೇ! ದೇವತೆಗಳನ್ನು ಯಾಗಕ್ಕೆ ಹೊಂದಿಸುವ ನೀನು ಸಹಸ್ರದಕ್ಷಿಣಾಕವಾದ, ಸರ್ವದಕ್ಷಿಣಾಕವಾದ ಯಾಗವನ್ನು ಹೇಗೆ ನಿರ್ವಹಿಸುವೆಯೋ ಹಾಗೆಯೇ ನಮ್ಮ ಈ ಯಾಗವನ್ನೂ ನಿರ್ವಹಿಸು.

ಪುನಃ ಕೃಣ್ವಗ್ಗ್‌ಂಸ್ತ್ವಾ ಪಿತರಂ ಯುವಾನಮನ್ವಾತಾಗ್ಂಸೀತ್ತ್ವಯಿ

ತಂತುಮೇತಮ್ ॥ ಅಯಂ ತೇ ಯೋನಿರ್, ಋತ್ವಿಯೋ ಯತೋ ಜಾತೋ

ಅರೋಚಥಾಃ । ತಂ ಜಾನನ್ನಗ್ನ ಆ ರೋಹಾಥಾ ನೋ

ವರ್ಧಯಾ ರಯಿಮ್ ॥ ೨೮–13 ॥

[ಧ್ರುವಃ ಸತ್ರಂ ಕೃಣುತೇ ಯಃ ಸಪ್ತತ್ರಿಗ್ಂಶಚ್ಚ ॥]

---

ಪುನಃ । ಕೃಣ್ವನ್ । ತ್ವಾ । ಪಿತರಮ್ । ಯುವಾನಮ್ । ಅನ್ವಾತಾಗ್ಂಸೀದಿತ್ಯನು–ಆತಾಗ್ಂಸೀತ್ । ತ್ವಯಿ । ತಂತುಮ್ । ಏತಮ್ ॥ ಅಯಮ್ । ತೇ । ಯೋನಿಃ । ಋತ್ವಿಯಃ । ಯತಃ । ಜಾತಃ । ಅರೋಚಥಾಃ । ತಮ್ । ಜಾನನ್ । ಅಗ್ನೇ । ಏತಿ । ರೋಹ । ಅಥ । ನಃ । ವರ್ಧಯ । ರಯಿಮ್ ॥ (೨೮) ॥

---

| ಮಂತ್ರ | ವಿನಿಯೋಗ |
|---|---|
| ಅಯಂ ತೇ...ರಯಿಮ್ ॥ | ಪುನಶ್ಚಿತಿಯ ಎಂಟನೆಯ ಹಾಗೂ ಕಡೆಯ ಮಂತ್ರ. |

---

[ಹೇ! ಯಜಮಾನನೇ!] **ತ್ವಾ**=ನಿನ್ನನ್ನು; **ಪಿತರಮ್**=ಪಾಲಕನನ್ನಾಗಿಯೂ; **ಯುವಾನಮ್**=ನಿತ್ಯಯೌವನವುಳ್ಳವನನ್ನಾಗಿಯೂ; **ಪುನಃ**=ಮತ್ತೆ ಮತ್ತೆ; **ಕೃಣ್ವನ್**=ಮಾಡುತ್ತಾ; **ತ್ವಯಿ**=ನಿನ್ನ ನಿಮಿತ್ತವಾಗಿ; **ಏತಮ್**=ಈ; **ತಂತುಮ್**= ಯಜ್ಞರೂಪಪ್ರವಾಹವನ್ನು; **ಅನ್ವಾತಾಗ್ಂಸೀತ್**=ಅನುಕ್ರಮವಾಗಿ ನಡೆಯುತ್ತಿರುವಂತೆ ಮಾಡಲಿ. ▲ **ಅಗ್ನೇ**=ಅಗ್ನಿಯೇ! **ಅಯಮ್**=ಇಷ್ಟಕಾಚಿತಿರೂಪವಾದ ಪ್ರದೇಶವು; **ತೇ ಯೋನಿಃ**=ನಿನ್ನ ಸ್ಥಾನವಾಗಿದೆ. [ಇದು] **ಋತ್ವಿಯಃ**=ಋತುಕಾಲದ ಸ್ತ್ರೀ–ಪುರುಷರ ಸಂಬಂಧಸಮಾನವಾಗಿದೆ. **ಯತಃ**=ಯಾವುದರಿಂದ; **ಜಾತಃ**=ಉತ್ಪನ್ನನಾಗಿ; **ಅರೋಚಥಾಃ**=ಪ್ರಕಾಶಿಸಿದೆಯೋ; [ಆ ಪ್ರದೇಶವೇ ಇದಾಗಿದೆ] **ತಮ್ ಜಾನನ್**=[ಇದು ನಿನ್ನ ಸ್ಥಾನವೆಂದು] ಅದನ್ನು ತಿಳಿದು; **ಆ ರೋಹ**=ಅಲಂಕರಿಸು. **ಅಥ**=ಅನಂತರ; **ನಃ**=ನಮ್ಮ; **ರಯಿಮ್**=ಧನವನ್ನು; **ವರ್ಧಯ**=ಹೆಚ್ಚುವಂತೆ ಮಾಡು.

---

ನಾವು ದೇವಲೋಕವನ್ನು ಹೊಂದುವಂತೆ ಮಾಡು. **'ದೇವಯಾನಃ'** ಎಂಬುದನ್ನು **'ಉತ್ತಮಃ'** ಎಂಬಲ್ಲಿ ಅನ್ವಯಿಸಿದರೆ ದೇವಲೋಕಪ್ರಾಪಕವಾದ ಈ ಯಜ್ಞವು ಉತ್ತಮವಾಗಿದೆ. ಇಂತಹ ಯಜ್ಞವನ್ನು ನೀನು ನಿರ್ವಹಿಸು ಎಂದೂ ವಿವರಿಸಬಹುದು.

ಹೇ! ಅಗ್ನಿಯೇ! ನೀನು ನಮ್ಮ ವಿಷಯದಲ್ಲಿ ಜಾಗರೂಕನಾಗಿರು. ಈ ಯಜಮಾನನೂ ಸಾವಧಾನನಾಗಿರುವಂತೆ

ಮಾಡು. ನೀವಿಬ್ಬರೂ ಶ್ರೌತ-ಸ್ಮಾರ್ತಕರ್ಮಗಳನ್ನು ನಿರ್ವಹಿಸಿರಿ.

ಅಗ್ನಿಯೇ! ಈ ಯಜಮಾನನು ನಿನ್ನನ್ನು ಪಾಲಿಸಲಿ. ನೀನು ನನ್ನನ್ನು ಯುವಕನಂತೆ ದೃಢಾಂಗನಾಗಿರುವಂತೆ ಮಾಡು. ನಿನ್ನ ಅನುಗ್ರಹದಿಂದ ಈ ಯಜ್ಞಪ್ರವಾಹವು ನಿರಂತರವಾಗಿ ಸಾಗಲಿ.

ಹೇ! ಅಗ್ನಿಯೇ! ಈ ಚಿತಿಪ್ರದೇಶವು ನಿನ್ನದು. ನೀನು ಉತ್ಪನ್ನನಾಗಿ ಪ್ರಕಾಶಿಸಿರುವ ಪ್ರದೇಶವು ಇದು. ನೀನು ಇಲ್ಲಿ ಇದ್ದುಕೊಂಡು ಪ್ರಜ್ವಲಿಸು. ನಮ್ಮ ಧನವನ್ನೂ ಹೆಚ್ಚಿಸು.

---

## ವಿನಿಯೋಗಸಂಗ್ರಹ

**1-3ಅಗ್ನಿತ್ರಯಂ ಪುರಾ ಪ್ರಾತರನುವಾಕಾತ್ ಸ್ಪೃಶೇದಿಹ ।**
**4-5ನಮೋ ದ್ವಾಭ್ಯಾಂ ವಹ್ನಿಮರ್ಶಃ 6-13ಯೇನಾಷ್ಟಾವಿಷ್ಟಕಾಷ್ಟಕಮ್ ॥**
**ಪುನಶ್ಚಿತಿರಿತಿ ಪ್ರೋಕ್ತಾ ಮಂತ್ರಾ ಅತ್ರ ತ್ರಯೋದಶ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-13

ಖ❀ಖಖ❀ಖ

## ॥ ಚತುರ್ದಶೋಽನುವಾಕಃ ॥

**ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇನ್ಧಾನಾಸ್ತನುವಂ ಪುಷೇಮ ।**
**ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಽಧ್ಯಕ್ಷೇಣ ಪೃತನಾ ಜಯೇಮ ॥**

---

ಮಮ । ಅಗ್ನೇ । ವರ್ಚಃ । ವಿಹವೇಷ್ವಿತಿ ವಿ-ಹವೇಷು । ಅಸ್ತು । ವಯಮ್ । ತ್ವಾ । ಇನ್ಧಾನಾಃ । ತನುವಮ್ । ಪುಷೇಮ ॥ ಮಹ್ಯಮ್ । ನಮಂತಾಮ್ । ಪ್ರದಿಶ ಇತಿ ಪ್ರ-ದಿಶಃ । ಚತಸ್ರಃ । ತ್ವಯಾ । ಅಧ್ಯಕ್ಷೇಣೇತ್ಯಧಿ-ಅಕ್ಷೇಣ । ಪೃತನಾಃ । ಜಯೇಮ ॥

---

ಹದಿಮೂರನೆಯ ಅನುವಾಕದಲ್ಲಿ ಪುನಶ್ಚಿತಿಮಂತ್ರಗಳು ಹೇಳಲ್ಪಟ್ಟವು. ಈ ಹದಿನಾಲ್ಕನೆಯ ಅನುವಾಕದಲ್ಲಿ ವಿಹವ್ಯೇಷ್ಟಕೋಪಧಾನಮಂತ್ರಗಳು ಉಕ್ತವಾಗಿವೆ. ವಿಶೇಷವಿಧಿಗಳು ಶ್ರೌತಸೂತ್ರದಲ್ಲಿವೆ.

---

| ಮಂತ್ರ | ವಿನಿಯೋಗ |
|---|---|
| **ಮಮಾಗ್ನೇ...ಜಯೇಮ ॥** | ವಿಹವ್ಯೇಷ್ಟಕೋಪಧಾನವನ್ನು ಮಾಡಲು ಪ್ರಥಮಮಂತ್ರ. |

---

**ಅಗ್ನೇ**=ಅಗ್ನಿದೇವನೇ! **ವಿಹವೇಷು**=ಯಾಗಗಳಲ್ಲಿ; [ಯಾವ] **ವರ್ಚಃ**=ಫಲವು; [ಇದೆಯೋ][ಅದು] **ಮಮ ಅಸ್ತು**=ನನಗೆ ಪ್ರಾಪ್ತವಾಗಲಿ. **ವಯಮ್**=[ಋತ್ವಿಗ್ಯಜಮಾನರಾದ] ನಾವು; **ತ್ವಾ**=ನಿನ್ನನ್ನು; **ಇನ್ಧಾನಾಃ**=ಪ್ರಜ್ವಲಿಸುವಂತೆ ಮಾಡುವವರಾಗಿ; **ತನುವಮ್**=[ನಿನ್ನ] ಶರೀರವನ್ನು; **ಪುಷೇಮ**=ವೃದ್ಧಿಗೊಳಿಸುವೆವು. **ಪ್ರದಿಶಃ**=ಪ್ರಾಚ್ಯಾದಿಗಳೂ ಶ್ರೇಷ್ಠಗಳೂ ಆದ; **ಚತಸ್ರಃ**=ನಾಲ್ಕು ದಿಕ್ಕುಗಳು/ದಿಕ್ಕುಗಳ ಜನರು; **ಮಹ್ಯಮ್**=ನನಗೆ; **ನಮಂತಾಮ್**=ಅಧೀನರಾಗಲಿ. **ಅಧ್ಯಕ್ಷೇಣ**=ಸ್ವಾಮಿಯಾದ; **ತ್ವಯಾ**=ನಿನ್ನಿಂದ; [ಕೂಡಿ] **ಪೃತನಾಃ**=ಶತ್ರುಸೈನ್ಯಗಳನ್ನು; **ಜಯೇಮ**=ಜಯಿಸುವೆವು/ಜಯಿಸುವಂತಾಗಲಿ.

---

ಅಗ್ನಿದೇವನೇ! ನಿನ್ನ ಅನುಗ್ರಹದಿಂದ ಯಾಗಗಳ ಫಲವು ನನಗೆ ಲಭಿಸಲಿ. ಋತ್ವಿಗ್ಯಜಮಾನರಾದ ನಾವು ನಿನ್ನನ್ನು ಬೆಳಗುವಂತೆ ಮಾಡುತ್ತೇವೆ. ನಿನ್ನನ್ನು ವೃದ್ಧಿಗೊಳಿಸುತ್ತೇವೆ. ನಮಗೆ ಎಲ್ಲ ದಿಕ್ಕುಗಳ ಜನರೂ ಅಧೀನರಾಗಲಿ. ನಿನ್ನ ಒಡೆತನದಲ್ಲಿ ನಾವು ಶತ್ರುಗಳನ್ನು ಗೆಲ್ಲುವೆವು. ಗೆಲ್ಲುವಂತಾಗಲಿ.

**ಮಮ ದೇವಾ ವಿಹವೇ ಸಂತು ಸರ್ವ ಇಂದ್ರಾವಂತೋ ಮರುತೋ ವಿಷ್ಣುರಗ್ನಿಃ।**

**ಮಮಾಂತರಿಕ್ಷಮುರು ಗೋಪಮಸ್ತು ಮಹ್ಯಂ ವಾತಃ ಪವತಾಂ ಕಾಮೇ ಅಸ್ಮಿನ್ನ್॥**

**ಮಯಿ ದೇವಾ ದ್ರವಿಣಮಾ ಯಜಂತಾಂ ಮಯ್ಯಾಶೀರಸ್ತು ಮಯಿ ದೇವಹೂತಿಃ।**

---

ಮಮ । ದೇವಾಃ । ವಿಹವ ಇತಿ ವಿ-ಹವೇ । ಸಂತು । ಸರ್ವೇ । ಇಂದ್ರಾವಂತ ಇತೀಂದ್ರ-ವಂತಃ । ಮರುತಃ । ವಿಷ್ಣುಃ । ಅಗ್ನಿಃ ॥ ಮಮ । ಅಂತರಿಕ್ಷಮ್ । ಉರು । ಗೋಪಮ್ । ಅಸ್ತು । ಮಹ್ಯಮ್ । ವಾತಃ । ಪವತಾಮ್ । ಕಾಮೇ । ಅಸ್ಮಿನ್ನ್ ॥ ಮಯಿ । ದೇವಾಃ । ದ್ರವಿಣಮ್ । ಆ । ಯಜಂತಾಮ್ । ಮಯಿ । ಆಶೀರಿತ್ಯಾ-ಶೀಃ । ಅಸ್ತು । ಮಯಿ । ದೇವಹೂತಿರಿತಿ ದೇವ-ಹೂತಿಃ ॥

---

| ಮಂತ್ರ | ವಿನಿಯೋಗ |
|---|---|
| **ಮಮ ದೇವಾಃ...ಅಸ್ಮಿನ್ನ್॥** | ವಿಹವ್ಯೋಪಧಾನದ ಎರಡನೆಯ ಮಂತ್ರ. |
| **ಮಯಿ ದೇವಾಃ ...ಸುವೀರಾಃ॥** | ವಿಹವ್ಯೋಪಧಾನದ ಮೂರನೆಯ ಮಂತ್ರ. |

---

**ಇಂದ್ರಾವಂತಃ**=ಇಂದ್ರನಿಂದ ಕೂಡಿದ; **ಮರುತಃ**=ಮರುದ್ದೇವತೆಗಳೂ; **ವಿಷ್ಣುಃ**=ವಿಷ್ಣುವೂ; **ಅಗ್ನಿಃ**=ಅಗ್ನಿಯೂ; **ಸರ್ವೇ ದೇವಾಃ**=ಎಲ್ಲ ದೇವತೆಗಳೂ; **ಮಮ**=ನನ್ನ; **ವಿಹವೇ**=ಯಾಗದಲ್ಲಿ; **ಸಂತು**=ಸನ್ನಿಹಿತರಾಗಲಿ. **ಉರು**=ವಿಸ್ತೀರ್ಣವಾದ; **ಅಂತರಿಕ್ಷಮ್**=ಅಂತರಿಕ್ಷವು; **ಮಮ**=ನನಗೆ; **ಗೋಪಮ್ ಅಸ್ತು**=ರಕ್ಷಕನಾಗಲಿ. **ಅಸ್ಮಿನ್ ಕಾಮೇ**=ಈ ನನ್ನ ಕಾಮನೆಗೆ ಪೂರಕವಾದ ಯಾಗದಲ್ಲಿ; **ಮಹ್ಯಮ್**=ನನಗೆ; **ವಾತಃ**=ವಾಯುವೂ; **ಪವತಾಮ್**=ಅನುಕೂಲವಾಗಿ ಬೀಸಲಿ/ಫಲಪ್ರದವಾಗಲಿ. 🔔 **ದೇವಾಃ**=ದೇವತೆಗಳು; **ಮಯಿ**=ಯಜಮಾನನಾದ ನನ್ನಲ್ಲಿ; **ದ್ರವಿಣಮ್**=ಧನವನ್ನು; **ಆ ಯಜಂತಾಮ್**= ಪ್ರಾಪ್ತವಾಗುವಂತೆ ಮಾಡಲಿ; **ಮಯಿ**=ನನ್ನಲ್ಲಿ; **ಆಶೀಃ ಅಸ್ತು**=ಆಶಿಸುವ ಫಲವು ಉಂಟಾಗಲಿ; **ಮಯಿ**=ನನ್ನ ವಿಷಯದಲ್ಲಿ; **ದೇವಹೂತಿಃ**=ದೇವತೆಗಳ ಆಹ್ವಾನವು; ಅಸ್ತು=ಫಲಿಸಲಿ/ದೇವತೆಗಳು ಬರಲಿ.

---

ದೇವತೆಗಳೆಲ್ಲರೂ ನನ್ನ ಯಾಗಕ್ಕೆ ಬರಲಿ. ಹವಿಸ್ಸನ್ನು ಸ್ವೀಕರಿಸಿ ತೃಪ್ತರಾಗಿ ನನ್ನನ್ನು ಅನುಗ್ರಹಿಸಲಿ. ವಿಸ್ತಾರವಾಗಿರುವ ಅಂತರಿಕ್ಷವೂ ನನಗೆ ರಕ್ಷಕವಾಗಲಿ. ಗಾಳಿಯೂ ಅನುಕೂಲವಾಗಿ ಬೀಸಿ, ಯಾಗವನ್ನು ತೊಂದರೆಯಿಲ್ಲದಂತೆ ಪೂರ್ಣವಾಗುವಂತೆ ಮಾಡಿ ಫಲಪ್ರದವಾಗಿಸಲಿ.

ದೇವತೆಗಳು ಯಜಮಾನನಾದ ನನಗೆ ಧನವನ್ನು ಕೊಡಲಿ. ನನ್ನ ಯಜ್ಞವು ಫಲಿಸುವಂತೆ ಮಾಡಲಿ. ನನ್ನ ಆಹ್ವಾನ

**ದೈವ್ಯಾ ಹೋತಾರಾ ವನಿಷಂತ [..ಷಂತ(೨೯)] ಪೂರ್ವೇಽರಿಷ್ಟಾಸ್ಸ್ಯಾಮ ತನುವಾ ಸುವೀರಾಃ ॥ ಮಹ್ಯಂ ಯಜಂತು ಮಮ ಯಾನಿ ಹವ್ಯಾಽಽಕೂತಿಸ್ಸತ್ಯಾ ಮನಸೋ ಮೇ ಅಸ್ತು । ಏನೋ ಮಾ ನಿ ಗಾಂ ಕತಮಚ್ಚನಾಹಂ ವಿಶ್ವೇ ದೇವಾಸೋ ಅಧಿ ವೋಚತಾ ಮೇ ॥**

---

ದೈವ್ಯಾ । ಹೋತಾರಾ । ವನಿಷಂತ । (೨೯) । ಪೂರ್ವೇ । ಅರಿಷ್ಟಾಃ । ಸ್ಯಾಮ । ತನುವಾ । ಸುವೀರಾ ಇತಿ ಸು-ವೀರಾಃ ॥ ಮಹ್ಯಮ್ । ಯಜಂತು । ಮಮ । ಯಾನಿ । ಹವ್ಯಾ । ಆಕೂತಿರಿತ್ಯಾ-ಕೂತಿಃ । ಸತ್ಯಾ । ಮನಸಃ । ಮೇ । ಅಸ್ತು ॥ ಏನಃ । ಮಾ । ನೀತಿ । ಗಾಮ್ । ಕತಮತ್ । ಚನ । ಅಹಮ್ । ವಿಶ್ವೇ । ದೇವಾಸಃ । ಅಧೀತಿ । ವೋಚತ । ಮೇ ॥

---

| ಮಂತ್ರ | ವಿನಿಯೋಗ |
|---|---|
| **ಮಹ್ಯಂ ಯಜಂತು...ಮೇ ॥** | ವಿಹವ್ಯೋಪಧಾನದ ನಾಲ್ಕನೆಯ ಮಂತ್ರ. |

---

**ಪೂರ್ವೇ**=ಅನಾದಿಸಿದ್ಧರಾದ; **ದೈವ್ಯಾ**=ದೇವಸಂಬಂಧಿಗಳಾದ; **ಹೋತಾರಾ**=ಋತ್ವಿಜರು; **ವನಿಷಂತ**=ಚೆನ್ನಾಗಿ ಸೇವಿಸಲಿ. [ನಾವು] **ತನುವಾ**=ಶರೀರದಿಂದ; **ಅರಿಷ್ಟಾಃ**=ಹಿಂಸಾರಹಿತರಾಗಿ; **ಸ್ಯಾಮ**=ಆಗೋಣ. **ಸುವೀರಾಃ**=ಸುಪುತ್ರವಂತರೂ; ಸ್ಯಾಮ=ಆಗೋಣ. ▲ **ಯಾನಿ**=[ನಾನು ಕೊಡುವ] ಯಾವ; **ಮಮ**=ನನ್ನ; **ಹವ್ಯಾ**=ಹವಿಸ್ಸುಗಳಿವೆಯೋ; [ಆ ಹವಿಸ್ಸುಗಳನ್ನು] **ಮಹ್ಯಮ್**=ನನಗಾಗಿ; [ದೇವತೆಗಳಿಗೆ ಸಂಬಂಧಿಸಿದ ಋತ್ವಿಜರು] **ಯಜಂತು**=[ಯಾಗದಲ್ಲಿ] ಸಮರ್ಪಿಸಲಿ] **ಮೇ**=ನನ್ನ; **ಮನಸಃ**=ಮನಸ್ಸಿನ; **ಆಕೂತಿಃ**=ಸಂಕಲ್ಪವು; **ಸತ್ಯಾ ಅಸ್ತು**=ಸತ್ಯವಾಗಿ ಪರಿಣಮಿಸಲಿ. **ಕತಮತ್ ಚನ**=ಯಾವ ವಿಧವಾದ; ಏನಃ=ಪಾಪವನ್ನೂ; **ಅಹಮ್**=ನಾನು; **ಮಾ ನಿ ಗಾಮ್**=ಹೊಂದುವಂತಾಗದಿರಲಿ. **ವಿಶ್ವೇ ದೇವಾಸಃ**=ಸರ್ವದೇವತೆಗಳೇ! **ಮೇ**=ನನಗಾಗಿ; **ಅಧಿ ವೋಚತ**=ನನ್ನನ್ನು ಯಜಮಾನರಲ್ಲಿ ಅಧಿಕನೆಂದು ದೇವತೆಗಳಲ್ಲಿ ಪ್ರಸಿದ್ಧಪಡಿಸಿರಿ.

---

ವನ್ನು ದೇವತೆಗಳು ಅಂಗೀಕರಿಸಲಿ. ನನ್ನ ದೇಹಕ್ಕೆ ಹಿಂಸೆಯಾಗದಿರಲಿ. ನಮ್ಮ ಮಕ್ಕಳು ಒಳ್ಳೆಯವರಾಗಲಿ. ನಾವು ದೇವತಾನುಗ್ರಹದಿಂದ ಸುಪುತ್ರವಂತರಾಗೋಣ.

▲ ದೇವತೆಗಳಿಗೆ ಸಂಬಂಧಿಸಿದವರಾಗಿ ದೈವ್ಯರೆನಿಸಿರುವ ಋತ್ವಿಜರು ನನ್ನ ಹವಿಸ್ಸನ್ನು ದೇವತೆಗಳಿಗೆ ಸಮರ್ಪಿಸಲಿ.

ದೇವೀಷ್ಷಡುರ್ವೀರುರು ಣಃ ಕೃಣೋತ ವಿಶ್ವೇ ದೇವಾಸ ಇಹ ವೀರಯಧ್ವಮ್ ।
ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿರ್ಮಾ ರಧಾಮ ದ್ವಿಷತೇ ಸೋಮ
ರಾಜನ್ನ್ ॥ ಅಗ್ನಿರ್ಮನ್ಯುಂ ಪ್ರತಿನುದನ್ಪುರಸ್ತಾ[..ನ್ಪುರಸ್ತಾತ್(೩೦)ಅದಬ್ಧೋ]
ದದಬ್ಧೋ ಗೋಪಾಃ ಪರಿ ಪಾಹಿ ನಸ್ತ್ವಮ್ ।

---

ದೇವೀಃ । ಷಡುರ್ವೀರಿತಿ ಷಟ್-ಉರ್ವೀಃ । ಉರು । ನಃ । ಕೃಣೋತ । ವಿಶ್ವೇ । ದೇವಾಸಃ । ಇಹ । ವೀರಯಧ್ವಮ್ ॥ ಮಾ । ಹಾಸ್ಮಹಿ । ಪ್ರಜಯೇತಿ ಪ್ರ-ಜಯಾ । ಮಾ । ತನೂಭಿಃ । ಮಾ । ರಧಾಮ । ದ್ವಿಷತೇ । ಸೋಮ । ರಾಜನ್ನ್ ॥ ಅಗ್ನಿಃ । ಮನ್ಯುಮ್ । ಪ್ರತಿನುದನ್ನಿತಿ ಪ್ರತಿ-ನುದನ್ನ್ । ಪುರಸ್ತಾತ್ । (೩೦) । ಅದಬ್ಧಃ । ಗೋಪಾ ಇತಿ ಗೋ-ಪಾಃ । ಪರೀತಿ । ಪಾಹಿ । ನಃ । ತ್ವಮ್ ॥

---

| ಮಂತ್ರ | ವಿನಿಯೋಗ |
|---|---|
| ದೇವೀಷ್ಷಡುರ್ವೀಃ...ರಾಜನ್ನ್ ॥ | ವಿಹವ್ಯೋಪಧಾನದ ಐದನೆಯ ಮಂತ್ರ. |
| ಅಗ್ನಿರ್ಮನ್ಯುಂ...ವಿ ನೇಶತ್ ॥ | ವಿಹವ್ಯೋಪಧಾನದ ಆರನೆಯ ಮಂತ್ರ. |

---

▲ **ಷಡುರ್ವೀಃ**=ಉರ್ವೀ [ಎಂಬ ಹೆಸರಿನ]* ಆರು ಜನ; **ದೇವೀಃ**=ದೇವಿಯರೇ! [ನೀವು] **ನಃ**=ನಮ್ಮ ಕರ್ಮವನ್ನು; **ಉರು ಕೃಣೋತ**=ವಿಸ್ತೀರ್ಣವಾಗುವಂತೆ ಮಾಡಿರಿ. **ವಿಶ್ವೇ ದೇವಾಸಃ**=ವಿಶ್ವೇದೇವರೇ! **ಇಹ**=ಈ ಕರ್ಮದಲ್ಲಿ; **ವೀರಯಧ್ವಮ್**=ವೀರರಾಗಿರಿ/ವಿಘ್ನಗಳನ್ನು ಪರಿಹರಿಸಿರಿ. [ನಾವು] **ಪ್ರಜಯಾ**=ಪುತ್ರಾದಿಪ್ರಜೆಯಿಂದ; **ಮಾ ಹಾಸ್ಮಹಿ**=ಪರಿತ್ಯಕ್ತರಾಗದಿರುವಂತೆ ಆಗಲಿ. **ತನೂಭಿಃ**=[ಪುಷ್ಟವಾದ] ಶರೀರಗಳಿಂದಲೂ; **ಮಾ** ಹಾಸ್ಮಹಿ=ಪರಿತ್ಯಕ್ತರಾಗುವಂತೆ ಆಗದಿರಲಿ;/ವಿಯುಕ್ತರಾಗುವುದು ಬೇಡ. **ಸೋಮ ರಾಜನ್**=ರಾಜನಾದ ಸೋಮದೇವನೇ! **ದ್ವಿಷತೇ**=ಶತ್ರುವಿಗೆ; **ಮಾ ರಧಾಮ**=[ಅವನ ಕಾರ್ಯಸಿದ್ಧಿಯನ್ನು] ನಾವು ಮಾಡುವಂತಾಗದಿರಲಿ. ▲ **ಅಗ್ನಿಃ**=ಅಗ್ನಿದೇವನು; **ಮನ್ಯುಮ್**=ವೈರಿಗಳ ಕೋಪವನ್ನು; **ಪ್ರತಿನುದನ್**=ಹೋಗಲಾಡಿಸುತ್ತಾ; **ಪುರಸ್ತಾತ್**=ನಮ್ಮ ಮುಂದೆ [ಹೋಗಲಿ.] [ಅಗ್ನಿಯೇ!] **ಅದಬ್ಧಃ**=ಯಾರಿಂದಲೂ ಹಿಂಸಿಸಲು ಸಾಧ್ಯವಿಲ್ಲದ ನೀನು; **ಗೋಪಾಃ**=ರಕ್ಷಣಸಮರ್ಥನಾಗಿದ್ದೀಯೆ; **ತ್ವಮ್**=ನೀನು; **ನಃ**=ನಮ್ಮನ್ನು; **ಪರಿ ಪಾಹಿ**=ಎಲ್ಲರಿಂದಲೂ ರಕ್ಷಿಸು.

---

* **'ಷಣ್ಮೋರ್ವೀರಂಹಸಸ್ಪಾಂತು ದ್ಯೌಶ್ಚ ಪೃಥಿವೀ ಚಾಪಶ್ಚೌಷಧಯಶ್ಚೋರ್ಕ್ಚ ಸೂನೃತಾ ಚ'** ಎಂದು ಶಾಖಾಂತರದಲ್ಲಿ ಮಂತ್ರವು ಹೇಳಲ್ಪಟ್ಟಿದೆ. **[ಆಪ. ಶ್ರೌ. ಸೂ. 6.22.1]**

ಪ್ರತ್ಯಂಚೋ ಯಂತು ನಿಗುತಃ ಪುನಸ್ತೇಽಮೈಷಾಂ ಚಿತ್ತಂ ಪ್ರಬುಧಾ ವಿ ನೇಶತ್ ॥ ಧಾತಾ ಧಾತೃಣಾಂ ಭುವನಸ್ಯ ಯಸ್ಪತಿರ್ದೇವಗ್ಂ ಸವಿತಾರ ಮಭಿಮಾತಿಷಾಹಮ್ । ಇಮಂ ಯಜ್ಞಮಶ್ವಿನೋಭಾ ಬೃಹಸ್ಪತಿರ್ದೇವಾಃ ಪಾಂತು ಯಜಮಾನಂ ನ್ಯರ್ಥಾತ್ ॥

---

ಪ್ರತ್ಯಂಚಃ । ಯಂತು । ನಿಗುತ ಇತಿ ನಿ–ಗುತಃ । ಪುನಃ । ತೇ । ಅಮಾ । ಏಷಾಮ್ । ಚಿತ್ತಮ್ । ಪ್ರಬುಧೇತಿ ಪ್ರ–ಬುಧಾ । ವೀತಿ । ನೇಶತ್ ॥ ಧಾತಾ । ಧಾತೃಣಾಮ್ । ಭುವನಸ್ಯ । ಯಃ । ಪತಿಃ । ದೇವಮ್ । ಸವಿತಾರಮ್ । ಅಭಿಮಾತಿಷಾಹಮಿತ್ಯಭಿಮಾತಿ–ಸಾಹಮ್ ॥ ಇಮಮ್ । ಯಜ್ಞಮ್ । ಅಶ್ವಿನಾ । ಉಭಾ । ಬೃಹಸ್ಪತಿಃ । ದೇವಾಃ । ಪಾಂತು । ಯಜಮಾನಮ್ । ನ್ಯರ್ಥಾದಿತಿ ನಿ–ಅರ್ಥಾತ್ ॥

---

| ಮಂತ್ರ | ವಿನಿಯೋಗ |
| --- | --- |
| ಧಾತಾ ಧಾತೃಣಾಂ...ನ್ಯರ್ಥಾತ್ ॥ | ವಿಹವ್ಯೋಪಧಾನದ ಏಳನೆಯ ಮಂತ್ರ. |

---

**ತೇ**=ಆ ನಮ್ಮ ಶತ್ರುಗಳು; **ಪ್ರತ್ಯಂಚಃ**=ಹಿಮ್ಮುಖರಾಗಿ; **ಯಂತು**=ಹೋಗಲಿ. **ಪುನಃ**=ಮತ್ತೆ ಮತ್ತೆ; **ನಿಗುತಃ**=ಪಲಾಯನಶೀಲರಾಗಲಿ. **ಏಷಾಮ್**=ಇವರ; **ಚಿತ್ತಮ್**=ಮನಸ್ಸು; **ಪ್ರಬುಧಾ ಅಮಾ**= ಜಾಗರೂಕತೆ/ಒಳ್ಳೆಯ ಬುದ್ಧಿಯೊಡನೆ; **ವಿ ನೇಶತ್**=ನಾಶಹೊಂದಲಿ. 🔔 **ಯಃ**=ಯಾವ ಸ್ರಷ್ಟನು; **ಧಾತೃಣಾಮ್**=ದಕ್ಷಪ್ರಜಾಪತಿಯೇ ಮೊದಲಾದವರಿಗೂ; **ಧಾತಾ**=ವಿಧಾತನಾಗಿರುವನೋ; [ಆ] **ಭುವನಸ್ಯ ಪತಿಃ**=ಪ್ರಪಂಚಪಾಲಕನಾಗಿರುವ ಬ್ರಹ್ಮನೂ; **ಉಭಾ**=ಇಬ್ಬರು; **ಅಶ್ವಿನಾ**=ಆಶ್ವಿನೀದೇವತೆಗಳೂ; **ಬೃಹಸ್ಪತಿಃ**=ಬೃಹಸ್ಪತಿಯೂ; **ದೇವಾಃ**=ಈ ದೇವತೆಗಳೂ; ***ದೇವಮ್**=ಆಯಾ ಮಂತ್ರವ್ಯವಹಾರಗಳಿಂದ ಕೂಡಿರುವ; ***ಸವಿತಾರಮ್**=ಮಹಾಫಲಜನಕವಾದ; **ಅಭಿಮಾತಿಷಾಹಮ್**=ಪಾಪರೂಪನಾದ ಶತ್ರುವನ್ನು ಅಡಗಿಸುವ; **ಇಮಮ್ ಯಜ್ಞಮ್**=ಈ [ನಮ್ಮ] ಯಜ್ಞವನ್ನೂ; **ಯಜಮಾನಮ್**=ಯಜ್ಞಪತಿಯಾಗಿರುವ ಯಜಮಾನನನ್ನೂ; **ನ್ಯರ್ಥಾತ್**=ಯಜ್ಞವೈಗುಣ್ಯರೂಪವಾಗಿರುವ ವ್ಯರ್ಥತೆಯಿಂದ; **ಪಾಂತು**=ಕಾಪಾಡಲಿ.

---

* ಇವು ದ್ವಿತೀಯಾವಿಭಕ್ತಿಯಲ್ಲಿರುವುದರಿಂದ ಅದಕ್ಕೆ ಅನುಗುಣವಾಗಿ ಯೌಗಿಕ ಅರ್ಥವಿದೆ. ಪ್ರಥಮಾವಿಭಕ್ತಿಗೆ ದ್ವಿತೀಯಾವಿಭಕ್ತಿ ವ್ಯತ್ಯಯವೆಂದು ವಿವರಿಸಿ, ದೇವ ಎಂಬುದು ಸವಿತೃ ಎಂಬುದಕ್ಕೆ ವಿಶೇಷಣವೆಂದೂ, ಸವಿತೃದೇವನು ವ್ಯರ್ಥತೆಯನ್ನು ದೂರಮಾಡಲಿ ಎಂದೂ ವಿವರಿಸಬಹುದು.

ಉರುವ್ಯಚಾ ನೋ ಮಹಿಷಃ ಶರ್ಮ ಯಗ್ಂಸದಸ್ಮಿನ್, ಹವೇ ಪುರುಹೂತಃ ಪುರುಕ್ಷು । ಸ ನಃ ಪ್ರಜಾಯೈ ಹರ್ಯಶ್ವ ಮೃಡಯೇಂದ್ರ ಮಾ [(೩೧) ನೋ ರೀರಿಷೋ ಮಾ] ನೋ ರೀರಿಷೋ ಮಾ ಪರಾ ದಾಃ ॥

---

ಉರುವ್ಯಚಾ ಇತ್ಯುರು-ವ್ಯಚಾಃ । ನಃ । ಮಹಿಷಃ । ಶರ್ಮ । ಯಗ್ಂಸತ್ । ಅಸ್ಮಿನ್ನ್ । ಹವೇ । ಪುರುಹೂತ ಇತಿ ಪುರು-ಹೂತಃ । ಪುರುಕ್ಷು ॥ ಸಃ । ನಃ । ಪ್ರಜಾಯಾ ಇತಿ ಪ್ರ-ಜಾಯೈ । ಹರ್ಯಶ್ವೇತಿ ಹರಿ-ಅಶ್ವ । ಮೃಡಯ । ಇಂದ್ರ । ಮಾ । (೩೧) । ನಃ । ರೀರಿಷಃ । ಮಾ । ಪರೇತಿ । ದಾಃ ॥

---

| ಮಂತ್ರ | ವಿನಿಯೋಗ |
|---|---|
| ಉರುವ್ಯಚಾಃ...ಪರಾ ದಾಃ ॥ | ವಿಹವ್ಯೋಪಧಾನದ ಎಂಟನೆಯ ಮಂತ್ರ. |

---

▲ **ಉರುವ್ಯಚಾಃ**=ಬಹುಲೋಕಾಧಿಪತಿಯಾಗಿ ಅತ್ಯಂತ ವ್ಯಾಪ್ತನಾದ; **ಮಹಿಷಃ**=ಮಹಾಮಹಿಮನಾದ; **ಪುರುಹೂತಃ**=ಹಲವಾರು ಯಜಮಾನರಿಂದ ಯಜ್ಞಗಳಲ್ಲಿ ಹವಿಃಸ್ವೀಕಾರಕ್ಕಾಗಿ ಆಮಂತ್ರಿಸಲ್ಪಡುವ ಇಂದ್ರದೇವನು; **ಅಸ್ಮಿನ್**=ಈ; **ಹವೇ**=ಯಾಗದಲ್ಲಿ; **ಶರ್ಮ**=ಸುಖವನ್ನು; **ನಃ**=ನಮಗೆ; **ಯಗ್ಂಸತ್**=ಕೊಡಲಿ. ***ಪುರುಕ್ಷು**=ಹಲವು ಮಂತ್ರಗಳಲ್ಲಿ ಸ್ತುತನಾಗಿರುವ; **ಹರ್ಯಶ್ವ**=ಹಸಿರು ಬಣ್ಣದ ಕುದುರೆಗಳುಳ್ಳ; **ಇಂದ್ರ**=ಇಂದ್ರದೇವನೇ! **ಸಃ**=ಅಂತಹ ಪ್ರಸಿದ್ಧನಾದ [ನೀನು]; **ಪ್ರಜಾಯೈ**=ಪ್ರಜಾದಿಸಮೃದ್ಧಿಗಾಗಿ; **ನಃ**=ನಮ್ಮನ್ನು; **ಮೃಡಯ**=ಸುಖಗೊಳಿಸು. **ನಃ**=ನಮ್ಮನ್ನು; **ಮಾ ರೀರಿಷಃ**=ಹಿಂಸಿಸಬೇಡ; **ಮಾ ಪರಾ ದಾಃ**=ತಿರಸ್ಕರಿಸಬೇಡ.

---

ನನ್ನ ಮನಃಸಂಕಲ್ಪವು ಸತ್ಯಸಂಕಲ್ಪವಾಗಲಿ. ನಾನು ಯಾವ ಪಾಪವನ್ನೂ ಹೊಂದುವುದು ಬೇಡ. ದೇವತೆಗಳೆಲ್ಲರೂ ನನ್ನನ್ನು ಯಜಮಾನರಲ್ಲಿ ಅಧಿಕನೆಂಬುದಾಗಿ ಭಾವಿಸುವಂತಾಗಲಿ.

ಷಡುರ್ವೀದೇವತೆಗಳೇ! ನೀವು ನಮ್ಮ ಯಾಗವು ಸಮೃದ್ಧವಾಗುವಂತೆ ಮಾಡಿರಿ. ವಿಶ್ವೇದೇವರೇ! ನೀವು ಯಜ್ಞವಿಘ್ನಗಳನ್ನು ಪರಿಹರಿಸಿರಿ. ನಾವು ಪ್ರಜೆಯಿಂದಲೂ, ಶರೀರಾದಿಗಳಿಂದಲೂ ವಿಯುಕ್ತರಾಗದಿರುವಂತಾಗಲಿ. ಸೋಮರಾಜನೇ! ನಿನ್ನ ಅನುಗ್ರಹದಿಂದ ನಮ್ಮ ಶತ್ರುವು ನಮ್ಮನ್ನು ದ್ವೇಷಿಸುವ ತನ್ನ ಕಾರ್ಯದಲ್ಲಿ ಸಫಲನಾಗದಿರಲಿ.

ಅಗ್ನಿದೇವನು ನಮ್ಮ ಶತ್ರುಗಳ ಕೋಪವನ್ನು ಪರಿಹರಿಸುತ್ತಾ, ನಮ್ಮ ಮುಂದೆ ಸಾಗಲಿ. ಹೇ! ಅಗ್ನಿಯೇ! ನಿನ್ನನ್ನು ಯಾರೂ ಹಿಂಸಿಸಲಾರರು. ನೀನು ನಮ್ಮ ರಕ್ಷಕನಾಗು.

---

* ಸಂಬೋಧನಾವಿಭಕ್ತಿ.

**ಯೇ ನಃ ಸಪತ್ನಾ ಅಪ ತೇ ಭವಂತ್ವಿಂದ್ರಾಗ್ನಿಭ್ಯಾಮವ ಬಾಧಾಮಹೇ ತಾನ್ ।**

**ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ**

**ಚೇತ್ತಾರಮಧಿರಾಜಮಕ್ರನ್ ॥**

---

**ಯೇ । ನಃ । ಸಪತ್ನಾಃ । ಅಪೇತಿ । ತೇ । ಭವಂತು । ಇಂದ್ರಾಗ್ನಿಭ್ಯಾಮಿತೀಂದ್ರಾಗ್ನಿ-ಭ್ಯಾಮ್ । ಅವೇತಿ । ಬಾಧಾಮಹೇ । ತಾನ್ ॥ ವಸವಃ । ರುದ್ರಾಃ । ಆದಿತ್ಯಾಃ । ಉಪರಿಸ್ಪೃಶಮಿತ್ಯುಪರಿ-ಸ್ಪೃಶಮ್ । ಮಾ । ಉಗ್ರಮ್ । ಚೇತ್ತಾರಮ್ । ಅಧಿರಾಜಮಿತ್ಯಧಿ-ರಾಜಮ್ । ಅಕ್ರನ್ ॥**

---

| ಮಂತ್ರ | ವಿನಿಯೋಗ |
|---|---|
| **ಯೇ ನಃ ಸಪತ್ನಾಃ...ಅಕ್ರನ್ ॥** | ವಿಹವ್ಯೋಪಧಾನದ ಒಂಬತ್ತನೆಯ ಮಂತ್ರ. |

---

**ನಃ**=ನಮಗೆ; **ಯೇ**=ಯಾರು; **ಸಪತ್ನಾಃ**=ವೈರಿಗಳು ಇದ್ದಾರೆಯೋ; **ತೇ**=ಅವರು; **ಅಪ ಭವಂತು**=ದೂರಕ್ಕೆ ಹೊರಟುಹೋಗಲಿ; [ನಾವು] **ಇಂದ್ರಾಗ್ನಿಭ್ಯಾಮ್**=[ಅನುಗ್ರಹಿಸುತ್ತಿರುವ] ಇಂದ್ರಾಗ್ನಿದೇವತೆಗಳಿಂದ ಕೂಡಿದವರಾಗಿ; [ಅವರ ಬೆಂಬಲದಿಂದ] **ತಾನ್ ಅವ ಬಾಧಾಮಹೇ**=ಅವರನ್ನು ಸರ್ವಪ್ರಕಾರದಿಂದಲೂ ನಿವಾರಿಸುತ್ತೇವೆ. **ವಸವಃ**=ವಸುದೇವತೆಗಳು; **ರುದ್ರಾಃ**=ರುದ್ರದೇವತೆಗಳು; **ಆದಿತ್ಯಾಃ**=ಆದಿತ್ಯದೇವತೆಗಳು; **ಮಾ**=ನನ್ನನ್ನು; **ಉಪರಿಸ್ಪೃಶಮ್**=ಸ್ವರ್ಗವನ್ನು ಮುಟ್ಟುವವನನ್ನಾಗಿಯೂ; **ಉಗ್ರಮ್**=ಶತ್ರುಗಳನ್ನು ತಿರಸ್ಕರಿಸುವವನನ್ನಾಗಿಯೂ; **ಚೇತ್ತಾರಮ್**=ಅಭಿಜ್ಞನನ್ನಾಗಿಯೂ; **ಅಧಿರಾಜಮ್**=ಬೇರೆಯವರಿಗೆ ಒಡೆಯನನ್ನಾಗಿಯೂ; **ಅಕ್ರನ್**=ಮಾಡಲಿ.

---

ನಿನ್ನಿಂದ ರಕ್ಷಿತರಾದ ನಮ್ಮನ್ನು ಹಿಂಸಿಸಲಾಗದೆ ಶತ್ರುಗಳು ವಿಮುಖರಾಗಿ ಎಲ್ಲಿಗಾದರೂ ಓಡಿಹೋಗಲಿ. ಶತ್ರುಗಳ ಮನಸ್ಸು ಪ್ರಬುದ್ಧತೆಯೊಡನೆ ನಾಶ ಹೊಂದಲಿ. ವೈರವನ್ನು ತ್ಯಜಿಸಲಿ. ತನ್ನ ಸ್ವಾಭಾವಿಕಶಕ್ತಿಯನ್ನು ಕಳೆದುಕೊಳ್ಳಲಿ.

ದಕ್ಷಪ್ರಜಾಪತಿ ಮುಂತಾದವರಿಗೂ ವಿಧಾತೃವಾಗಿರುವ, ಪ್ರಪಂಚರಕ್ಷಕನಾದ ಬ್ರಹ್ಮನೂ, ಅಶ್ವಿನೀದೇವತೆಗಳೂ, ಬೃಹಸ್ಪತಿಯೂ ಈ ಮಂತ್ರಗಳಿಂದ ಕೂಡಿರುವ, ಫಲಪ್ರದವಾದ, ಪಾಪವನ್ನು ದೂರ ಮಾಡುವ ಈ ಯಜ್ಞವನ್ನೂ, ಯಜಮಾನನನ್ನೂ, ಸವಿತೃದೇವನು ಫಲವು ದೊರಕದಂತಹ ವ್ಯರ್ಥತೆಯಿಂದ ದೂರಮಾಡಲಿ. ಯಜ್ಞವು ಸಫಲವಾಗುವಂತೆ ಮಾಡಲಿ.

ತ್ರಿಲೋಕಾಧಿಪತಿಯಾಗಿ ಬಹುದೇಶವ್ಯಾಪ್ತನಾದ ಇಂದ್ರದೇವನು ನಮಗೆ ಸುಖವನ್ನು ಕೊಡಲಿ.

ಇಂದ್ರನನ್ನು ಹವಿಃಸ್ವೀಕಾರಕ್ಕಾಗಿ ಆಹ್ವಾನಿಸುತ್ತಾರೆ. ಆತನು ಮಹಾಮಹಿಮನು. ಆತನ ಕುದುರೆಗಳು ಹಸಿರು ಬಣ್ಣದವುಗಳಾಗಿವೆ. ಇಂತಹ ಪುರುಹೂತನೂ, ಪುರುಕ್ಷುವೂ, ಹರ್ಯಶ್ವನೂ, ಮಹಾಂತನೂ ಆಗಿರುವ ಇಂದ್ರನು

ಅರ್ವಾಂಚಮಿಂದ್ರಮಮುತೋ ಹವಾಮಹೇ ಯೋ ಗೋಜಿದ್ಧನಜಿದಶ್ವಜಿದ್ಯಃ।

ಇಮಂ ನೋ ಯಜ್ಞಂ ವಿಹವೇ ಜುಷಸ್ವಾಸ್ಯ ಕುರ್ಮೋ ಹರಿವೋ ಮೇದಿನಂ

ತ್ವಾ ॥ ೩೨-14 ॥

[ವನಿಷಂತ ಪುರಸ್ತಾನ್ಮಾ ತ್ರಿಚತ್ವಾರಿಗ್‌ಂಶಚ್ಚ ॥]

---

ಅರ್ವಾಂಚಮ್ । ಇಂದ್ರಮ್ । ಅಮುತಃ । ಹವಾಮಹೇ । ಯಃ । ಗೋಜಿದಿತಿ ಗೋ-ಜಿತ್ । ಧನಜಿದಿತಿ ಧನ-ಜಿತ್ । ಅಶ್ವಜಿದಿತ್ಯಶ್ವ-ಜಿತ್ । ಯಃ ॥ ಇಮಮ್ । ನಃ । ಯಜ್ಞಮ್ । ವಿಹವ ಇತಿ ವಿ-ಹವೇ । ಜುಷಸ್ವ । ಅಸ್ಯ । ಕುರ್ಮಃ । ಹರಿವ ಇತಿ ಹರಿ-ವಃ । ಮೇದಿನಮ್ । ತ್ವಾ ॥ (೩೨) ॥

---

| ಮಂತ್ರ | ವಿನಿಯೋಗ |
| --- | --- |
| **ಅರ್ವಾಂಚಮಿಂದ್ರಂ...ತ್ವಾ ॥** | ವಿಹವ್ಯೋಪಧಾನದ ಹತ್ತನೆಯ ಮಂತ್ರ. |

---

▲ **ಯಃ**=ಯಾವ ಇಂದ್ರನು; **ಗೋಜಿತ್**=ಶತ್ರುಗಳ ಗೋವುಗಳನ್ನು ಗೆಲ್ಲುವವನೋ; **ಧನಜಿತ್**=ಶತ್ರುಗಳ ಧನವನ್ನೂ ಗೆಲ್ಲುವವನೋ; **ಯಃ**=ಯಾವ ಇಂದ್ರನು; **ಅಶ್ವಜಿತ್**=ಹಗೆಗಳ ಕುದುರೆಗಳನ್ನು ಸ್ವಾಧೀನ ಪಡಿಸಿಕೊಳ್ಳುವವನೋ; **ಅರ್ವಾಂಚಮ್**=ನಮಗೆ ಅಭಿಮುಖನಾದ; **ಇಂದ್ರಮ್**=ಆ ಇಂದ್ರನನ್ನು; **ಅಮುತಃ**=ಈ ಯಜ್ಞದ ನಿಮಿತ್ತವಾಗಿ; **ಹವಾಮಹೇ**=[ಋತ್ವಿಜರಾದ ನಾವು] ಆಹ್ವಾನಿಸುತ್ತೇವೆ. [ಹೇ! ಇಂದ್ರದೇವನೇ!] **ವಿಹವೇ** ಸತಿ=ನಾವು ಆಹ್ವಾನಿಸಲಾಗಿ; **ನಃ**=ನಮ್ಮ; **ಇಮಮ್**=ಈ; ಯಜ್ಞಮ್=ಯಜ್ಞವನ್ನು; **ಜುಷಸ್ವ**=ಸೇವಿಸುವವನಾಗು/ಹವಿರ್ಭಾಗವನ್ನು ಸ್ವೀಕರಿಸು. **ಹರಿವಃ**=ಹರ್ಯಶ್ವನಾದ ಇಂದ್ರನೇ! **ತ್ವಾ**=ನಿನ್ನನ್ನು; **ಅಸ್ಯ**=ಈ ಯಜಮಾನನಿಗೆ; **ಮೇದಿನಮ್**=ಗೆಳೆಯನನ್ನಾಗಿ/ಸ್ನೇಹವುಳ್ಳವನನ್ನಾಗಿ; **ಕುರ್ಮಃ**=ಮಾಡುತ್ತೇವೆ.

---

**ನಮಗೆ ಸುಖವನ್ನುಂಟುಮಾಡಲಿ. ಹೇ! ಇಂದ್ರದೇವನೇ! ಅಂತಹ ನೀನು ನಮ್ಮ ಮಕ್ಕಳು ಮೊದಲಾದವರೊಡನೆ ನಮಗೂ ಸುಖವನ್ನು ಕೊಡು. ನಮ್ಮನ್ನು ಹಿಂಸಿಸದಿರು, ತಿರಸ್ಕರಿಸದಿರು.**

**ನಮ್ಮ ವೈರಿಗಳು ದೂರಾಗಲಿ. ಇಂದ್ರಾಗ್ನಿದೇವತೆಗಳ ನೆರವಿನಿಂದ ಅವರನ್ನು ನಿವಾರಿಸುತ್ತೇವೆ. ವಸು-ರುದ್ರ ಆದಿತ್ಯರು ನನ್ನನ್ನು ಸ್ವರ್ಗಸ್ಪರ್ಶಿಯನ್ನಾಗಿಯೂ, ಬಲ್ಲವನನ್ನಾಗಿಯೂ, ಬೇರೆಯವರಿಗೆ ಒಡೆಯನನ್ನಾಗಿಯೂ ಮಾಡಲಿ.**

ಶತ್ರುಗಳ ಗೋವುಗಳು, ಸಂಪತ್ತು, ಕುದುರೆಗಳು ಇವುಗಳನ್ನು ಗೆಲ್ಲುವ ಇಂದ್ರನನ್ನು ಈ ಯಜ್ಞಕ್ಕಾಗಿ ಆಹ್ವಾನಿಸುವೆವು. ಹೇ! ಇಂದ್ರದೇವ! ನೀನು ಬಂದು ಹವಿರ್ಭಾಗವನ್ನು ಸ್ವೀಕರಿಸು. ನಿನ್ನನ್ನು ಈ ಯಜ್ಞದ ಯಜಮಾನನ ಸ್ನೇಹವುಳ್ಳವನನ್ನಾಗಿ ಮಾಡುವೆವು.

---

## ವಿನಿಯೋಗಸಂಗ್ರಹ

1-10 ಮಮಾಗ್ನೇ ದಶಭಿರ್ಮಂತ್ರೈರ್ಧಿಷ್ಣಿಯೇಷು ಯಥಾಯಥಮ್ ।
ಇಷ್ಟಕಾ ಉಪಧತ್ತೇऽತ್ರ ವಹ್ನಿಕಾಂಡಃ ಸಮಾಪಿತಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–10

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

### ೧) ಇಷ್ಟಕೋಪಧಾನದ ಫಲವು ಯಾರಿಗೆ? [ಜೈ. ಸೂ. 3. 8. 14]

**‘ಮಮಾಗ್ನೇ ವರ್ಚೋ ವಿಹವೇಷು’** ಎಂಬುದಾಗಿ ಆರಂಭಗೊಂಡಿರುವ ಮಂತ್ರಗಳಿಂದ ವಿಹವ್ಯೇಷ್ಟಕೋಪಧಾನವನ್ನು ಮಾಡಬೇಕು. ಇಲ್ಲಿ **‘ಮಮಾಗ್ನೇ’** ಎಂದು ಉಪಧಾನ ಮಾಡುವ ಅಧ್ವರ್ಯುವು ಹೇಳುವುದರಿಂದ ಇಷ್ಟಕೋಪಧಾನದ ಫಲವು ಅಧ್ವರ್ಯುವಿಗೆ ಅನ್ವಯಿಸುತ್ತದೆಯೇ? ಯಜಮಾನನಿಗೆ ಅನ್ವಯಿಸುವುದೇ? ಎಂಬುದು ಇಲ್ಲಿನ **ಸಂಶಯ.**

**‘ಮಮಾಗ್ನೇ’** ಎಂದು ಅಧ್ವರ್ಯುವು ಹೇಳುವುದರಿಂದ ಫಲವು ಅಧ್ವರ್ಯುವಿಗೇ ಅನ್ವಯಿಸುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

**‘ಅಗ್ನಿಂ ಚಿನುತೇ’** ಎಂಬ ವಾಕ್ಯದಲ್ಲಿ **‘ಚಿನುತೇ’** ಎಂಬ ಕ್ರಿಯಾಪದವು ಆತ್ಮನೇಪದಪ್ರತ್ಯಯದಿಂದ ಕೂಡಿದೆ.* ಇದರಿಂದ ಅಗ್ನಿಚಯನದ ಫಲವು ಯಜಮಾನನಿಗೆ ಎಂದು ತಿಳಿಯುತ್ತದೆ. ಅಲ್ಲದೆ ದಕ್ಷಿಣೆಯನ್ನು ತೆಗೆದುಕೊಳ್ಳುವ ಋತ್ವಿಜರಿಗೆ ಅದೇ ಫಲವೇ ಹೊರತು ಯಜ್ಞದ ಫಲವು ನ್ಯಾಯ್ಯವಾದುದಲ್ಲ. ಆದುದರಿಂದ **‘ಮಮ’** ಎಂಬುದಕ್ಕೆ ‘ನನ್ನ ಯಜಮಾನನಿಗೆ’ ಎಂದು ಅರ್ಥ ಮಾಡಿಕೊಳ್ಳಬೇಕು.

ಹೀಗಾಗಿ ಇಷ್ಟಕೋಪಧಾನದ ಫಲವು ಯಜಮಾನನಿಗೆ ಸೇರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

---

* ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ [ಪಾ. ಸೂ. 1.3.72]

## ॥ ಪಂಚದಶೋಽನುವಾಕಃ ॥

ಅಗ್ನೇರ್ಮನ್ವೇ ಪ್ರಥಮಸ್ಯ ಪ್ರಚೇತಸೋ ಯಂ ಪಾಂಚಜನ್ಯಂ ಬಹವಃ ಸಮಿಂಧತೇ ।
ವಿಶ್ವಸ್ಯಾಂ ವಿಶಿ ಪ್ರವಿವಿಶಿವಾಗ್ಂಸಮೀಮಹೇ ಸ ನೋ ಮುಂಚತ್ವಗ್ಂಹಸಃ ॥

---

ಅಗ್ನೇಃ । ಮನ್ವೇ । ಪ್ರಥಮಸ್ಯ । ಪ್ರಚೇತಸ ಇತಿ ಪ್ರ–ಚೇತಸಃ । ಯಮ್ । ಪಾಂಚಜನ್ಯಮಿತಿ ಪಾಂಚ–ಜನ್ಯಮ್ । ಬಹವಃ । ಸಮಿಂಧತ ಇತಿ ಸಮ್–ಇಂಧತೇ ॥ ವಿಶ್ವಸ್ಯಾಮ್ । ವಿಶಿ । ಪ್ರವಿವಿಶಿವಾಗ್ಂಸಮಿತಿ ಪ್ರ–ವಿವಿಶಿವಾಗ್ಂಸಮ್ । ಈಮಹೇ । ಸಃ । ನಃ । ಮುಂಚತು । ಅಗ್ಂಹಸಃ ॥

---

ಹದಿನಾಲ್ಕನೆಯ ಅನುವಾಕದಲ್ಲಿ ವಿಹವ್ಯೇಷ್ಟಕಾಚಯನಮಂತ್ರಗಳು ಉಕ್ತವಾಗಿವೆ. ಅಲ್ಲಿಗೆ ಚಯನ ಪ್ರಕರಣವು ಮುಗಿಯಿತು. ಈ ಹದಿನೈದನೆಯ ಅನುವಾಕದಲ್ಲಿ ಅಶ್ವಮೇಧಾಂಗವಾದ ಮೃಗಾರೇಷ್ಟಿಯ ಯಾಜ್ಯಾ–ಪುರೋನುವಾಕ್ಯಗಳು ಇವೆ.

ಅರ್ಥಕ್ಕೆ ಅನುಗುಣವಾಗಿ ಈ ಅನುವಾಕವನ್ನು ಬೇರೆಯ ಕಾಂಡಕ್ಕೆ ಸೇರಿಸಬೇಕು.

---

| ಮಂತ್ರ | ವಿನಿಯೋಗ |
|---|---|
| ಅಗ್ನೇರ್ಮನ್ವೇ...ಅಗ್ಂಹಸಃ ॥ | ಅಂಹೋಮುಗಗ್ನಿದೇವತಾಕವಾದ ಅಷ್ಟಾಕಪಾಲಹವಿಸ್ಸಿನ ಯಾಗದ ಪುರೋನುವಾಕ್ಯೆ. |

---

▲ **ಯಮ್**=ಯಾವ; **ಪಾಂಚಜನ್ಯಮ್**=ನಿಷಾದಪಂಚಮರಾದ ಚಾತುರ್ವರ್ಣ್ಯದವರಿಗೆ ಹಿತವಾದ ಅಗ್ನಿಯನ್ನು; **ಬಹವಃ**=ಹಲವರು; **ಸಮಿಂಧತೇ**=ಪ್ರಜ್ವಲಿಸುವಂತೆ ಮಾಡುತ್ತಾರೆಯೋ; **ಪ್ರಥಮಸ್ಯ**=ವಿಶ್ವಾದಿಯಲ್ಲಿ ಉತ್ಪನ್ನನಾದ; **ಪ್ರಚೇತಸಃ**=ಪ್ರಕೃಷ್ಟಜ್ಞಾನವುಳ್ಳ; **ಅಗ್ನೇಃ**=ಆ ಅಗ್ನಿದೇವನ [ಮೂರ್ತಿಯನ್ನು] **ಮನ್ವೇ**=ಮನಸ್ಸಿನಿಂದ ಧ್ಯಾನಿಸುತ್ತೇನೆ. **ವಿಶ್ವಸ್ಯಾಮ್**=ಸಮಸ್ತರಾದ; **ವಿಶಿ**=ಪ್ರಜೆಗಳಲ್ಲಿಯೂ; **ಪ್ರವಿವಿಶಿವಾಗ್ಂಸಮ್**=ಜಠರಾಗ್ನಿರೂಪದಿಂದ ಪ್ರವೇಶಿಸಿರುವ ಅಗ್ನಿಯನ್ನು; **ಈಮಹೇ**=ಸ್ತುತಿಗಳಿಂದ ಹೊಂದುತ್ತೇವೆ. **ಸಃ**=ಆತನು; **ನಃ**=ನಮ್ಮನ್ನು; **ಅಗ್ಂಹಸಃ**=ಪಾಪದಿಂದ; **ಮುಂಚತು**=ದೂರಮಾಡಲಿ.

**ಯಸ್ಯೇದಂ ಪ್ರಾಣನ್ನಿಮಿಷದ್ಯದೇಜತಿ ಯಸ್ಯ ಜಾತಂ ಜನಮಾನಂ ಚ ಕೇವಲಮ್। ಸ್ತೌಮ್ಯಗ್ನಿಂ ನಾಥಿತೋ ಜೋಹವೀಮಿ ಸ ನೋ ಮುಂಚತ್ವಗ್ಂಹಸಃ ॥ ಇಂದ್ರಸ್ಯ ಮನ್ಯೇ ಪ್ರಥಮಸ್ಯ ಪ್ರಚೇತಸೋ ವೃತ್ರಘ್ನಃ ಸ್ತೋಮಾ ಉಪ ಮಾಮುಪಾಗುಃ।**

---

ಯಸ್ಯ । ಇದಮ್ । ಪ್ರಾಣದಿತಿ ಪ್ರ-ಅನತ್ । ನಿಮಿಷದಿತಿ ನಿ-ಮಿಷತ್ । ಯತ್ । ಏಜತಿ । ಯಸ್ಯ । ಜಾತಮ್ । ಜನಮಾನಮ್ । ಚ । ಕೇವಲಮ್ ॥ ಸ್ತೌಮಿ । ಅಗ್ನಿಮ್ । ನಾಥಿತಃ । ಜೋಹವೀಮಿ । ಸಃ । ನಃ । ಮುಂಚತು । ಅಗ್ಂಹಸಃ ॥ ಇಂದ್ರಸ್ಯ । ಮನ್ಯೇ । ಪ್ರಥಮಸ್ಯ । ಪ್ರಚೇತಸ ಇತಿ ಪ್ರ-ಚೇತಸಃ । ವೃತ್ರಘ್ನ ಇತಿ ವೃತ್ರ-ಘ್ನಃ । ಸ್ತೋಮಾಃ । ಉಪೇತಿ । ಮಾಮ್ । ಉಪಾಗುರಿತ್ಯುಪ-ಆಗುಃ ॥

---

| ಮಂತ್ರ | ವಿನಿಯೋಗ |
|---|---|
| **ಯಸ್ತೇದಂ...ಅಗ್ಂಹಸಃ ॥** | ಹಿಂದಿನ ಯಾಗದ ಯಾಜ್ಯೆ. |
| **ಇಂದ್ರಸ್ಯ ಮನ್ಯೇ...ಅಗ್ಂಹಸಃ ॥** | ಅಂಹೋಮುಗಿಂದ್ರದೇವತಾಕವಾದ ಏಕಾದಶಕಪಾಲಹವಿಸ್ಸಿನ ಯಾಗದ ಪುರೋನುವಾಕ್ಯೆ. |

---

▲ **ಇದಮ್**=ಈ; **ಪ್ರಾಣತ್**=ಶ್ವಾಸದಿಂದ ಕೂಡಿರುವ; **ನಿಮಿಷತ್**=ಕಣ್ಣನ್ನು ಮುಚ್ಚಿಕೊಳ್ಳುವ; **ಯತ್**=ಯಾವ [ಜಗತ್ತು] **ಏಜತಿ**=ಚಲಿಸುತ್ತದೆಯೋ; [ಇದೆಲ್ಲವೂ] **ಯಸ್ಯ**=ಯಾವ ಅಗ್ನಿದೇವನ ಅಧೀನವೋ; **ಜಾತಮ್**=ಹುಟ್ಟಿರುವ; **ಚ**=ಮತ್ತು; **ಜನಮಾನಮ್**=ಮುಂದೆ ಹುಟ್ಟುವ; [ಈ ಜಗತ್ತು ಎಲ್ಲವೂ;] **ಕೇವಲಮ್**=ಇನ್ನೊಬ್ಬರ ಅಪೇಕ್ಷೆಯಿಲ್ಲದೆ; **ಯಸ್ಯ**=ಯಾವ ಅಗ್ನಿಯ ಅಧೀನವಾಗಿದೆಯೋ; **ಅಗ್ನಿಮ್**=[ಅಂತಹ] ಅಗ್ನಿಯನ್ನು; **ಸ್ತೌಮಿ**=ಸ್ತುತಿಸುತ್ತೇನೆ. **ನಾಥಿತಃ**=ಫಲವನ್ನು ಬಯಸುವವನಾಗಿ; **ಜೋಹವೀಮಿ**=ಮತ್ತೆ ಮತ್ತೆ ಹೋಮವನ್ನು ಮಾಡಿ ಆರಾಧಿಸುತ್ತೇನೆ. **ಸಃ**=ಆ ಅಗ್ನಿಯು; **ನಃ**=ನಮ್ಮನ್ನು; **ಅಗ್ಂಹಸಃ**=ಪಾಪದಿಂದ; **ಮುಂಚತು**=ಬಿಡಿಸಲಿ. ▲ **ಪ್ರಥಮಸ್ಯ**=ಸೃಷ್ಟ್ಯಾದಿಯಲ್ಲಿ ಉತ್ಪನ್ನನಾದ; **ಪ್ರಚೇತಸಃ**=ಉತ್ತಮಜ್ಞಾನವುಳ್ಳ; **ಇಂದ್ರಸ್ಯ**=ಇಂದ್ರದೇವನ ಮೂರ್ತಿಯನ್ನು; **ಮನ್ಯೇ**=ಮನಸ್ಸಿನಿಂದ ಚಿಂತಿಸುತ್ತೇನೆ. **ವೃತ್ರಘ್ನಃ**=ಶತ್ರುಘಾತಿಯಾದ ಇಂದ್ರನ; **ಉಪ**=ಸಮೀಪವನ್ನು ಹೊಂದಿರುವ; **ಸ್ತೋಮಾಃ**=ಸ್ತೋತ್ರಗಳು; **ಮಾಮ್**=ಯಜಮಾನನಾದ ನನ್ನನ್ನು; **ಉಪಾಗುಃ**=[ನನ್ನ ನಾಲಗೆಯ ಸಮೀಪವನ್ನು] ಹೊಂದಿರುತ್ತವೆ.

---

ನಿಷಾದಪಂಚಮರಾದ ನಾಲ್ಕು ವರ್ಣದ ಜನರು ಪಂಚಜನರು. ಅಗ್ನಿಯು ಆ ಮಾನವರಿಗೆ ಹಿತನು. ಆತನನ್ನು ಹಲವರು ಪ್ರಜ್ವಲಿಸುವಂತೆ ಮಾಡುತ್ತಾರೆ. ಆತನು ವಿಶ್ವಾದಿಯಲ್ಲಿ ಉತ್ಪನ್ನನು. ಶ್ರೇಷ್ಠಜ್ಞಾನಿಯು. ಆತನು

## ಯೋ ದಾಶುಷಃ ಸುಕೃತೋ ಹವಮುಪ ಗಂತಾ[ಗಂತಾ (೩೩)] ಸ ನೋ ಮುಂಚತ್ವಗ್ಂಹಸಃ ॥ ಯಃ ಸಂಗ್ರಾಮಂ ನಯತಿ ಸಂ ವಶೀ ಯುಧೇ ಯಃ ಪುಷ್ಟಾನಿ ಸಗ್ಂಸ್ಸೃಜತಿ ತ್ರಯಾಣಿ । ಸ್ತೌಮೀಂದ್ರಂ ನಾಥಿತೋ ಜೋಹವೀಮಿ ಸ ನೋ ಮುಂಚತ್ವಗ್ಂಹಸಃ ॥

---

ಯಃ । ದಾಶುಷಃ । ಸುಕೃತ ಇತಿ ಸು-ಕೃತಃ । ಹವಮ್ । ಉಪೇತಿ । ಗಂತಾ । (೩೩) । ಸಃ । ನಃ । ಮುಂಚತು । ಅಗ್ಂಹಸಃ ॥ ಯಃ । ಸಂಗ್ರಾಮಮಿತಿ ಸಮ್-ಗ್ರಾಮಮ್ । ನಯತಿ । ಸಮಿತಿ । ವಶೀ । ಯುಧೇ । ಯಃ । ಪುಷ್ಟಾನಿ । ಸಗ್ಂಸ್ಸೃಜತೀತಿ ಸಮ್-ಸೃಜತಿ । ತ್ರಯಾಣಿ ॥ ಸ್ತೌಮಿ । ಇಂದ್ರಮ್ । ನಾಥಿತಃ । ಜೋಹವೀಮಿ । ಸಃ । ನಃ । ಮುಂಚತು । ಅಗ್ಂಹಸಃ ॥

---

| ಮಂತ್ರ | ವಿನಿಯೋಗ |
|---|---|
| **ಯಸ್ಸಂಗ್ರಾಮಂ...ಅಗ್ಂಹಸಃ ॥** | ಹಿಂದಿನ ಯಾಗದ ಯಾಜ್ಯೆ. |

---

**ಯಃ**=ಯಾವ ಇಂದ್ರನು; **ದಾಶುಷಃ**=ಹವಿಸ್ಸನ್ನು ಸಮರ್ಪಿಸುವ; **ಸುಕೃತಃ**=ಒಳ್ಳೆಯ ಕರ್ಮವನ್ನು ಮಾಡುವ ಯಜಮಾನನ; **ಹವಮ್**=ಆಹ್ವಾನವನ್ನು ಅಥವಾ ಯಜ್ಞವನ್ನು; **ಉಪ ಗಂತಾ**=ಹೊಂದುವನೋ; **ಸಃ**=ಆ ಇಂದ್ರನು; **ನಃ**=ನಮ್ಮನ್ನು; **ಅಗ್ಂಹಸಃ**=ಪಾಪದಿಂದ; **ಮುಂಚತು**=ದೂರ ಮಾಡಲಿ; 🔔 **ಯಃ**= ಯಾವ ಇಂದ್ರನು; **ಯುಧೇ**=ಯುದ್ಧ ಮಾಡುವುದಕ್ಕಾಗಿ; **ವಶೀ**=ವಶವಾಗಿರುವ ಪರಿವಾರದಿಂದ ಯುಕ್ತನಾಗಿ; **ಸಂಗ್ರಾಮಮ್**=ಯುದ್ಧಭೂಮಿಗೆ; **ಸಮ್ ನಯತಿ**=[ತನ್ನ ಸೇನೆಯನ್ನು] ಒಯ್ಯುವನೋ; **ಯಃ**= ಯಾವ ಇಂದ್ರನು; **ಪುಷ್ಟಾನಿ**=ಸಂಪೂರ್ಣವಾದ; **ತ್ರಯಾಣಿ**=ಗೋ-ಅಶ್ವ-ಪುರುಷರನ್ನು/ಗಜ-ಅಶ್ವ-ಪುರುಷಸೇನೆಗಳನ್ನು; **ಸಮ್ ಸೃಜತಿ**=ಯಜಮಾನನೊಡನೆ ಕೂಡಿಸುವನೋ; [ಅಂತಹ] **ಇಂದ್ರಮ್**= ಇಂದ್ರದೇವನನ್ನು; **ಸ್ತೌಮಿ**=ಸ್ತುತಿಸುತ್ತೇನೆ. **ನಾಥಿತಃ**=ಕಾಮನೆಗಳನ್ನು ಅಪೇಕ್ಷಿಸುತ್ತಾ; **ಜೋಹವೀಮಿ**= ಮತ್ತೆ ಮತ್ತೆ ಹೋಮಗಳಿಂದ ಆರಾಧಿಸುತ್ತೇನೆ. **ಸಃ**=ಅಂತಹ ಇಂದ್ರದೇವನು; **ನಃ**=ನಮ್ಮನ್ನು; **ಅಗ್ಂಹಸಃ**=ಪಾಪಗಳಿಂದ; **ಮುಂಚತು**=ವಿಮುಕ್ತರನ್ನಾಗಿ ಮಾಡಲಿ.

---

**ಜಾತರಾಗ್ನಿರೂಪದಿಂದ ಸಮಸ್ತಪ್ರಾಣಿಗಳಲ್ಲಿಯೂ ಒಳಗೆ ಪ್ರವೇಶಿಸಿರುವನು. ಆತನನ್ನು ನಾವು ಸ್ತುತಿಸುತ್ತೇವೆ. ಹೋಮದಿಂದ ಆರಾಧಿಸುತ್ತೇವೆ. ಆತನು ನಮ್ಮನ್ನು ಪಾಪರಹಿತರನ್ನಾಗಿ ಮಾಡಲಿ.**

